ವುಳ್ಳ, ತಲ್ಲಣಿಸುವ; ಕಾತರಿಸುವ, ಆತುರಪಡುವ.

अधूरा, वि. ಅಪೂರ್ಣ, ಅರೆ ಬರೆ, ಅರ್ಧಂಬರ್ಧ.

अधेड़, वि. ನಡುಪ್ರಾಯದ, ಮಧ್ಯ ವಯಸ್ಕ.

अधेला, पु. ಒಂದೂವರೆ ಕಾಸಿನ ನಾಣ್ಯ

अधेली, स्त्री. ಅರ್ಧರೂಪಾಯಿ ನಾಣ್ಯ.

अधोतर, पु. ಒಂದು ಬಗೆ ಒರಟು ಬಟ್ಟೆ

अधौड़ी, स्त्री. ಒರಟು ಚಕ್ಕಳ.

अध्यक्ष, पु. ಯಜಮಾನ, ಒಡೆಯ, ಮಾಲೀಕ; ಮುಖ್ಯಸ್ಥ, ಅಧ್ಯಕ್ಷ.

अध्ययन, पु. ಓದುವಿಕೆ, ಓದು; ವಿದ್ಯಾಭ್ಯಾಸ, ಅಧ್ಯಯನ.

अध्यवसाय, पु. ಸಂಕಲ್ಪ, ನಿಶ್ಚಯ; ಪ್ರಯತ್ನ.

अध्यापक, पु. ಉಪಾಧ್ಯಾಯ.

अध्यापकी, स्त्री. ಉಪಾಧ್ಯಾಯರ ಕೆಲಸ; ಅಧ್ಯಾಪಕವೃತ್ತಿ.

अध्यापन, पु. ಓದಿಸುವಿಕೆ, ಶಿಕ್ಷಣ.

अध्यापिका, स्त्री. ಉಪಾಧ್ಯಾಯಿನಿ.

अध्याय, पु. ಗ್ರಂಥದ ಒಂದು ಒಳ ವಿಭಾಗ, ಅಧ್ಯಾಯ, ಸರ್ಗ.

अनंदना, अक्रि. ಆನಂದಿಸು.

अनअहिवात, पु. ವೈಧವ್ಯ.

अनइस, पु. ಕೆಡಕು.

अनकना, सक्रि. ಆಲಿಸು; ಹೊಂಚು ಕೇಳು.

अनक़रीब, क्रिवि. ಸುಮಾರಾಗಿ; ನಿಕಟ.

अनकहा, वि. ಹೇಳದ. अनकही देना = ಸುಮ್ಮನಾಗು.

अनख, पु. ಕೋಪ, ಸಿಟ್ಟು; ದ್ವೇಷ; ವೈಮನಸ್ಯ; ದುಃಖ, ತಾಪತ್ರಯ; ದೃಷ್ಟಿಬೊಟ್ಟು. वि. ಉಗುರಿಲ್ಲದ.

अनखना, अक्रि. ರೇಗು, ಸಿಡುಗುಟ್ಟು.

अनखाना, अक्रि. ರೇಗು, ಸಿಟ್ಟಾಗು. सक्रि. ರೇಗಿಸು.

अनखावना, सक्रि. ಕೆಟ್ಟದನಿಸು; ಅಗದಿರು.

अनखाहट, स्त्री. ಸಿಟ್ಟು, ರೋಷ.

अनखी, वि. ಕೋಪಿಷ್ಠ, ಮುಂಗೋಪಿ.

अनगढ़, वि. ಅಂದಗೆಟ್ಟ, ಉದ್ದಂಡ, ವಿಲಕ್ಷಣ.

अनगना, वि. ಲೆಕ್ಕವಿಲ್ಲದ, ಬಹಳ. पु. ಗರ್ಭದ ಎಂಟನೆಯ ತಿಂಗಳು.

अनगवना, अनगाना, अक्रि. ತಡ ಮಾಡು, ಹೊತ್ತು ಮಾಡು.

अनगिन, अनगिनत, अनगिना, वि. ಅಸಂಖ್ಯ, ಅಗಣಿತ, ಬಹಳ.

अनचाहा, वि. ಅರುಚಿಕರ; ಅನಿಷ್ಟ.

अनजान, वि. ಅಪರಿಚಿತ; ತಿಳಿಯದವ, ಅಜ್ಞಾನಿ.

अनट, पु. ಅತ್ಯಾಚಾರ, ಅಕ್ರಮ.

अनति, वि. ಅಲ್ಪ, ಸ್ವಲ್ಪ. स्त्री. ಅಹಂಕಾರ.

अनदेखा, वि. ನೋಡದ, ಕಾಣದ.

अनघुला, वि. ತೊಳೆಯದ, ಒಗೆಯದ.

**अनन्नास**, पु. ಅನನಾಸು ಹಣ್ಣು, ಅನಾನಸು, ನೆಲಹಲಸು.

**अनपच**, पु. ಅಜೀರ್ಣ; ಅಗ್ನಿಮಾಂದ್ಯ.

**अनपढ़**, वि. ಓದದವ, ಅನಕ್ಷರಸ್ಥ, ನಿರಕ್ಷರಕುಕ್ಷಿ.

**अनबन**, पु. ವಿರೋಧ, ಮನಸ್ತಾಪ. वि. ವಿವಿಧ.

**अनबिधा**, वि. ಕೊರೆಯದ, ರಂಧ್ರವಿಲ್ಲದ (ಮುತ್ತು).

**अनबोल**, वि. ಮಾತನಾಡದವ, ಮೌನಿ; ಗುಮ್ಮನಗುಸಕ; ಮೂಕ (ಪ್ರಾಣಿ).

**अनबोलता**, वि. ಮೂಕ (ಪ್ರಾಣಿ).

**अनब्याहा**, वि. ಮದುವೆಯಾಗದವ, ಅವಿವಾಹಿತ.

**अनबल**, पु. ಅಮಂಗಳ, ಕೆಡಕು.

**अनभिज्ञ**, वि. ಅಪರಿಚಿತ, ಅರಿಯದವ.

**अनभोरी**, स्त्री. ಮೋಸ, ಕಪಟ.

**अनभ्यस्त**, वि. ಅಭ್ಯಾಸವಿಲ್ಲದ.

**अनमन, अनमना**, वि. ಮನಸ್ಸಿಲ್ಲದ, ಒಪ್ಪಿಕೆಯಿಲ್ಲದ; ಖಿನ್ನನಾದ.

**अनमनस्क**, वि. ಉದಾಸೀನ.

**अनमिल, अनमेल**, वि. ಹೋಲಿಕೆಯಿಲ್ಲದ, ಈಡಿಲ್ಲದ; ಬೆರಿಕೆಯಿಲ್ಲದ; ಸೇರದ, ಇಜ್ಜೋಡು.

**अनमेली**, स्त्री. ಹೊಂದಿಕೆಯಿಲ್ಲಸವುಗಳು; ಒಂದು ಬಗೆ ಕವನ.

**अनमोल**, वि. ಅಮೂಲ್ಯವಾದ; ಬೆಲೆಬಾಳುವ, ಅನರ್ಘವಾದ.

**अनरस**, पु. ನೀರಸತ್ವ; ಸಿಟ್ಟು; ಮನಸ್ತಾಪ, ವಿರಸ; ಶೋಕ.

**अनराता**, वि. ಬಣ್ಣ ಕಟ್ಟದ.

**अनरीत**, स्त्री. ದುರ್ಮಾರ್ಗ, ಕೆಟ್ಟ ನಡತೆ.

**अनरूप**, वि. ಕುರೂಪಿಯಾದ; ಅಸದೃಶ.

**अनर्गल**, वि. ತಪ್ಪುತಡೆಯಿಲ್ಲದ, ಎಡೆಬಿಡದ; ವ್ಯರ್ಥಾಲಾಪದ.

**अनर्थ**, पु. ಕೇಡು; ಹಾಳು.

**अनवट**, पु. ಕಾಲುಂಗುರ; ಗಾಣದ ಎತ್ತುಗಳ ಕಣ್ಣಿಗೆ ಕಟ್ಟುವ ಪಟ್ಟಿ, ಕಣ್ಣುಕಪ್ಪಡಿ.

**अनवांसना**, सक्रि. ಹೊಸ ಪಾತ್ರೆಗಳನ್ನು ಗಲಬರಿಸು; ಉಪಯೋಗಿಸು, ಬಳಸು.

**अनवांसा**, पु. ಕೊಯ್ದು ಭತ್ತ ಮುಂತಾದ ಪೈರುಗಳ ಕಟ್ಟು, ಅಥವಾ ಹೊರೆ, ಭತ್ತದರಿ; ಸಿವುಡು.

**अनवांसी**, स्त्री. ಜಮೀನಿನ ಒಂದು ಅಳತೆ (೩೨೦ अनवांसी = ಒಂದು ಗುಂಟೆ.) ನೋಡಿ - बीघा.

**अनशन**, पु. ಉಪವಾಸ.

**अन-सखरी**, स्त्री. ತುಪ್ಪದಿಂದಲೇ ಮಾಡಿದ ಅಡಿಗೆ.

**अनसुना**, वि. ಕೇಳದ, ಅಶ್ರುತ. अनसुनी करना = (ಮಾತು) ಕೇಳಿಯೂ ಕೇಳದಿರು, ಉಪೇಕ್ಷೆ ಮಾಡು.

**अनहित**, पु. ಅಹಿತ; ಶತ್ರು.

**अनहोता**, वि. ಅಸಂಭವ; ದರಿದ್ರ.

**अनहोनी,** वि. ಅಸಂಭವ, ಆಗಬಾರದ್ದು. स्त्री. ಅಸಂಭಾವ್ಯ.

**अनाकानी,** स्त्री. = आनाकानी.

**अनाज,** पु. ದವಸ, ಧಾನ್ಯ, ಕಾಳು.

**अनाड़ी,** वि. ಅನುಭವವಿಲ್ಲದವ, ತಿಳಿಯದವ, ಅನಾಡಿ.

**अनादर,** पु. ಅನಾದರ, ಅಸಡ್ಡೆ, ತಿರಸ್ಕಾರ.

**अनाना,** सक्रि. ಬರಮಾಡು, ತರಿಸು.

**अनाप शनाप,** पु. ತಲೆಹರಟೆ, ವದರಾಟೆ, ವ್ಯರ್ಥಾಲಾಪ.

**अनाम,** वि. ಹೆಸರಿಲ್ಲದ; ಅಪ್ರಸಿದ್ಧ.

**अनार,** पु. ದಾಳಿಂಬೆ ಹಣ್ಣು.

**अनारदाना,** पु. ದಾಳಿಂಬೆ ಬಿತ್ತ; ರಾಮಫಲ.

**अनारी,** पु. ದಾಳಿಂಬೆ ಬಣ್ಣ, ಕೆಂಪು.

**अनावश्य,** वि. ಅಗತ್ಯವಲ್ಲದ, ನಿಷ್ಪ್ರಯೋಜಕ.

**अनावश्यकता,** स्त्री. ಅನಾವಶ್ಯಕತೆ; ನಿರರ್ಥಕತೆ.

**अनाह,** पु. ಹೊಟ್ಟೆಯುಬ್ಬರ.

**अनाहत,** वि. ಏಟು ತಗಲದವ.

**अनियारा,** वि. ಮೊನೆಯುಳ್ಳ, ಚೂಪಾದ, ತೀಕ್ಷ್ಣವಾದ.

**अनिवार्य,** वि. ನಿವಾರಿಸಲಾಗದ, ಅಗತ್ಯ, ಅತ್ಯಾವಶ್ಯಕ.

**अनिष्ट,** वि. ಇಚ್ಛಿಸದ, ಅವಾಂಛಿತ. पु. ಅನಿಷ್ಟ, ಕೆಡಕು.

**अनी,** स्त्री. ತುದಿ, ಮೊನೆ; ಗುಂಪು; ಪಡೆ, ಸೈನ್ಯ.

**अनीक,** पु. ಸಮೂಹ; ಸೈನ್ಯ, ಪಡೆ; ಯುದ್ಧ. वि. ಕೆಟ್ಟ.

**अनीठ,** वि. ಅನಿಷ್ಟ, ಕೆಟ್ಟ.

**अनुकंपा,** स्त्री. ದಯೆ, ಕನಿಕರ.

**अनुकरण,** पु. ಮೊದಲಿನವ ಮಾಡಿದಂತೆ ಮಾಡುವಿಕೆ, ಒಂದು ಕಾರ್ಯವನ್ನು ನೋಡಿ ಅದರಂತೆ ಮಾಡುವಿಕೆ, ಅನುಸರಣೆ, ಅನುಕರಣ.

**अनुकारी,** वि. ಹಿಂಬಾಲಿಸುವವ; ಸೇವಕ.

**अनुकूल,** वि. ಅನುಗುಣವಾದ, ಅನುಸಾರವಾದ; ಅನುಕೂಲ, ಹಿತ; ಹಿತೈಷಿ, ಅನುಕೂಲಸ್ಥ.

**अनुकूलता,** स्त्री. ಅನುಕೂಲ್ಯ, ಸೌಕರ್ಯ.

**अनुगामी,** वि. ಹಿಂಬಾಲಿಸುವವ, ಅನುಸರಿಸುವವ; ವಿಧೇಯ.

**अनुग्रह,** पु. ದಯೆ; ಅನುಗ್ರಹ, ರಿಯಾಯಿತಿ.

**अनुग्राहक,** वि. ಅನುಗ್ರಹಿಸುವವ, ಉಪಕಾರಿ.

**अनुनय,** पु. ಸಂತೈಸುವುದು; ಬೇಡಿಕೆ, ವಿನಂತಿ; ಗೋಗರೆಯುವಿಕೆ. अनुनय विनय करना = ಬಹಳವಾಗಿ ಬೇಡಿಕೊಳ್ಳು, ಅಂಗಲಾಚು.

**अनुपस्थित,** वि. ಗೈರುಹಾಜರಾದ.

**अनुपस्थिति,** स्त्री. ಗೈರುಹಾಜರು.

**अनुपान,** पु. ಔಷಧದ ಜೊತೆಯಲ್ಲಿ ತೆಗೆದುಕೊಳ್ಳುವ ವಸ್ತು, ಅನುಪಾನ.

**अनुबंध,** पु. ಬಂಧನ; ಪೂರ್ವಾಪರ;

ಪ್ರಾರಂಭ.

**अनुभव**, पु. ಪರೀಕ್ಷೆಯಿಂದ ಮನಗಂಡದ್ದು, ಅನುಭವ.

**अनुभवी**, वि. ಅನುಭವವುಳ್ಳವ, ಅರಿತುಸುರಿತ, ಅನುಭವಸ್ಥ.

**अनुमति**, स्त्री. ಅಪ್ಪಣೆ, ಒಪ್ಪಿಗೆ.

**अनुमान**, पु. ಊಹೆ, ಹೇಷ್ಯ, ಟೂಕಿ.

**अनुमोदन**, पु. ಸಂತೋಷಪಡುವುದು; ಸಮರ್ಥನೆ.

**अनुयायी**, वि. ಹಿಂಬಾಲಿಸುವವ; ಅನುಕರಣೆ ಮಾಡುವವ. पु. ಸೇವಕ.

**अनुराग**, पु. ಪ್ರೇಮ, ಒಲವು, ಆಸ್ಥೆ.

**अनुरोध**, पु. ಅಡ್ಡಿ; ಒತ್ತಾಯ.

**अनुवाद**, पु. ಪುನರುಕ್ತಿ; ಭಾಷಾಂತರ, ತರ್ಜುಮೆ.

**अनुवादक**, पु. ಭಾಷಾಂತರಕಾರ.

**अनुवादित**, वि. ತರ್ಜುಮೆ ಮಾಡಲ್ಪಟ್ಟ, ಭಾಷಾಂತರಿಸಿದ.

**अनुशासन**, पु. ಅಪ್ಪಣೆ, ಆಜ್ಞೆ, ಆದೇಶ; ಉಪದೇಶ, ಶಿಕ್ಷಣ; ಕಟ್ಟುಪಾಡು, ಶಿಷ್ಯಶಿಷ್ಟಿ, ಶಿಸ್ತು.

**अनुसंधान**, पु. ಹುಡುಕುವಿಕೆ, ಶೋಧನೆ.

**अनुसारना**, सक्रि. ಅನುಸರಿಸು, ಆಚರಿಸು.

**अनूठा**, वि. ವಿಚಿತ್ರ, ಅದ್ಭುತ; ಶ್ರೇಷ್ಠ.

**अनूठापन**, पु. ವೈಚಿತ್ರ್ಯ, ಉತ್ಕೃಷ್ಟತೆ.

**अनूदित**, वि. ಹೇಳಲ್ಪಟ್ಟ; ಭಾಷಾಂತರಿಸಿದ.

**अनेक**, वि. ಹಲವು, ಅನೇಕ.

**अनेरा**, वि. ವ್ಯರ್ಥ; ಸುಳ್ಳು; ಅಯೋಗ್ಯ. क्रिवि. ವ್ಯರ್ಥವಾಗಿ.

**अनैठ**, पु. ಸಂತೆ ನೆರೆಯದ ಇತರ ದಿನಗಳು.

**अनैस**, पु. ಕೆಡಕು. वि. ಕೆಟ್ಟ.

**अनैसना**, अक्रि. ಸಿಟ್ಟಾಗು, ಮುನಿ.

**अनोखा**, वि. ವಿಚಿತ್ರ, ವಿಲಕ್ಷಣ, ಅದ್ಭುತ; ಸುಂದರ.

**अनोखापन**, पु. ವೈಚಿತ್ರ್ಯ; ನವೀನತೆ; ಅಂದ.

**अन्न**, पु. ದವಸ, ಧಾನ್ಯ, ಕಾಳು; ಅನ್ನ.

**अन्नकूट**, पु. ಬನಶಂಕರೀ ಹಬ್ಬ.

**अन्नजल**, पु. ಅನ್ನಪಾನ, ತಿಂಡಿತೀರ್ಥ; ಜೀವನ, ಜೀವನೋಪಾಯ.

**अन्नसत्र**, पु. ಅನ್ನಛತ್ರ, ಸತ್ರ.

**अन्ना**, स्त्री. ದಾದಿ, ಧಾತ್ರಿ, "ನರಸಮ್ಮ"

**अन्य**, वि. ಇತರ, ಬೇರೆ, ಅನ್ಯ.

**अन्यत्र**, क्रिवि. ಇತರ ಕಡೆ, ಬೇರೆಕಡೆ

**अन्यथा**, वि. ಬೇರೆ; ಬೇರೆ ವಿಧವಾದ; ವಿರುದ್ಧ; ಸುಳ್ಳು. अव्य. ಇಲ್ಲವಾದರೆ.

**अन्याय**, पु. ನ್ಯಾಯ ವಲ್ಲದ್ದು; ಅನ್ಯಾಯ; ಬಲಾತ್ಕಾರ.

**अन्यायी**, वि. ಅನ್ಯಾಯಮಾಡುವವ.

**अन्वेषक**, वि. ತತ್ವಶೋಧನೆ ಮಾಡುವವ.

**अन्वेषण**, पु. **अन्वेषणा**, स्त्री. ಹುಡುಕುವಿಕೆ; ತತ್ವಶೋಧನೆ.

**अन्हवाना**, सक्रि. ಸ್ನಾನಮಾಡಿಸು.

अन्हाना, अक्रि. ಸ್ನಾನ ಮಾಡು.
अपकाजी, वि. ಸ್ವಾರ್ಥಪರ.
अपकार, पु. ಅಹಿತ, ಹಾನಿ.
अपच, पु. ಅಜೀರ್ಣ, ಅಗ್ನಿಮಾಂದ್ಯ.
अपजय, स्त्री. ಅಪಜಯ, ಸೋಲು.
अपजस, स्त्री. ಅಪಯಶಸ್ಸು.
अपड़ाना, अक्रि. ತಕರಾರು ಮಾಡು, ಜಗಳವಾಡು.
अपड़ाव, पु. ತಂಟೆ, ತಕರಾರು.
अपढ़, वि. ಓದದವ, ಅವಿದ್ಯಾವಂತ.
अपत, वि. ಪತ್ರ ಅಥವಾ ಎಲೆಗಳಿಲ್ಲದ (ಮರ); ಬೋಳಾದ, ಬರಿದಾದ; ನಿರ್ಲಜ್ಜ.
अपत्य, पु. ಮಗ.
अपदेखा, वि. ಆತ್ಮಶ್ಲಾಘನೆ ಮಾಡಿ ಕೊಳ್ಳುವವ; ಗರ್ವಿಷ್ಠ.
अपनपा, पु. ತಾನು ಅಥವಾ ತನ್ನದು ಎಂಬ ಭಾವ, ಆತ್ಮೀಯತೆ.
अपना, सर्व. ತನ್ನ. पु. ತಾನು. अपना सा करना = ಯಥಾಶಕ್ತಿ ಮಾಡು. अपने आप = ತನಗೆ ತಾನೆ, ತಾನೇ ತಾನಾಗಿ, ಸ್ವಯಂ.
अपनाना, सक्रि. ತನ್ನದಾಗಿ ಮಾಡಿ ಕೊಳ್ಳು; ಒಲಿಸಿಕೊಳ್ಳು; ದಕ್ಕಿಸಿ ಕೊಳ್ಳು.
अपनापन, पु. अपनायत, स्त्री. ತನ್ನ ದೆಂಬುವ ಭಾವ, ಆತ್ಮೀಯತೆ.
अपमान, पु. ಅಗೌರವ, ಅವಮಾನ.
अपमानना, सक्रि. ಅವಮಾನ ಮಾಡು.
अपमानित, वि. ಅಪಮಾನ ಹೊಂದಿದ
अपमानी, वि. ಅವಮಾನ ಮಾಡುವವ
अपरंच, अव्य. ಮತ್ತೆ, ತಿರುಗಿ.
अपरस, वि. ಯಾರೂ ಮುಟ್ಟದ; ಮುಟ್ಟಲನರ್ಹವಾದ. पु. ಒಂದು ಚರ್ಮ ರೋಗ, ಇಸಬು.
अपराध, पु. ತಪ್ಪು, ತಪ್ಪಿತ, ಅಪರಾಧ
अपराधी, वि. ತಪ್ಪಿತಸ್ಥ, ತಪ್ಪುಗಾರ.
अपरिचित, वि. ಪರಿಚಯವಿಲ್ಲದ; ಹೊಸ.
अपसना, अक्रि. ಜಾರಿಕೊಳ್ಳು; ಹೊ ರಟು ಹೋಗು.
अपसर, वि. ಇಷ್ಟಾನುಸಾರವಾದ.
अपशकुन, अपसगुन, अपसगौन, पु. ಕೆಟ್ಟಶಕುನ, ಅಪಶಕುನ.
अपस्मार, पु. ಮೂರ್ಛೆ ರೋಗ, ಅಪಸ್ಮಾರ.
अपहरण, पु. ಕದ್ದು ತೆಗೆದುಕೊಳ್ಳು ವಿಕೆ, ಅಪಹರಣ.
अपहरना, सक्रि. ಕಸುಕೊಳ್ಳು; ಬಲಾ ತ್ಕಾರದಿಂದ ಒಯ್ಯು, ಅಪಹರಿಸು.
अपांग, पु. ಓರೆಗಣ್ಣು. वि. ಅಂಗಹೀನ
अपाय, पु. ವಿಯೋಗ; ಹಿಂದಕ್ಕೆ ಹೋಗುವುದು; ನಾಶ; ದುರಾಚಾರ. वि. ಕಾಲಿಲ್ಲದ; ದಿಕ್ಕಿಲ್ಲದ, ಗತಿಯಿಲ್ಲದ
अपाहिज, वि. ಕೈಕಾಲಿಲ್ಲದವ, ಹೆಳವ, ಮುರವ; ಸೋಮಾರಿ.
अपूत, वि. ಅಪವಿತ್ರ; ಮಕ್ಕಳಿಲ್ಲದವ.
अपूर, वि. ಪೂರ್ಣವಾದ, ತುಂಬಿದ.
अपूरना, सक्रि. ತುಂಬು, (ಶಂಖ)

ಪೂರಿಸು, ಊದು.

**अपूरा**, वि. ತುಂಬಿದ, ಹರಡಿದ.

**अपेक्षा**, स्त्री. ಇಚ್ಛೆ, ಅಭಿಲಾಷೆ, ಬಯಕೆ; ಅವಶ್ಯಕತೆ, ಅಗತ್ಯ; ತುಲನೆ, ಹೋಲಿಕೆ.

**अप्रतिष्ठा**, स्त्री. ಅಗೌರವ, ಅಪಕೀರ್ತಿ

**अप्रसन्न**, वि. ದುಃಖಿತ; ರೇಗಿದ.

**अप्रसन्नता**, स्त्री. ಅಸಮಾಧಾನ; ಕೋಪ; ದುಃಖ.

**अप्रेल**, पु. ಏಪ್ರೆಲ್ (ತಿಂಗಳು).

**अफ़ई**, स्त्री. ಕರಿನಾಗರ ಹಾವು, ಕೃಷ್ಣಸರ್ಪ.

**अफ़ग़ान**, पु. ಅಫ್ಘಾನಿಸ್ಥಾನದವ.

**अफ़ज़ल**, वि. ಸರ್ವೋತ್ತಮ.

**अफ़ज़ूँ**, पु. ಹೇರಳತೆ, ಬಾಹುಲ್ಯ.

**अफ़यून**, स्त्री. ಅಫೀಮು, ಅಫು.

**अफरना**, अक्रि. ಹೊಟ್ಟೆಯ ತುಂಬ ಊಟಮಾಡು, ಕಂಠಪೂರ್ತಿ ಊಟಮಾಡು, ಕಟರೆಯಾಗು; ಹೊಟ್ಟೆ ದಪ್ಪವಾಗು, ಉಬ್ಬರವಾಗು.

**अफरा**, पु. ಹೊಟ್ಟೆಯುಬ್ಬರ.

**अफराना**, अक्रि. ಹೊಟ್ಟೆತುಂಬ ಊಟಮಾಡಿಸು.

**अफ़रीदी**, पु. ಪಠಾಣರ ಒಂದು ಜಾತಿ.

**अफ़वाह**, स्त्री. ಜನಶ್ರುತಿ, ವದಂತಿ, ಗಲಕು, ಲೋಕವಾರ್ತೆ.

**अफ़सर**, पु. ಅಧಿಕಾರಿ, ಉದ್ಯೋಗಸ್ಥ, ಆಫೀಸರು.

**अफ़सरी**, स्त्री. ಅಧಿಕಾರ, ಉದ್ಯೋಗ, ಆಡಳಿತ.

**अफ़साना**, पु. ಕತೆ, ಆಖ್ಯಾಯಿಕೆ.

**अफ़सुरदा**, पु. ಬಳಲಿದ, ದುಃಖಿತ.

**अफ़सूँ**, पु. ಮಾಟ, ಮಂತ್ರ.

**अफ़सोस**, पु. ದುಃಖ, ವಿಷಾದ; ಪಶ್ಚಾತ್ತಾಪ.

**अफ़ीम**, स्त्री. ಅಫೀಮು, ಅಫು.

**अफ़ीमची, अफ़ीमी**, पु. ಅಫೀಮು ಸೇವಿಸುವವ, ಅಫೀಮುಖೋರ.

**अब**, क्रिवि. ಈ ಸಮಯ, ಈಗ. अब के लिये = ಸದ್ಯಃ. अब तब लगना या होना = ಉತ್ಕ್ರಮಣಾವಸ್ಥೆಗೆ ಬರು.

**अबख़ारा**, पु. ಆವಿ, ಹಬೆ, ಉಗಿ.

**अबतर**, वि. ಕೆಟ್ಟುಹೋದ, ಹಾಳು.

**अबतरी**, स्त्री. ಕೇಡು, ಹಾಳು.

**अबरक**, पु. ಅಭ್ರಕ, ಕಾಗೆಬಂಗಾರ.

**अबरा**, पु. ಇಮ್ಮಡಿ ಬಟ್ಟೆಯ ಹೊರ ಮಡಿಕೆ; ಗಂಟು, ಸಿಕ್ಕು, ಗೋಜಲು.

**अबतरी**, स्त्री. ಒಂದು ಬಗೆಯ ನುಣುಪಾದ ಕಾಗದ; ಒಂದು ಬಗೆ ಕಲ್ಲು.

**अबरू**, स्त्री. ಹುಬ್ಬು.

**अबलख़**, वि. ಕೆಂಬಿಳುಪು ಅಥವಾ ಕೆಂಗಪ್ಪು ಬಣ್ಣ; ಇಬ್ಬಣ್ಣದ. पु. ಈ ಬಣ್ಣದ ಎತ್ತು ಅಥವಾ ಕುದುರೆ.

**अबवाब**, पु. ಅಧ್ಯಾಯಗಳು; ಕಂದಾಯದೊಂದಿಗೆ ವಸೂಲಾಗುವ ಹೆಚ್ಚಿನ ತೆರಿಗೆ; ತೆರಿಗೆಯ ಬಾಬುಗಳು.

**अबा**, पु. ಸಡಿಲವಾದ ಅಂಗಿ.

**अबादान**, वि. ಜನಭರಿತ.

**अबादानी**, स्त्री. ನೆರತೆ, ಜನಸಮೃದ್ಧಿ; ಶುಭಚಿಂತನೆ; ಸಂದಣಿ.

**अबाबील**, स्त्री. ಕಪ್ಪು ಬಣ್ಣದ ಒಂದು ಪಕ್ಷಿ.

**अबीर**, पु. ಕಾಮನ ಹಬ್ಬದಲ್ಲಿ ಒಬ್ಬರ ಮೇಲೊಬ್ಬರು ಎರಚಿ ಆಟವಾಡುವ ಬಣ್ಣದ ಪುಡಿ, ಅಭ್ರಕದ ಪುಡಿ, ಗುಲಾಲು.

**अबीरी**, पु. ಅಬೀರಿನ ಬಣ್ಣ.

**अबूझ**, वि. ತಿಳಿಯದ, ಅರಿಯದ.

**अबे**, अव्य. ಲೋ, ಎಲಾ, ಹೈದನೇ! अबे तबे करना = ಮರ್ಯಾದೆಯಿಲ್ಲದ ಮಾತುಗಳನ್ನಾಡು, ಎಲಾ ತಲಾ ಅನ್ನು.

**अबेर**, पु. ಅಸಮಯ, ಅವೇಳೆ; ವಿಳಂಬ.

**अबोध**, वि. ತಿಳಿಯದವ. पु. ಅಜ್ಞಾನ.

**अबोला**, पु. ಮೌನ.

**अब्जद**, पु. ವರ್ಣಮಾಲೆ; ಓನಾಮ.

**अब्जदी**, वि. ವರ್ಣಮಾಲೆಗೆ ಸಂಬಂಧಿಸಿದ; ಅಕಾರಾದಿ.

**अब्बा**, पु. ತಂದೆ, ಅಪ್ಪ.

**अब्बास**, पु. ಸಂಜೆಮಲ್ಲಿಗೆ, ಬಯ್ಗುಮಲ್ಲಿಗೆ.

**अब्बासी**, स्त्री. ಒಂದು ತರದ ಹತ್ತಿ; ಕೆಂಪು ಬಣ್ಣ.

**अब्र**, पु. ಮೋಡ, ಮುಗಿಲು, ಮೇಘ.

**अभागा**, वि. ಭಾಗ್ಯವಿಲ್ಲದವ, ನಿರ್ಭಾಗ್ಯ.

**अभागी**, वि. ಭಾಗ್ಯಹೀನ; ಆಸ್ತಿಯ ಹಕ್ಕಿಲ್ಲದವ.

**अभाव**, पु. ಇಲ್ಲದಿರುವಿಕೆ; ಅಭಾವ.

**अभिज्ञ**, वि. ತಿಳಿದವ, ನಿಪುಣ.

**अभिनंदन**, पु. ಆನಂದ; ಪ್ರಶಂಸೆ, ಮೆಚ್ಚಿಗೆ. अभिनंदनपत्र = ಮಾನಪತ್ರ, ಬಿನ್ನವತ್ತಳೆ.

**अभिनय**, पु. ನಟನೆ, ಸೋಗು, ಅಭಿನಯ.

**अभिनेता**, पु. ಅಭಿನಯಕಾರ, ನಟ.

**अभिनेत्री**, स्त्री. ನಟಿ, ಅಭಿನಯಗಾರತಿ.

**अभिप्राय**, पु. ಆಶಯ, ತಾತ್ಪರ್ಯ.

**अभिमान**, पु. ಗರ್ವ, ಹೆಮ್ಮೆ; ಕೆಚ್ಚು.

**अभिमानी**, वि. ಅಹಂಕಾರೀ, ಹೆಮ್ಮೆಗಾರ.

**अभियुक्त**, वि. ಆಪಾದಿತ.

**अभियोग**, पु. ಆಪಾದನೆ, ದಾವಾ.

**अभिलाषा**, स्त्री. ಇಚ್ಛೆ, ಬಯಕೆ.

**अभिलाषी**, वि. ಬಯಸುವವ, ಇಚ್ಛುಕ.

**अभिसंधि**, स्त्री. ಕಪಟ; ಒಳಸಂಚು, ಪಿತೂರಿ.

**अभी**, क्रिवि. ಈಗತಾನೆ, ಈಗಲೆ.

**अभीर**, पु. ಗೊಲ್ಲ, ಗವಳಿಗ.

**अभीष्ट**, पु. ಮನೋರಥ, ಹಾರೈಕೆ.

**अभुआना**, अक्रि. ದೆವ್ವ ಹಿಡಿದವನಂತೆ ಆಡು.

**अभेरना**, सक्रि. ಡಿಕ್ಕಿ ಹೊಡಿಸು; ಕಲಸು, ಬೆರಸು.

**अभेरा**, पु. ಢಿಕ್ಕಿ; ತಿಕ್ಕಾಟ, ಜಗಳ.

**अभ्यर्थना**, स्त्री. ಪ್ರಾರ್ಥನೆ; ಇದಿರುಗೊಳ್ಳುವಿಕೆ.

**अभ्यस्त**, वि. ಅಭ್ಯಾಸವಾದ, ಬಳಕೆಯಾದ; ಅಭ್ಯಾಸವುಳ್ಳವ.

**अभ्यास**, पु. ರೂಢಿ, ಬಳಕೆ.

**असका**, पु. = अमुक.

**अमचूर**, पु. ಒಣಗಿದ ಮಾವಿನಕಾಯಿಯ ಚೂರು ಮತ್ತು ಚೂರ್ಣ.

**अमज़द**, पु. ವೃದ್ಧರು, ಗುರುಹಿರಿಯರು.

**अमड़ा**, पु. ಅಮಟೆಕಾಯಿ.

**अमन**, पु. ಶಾಂತಿ, ನೆಮ್ಮದಿ; ರಕ್ಷಣೆ.

**अमर**, पु. ಆದೇಶ, ವಿಧಿ.

**अमरस**, पु. ಹೆಪ್ಪುಗಟ್ಟಿದ ಮಾವಿನ ಹಣ್ಣಿನ ರಸ.

**अमरसी**, वि. ಮಾವಿನಹಣ್ಣಿನ ರಸದ ಬಣ್ಣದ; ಹೊಂಬಣ್ಣದ.

**अमराई**, स्त्री. ಮಾವಿನ ತೋಪು.

**अमरू**, पु. ರೇಷ್ಮೆ ಬಟ್ಟೆ.

**अमरूत, अमरूद**, पु. ಸೀಬೇಹಣ್ಣು, ಚೇಪೆಹಣ್ಣು, ಪೇರಲ ಹಣ್ಣು.

**अमल**, वि. ನಿರ್ಮಲ. पु. ಕಾರ್ಯ, ಕರ್ಮ; ವ್ಯವಹಾರ, ನಡವಳಿಕೆ; ಅಧಿಕಾರ; ಅಮಲು, ಮದ, ಮತ್ತು; ಅಭ್ಯಾಸ, ಚಾಳಿ; ಪ್ರಭಾವ; ಭೋಗಕಾಲ, ಭುಕ್ತಿ (ಜ್ಯೋತಿಷ).

**अमलदार**, पु. ಒಬ್ಬ ಸರಕಾರೀ ಉದ್ಯೋಗಸ್ಥ, ತಹಸೀಲುದಾರ, ಅಮಲ್ದಾರ.

**अमलदारी**, स्त्री. ಅಧಿಕಾರ; ಜಮೀನಿನ ಸಾಗುವಳಿಯ ಒಂದು ಕ್ರಮ.

**अमलपट्टा**, पु. ಅಧಿಕಾರಪತ್ರ, ಮೊಕ್ತಿಯಾರ್ನಾಮಾ; ಪಟ್ಟಾ.

**अमला**, पु. ಉದ್ಯೋಗಸ್ಥ; ಸರಕಾರೀ ವಿಭಾಗ, ಖಾತೆ, ಇಲಾಖೆ.

**अमली**, वि. ವ್ಯಾವಹಾರಿಕ; ಮದ್ಯ ಸಂಬಂಧವಾದ; ಲಹರಿ ಅಥವಾ ಮಾದಕ ವಸ್ತು ಸೇದುವವ, ಅಮಲುಖೋರ.

**अमलोनी**, स्त्री. ಒಂದು ಬಗೆಯ ಬಚ್ಚಲೆ ಸೊಪ್ಪು.

**अमहर**, पु. ಮಾವಿನಕಾಯಿಯ ಬಾಳಕ

**अमान**, पु. ರಕ್ಷಣೆ, ಕಾಪಾಡುವಿಕೆ; ಆಶ್ರಯ, ಶರಣು.

**अमानत**, स्त्री. ಅಮಾನತ್ತು, ನ್ಯಾಸ; ಅಮಾನತ್ತಾಗಿಟ್ಟ ವಸ್ತು, ಠೇವಣಾತಿ.

**अमानतदार**, पु. ಅಮಾನತ್ತು ಅಥವಾ ಠೇವಣಾತಿ ತಕ್ಕೊಳ್ಳುವವ.

**अमाना**, अक्रि. ತುಂಬಿ ಹೋಗು; ಉಬ್ಬು, ಹಿಗ್ಗು, ಗರ್ವಪಡು.

**अमानी**, स्त्री. ಸ್ವಂತ ಸಾಗುವಳಿಯ ಜಮೀನು, ಸಂದಾಯಿತ; ಸರಕಾರೀ ಜಮೀನು; ಕಂದಾಯದ ರಿಯಾಯಿತಿ

**अमारी**, स्त्री. ಆನೆಯ ಮೇಲಿನ ಮಂಟಪ, ಅಂಬಾರಿ; ಅಮಟೇಕಾಯಿ.

**अमावट**, स्त्री. ಮಾವಿನಕಾಯನ್ನು ತಿರುವಿ ತಟ್ಟಿದ ಬಿಲ್ಲೆ, ಮಾವಿನ ಚಟ್ಟು.

**अमाल**, पु. ದೊರೆ, ಅಧಿಕಾರಿ.

**अमालनामा**, पु. ಉದ್ಯೋಗಸ್ಥರ ಕೆಲಸ, ನೀತಿನಡತೆ ಮುಂತಾದುವುಗಳನ್ನು ಬರೆದಿಡುವ ಪುಸ್ತಕ.

**अमिट**, वि. ಅಳಿಯದ, ನಾಶವಾಗದ, ಅಕ್ಷಯ ; ಅಳಿಸಲಾಗದ, ನಿಶ್ಚಯವಾಗಿ ಸಂಭವಿಸುವ.

**अमिया**, स्त्री. ಸಣ್ಣ ಮಾವಿನಕಾಯಿ.

**अमीन**, पु. ಕೋರ್ಟಿನ ಒಬ್ಬ ಉದ್ಯೋಗಸ್ಥ, ಅಮೀನಾ.

**अमीर**, पु. ದೊರೆ, ಅರಸ ; ಪ್ರಭು, ಶ್ರೀಮಂತ; ಅಫ್ಘಾನಿಸ್ಥಾನದ ರಾಜನ ಬಿರುದು. अमीर गरीब = ಬಡವರು ಬಲ್ಲಿದರು.

**अमीराना**, वि. ಶ್ರೀಮಂತನಂಥ; ಉದಾರವಾದ.

**अमीरी**, स्त्री. ಸಂಪತ್ತು ; ಶ್ರೀಮಂತಿಕೆ ; ಔದಾರ್ಯ. वि. ಶ್ರೀಮಂತರಂತಹ.

**अमुक**, वि. ಇಂಥಿಂಥ, ಫಲಾನ.

**अमृतदान**, **अमृतबान**, पु. ಜಾಡಿ.

**अमृतबूटी**, स्त्री. ಸಂಜೀವಿನಿ ಮೂಲಿಕೆ

**अमेजना**, सक्रि. ಬೆರಸು, ಕಲಸು.

**अमोल**, **अमोलक**, वि. ಅಮೂಲ್ಯ.

**अमोला**, पु. ಮಾವಿನ ಸಸಿ.

**अम्माँ**, स्त्री. ಅಮ್ಮ, ತಾಯಿ.

**अम्मामा**, पु. ಪೇಟಾ, ಮುಂಡಾಸು.

**अम्मारी**, स्त्री. = **अंबारी**.

**अम्ल**, पु. ಹುಳಿ; ದ್ರಾವಕ. वि. ಹುಳಿಯಾದ.

**अम्हौरी**, स्त्री. ಬೆವರುಸಾಲೆ.

**अयस्कांत**, स्त्री. ಸೂಜಿಗಲ್ಲು.

**अयाँ**, वि. ಸ್ಪಷ್ಟವಾದ, ವಿದಿತ.

**अयान**, वि. ಪಾದಚಾರಿ.

**अयानत**, स्त्री. ದಯೆ, ಅನುಗ್ರಹ.

**अयाल**, पु. ಕುದುರೆ ಮತ್ತು ಸಿಂಹದ ಕತ್ತಿನ ಕೂದಲು, ಕೇಸರ, ಜೂಗು.

**अरंड**, पु. ಹರಳುಗಿಡ.

**अरई**, स्त्री. ಚಾವಟಿ, ಚಬುಕು.

**अरकना**, अक्रि. ಎಡವಿ ಬೀಳು; ಬಿರುಕು ಬಿಡು.

**अरकना बरकना**, अक्रि. ಎಳೆದಾಡು.

**अरकाटी**, पु. 'ಅರ್ಕಾಟು' ಜಿಲ್ಲೆಯವ; ಕಾಫಿ ತೋಟ ಮುಂತಾದುವುಗಳಲ್ಲಿ ಕೆಲಸ ಮಾಡಲು ಕೂಲಿಗಾರರನ್ನು ಹೊಂದಿಸಿಕೊಡುವವ, ಸೇರುವೆಗಾರ, ಸಾರೆಕಾರ.

**अरगजा**, पु. ಕೇಸರೀಗಂಧ.

**अरगनी**, स्त्री. = **अलगनी**.

**अरगवानी**, पु. ಕೆಂಪುಬಣ್ಣ.

**अरगला**, पु. ಅಗಳಿ, ತಡೆ.

**अरगाना**, अक्रि. ಅಗಲು; ಮೌನವಾಗಿರು. सक्रि. ಆಯು, ಆರಿಸು ; ವಿಂಗಡಿಸು.

**अरघा**, पु. ಅರ್ಘ್ಯಪಾತ್ರೆ; ಲಿಂಗದ ಪಾಣಿಬಟ್ಟಲು ; ಭಾವಿಯ ಸುತ್ತಲೂ ಇರುವ ಬಚ್ಚಲು, ಜಲದಾರಿ.

**अरचना**, सक्रि. ಅರ್ಚಿಸು.

**अरज़**, स्त्री. = **अर्ज़**.

**अरज़ाँ**, वि. ಅಗ್ಗವಾದ, ಸೋವಿ, ಚಾರಿ.

**अरण्य**, पु. ಕಾಡು, ಅಡವಿ, ವನ.

**अरण्यरोदन**, पु. ನಿರ್ಜನಸ್ಥಾನದಲ್ಲಿ ಅಳುವುದು ; ವ್ಯರ್ಥವಾಗಿ ಅಳುವು

ದು ; ಯಾರೂ ಗಮನಿಸದ ಮಾತು.
**अरथी,** स्त्री. ಸಿದಿಗೆ, ಚಟ್ಟ.
**अरदना,** सक्रि. ತುಳಿಯು, ನಾಶ ಮಾಡು.
**अरदली,** पु. ಪರಿಕಾರ, ಆಳು, ನೌಕರ
**अरदास,** स्त्री. ಕಾಣಿಕೆ ; ಮುಡುಪು.
**अरना,** पु. ಕಾಡುಕೋಣ, ಕಾಟಿ.
**अरब,** पु. ನೂರು ಕೋಟಿ ; ಅರಬ್ಬೀ ದೇಶದವ.
**अरबराना,** अक्रि. ದಿಗಿಲುಬೀಳು, ಗಾಬರಿಗೊಳ್ಳು ; ತಡಬಡಿಸು.
**अरबरी,** स्त्री. ಗಾಬರಿ, ದಿಗಿಲು.
**अरबी,** वि. ಅರಬ್ಬಿ ದೇಶದ. पु. ಅರಬ್ಬಿ ದೇಶದ ಕುದುರೆ ಅಥವಾ ಒಂಟೆ; ಒಂದು ಬಗೆಯ ವಾದ್ಯ.
**अरबीला,** वि. ನಿಷ್ಕಪಟವಾದ, ಭೋಳೆ
**अरमान,** पु. ಅಭಿಲಾಷೆ, ಬಯಕೆ.
**अरर,** अव्य. ದಿಗಿಲು ಅಥವಾ ಆಶ್ಚರ್ಯವನ್ನು ಸೂಚಿಸುವ ಶಬ್ದ.
**अरराना,** अक्रि. ಅರರ ಎಂಬ ಶಬ್ದ ಮಾಡು, ಲಟಲಟನೆ ಮುರಿ.
**अरवा,** पु. ಬೆಣತಕ್ಕಿ, ಬೆಣತಿಗೆ; ಗೋಡೆಯಲ್ಲಿನ ಗೂಡು ; ಕೆಸು.
**अरवी,** स्त्री. ಕೇಸುಗೆಡ್ಡೆ, ಕೆಸು.
**अरस,** पु. ಆಲಸ್ಯ; ಮಹಡಿ; ಮಹಡಿಯ ಮೆಟ್ಟಲು ; ಉಪ್ಪರಿಗೆ.
**अरसना,** अक्रि. ಶಿಥಿಲವಾಗು.
**अरसना परसना,** अक्रि. ಆಲಿಂಗನ ಮಾಡು ; ಸಂದರ್ಶಿಸು.
**अरस परस,** पु. ಕಣ್ಣಾಮುಚ್ಚಾಲೆಯಾಟ; ನೋಡುವಿಕೆ ; ಸ್ಪರ್ಶನ.
**अरसा,** पु. ಕಾಲ, ಹೊತ್ತು; ವಿಳಂಬ.
**अरस्तू,** पु. ಗ್ರೀಸ್ ದೇಶದ ಅರಿಸ್ಟಾಟಲ್ ಎಂಬ ತತ್ವಜ್ಞಾನಿ.
**अरहट,** पु. ಭಾವಿಯ ರಾಟೆ.
**अरहन,** पु. ಹುಳಿ, ಕೂಟು ಮುಂತಾದವಕ್ಕೆ ಸೇರಿಸುವ ಹಿಟ್ಟು, ಹೊಂದಿಟ್ಟು.
**अरहर,** स्त्री. ತೊಗರಿ, ತುವರಿ.
**अराबा,** पु. ಗಾಡಿ; ಫಿರಂಗಿಯ ಗಾಡಿ.
**अरी,** अव्य. ಎಲೇ, ಲೇ.
**अरु,** अव्य. ಮತ್ತು.
**अरुई,** स्त्री. = अरवी.
**अरुन,** पु. ಕೆಂಪು.
**अरुनारा,** वि. ಕೆಂಪುಬಣ್ಣದ.
**अरुवा,** पु. ಕೆಸುವಿನ ಗೆಡ್ಡೆ; ಗೂಗೆ.
**अरूलना,** अक्रि. ಗಾಯವಾಗು; ನೋವಾಗು, ನೋಯು.
**अरूसा,** पु. अडूसा.
**अरे,** अव्य. ಎಲೋ, ಲೋ.
**अरोचक,** वि. ರುಚಿಯಿಲ್ಲದ, ಸಪ್ಪೆ.
**अरोहना,** अक्रि. ಏರು, ಹತ್ತು.
**अर्क,** पु. ರಸ, ಸಾರ ; ಕಷಾಯ, ಆಸವ ; ಬೆವರು.
**अर्कनाना,** पु. ಪುದಿನಾ ಎಣ್ಣೆ, ಪೆಪ್ಪರ್‌ಮಿಂಟ್ ಎಣ್ಣೆ.
**अर्गल,** पु. ಬಾಗಿಲಿನ ತಾಳ, ಅಗಳಿ; ತಡೆ, ಅಡ್ಡಿ; ಸೂರ್ಯನ ಉದಯಾಸ್ತಗಳಲ್ಲಿ ತೋರುವ ಬಣ್ಣವೇರಿದ ಮೋಡಗಳು; ಮಾಂಸ
**अर्गला,** स्त्री. ಅಗಳಿ; ತಡೆ, ಅಡ್ಡಿ;

ಆನೆ ಕಟ್ಟುವ ಸರಪಣಿ.
**अर्ज़**, पु. ಭೂಮಿ; ಅಗಲ; ವೈಶಾಲ್ಯ. स्त्री. ವಿನಂತಿ, ಪ್ರಾರ್ಥನೆ. अर्ज करना = ಅರಿಕೆಮಾಡು, ವಿಜ್ಞಾಪಿಸು
**अर्ज़दाश्त**, स्त्री. ಪ್ರಾರ್ಥನಾಪತ್ರ.
**अर्ज़ी**, स्त्री. ಪ್ರಾರ್ಥನಾಪತ್ರ, ಮನವಿ, ಅರ್ಜಿ. वि. ಪ್ರಾರ್ಥಿಸಿಕೊಳ್ಳುವವ.
**अर्ज़ीदावा**, पु. ಫಿರ್ಯಾದು.
**अर्थ**, पु. ಶಬ್ದದ ಅಭಿಪ್ರಾಯ, ಮಾತಿನ ಅರ್ಥ; ಅಭಿಪ್ರಾಯ, ಉದ್ದೇಶ; ಹಣ, ಹಣಕಾಸು.
**अर्थदंड**, पु. ಧನದಂಡ, ಜುಲ್ಮಾನೆ, ಗುನ್ನೆಗಾರಿ.
**अर्थी**, वि. ಬಯಸುವವ, ಅಭಿಲಾಷಿ. पु. ಮನವಿಗಾರ; ಸೇವಕ; ಹಣವಂತ. स्त्री. ಚಟ್ಟ, ಸಿದಿಗೆ.
**अर्द्धाली**, स्त्री. ಚೌಪದಿ ವೃತ್ತದ ಎರಡು ಪಾದ, ಶ್ಲೋಕಾರ್ಧ.
**अर्राटा**, पु. ಎಡಬಿಡದೆ ಆಗುತ್ತಿರುವ ಗಟ್ಟಿಯಾದ ಶಬ್ದ, ಲೊಡಬಡ ಶಬ್ದ.
**अर्राना**, अक्रि. ಎಡಬಿಡದೆ ಗಟ್ಟಿಯಾದ ಶಬ್ದಮಾಡು, ಲೊಡಬಡ ಅನ್ನು; ದುಡುಂಪ್ರವೇಶಮಾಡು.
**अर्श**, पु. ಮೂಲವ್ಯಾಧಿ; ಆಕಾಶ.
**अलंग**, पु. ದಿಕ್ಕು, ಕಡೆ.
**अलक**, पु. ಕುರುಳು, ಮುಂಗುರುಳು.
**अलकतरा**, पु. ಕೀಲೆಣ್ಣೆ, ಡಾಮರೆಣ್ಣೆ, "ಟಾರ್".
**अलख**, वि. ಕಣ್ಣಿಗೆ ಕಾಣದ, ಅಗೋಚರ; ಆಕಾರವಿಲ್ಲದ, ನಿರಾಕಾರ. अलख जगाना = ಈಶ್ವರನ ಹೆಸರಿನಲ್ಲಿ ಭಿಕ್ಷೆ ಬೇಡು.
**अलखधारी, अलखनामी**, पु. ಒಂದು ಬಗೆಯ ಸಾಧು.
**अलग**, वि. ಬೇರೆ, ಭಿನ್ನ, ಅಲಾಯಿದ. अलग अलग, अलग थलग = ಬೇರೆ ಬೇರೆ, ಬಿಡಿಬಿಡಿಯಾಗಿ.
**अलगनी**, स्त्री. ಬಟ್ಟೆ ಹರವುವ ದಂಡ ಅಥವಾ ಹಗ್ಗ.
**अलग़रज़**, पु. ಭಾವಾರ್ಥ, ತಾತ್ಪರ್ಯ, ಆಶಯ; ಉಪಸಂಹಾರ.
**अलग़रज़ी**, वि. ಉದಾಸೀನವಾದ. स्त्री. ತಾತ್ಸಾರ.
**अलगाना**, सक्रि. ಬಿಡಿಸು, ಅಗಲಿಸು, ಪ್ರತ್ಯೇಕಿಸು ; ಸರಿಸು, ನೀಗಿಸು.
**अलगाव**, पु. ಬೇರೆಯಾಗುವಿಕೆ, ಅಗಲುವಿಕೆ.
**अलगोज़ा**, पु. ಒಂದು ಬಗೆ ಕೊಳಲು, ಪಿಳ್ಳಂಗೋವಿ, ವೇಣು.
**अलता**, पु. ಓಕಳಿ, ಕಾಲುರಂಜಕ.
**अलपाका**, पु. ಅಮೆರಿಕದ (ಒಂಟೆಯಂತಹ) ಒಂದು ಮೃಗ; ಇದರ ಉಣ್ಣೆಯಿಂದ ನೆಯ್ದ ಬಟ್ಟೆ.
**अलफ़**, पु. ಕುದುರೆಯು ಮುಂಗಾಲುಗಳನ್ನು ಮೇಲಕ್ಕೆತ್ತಿ ಹಿಂಗಾಲುಗಳ ಮೇಲೆ ನಿಂತುಕೊಳ್ಳುವುದು.
**अलफ़ा**, पु. **अलफ़ी**, स्त्री. ಸನ್ಯಾಸಿಗಳ ತೋಳಿಲ್ಲದ ಉದ್ದವಾದ ಅಂಗಿ.
**अलफ़ाज़**, पु. "लफ़्ज़" का ब. रूप; ಶಬ್ದಗಳು, ಮಾತುಗಳು.

**अलबत्ता**, अव्य. ನಿಸ್ಸಂದೇಹವಾಗಿ; ಸರಿಯುಷ್ಟೆ, ನಿಜ; ಆದರೆ.

**अलबी तलबी**, स्त्री. ಅರ್ಥವಾಗದ ಅರಬ್ಬಿ ಫಾರಸಿ ಮಾತುಗಳು.

**अलबेला**, वि. ಸೊಗಸಾದ, ಅಂದವಾದ; ಥೋರಣೆಯು, ಬೆಡಗಿನ. पु. ತೆಂಗಿನ ಕರಟದಿಂದ ಮಾಡಿದ ಹುಕ್ಕ.

**अलबेलापन**, पु. ಅಂದ, ಸೌಂದರ್ಯ, ಸೊಗಸು; ಥೋರಣೆ, ಒಯ್ಯಾರ, ಬೆಡಗು; ಅಲಕ್ಷ್ಯ.

**अलम्**, अव्य. ಪರ್ಯಾಪ್ತ, ಪೂರ್ಣ.

**अलम**, पु. ವ್ಯಾಕುಲ, ಶೋಕ; ಬಾವುಟ, ಧ್ವಜ.

**अलमस्त**, वि. ಅಮಲೇರಿದ, ಮತ್ತ; ಪ್ರಜ್ಞೆಯಿಲ್ಲದ, ನಿಶ್ಚಿಂತನಾದ.

**अलमारी**, स्त्री. ಕಪಾಟು, ಅಲಮಾರು

**अलमास**, पु. ವಜ್ರ, ಹೀರ.

**अलल-टप्पू**, वि. ಅಸಂಬದ್ಧ, ಯದ್ವಾತದ್ವಾ.

**अलल-बछेड़ा**, पु. ಕುದುರೆ ಮರಿ; ಥೋರಣೆಗಾರ, ಮೋಜುಗಾರ.

**अलवांती**, स्त्री. ಬಾಣಂತಿ.

**अलवाई**, स्त्री. ಕರು ಹಾಕಿದ ಹಸು ಅಥವಾ ಎಮ್ಮೆ.

**अलवान**, पु. ಕಂಬಳಿ, ಧಾವಳಿ.

**अलविदा**, अव्य, ಬೀಳ್ಕೊಳ್ಳೋಣ, ಬೀಳ್!

**अलस**, वि. ಆಲಸ, ಸೋಮಾರಿ.

**अलसाना**, अक्रि. ಆಯಾಸಪಡು, ದಣಿಯು, ಆಲಸ್ಯಗೊಳ್ಳು.

**अलसी**, स्त्री. ಅಗಸೆ ಬೀಜ; ಅಗಸೆ ಗಿಡ.

**अलसेट**, स्त्री. ವಿಳಂಬ, ಸುಸ್ತಿ; ನೆಪ ವಂಚನೆ; ಅಡಚಣೆ; ತಕರಾರು.

**अलसेटिया**, वि. ತಾಮಸ ಪ್ರಕೃತಿಯ ಜೋಬದ್ರೆ ಮನುಷ್ಯ, ಸುಸ್ತಿಗಾರ ಮೈಗಳ್ಳ, ನೆಪ ಹೇಳುವವ; ತಕರಾರು ಮಾಡುವವ.

**अलहदा**, वि. ಬೇರೆ, ಅಲಾಯಿದ.

**अलहदी**, पु. =अह्दी.

**अलाई**, वि. ಸೋಮಾರಿ.

**अलान**, पु. ಆನೆ ಕಟ್ಟುವ ಗೂಟ ಮುಂಡಿಗೆ; ಬಂಧನ, ಬೇಡಿ, ಕೋಳ; ಸರಪಳಿ.

**अलानिया**, क्रिवि. ಬಹಿರಂಗವಾಗಿ.

**अलापना**, अक्रि. ಅನ್ನು, ಹೇಳು; ಹಾಡು; ಆಲಾಪನೆ ಮಾಡು.

**अलाम**, पु. ಸುಳ್ಳುಗಾರ, ಸುಳ್ಳು.

**अलामत**, पु. ಚಿಹ್ನೆ, ಗುರುತು.

**अलार**, पु. ಬಾಗಿಲು; ಆವಿಗೆ, ಬಟ್ಟಿ.

**अलालत**, स्त्री. ರೋಗ, ಕಾಯಿಲೆ, ಜಡ್ಡು.

**अलाव**, पु. ಚಳಿಗಾಲದಲ್ಲಿ ಬೆಂಕಿ ಕಾಯಿಸುವ ಒಲೆ.

**अलावा**, क्रिवि. ಹೊರತು, ವಿನಾ; ಇದಲ್ಲದೆ.

**अलिंद**, पु. ಜಗಲಿ, ದುಂಬಿ.

**अलीन**, पु. ಗೋಡೆಗೆ ಸೇರಿದಂತಿರುವ ಕಂಬ; ಬಾಗಿಲುವಾಡ, ನಿಲು.

**अलील**, वि. ಅಸ್ವಸ್ಥ, ರೋಗಿ, ರುಗ್ಣ.

**अल्ला,** पु. ನೀರು ಗುಳ್ಳೆ; ಅಗ್ನಿಜ್ವಾಲೆ.
**अलोकना,** सक्रि. ನೋಡು.
**अलोना,** वि. ಉಪ್ಪಿಲ್ಲದ, ಸಪ್ಪೆ; ನವೀನ.
**अल्प,** वि. ಕೊಂಚ, ತುಸ; ಚಿಕ್ಕ.
**अल्पता,** स्त्री. ಅಲ್ಪತ್ವ; ಕೊರತೆ.
**अल्ल,** पु. ಮನೆತನದ ಹೆಸರು.
**अल्लम गल्लम,** पु. ಗೊಡ್ಡುಹರಟೆ.
**अल्लामा,** स्त्री. ಉದ್ದಾಮ ಪಂಡಿತ; ಗಂಡುಬೀರಿ.
**अल्लाह,** पु. ಮಹಮ್ಮದೀಯರು ಆರಾಧಿಸುವ ದೇವರು; ದೇವರು, ಭಗವಂತ. अल्लाहो-अकबर = ಭಗವಂತನೇ ದೊಡ್ಡವನು.
**अलहज़ा,** पु. ಗಪ್ಪೆ, ಹರಟೆ, ಜಲ್ಪ.
**अलहड़,** वि. ಸ್ವೇಚ್ಛಾಚಾರಿ; ಲಕ್ಷ್ಯವಿಲ್ಲದವ; ಅನುಭವವಿಲ್ಲದ, ತಿಳಿವಳಿಕೆ ಇಲ್ಲದವ, ಹೆಡ್ಡ. पु. ಪಳಗಿಸದ ಹೋರಿ
**अलहड़पन,** पु. ಸ್ವೇಚ್ಛಾಚಾರ; ತಾತ್ಸಾರ; ತಿಳಿವಳಿಕೆ ಅಥವಾ ಅನುಭವವಿಲ್ಲದಿರುವಿಕೆ; ಮಂಕುತನ.
**अवकाश,** पु. ಎಡೆ, ಅಂತರ; ಅಂತರಿಕ್ಷ; ಸಮಯ; ಪುರಸತ್ತು, ಬಿಡುವು.
**अवगारना,** सक्रि. ಬುದ್ಧಿ ಹೇಳು.
**अवगाह,** वि. ಆಳವಾದ. पु. ಆಳವಾದ ಸ್ಥಳ, ಗಹನ; ಪ್ರವೇಶ; ಸ್ನಾನ.
**अवगाहन,** पु. ಪ್ರವೇಶ; ಮುಳುಗುವಿಕೆ, ಮೀಯುವಿಕೆ; ಕಡೆಯುವುದು; ಹುಡುಕುವಿಕೆ; ಗಮನಿಸುವಿಕೆ, ನಿಗಾ.
**अवगाहना,** अक्रि. ಮುಳುಗು, ಮೀಯು; ಹೊಗು. सक्रि. ಹುಡುಕು; ಅಲ್ಲಾಡಿಸು; ಗಮನಿಸು, ನಿಗಾ ಇಡು.
**अवघट,** वि. ಅಗಮ್ಯ, ದುರ್ಗಮ; ಕಠಿಣ.
**अवचट,** पु. ಅಶಕ್ತ; ಅಜ್ಞಾನಿ; ತೊಡಕು. क्रिवि. ಅಕಸ್ಮಾತ್ತಾಗಿ, ಥಟ್ಟನೆ.
**अवज्ञा,** स्त्री. ಅವಹೇಳನ, ತಿರಸ್ಕಾರ. अवज्ञा करना = ಕಡೆಗಾಣಿಸು.
**अवटना,** सक्रि. ಕಡೆಯು, ಮಥಿಸು; ಕುದಿಸು, ಹೊಂಗಿಸು. अक्रि. ತಿರುಗು
**अवडेर,** पु. ಗೋಜು, ತಂಟೆ; ವಿಘ್ನ.
**अवडेरना,** सक्रि. ಮರುಳುಗೊಳಿಸು; ಪೀಡಿಸು, ಗೋಳಾಡಿಸು.
**अवडेरा,** वि. ಸುತ್ತಾದ, ಬಳಸಾದ; ಗೊಂದಲದ, ತೊಡಕಿನ; ಅವಲಕ್ಷಣವಾದ, ಅಂದಗೆಟ್ಟ.
**अवतरना,** अक्रि. ಹುಟ್ಟು, ಅವತರಿಸು
**अवतरनी,** स्त्री. ಹೊಟ್ಟೆಕಡತಕ್ಕೆ ಔಷಧವಾಗುವ ಒಂದು ಮೂಲಿಕೆ.
**अवतारना,** सक्रि. ರಚಿಸು, ಹುಟ್ಟಿಸು.
**अवधि,** स्त्री. ಕಾಲ; ವಾಯಿದೆ, ಗಡು; ಮೇರೆ, ಗಡಿ.
**अवमान,** पु. ಅವಮಾನ, ಮಾನ ಕಳೆಯುವುದು.
**अवयव,** पु. ಅಂಗ, ಅವಯವ.
**अवरेब,** पु. ವಕ್ರಗತಿ; ಬಟ್ಟೆಯಲ್ಲಿನ ಹರಕು; ಗೋಜಲು, ಸಿಕ್ಕು, ತೊಡಕು; ಕಷ್ಟ; ತಂಟೆ, ತಕರಾರು, ಜಗಳ.
**अवलंबन,** पु. ಆಶ್ರಯ, ಬೆಂಬಲ.
**अवली,** स्त्री. ಹುಗ್ಗಿಯ ಹಬ್ಬಕ್ಕಾಗಿ

ಮೊಟ್ಟಮೊದಲು ಕೊಯ್ದ ಅರಿ.
**अवलेखना**, सक्रि. ಕೆರಿ, ಕೆತ್ತು.
**अवलेह**, पु. ಲೇಹ್ಯ; ಚಟ್ನಿ.
**अवलोकन**, पु. ನೋಡುವಿಕೆ, ನೋಟ; ವಿಚಾರಣೆ.
**अवलोकना**, सक्रि. ನೋಡು; ಪರಿಶೀಲಿಸು.
**अवश्य**, क्रिवि. ಅಗತ್ಯವಾಗಿ, ಕಡ್ಡಾಯವಾಗಿ.
**अवसर**, पु. ಸಮಯ, ವೇಳೆ; ಅವಕಾಶ, ಸಂದರ್ಭ.
**अवसेचन**, पु. ಚಿಮುಕಿಸುವಿಕೆ; ಸುರಿಯುವಿಕೆ.
**अवसेर**, स्त्री. ಸಿಕ್ಕು, ಗೋಜಲು, ತೊಡಕು; ವಿಳಂಬ, ತಡ; ಕಳವಳ, ಪೀಚಾಟ.
**अवसेरना**, सक्रि. ಪೀಡಿಸು. ಸತಾಯಿಸು, ಗೋಳಾಡಿಸು.
**अवस्था**, स्त्री. ಸ್ಥಿತಿ; ಕಾಲ; ವಯಸ್ಸು.
**अवहेलना**, स्त्री. ತಿರಸ್ಕಾರ, ಅಸಡ್ಡೆ. सक्रि. ತಿರಸ್ಕರಿಸು, ಅಲ್ಲಗಳೆ.
**अवाँ**, पु. ಆವಿಗೆ, ಬಟ್ಟಿ.
**अवांसी**, स्त्री. =अवली.
**अवाई**, स्त्री. ಆಗಮನ, ಬರವು; ಆಳವಾಗಿ ಉಳುವಿಕೆ.
**अवाक्**, वि. ಮೌನವಾದ; ಮಾತನಾಡದ (ಚಲನಚಿತ್ರ).
**अवाम**, पु. ಸಾಮಾನ್ಯಜನರು, ಜನಸಾಮಾನ್ಯ.
**अवार**, पु. ನದಿಯ ಈ ದಡ.
**अवारजा**, पु. ಲೆಕ್ಕದ ಪುಸ್ತಕ, ಖಾತೆ.
**अवारना**, सक्रि. ತಡೆ, ತಡೆಗಟ್ಟು; ಆತ್ಮಸಮರ್ಪಣೆ ಮಾಡು. स्त्री. ಅಂಚು; ಮುಖ, ಬಾಯಿ.
**अवेज़**, पु. =एवज़.
**अवैतनिक**, वि. ಸಂಬಳವಿಲ್ಲದೆ ಕೆಲಸ ಮಾಡುವ, ಗೌರವಕ್ಕಾಗಿ ಸೇವೆ ಮಾಡುವ. अवैतनिक मंत्री = ಗೌರವ ಕಾರ್ಯದರ್ಶಿ.
**अव्वल**, वि. ಮೊದಲನೆಯ, ಉತ್ತಮವಾದ. पु. ಮೊದಲು, ಶುರು.
**अशआर**, पु. (शेर का ब. रूप.) ಶ್ಲೋಕಗಳು.
**अशकुन**, पु. ಅಪಶಕುನ.
**अशख़ास**, पु. ("शख़्स" का ब. रूप.) ಜನರು.
**अशार**, वि. ಹತ್ತು. पु. ಹತ್ತರಲ್ಲೊಂದು ಭಾಗ, ದಶಾಂಶ; ದಶಾಂಶದ ತೆರಿಗೆ.
**अशराफ़**, पु. ಉತ್ತಮರು, ಸಜ್ಜನರು.
**अशर्फ़ी**, स्त्री. ಒಂದು ಚಿನ್ನದ ನಾಣ್ಯ, ಮೊಹರು; ಹಳದಿ ಬಣ್ಣದ ಒಂದು ಬಗೆಯ ಹೂ.
**अशिया**, पु. ವಸ್ತು.
**अश्क**, पु. ಕಣ್ಣೀರು, ಕಂಬನಿ.
**अश्लील**, वि. ಅಶ್ಲೀಲ, ಬಂಡುಮಾತು
**असंतुष्ट**, वि. ತೃಪ್ತಿಯಿಲ್ಲದವ, ಅತೃಪ್ತ
**असंतुष्टि**, स्त्री. असंतोष, पु. ಅತೃಪ್ತಿ.
**असकत**, स्त्री. ಆಲಸ್ಯ, ಸುಸ್ತಿ.
**असकताना**, अक्रि. ಆಲಸ್ಯಪಡು; ಅಶಕ್ತನಾಗು.

**असकचा**, पु. ಒರೆಯು ಒಳಗಿನ ಕೊಳೆಯನ್ನು ತೆಗೆಯುವ ಸಲಾಕಿ.

**असगुन**, पु. ಅಪಶಕುನ.

**असबरग**, पु. ರೇಷ್ಮೆಗೆ ಬಣ್ಣಕಟ್ಟಲು ಬಳಸುವ ಒಂದು ಮೂಲಿಕೆ, ಪೃಕ್ಕೆ

**असबाब**, पु. ಸಾಮಾನು, ವಸ್ತು.

**असभई**, स्त्री. ಅಸಭ್ಯತೆ, ಅಶಿಷ್ಟತೆ.

**असभ्य**, वि. ಅನಾಗರಿಕ, ಅಸಭ್ಯ.

**असभ्यता**, स्त्री. ಅನಾಗರಿಕತೆ, ಅಸಭ್ಯತೆ, ಅಶಿಷ್ಟತೆ

**असमंजस**, स्त्री. ಇಬ್ಬಂದಿ, ಪೇಚಾಟ.

**असर**, पु. ಪ್ರಭಾವ, ಫಲಿತ.

**असल**, वि. ವಾಸ್ತವವಾದ, ದಿಟ, ನಿಜ, ಶುದ್ಧ, ಸಾಚಾ, ಅಪ್ಪಟ. पु. ಬುಡ, ತಳ; ಬಂಡವಾಳ, ಮೊದಲು, ಆಸಲು

**असलियत**, स्त्री. ವಾಸ್ತವವಾದುದು, ಯಥಾರ್ಥ; ಮೂಲ, ಸಾರ; ಸತ್ವ.

**असली**, वि. ವಾಸ್ತವವಾದ, ನೈಜ; ಮೂಲ, ಶುದ್ಧ, ಅಪ್ಪಟ.

**असहनीय**, वि. ಸಹಿಸಲಾಗದ, ಅಸಹ್ಯ

**असहयोग**, पु. ಸಹಕರಿಸದಿರುವಿಕೆ, ಅಸಹಕಾರ.

**असा**, पु. ದಂಡ, ದೊಣ್ಣೆ, ಬೆಳ್ಳಿಕಟ್ಟಿಗೆ असाबरदार = ಬೆಳ್ಳಿಕಟ್ಟಿಗೆ ಹಿಡಿಯುವವ, ಕಟ್ಟಿಗೆಯುವ, ಪ್ರತಿಹಾರಿ.

**असाढ़**, पु. ಆಷಾಢಮಾಸ.

**असाढ़ी**, वि. ಆಷಾಢದ. स्त्री. ಆಷಾಢಮಾಸದಲ್ಲಿ ಬಿತ್ತುವ ಪೈರು, ಮುಂಗಾರು ಬೆಳೆ.

**असातीर**, पु. ಕತೆಗಳು, ಕಥಾವಳಿ.

**असामी**, पु. ವ್ಯಕ್ತಿ; ಕಕ್ಷಿಗಾರ; ಗ್ರಾಹಕ; ಸಾಗುವಳಿದಾರ, ರೈತ; ಆಪಾದಿತ; ಕೆಲಸ ಸಾಧಿಸುವುದಕ್ಕೆ ಬೇಕಾದ ಮನುಷ್ಯ, ಆಸಾಮಿ, ಇಸಂ. स्त्री. ನೌಕರಿ, ಪದವಿ.

**असालत**, स्त्री. ಮೂಲ, ಹುಟ್ಟು; ಕುಲೀನತೆ; ತತ್ವ.

**असालतन्**, क्रिवि. ಸ್ವಃವಾಗಿ, ಸ್ವಯಂ, ತಾನೇ, ಖುದ್ದಾಗಿ

**असावधान**, वि. ಅಜಾಗ್ರತೆಯಾದ, ಎಚ್ಚರವಿಲ್ಲದ, ಅಜಾಗರೂಕ.

**असावधानी**, स्त्री. ಅಜಾಗ್ರತೆ, ಅಜಾಗರೂಕತೆ.

**असास**, पु. ತಳಹದಿ, ಬುಡ, ಮೂಲ; ಮೂಲಧನ.

**असासा**, पु. ಮೂಲಧನ, ಬಂಡವಾಳ

**असीर**, पु. ಕೈದಿ, ಸೆರೆಯಾಳು, ಬಂದಿ.

**असीस**, स्त्री. ಆಶೀರ್ವಾದ.

**असुबिधा, असुभीता, असुविधा**, स्त्री. ಅನಾನುಕೂಲ, ಅಸೌಕರ್ಯ.

**असूझ**, वि. ಕಾಣದ, ಅಂಧಕಾರಮಯ; ಕಠಿಣ, ತೊಡಕಿನ.

**असूया**, स्त्री. ಹೊಟ್ಟೆಕಿಚ್ಚು, ಅಸೂಯೆ

**असैला**, वि. ಕ್ರಮವಿರುದ್ಧವಾದ, ಅನುಚಿತ.

**असौध**, पु. ದುರ್ಗಂಧ, ನಾತ.

**अस्तबल**, पु. ಕುದುರೆಲಾಯ, ತಬೇಲಿ

**अस्तर**, पु. ಬಟ್ಟೆಯ ಒಳಮಡಿಕೆ, ಒಳವಸ್ತ್ರ; ಅತ್ತರು ತಯಾರಿಸಲು ಮೂಲದ್ರವ್ಯವಾದ ಗಂಧದ ಎಣ್ಣೆ; ಹೆಂಗಸರ

ಒಳಉಡುಪು, ಸೀರೆಯೊಳಗೆ ಉಡುವ ಲಂಗ, ಅಂಗದಟ್ಟಿ.

**अस्तरकारी**, स्त्री. ಗಾರೆ ಗಚ್ಚು, ಮೆತ್ತಿಗೆ ಕೆಲಸ; ಸುಣ್ಣ ಬಳೆಯುವಿಕೆ.

**अस्तव्यस्त**, वि. ಭಿನ್ನ ಭಿನ್ನವಾದ, ದಿಕ್ಕಾಪಾಲಾದ.

**अस्तित्व**, पु. ಇರುವಿಕೆ, ಇರವು, ಅಸ್ತಿತ್ವ.

**अस्तुरा**, पु. ಕ್ಷೌರದ ಕತ್ತಿ.

**अस्त्र**, पु. ಆಯುಧ, ಕೈದು, ಅಸ್ತ್ರ.

**अस्त्रशाला**, **अस्त्रागार**, पु. ಆಯುಧಗಳಿಡುವಸ್ಥಳ, ಆಯುಧಶಾಲೆ.

**अस्नान**, पु. ಸ್ನಾನ.

**अस्प**, पु. ಅಶ್ವ, ಕುದುರೆ.

**अस्पताल**, पु. ಆಸ್ಪತ್ರೆ, ವೈದ್ಯಶಾಲೆ.

**अस्ला**, अव्य. ಎಂದಿಗೂ.

**अस्सी**, वि. ಎಂಭತ್ತು.

**अहंकार**, पु. ಗರ್ವ, ಹೆಮ್ಮೆ, ಅಹಂಕಾರ.

**अहक**, स्त्री. ಬಯಕೆ, ಇಚ್ಛೆ.

**अहकान**, पु. ನಿಯಮಾವಳಿ; ಕಟ್ಟಳೆ.

**अहटाना**, अक्रि. ನೋಯು, ನೋವಾಗು; ಪತ್ತೆಯಾಗು, ಗೊತ್ತಾಗು. सक्रि. ಪತ್ತೆಹಚ್ಚು.

**अहद**, पु. ಪ್ರತಿಜ್ಞೆ, ಭಾಷೆ; ಕಾಲ.

**अहदनामा**, पु. ಪ್ರತಿಜ್ಞಾಪತ್ರ, ಕರಾರು ಪತ್ರ, ಒಡಂಬಡಿಕೆ.

**अहदी**, वि. ಸೋಮಾರಿಯಾದ. पु. ಸಮಯ ಒದಗಿದಾಗ ಕೆಲಸಕ್ಕಾಗಿ ಕಾದಿರಿಸಿದ ಸಿಪಾಯಿಗಳು, ಕಾದಿಟ್ಟ ಸೈನ್ಯ.

**अहबाब**, पु. ಮಿತ್ರವರ್ಗ.

**अहमक**, वि. ಮೂರ್ಖ, ದಡ್ಡ.

**अहमत्व**, पु. "ನಾನು" ಎಂಬ ಭಾವನೆ; ಅಹಂಭಾವ, ಅಹಮ್ಮತಿ.

**अहम्मति**, स्त्री. ಅಹಂಕಾರ, ಅಹಂಭಾವ.

**अहरन**, स्त्री. ಅಡಿಗಲ್ಲು, ಪಟ್ಟಡಿ, ಅದ್ಗಣಿ.

**अहरना**, सक्रि. ಪತ್ತರಿ ಹೊಡೆ; ನಯಮಾಡು, ರೂಪಿಸು.

**अहरा**, पु. ಸಗಣಿಯ ಗುಡ್ಡೆ; ಜನರು ತಂಗುವ ಸ್ಥಳ.

**अहल**, पु. ಕುಟುಂಬದವರು, ಪರಿವಾರ, ಸ್ವಜನ; ಯಜಮಾನ.

**अहलकार**, पु. ಕಾರ್ಯಸ್ಥ, ಗುಮಾಸ್ತೆ.

**अहलमद**, पु. ಮೊಕದ್ದಮೆಗಳ ಕಾಗದ ಪತ್ರಗಳನ್ನು ನೋಡಿಕೊಳ್ಳುವ ಕೋರ್ಟಿನ ಉದ್ಯೋಗಸ್ಥ.

**अहलिया**, स्त्री. ಪತ್ನಿ, ಕುಟುಂಬ.

**अहवाल**, पु. ಸ್ಥಿತಿ, ಸ್ಥಿತಿಗತಿ, ವಿದ್ಯಮಾನ.

**अहसान**, पु. ಉಪಕಾರ; ಅನುಗ್ರಹ; ಕೃಪೆ.

**अहह**, अव्य. ಅಯ್ಯೋ! ಅಹಹ!

**अहाता**, पु. ಬೇಲಿ, ಪೌಳಿ, ಪ್ರಾಕಾರ.

**अहि**, पु. **अहिनी**, स्त्री. ಹಾವು.

**अहिवात**, पु. ಮಾಂಗಲ್ಯ, ಸೌಭಾಗ್ಯ.

**अहिवाती**, स्त्री. ಸೌಭಾಗ್ಯವತಿ, ಮುತ್ತೈದೆ.

अहीर, पु. ಗೊಲ್ಲ, ಗೌಳಿಗ.
अहीरिन, अहीरी, स्त्री. ಗೊಲ್ಲತಿ, ಗೌಳಿಗಿತ್ತಿ.
अहुटना, अक्रि. ಜರಗು, ಸರಿ.
अहुठ, वि. ಮೂರೂವರೆ.
अहेर, पु. ಬೇಟೆ; ಬೇಟೆಯ ಮೃಗ.
अहेरी, पु. ಬೇಟೆಗಾರ, ವ್ಯಾಧ.
अहोर बहोर, क्रिवि. ಪದೇ ಪದೇ, ಪುನಃಪುನಃ.
अहोरा बहोरा, पु. ಮದವಣಗಿತ್ತಿ ಅತ್ತೆಮನೆಗೆ ಹೋಗಿ ಆದಿವಸವೇ ಹಿಂತಿರುಗಿ ಬರುವ ಒಂದು ಶಾಸ್ತ್ರ.

# आ

आंक, पु. ಗುರುತು, ಚಿಹ್ನೆ; ಸಂಖ್ಯೆ, ಅಂಕೆ; ಗೆರೆ; ಅಕ್ಷರ; ಸೊಂಟ; ಅಳ್ಳೆ
आंकड़ा, पु. ಅಂಕೆ; ಅಂಕೆಗಳಸಾಲು, ಕೋಷ್ಟಕ, ಗಣಿತಿ.
आंकड़ी, स्त्री. ಬಳ್ಳಿಯ ಕುಡಿ.
आंकना, सक्रि. ಗುರುತು ಹಾಕು, ಅಂಕಿಸು; ಅಂಕೆ ಹಾಕು; ಊಹಿಸು, ಬೆಲೆ ಕಟ್ಟು.
आंकर, वि. ಆಳವಾದ; ಹೆಚ್ಚಾದ; ಬೆಲೆ ಯೇರಿದ, ತುಟ್ಟಿ.
आंकरी, स्त्री. ಬಾಣದ ಮೊನೆ; ಮುಳ್ಳು, ಕೊಕ್ಕೆ.
आंकुरी, स्त्री. ಅಗಳಿ, ಕೊಂಡಿ.
आंकुस, पु. ಅಂಕುಶ.
आंख, स्त्री. ಕಣ್ಣು, ನೇತ್ರ; ದೃಷ್ಟಿ, ನೋಟ; ಗಮನ, ಲಕ್ಷ್ಯ, ನಿಗಾ. आंख आना = ಕಣ್ಣು ನೋಯು. आंख गड़ना = ಕಣ್ಣೊತ್ತು; ದುರುಗುಟ್ಟಿ ನೋಡು; ಹಂಬಲಿಸು; ಕಣ್ಣಿಡು. आंख चुराना = ಜಾರಿಕೊಳ್ಳು, ನುಸುಳಿಕೊಳ್ಳು. आंख बचाना = ಜಾರಿಕೊಳ್ಳು, ದೃಷ್ಟಿಗೆ ಬೀಳದಂತೆ ತಪ್ಪಿಸಿಕೊಳ್ಳು. आंख भर आना = ಕಣ್ಣೀರು ತುಂಬು. आंख भर देखना = ಕಣ್ಣು ತುಂಬ ನೋಡು. आंख लगना = ನಿದ್ದೆ ಹತ್ತು; ಪ್ರೇಮ ಹುಟ್ಟು. आंखें चार करना या चार आंखें करना = ಪರಸ್ಪರ ನೋಡು; ಸಂದರ್ಶಿಸು, ಭೇಟಿಮಾಡು. आंखों देखना = ಕಣ್ಣಾರೆ ನೋಡು. आंखों में समाना = ಕಣ್ಣಿಗೆ ಕಟ್ಟಿದಂತಾಗು आंखों से लगाकर रखना = ಬಲು ಪ್ರೀತಿ ಅಥವಾ ಆದರ ತೋರು.
आंख-मिचौली, आंख-मीचली, स्त्री. ಕಣ್ಣಾಮುಚ್ಚೆ ಆಟ, ಕಣ್ಣುಮುಚ್ಚಾಲೆಯಾಟ, ಕಣ್ಣುಮುಚ್ಚಳಿಕೆ.
आंगन, पु. ಅಂಗಳ.
आंघी, स्त्री. ಸೋಸುವ ಅಥವಾ ವಸ್ತ್ರಗಾಯದ ಜರಡಿ.
आंच, स्त्री. ಉಷ್ಣ. ಕಾವು; ಜ್ವಾಲೆ, ಬೆಂಕಿ; ಆಘಾತ, ಆಪತ್ತು.
आंचना, सक्रि. ಉರಿ ಹಾಕು, ಕಾವು ಕೊಡು.
आंचल, पु. ಬಟ್ಟೆಯ ಅಂಚು, ಸೆರಗು;

ಉಡಿ, ಮಡಿಲು; ಸಾಧುಗಳ ವಸ್ತ್ರ. आंचल देना = ಸ್ತನ್ಯ ಕೊಡು. आंचल पसारना = ಸೆರಗೊಡ್ಡು.

**आंजना**, सक्रि. ಕಪ್ಪು ಹಚ್ಚು.

**आंट**, स्त्री. ಗಣಿಕೆ, ಗಂಟು; ಕಟ್ಟು; ವಶ, ಹಿಡಿತ; ವಿರೋಧ.

**आंट सांट**, स्त्री. ಒಳಸಂಚು; ಸ್ನೇಹ.

**आंटी**, स्त्री. ಕಟ್ಟು, ಕಂತೆ; ಹಿಡಿ, ದಾರದ ಲಡಿ. ಕಂಡಿಕೆ; ಪಂಚೆಯ ಗಂಟು, ಉಚ್ಚಯ; ಚಿಣ್ಣಿ.

**आंठी**, स्त्री. ಹೆಪ್ಪುಕಟ್ಟುವಿಕೆ, ಮಂದವಿಸುವಿಕೆ; ಮೊಸರಿನ ಗಡ್ಡೆ, ಗರಣೆ; ವಾಟೆ, ಗೊರಟು; ಗಂಟು.

**आंड**, पु. ಅಂಡಕೋಶ, ತರಡು.

**आंडू**, वि. ಅಂಡಕೋಶವುಳ್ಳ (ಎತ್ತು), ಗೂಳಿ.

**आंत**, स्त्री. ಕರುಳು. आंत उतरना = ಕರುಳು ಇಳಿ.

**आंदू**, पु. ಸರಪಳಿ, ಸಂಕೋಲೆ.

**आंदोलन**, पु. ಚಲಿಸುವಿಕೆ, ಚಳುವಳಿ.

**आंधी**, स्त्री. ಬಿರುಗಾಳಿ, ಹುಚ್ಚುಗಾಳಿ. वि. ಪ್ರಚಂಡ.

**आँय बाँय**, स्त्री. ಗೊಡ್ಡು ಹರಟೆ.

**आँव**, पु. ಆಮ; ಆಮಶಂಕೆ.

**आंवठ**, पु. ದಡ, ಅಂಚು, ತೀರ.

**आंवल**, पु. ಗರ್ಭದಲ್ಲಿ ಶಿಶುವನ್ನು ಸುತ್ತಿರುವ ಪೊರೆ, ಸೆತ್ತೆ, ಗರ್ಭವೇಷ್ಟನ, ಮಾವಿ ಚೀಲ.

**आंवलनाल**, पु. ಹೊಕ್ಕಳುಬಳ್ಳಿ.

**आंवला**, पु. ನೆಲ್ಲಿಕಾಯಿ.

**आंवाँ**, पु. ಆವಿಗೆ, ಬಟ್ಟಿ.

**आंस**, स्त्री. ದಾರ; ನಾರು.

**आंसू**, ಅಶ್ರು, ಕಣ್ಣೀರು, ಕಂಬನಿ. आंसू पीकर रह जाना = ಒಳಗೊಳಗೆ ಅಳು, ಸೊರಗು.

**आँहड़**, पु. ಪಾತ್ರೆ, ಭಾಂಡ.

**आंहाँ**, अव्य. ಇಲ್ಲ, ಊಹೂ.

**आइंदा**, पु. ಮುಂದೆ ಬರುವ, ಭವಿಷ್ಯದ, ಭಾವೀ. पु. ಭವಿಷ್ಯಕಾಲ. क्रिवि. ಮುಂದೆ, ಭವಿಷ್ಯದಲ್ಲಿ.

**आईन**, पु. ನಿಯಮ, ಕಟ್ಟಳೆ, ವಿಧಿ; ಕಾನೂನು, ಕಾಯಿದೆ.

**आईना**, पु. ನಿಲುವುಗನ್ನಡಿ, ದರ್ಪಣ; ಬಾಗಿಲಿನ ಅಡ್ಡಪಟ್ಟಿ. आईना होना = ಸ್ಪಷ್ಟವಾಗು.

**आईनाबंदी**, स्त्री. ಲಸ್ತರು ಗುಳೋಪು ಮುಂತಾದ ಗಾಜಿನ ಸಾಮಾನುಗಳ ಕೆಲಸ; ಕನ್ನಡಿ ಅಥವಾ ಇಟ್ಟಿಗೆಯ ನೆಲಗಟ್ಟಿನ ಕೆಲಸ.

**आईनासाज़**, पु. ಕನ್ನಡಿಗೆ ರಸ ಹಾಕುವವ.

**आईनासाज़ी**, स्त्री. ಕನ್ನಡಿಗೆ ರಸ ಹಾಕುವಿಕೆ; ಕಲಾಯಿ ಮಾಡುವಿಕೆ.

**आईनी**, वि. ಕಾನೂನಿನ, ಕಾಯಿದೆಯ; ನಿಯಮಾನುಸಾರವಾದ.

**आक**, पु. ಎಕ್ಕದ ಗಿಡ.

**आक़बत**, स्त्री. ಪರಲೋಕ.

**आकबाक**, पु. ಅಸಂಬದ್ಧ ಮಾತು, ಹರಟೆ.

**आकर**, पु. ಗಣಿ; ಖಜಾನೆ, ಬೊಕ್ಕಸ;

ಒಂದು ಬಗೆಯ ಕತ್ತಿವರಸೆ.
**आकरिक**, पु. ಗಣಿ ತೋಡುವವ.
**आकरी**, स्त्री. ಗಣಿ ತೋಡುವುದು.
**आकली**, स्त्री. ಕಾತರತೆ, ತಲ್ಲಣ.
**आक़ा**, पु. ಯಜಮಾನ, ಒಡೆಯ; ಪ್ರಭು, ಶ್ರೀಮಂತ.
**आकाश**, पु. ಆಕಾಶ, ಅಂತರಿಕ್ಷ. आकाश पाताल एक करना = ಬಹಳ ಪ್ರಯತ್ನ ಮಾಡು, ಚಳುವಳಿ ನಡೆಸು. आकाश जनेऊ = ಆಕಾಶ ಗಂಗೆ.
**आकाशदीया**, पु. ಆಕಾಶದೀಪ
**आकाशी**, स्त्री. ಬಿಸಿಲು ಚಪ್ಪರ.
**आक़िल**, वि. ಬುದ್ಧಿವಂತ, ವಿವೇಕಿ.
**आक़िला**, स्त्री. ಬುದ್ಧಿವಂತಳು.
**आकुल**, वि. ಗಾಬರಿಯಾದ; ತವಕಪಡುವ, ಕಾತರ.
**आकुलता**, स्त्री. ಗಾಬರಿ; ತವಕ.
**आक्रमण**, पु. ಮೇಲೆ ಬೀಳುವಿಕೆ, ಧಾಳಿ; ಗೇರಾಯಿಸುವಿಕೆ.
**आक्षेप**, पु. ಉಪಹಾಸ, ಕೊರಚಾಟ; ದೋಷಾರೋಪಣೆ.
**आखत**, पु. ಅಕ್ಷತೆ, ಮಂತ್ರಾಕ್ಷತೆ.
**आख़ता**, वि. = आख़्ता.
**आखना**, सक्रि. ಹೇಳು; ನೋಡು; ಅಪೇಕ್ಷಿಸು.
**आखा**, पु. ಒಗಟು; ಒಂದರಿ, ಜರಡಿ; ಸಾಮಾನು ಹೇರುವ ಚೀಲ. वि. ಪೂರ್ಣ.
**आखा तीज**, पु. ಅಕ್ಷಯ ತೃತೀಯೆ.
**आख़िर**, वि. ಕೊನೆಯ, ಕಡೆಯ. पु. ಕೊನೆ, ಆಖೈರು; ಪರಿಣಾಮ. क्रिवि. ಕೊನೆಗೆ, ಕಡೆಗೆ.
**आख़िरकार**, क्रिवि. ಕಡೆಗೆ, ಕೊನೆಗೆ.
**आख़िरत**, स्त्री. ಪರಿಣಾಮ; ಯುಗಾಂತ, ಪ್ರಳಯ.
**आख़िरी**, वि. ಕೊನೆಯ, ಕಡೆಯ.
**आखु**, पु. ಇಲಿ.
**आखेट**, पु. ಬೇಟೆ, ಷಿಕಾರಿ.
**आखेटक, आखेटी**, पु. ಬೇಟೆಗಾರ.
**आखोर**, पु. ದನಕರುಗಳು ತಿಂದುಳಿದ ಹುಲ್ಲು; ನಿಷ್ಪ್ರಯೋಜಕವಸ್ತು; ಕಸಕಡ್ಡಿ, ಗಲೀಜು. वि. ನಿರರ್ಥಕವಾದ; ಕೊಳತಿರುವ; ಗಲೀಜಾದ.
**आख़्ता**, वि. ಬೀಜ ಹೊಡೆದ, ಹಿಡಮಾಡಿದ. पु. ಹಿಡ ಮಾಡುವಿಕೆ.
**आगंतुक**, वि. ಬರುವವ; ಬಂದವ.
**आग**, स्त्री. ಅಗ್ನಿ, ಬೆಂಕಿ, ಉರಿ; ಕಾವು, ತಾಪ; ಹೊಟ್ಟೆ ಕಿಚ್ಚು, ಅಸೂಯೆ. आग बबूला होना = ಕಿಡಿಕಿಡಿಯಾಗು. आग लगना = ಬೆಂಕಿ ಬೀಳು; ಬೆಲೆಯೇರು, ತುಟ್ಟಿಯಾಗು. आग लगाना = ಬೆಂಕಿ ಹೊತ್ತಿಸು; ಜಗಳ ಹುಟ್ಟಿಸು.
**आगत**, वि. ಬಂದ, ಬಂದಿರುವ.
**आगत स्वागत**, पु. ಆದರ ಸತ್ಕಾರ.
**आगम**, पु. ಆಗಮನ, ಬರವು; ಭವಿಷ್ಯ; ವರ್ತಮಾನ, ಹುಟ್ಟುವಳಿ. आगम करना = ಯುಕ್ತಿ ಹುಡುಕು.
**आगमजानी**, वि. ಭವಿಷ್ಯವನ್ನು ತಿಳಿ

ದವ, ಭವಿಷ್ಯಜ್ಞಾನಿ.

**आगमन**, पु. ಬರುವಿಕೆ, ಬರವು.

**आगर**, पु. ಉಪ್ಪಿನ ಮಡಿ.

**आगरी**, पु. ಉಪ್ಪು ತೆಗೆಯುವವ, ಉಪ್ಪಾರ, ತೊರೆಯ, ಉಪ್ಪಲಿಗ.

**आगल**, पु. ಅಗಳಿ, ತಾಪಾಳು.

**आगा**, पु. ಮುಂಭಾಗ, ಪೂರ್ವಭಾಗ; ವಕ್ಷಸ್ಥಳ, ಎದೆ; ಮುಖ, ಮೂತಿ; ಸೇನೆಯ ಮುಂಭಾಗ, ಮುಂದಳ; ಭವಿಷ್ಯ. आगा पीछा = ಹಿಂದು-ಮುಂದು, ಪೂರ್ವಾಪರ. आगा पीछा करना = ಹಿಂದು ಮುಂದು ನೋಡು; ಹಿಂಜರಿ, ಹಿಂತೆಗೆ.

**आग़ा**, पु. ಶ್ರೇಷ್ಠ; ಸ್ವಾಮಿ, ಒಡೆಯ, ಅಫಘಾನಿಸ್ಥಾನದವ.

**आग़ाज़**, पु. ಪ್ರಾರಂಭ, ಮೊದಲು.

**आगामी**, वि. ಬರುವ, ಭಾವೀ.

**आगार**, पु. ಮನೆ; ಬೊಕ್ಕಸ.

**आगाह**, वि. ಪರಿಚಿತ, ತಿಳಿದವ; ವೇದ್ಯ. आगाह करना = ತಿಳಿಯಪಡಿಸು.

**आगाही**, स्त्री. ಪರಿಚಯ, ತಿಳಿವಳಿಕೆ.

**आगे**, क्रिवि. ಮುಂದೆ; ಎದುರಿನಲ್ಲಿ; ತರುವಾಯ, ಅನಂತರ; ಇನ್ನುಮೇಲೆ; ಮುಂಚೆ. आगे बढना = ಮುಂದುವರಿ, ಮುಂದಾಗು, ಮುನ್ನಡೆ.

**आगोश**, स्त्री. ವಕ್ಷಸ್ಥಳ, ಎದೆ.

**आग्रह**, पु. ಒತ್ತಾಯ; ಹಟ, ಮುಷ್ಕರ.

**आघात**, पु. ಧಕ್ಕೆ, ಪೆಟ್ಟು; ಹೊಡೆತ.

**आचमनी**, स्त्री. ಉದ್ಧರಣೆ, ಉದ್ಧರಣಿ

**आचरना**, अक्रि. ಆಚರಿಸು.

**आचार**, पु. ನಡತೆ; ಆಚರಣೆ.

**आच्छादन**, पु. ಆವರಣ; ಮುಚ್ಚಳ.

**आज**, क्रिवि. ಈ ದಿನ, ಇಂದು.

**आजकल, आजदिन**, क्रिवि. ಈಗ್ಗೆ, ಈಗಿನಕಾಲದಲ್ಲಿ. आजकल करना = ನೆವ ಹೇಳಿ ಕಾಲ ಬೆಳಸು, ವಿಳಂಬಿಸು.

**आज़म**, वि. ದೊಡ್ಡ; ಮಹಾನ್.

**आज़मा**, पु. ಪರೀಕ್ಷಕ, ಶೋಧಕ.

**आज़माइश**, स्त्री. ಪರೀಕ್ಷೆ, ಶೋಧನೆ, ವಿಮರ್ಶೆ.

**आज़माना**, क्रिवि. ಪರೀಕ್ಷಿಸು, ವಿಮರ್ಶಿಸು.

**आज़मूदा**, वि. ಪರೀಕ್ಷಿಸಿದ, ಪರೀಕ್ಷಿತ.

**आजा**, पु. ತಂದೆಯ ತಂದೆ, ಪಿತಾಮಹ.

**आज़ाद**, वि. ಸ್ವತಂತ್ರ; ಬಿಡುಗಡೆಯಾದ, ಮುಕ್ತ; ನಿಶ್ಚಿಂತ, ನಿರ್ಭಯನಾದ; ಸ್ವೇಚ್ಛೆಯಾದ.

**आज़ादगी**, स्त्री. ಸ್ವಾತಂತ್ರ್ಯ; ಮುಕ್ತಿ, ಬಿಡುಗಡೆ.

**आज़ादा**, वि. ಸ್ವತಂತ್ರ.

**आज़ादी**, स्त्री. ಸ್ವತಂತ್ರತೆ; ಬಿಡುಗಡೆ, ಮುಕ್ತಿ; ಸಲಿಗೆ.

**आज़ाब**, पु. ಪಾಪ, ಪಾಪಕರ್ಮ.

**आज़ार**, पु. ರೋಗ, ಜಡ್ಡು; ಸಂಕಟ.

**आजिज़**, वि. ದೀನ; ವ್ಯಾಕುಲನಾದ; ವಿಧೇಯ, ನಮ್ರ.

**आजिज़ी**, स्त्री. ದೈನ್ಯ; ವ್ಯಾಕುಲತೆ; ವಿನಯ, ನಮ್ರತೆ.

**आजी**, स्त्री. ತಂದೆಯ ತಾಯಿ, ಪಿತಾಮಹಿ.

**आज़ुर्दगी**, स्त्री. ವ್ಯಥೆ, ವಿಷಾದ.
**अज़ुर्दा**, वि. ದುಃಖಿತ, ವ್ಯಥಿತ.
**आज्ञा** स्त्री. ಅಜ್ಞೆ, ಅಪ್ಪಣೆ, ಅಣತಿ.
**आटा**, पु. ಹಿಟ್ಟು; ಪುಡಿ. आटा गीला होना = ಪೇಚಾಟವಾಗು. आटे दाल की फिक्र = ಹೊಟ್ಟೆಪಾಡಿನ ಚಿಂತೆ
**आटोप**, पु. ಆಡಂಬರ, ಅಹಂಕಾರ.
**आठ**, वि. ಅಷ್ಟ, ಎಂಟು. आठ आठ आंसू रोना = ಬಹಳವಾಗಿ ಅಳು. आठों गांठ कुम्मैत = ಸರ್ವಾಂಗ ಸಂಪನ್ನ; ಚತುರ, ಗಟ್ಟಿಗ, ಜಾಣ.
**आडंबर**, पु. ತುತ್ತೂರಿಯ ಶಬ್ದ; ಆನೆಯ ಗರ್ಜನೆ; ಡಂಬ; ಗುಡಾರ, ಡೇರೆ; ನಗಾರಿ.
**आडंबरी**, वि. ಜಂಬಗಾರ, ಡಂಬಾಚಾರಿ
**आड़**, स्त्री. ಮರೆ; ಆಶ್ರಯ; ಅಡ್ಡಿ; ಆನಿಕೆ, ಊರೆ, ಆಧಾರ; ತಿಲಕ; ಚಮಕಿಬೊಟ್ಟು; ಬಾಸಿಂಗ. पु. ಚೇಳಿನ ಕೊಂಡಿ.
**आड़न**, स्त्री. ಗುರಾಣಿ, ಕಡಿತಲೆ, ಡಾಲು
**आड़ना**, सक्रि. ತಡೆ, ಅಡ್ಡಿ ಮಾಡು; ಆಧಾರ ಕೊಡು, ಊರೆ ಕೊಡು; ಆಸ್ತಿಯನ್ನು ಆಧಾರ ಮಾಡು.
**आड़ा**, पु. ನೇರಿನ ಬಟ್ಟೆ, ಸೂಸಿಬಟ್ಟೆ; ಉದ್ದವಾದ ತೊಲೆ, ದೂಲ. वि. ಅಡ್ಡ, ಸೊಟ್ಟಯಾದ. आडे हाथों लेना = ಮೂದಲಿಸು, ಅಪಮಾನಿಸು, ತರಾಟಗೆ ತೆಗೆದು ಕೊಳ್ಳು.
**आड़ी**, स्त्री. ಮೃದಂಗ ಬಾರಿಸುವ ಒಂದು ವರಸೆ; ಮೋಚಿಯ ಚಾಕು. पु. ಪಕ್ಷದವ, ಸಹಾಯಕ.
**आड़ू**, पु. ಪಿಚ್ಚೀಸು ಹಣ್ಣು, ಅರು.
**आढ़** पु. ನಾಲ್ಕು ಸೇರಿನ ತೂಕ. वि ನಿಪುಣ, ದಕ್ಷ.
**आढ़क**, पु. ನಾಲ್ಕು ಸೇರಿನ ತೂಕ; ನಾಲ್ಕು ಸೇರಿನ ಕೊಳಗ; ತೊಗರಿ.
**आढ़त**, स्त्री. ದಳ್ಳಾಳಿಯ ಕೆಲಸ ಮತ್ತು ಮಜೂರಿ; ವಟ್ಟ. ತರಗು, ದಲ್ಲಾಳಿ. ದಳ್ಳಾಳಿಯ ಅಂಗಡಿ.
**आढ़तिया**, पु. ದಳ್ಳಾಳಿ, ತರಗುಗಾರ;
**आतंक**, पु. ಭಯ, ಭೀತಿ.
**आतश**, स्त्री. ಬೆಂಕಿ, ಉರಿ; ಕೋಪ.
**आतशक**, पु. ಉಷ್ಣರೋಗ, ಮೇಹರೋಗ, ಬಿಳುಪ್ಪು, ಪರಂಗಿ ರೋಗ.
**आतशकी**, वि. ಮೇಹರೋಗದ.
**आतशख़ाना**, पु. ಚಳಿಗಾಲದಲ್ಲಿ ಬೆಂಕಿ ಕಾಯಿಸಲು ಇಟ್ಟಿರುವ ಅಗ್ಗಿಷ್ಟಿಕೆ; ಪಾರ್ಸಿಯರ ಅಗ್ನಿಶಾಲೆ; ಅಗ್ನಿಕುಂಡ.
**आतशज़नी**, स्त्री. ಬೆಂಕಿ ಹೊತ್ತಿಸುವುದು, ಅಗ್ನಿಕಾರ್ಯ.
**आतशदान**, पु. ಅಗ್ನಿಕುಂಡ; ಅಗ್ಗಿಷ್ಟಿಕೆ
**आतशपरस्त**, पु. ಅಗ್ನಿಪೂಜಕ; ಪಾರ್ಸಿಯರು.
**आतशबाज़**, पु. ಬಾಣಬಿರುಸು ಮಾಡುವವ.
**आतशबाज़ी**, स्त्री. ಅಗ್ನಿಕ್ರೀಡೆ, ಬಾಣಬಿರುಸು; ಬಾಣಬಿರುಸುಗಳ ದೃಶ್ಯ.
**आतशी**, वि. ಅಗ್ನಿಸಂಬಂಧವಾದ, ಅಗ್ನಿಯ; ಅಗ್ನಿಬಾಧೆಯಿಲ್ಲದ(ವಸ್ತು) आतशी शीशा = ಸೂರ್ಯಕಾಂತ

ಮಣಿ.

**आतिश**, स्त्री. = आतश.

**आतुर**, वि. ಆತುರವುಳ್ಳ, ತವಕವುಳ್ಳ; ವ್ಯಥಿತ, ಅಸ್ವಸ್ಥನಾದ; ಕಳವಳಗೊಂಡ, ಉದ್ವಿಗ್ನ.

**आतुरता**, स्त्री. ಆತುರ; ತ್ವರೆ; ತವಕ.

**आत्मा**, स्त्री. ಆತ್ಮ, ಜೀವ. आत्मा ठंढी होना = ಹೊಟ್ಟೆ ತಣ್ಣಗಾಗು.

**आत्माभिमान**, पु. ಆತ್ಮಗೌರವ.

**आत्मीय**, वि. ತನ್ನ, ಸ್ವಂತ. पु. ನೆಂಟ, ಬಾಧು, ಬಳಗ.

**आत्मीयता**, स्त्री. ಬಂಧುತ್ವ.

**आदत**, स्त्री. ಸ್ವಭಾವ; ಅಭ್ಯಾಸ, ವಾಡಿಕೆ, ರೂಢಿ.

**आदम**, पु. ಪಾಶ್ಚಾತ್ಯ ಮತಗಳಂತೆ ಸೃಷ್ಟಿಯ ಆದಿ ಮನುಷ್ಯ; ಮೂಲಪುರುಷ.

**आदमज़ाद**, पु. ಆದಿ ಪುರುಷನಾದ ಆದಮ್ಮನ ಸಂತಾನ; ಮನುಷ್ಯ.

**आदमियत**, स्त्री. ಮನುಷ್ಯತ್ವ, ಮಾನವ ಗುಣ, ಮಾನವೀಯತೆ.

**आदमी**, पु. ಮನುಷ್ಯ, ಮಾನವ; ಆಳು आदमी बनना = ಸಭ್ಯನಾಗು.

**आदर**, पु. ಗೌರವ, ಸತ್ಕಾರ.

**आदरना**, सक्रि. ಗೌರವಿಸು, ಸತ್ಕರಿಸು

**आदर्श**, पु. ಕನ್ನಡಿ, ದರ್ಪಣ; ಮಾದರಿ, ನಮೂನೆ.

**आदान प्रदान**, पु. ಕೊಡು ಕೊಳ್ಳುವುದು, ಕೊಳುಕೊಡೆ, ತರುವುದು ಕೊಡುವುದು.

**आदाब**, पु. ನಿಯಮ; ಗೌರವ, ಮಾನ; ನಮಸ್ಕಾರ, ಸಲಾಂ.

**आदिम**, वि. ಮೊದಲಿನ, ಪ್ರಾರಂಭದ.

**आदिल**, वि. ನ್ಯಾಯವಂತ, ನ್ಯಾಯಪರ.

**आदी**, वि. ಅಭ್ಯಾಸವುಳ್ಳವ, ರೂಢಿಯುಳ್ಳವ, ಅಭ್ಯಾಸಿ.

**आदेश**, पु. ಅಪ್ಪಣೆ, ಆಜ್ಞೆ.

**आध**, वि. ಅರ್ಧ, ಅರೆ (ಸಮಾಸದಲ್ಲಿ). एक आध = ಒಂದೋ ಅರ್ಧವೋ, ಒಂದೆರಡು, ಒಂದರೆ.

**आधा**, वि. ಅರ್ಧ, ಅರೆವಾಸಿ. आधो आध = ಸರಿಪಾಲು, ಸಮಾರ್ಧ.

**आधासीसी**, स्त्री. ಅರೆತಲೆನೋವು.

**आधुनिक**, वि. ಈಗಿನ, ನವೀನ.

**आनंद बधाई**, स्त्री. ಮಂಗಳ, ಶುಭ.

**आन**, स्त्री. ಮರ್ಯಾದೆ, ಗೌರವ; ವೈಖರಿ; ಶಪಥ; ಘೋಷಣೆ; ರೀತಿ; ಕ್ಷಣ. आन की आन में = ಒಂದೇಕ್ಷಣದಲ್ಲಿ, ತಕ್ಷಣ, ಕೂಡಲೆ.

**आनन**, पु. ಮುಖ

**आनन फ़ानन**, क्रिवि. ಕೂಡಲೆ, ತಕ್ಷಣ

**आन बान**, स्त्री. ವಿಜೃಂಭಣೆ, ಸಂಭ್ರಮ, ವೈಖರಿ, ಸೊಬಗು; ಸ್ಥಾನಮಾನ.

**आना**, अक्रि. ಬರು; ಒದಗು; ಆಗು. आ धमकना = ಆಕಸ್ಮಾತ್ತಾಗಿಬರು. आ पड़ना = ಹಠಾತ್ತಾಗಿ ಬೀಳು; (ಕಷ್ಟ) ಬಂದೊದಗು. आ बनना = ಕೈಗೂಡು, ಲಾಭವಾಗು. आए दिन = ಪ್ರತಿನಿತ್ಯ, ಬೆಳಗಾದರೆ.

**आना,** पु. ಒಂದು ಆಣೆ, ವೀಸ ರೂಪಾಯಿ; ವೀಸ, ಹದಿನಾರನೆಯ ಒಂದು ಭಾಗ.

**आनाकानी,** स्त्री. ಅಲಕ್ಷ್ಯ, ಅಸಡ್ಡೆ; ನೆಪ; ಗುಸುಗುಸು ಮಾತು.

**आनुमानिक,** वि. ಊಹೆಯ, ಕಾಲ್ಪನಿಕವಾದ.

**आप,** सर्व. ತಾನು, ಸ್ವಯಂ, ತಾವು. आप आप की पडना = ತನ್ನ ತನ್ನ ಕೆಲಸದಲ್ಲಿ ಮಗ್ನರಾಗಿರು आप से या आप ही = ತನ್ನಷ್ಟಕ್ಕೆ ತಾನೇ. आप ही आप = ತನಗೆ ತಾನೇ, ತಾನೇ ತಾನಾಗಿ

**आपकाज,** पु. ಸ್ವಕಾರ್ಯ आपकाज महाकाज = ಸ್ವಕಾರ್ಯವೇ ಮಹಾಕಾರ್ಯ.

**आपकाजी,** पु. ಸ್ವಕಾರ್ಯನಿರತ, ಸ್ವಾರ್ಥಿ.

**आपडीला,** क्रिवि. ತಾನೇ, ಖುದ್ದಾಗಿ.

**आपत्ति,** स्त्री. ದುಃಖ; ಸಂಕಟ, ವಿಪತ್ತು; ದೂರು, ದೋಷಾರೋಪಣೆ; ಆಕ್ಷೇಪಣೆ.

**आपद, आपदा,** स्त्री. ವಿಪತ್ತು, ದುಃಖ, ಸಂಕಟ.

**आपबीती,** स्त्री. ಸ್ವಂತ ಅನುಭವ, ಆತ್ಮವೃತ್ತ.

**आपरूप,** सर्व. ಸಾಕ್ಷಾತ್.

**आपस,** स्त्री. ಸಂಬಂಧ, ಪರಸ್ಪರ.

**आपसदारी,** स्त्री. ಪರಸ್ಪರ ವರ್ತನೆ.

**आपसी,** वि. ತಮ್ಮ ತಮ್ಮೊಳಗಿನ, ಪರಸ್ಪರದ.

**आपा,** पु. ಸ್ವರೂಪ; ಗರ್ವ; ಅಹಂಕಾರ; ಪ್ರಜ್ಞೆ. आपे में आना = ಚೇತರಿಸಿಕೊಳ್ಳು, ತೆಪ್ಪರಿಸಿಕೊಳ್ಳು. आपे में न रहना या आपे से बाहर होना = ಮೈಮರೆ; ದಿಗಿಲುಪಡು; ಅತ್ಯಂತ ಕೋಪಗೊಳ್ಳು. स्त्री. ಅಕ್ಕ.

**आपाधापी,** स्त्री. ತಮ್ಮದೇ ಚಿಂತೆ; ಎಳೆದಾಟ, ಜಗ್ಗಾಟ.

**आफ़त,** स्त्री. ಆಪತ್ತು, ಗಂಡಾಂತರ; ಕಷ್ಟ, ಸಂಕಟ, ಅನಚಾಟಲು. आफत उठाना = ಕಷ್ಟಪಡು, ಸಂಕಟಪಡು; ಗದ್ದಲ ಮಾಡು, ಗಲಾಟೆ ಮಾಡು. आफत का परकाला = ಅತಿಜಾಗ್ರತೆಯಾಗಿ ಕೆಲಸ ಮಾಡುವವ, ಪಟು, ಪಿಡುಗ; ಬಹಳವಾಗಿ ದುಡಿಯುವವ, ಪರಿಶ್ರಮಿ; ಗಲಾಟೆ ಮಾಡುವವ, ಗಲಾಟೆಖೋರ. आफत ढाना = ಗದ್ದಲ ಮಾಡು, ಗಲಾಟೆಎಬ್ಬಿಸು; ತೊಂದರೆ ಪಡಿಸು, ಕಾಡು. आफत मचाना = ಗದ್ದಲ ಎಬ್ಬಿಸು; ಕಲಹಮಾಡು; ಅತುರಪಡಿಸು, ತ್ವರೆಮಾಡು.

**आफ़ताब,** पु. ಸೂರ್ಯ, ನೇಸರು, ರವಿ; ಆತಪ, ಬಿಸಿಲು.

**आफ़ताबा,** पु. ಒಂದು ಬಗೆ ತಂಬಿಗೆ.

**आफ़ताबी,** वि. ಸೂರ್ಯನ; ಸೂರ್ಯನಂತಹ. स्त्री. ಉತ್ಸವಗಳಲ್ಲಿ ತರುವ ಅಲಂಕಾರದ ದೊಡ್ಡ ಬೀಸಣಿಗೆ, ಸೂರಪಾನ, ಆಲವಟ್ಟ; ಒಂದು ತರದ ಬಾಣ ಬಿರುಸು; ಬಿಸಿಲು ಮಳೆಗಾಗಿ ಬಾಗಿಲು ಮತ್ತು ಕಿಟಕಿಯ

ಮೇಲಿನ ಮರೆ, ಬಿಸಿಲು ಚಪ್ಪರ, ಚಾಟುಚಪ್ಪರ.

**आफ़रीं**, अव्य. ಶಹಬಾಸ! ಛೀರ್ಸ್! ಸಾಧು! ಭಲಾಭಲಾ! ಭಳಿರೆ!

**आफ़ाक़**, पु. ದಿಗಂತ, ಕ್ಷಿತಿಜ.

**आफ़ियत**, स्त्री. ಕುಶಲ, ಕ್ಷೇಮ.

**आफ़िस**, पु. ಆಫೀಸು, ಕಛೇರಿ.

**आफ़ू**, स्त्री. ಅಫೀಮು

**आब**, स्त्री. ಕಾಂತಿ, ಹೊಳಪು; ರತ್ನ ಪ್ರಭೆ, ಹೊಳಕು. पु. ನೀರು.

**आबकारी**, स्त्री. ಸಾರಾಯಿ ತಯಾರಿಸುವ ಅಥವಾ ಮಾರುವ ಸ್ಥಳ, ಸೇಂದಿ ಅಂಗಡಿ, ಪಡಖಾನೆ; ಮಾದಕ ಪದಾರ್ಥಗಳ ಇಲಾಖೆ, ಸೇಂದಿ ಇಲಾಖೆ.

**आबख़ोरा**, पु. ಜಲಪಾತ್ರೆ, ಲೋಟಾ; ಬಟ್ಟಲು.

**आबजोश**, वि. ನೀರಿನಲ್ಲಿ ಕುದಿಸಿದ (ದ್ರಾಕ್ಷಿ ಹಣ್ಣು).

**आबताब**, स्त्री. ಹೊಳಪು, ಕಾಂತಿ.

**आबदस्त**, पु. ನೀರುಮುಟ್ಟುವಿಕೆ, ಪ್ರಕ್ಷಾಳನೆ, ಶೌಚ.

**आबदाना**, पु. ಅನ್ನಪಾನ, ತಿಂಡಿ ತೀರ್ಥ; ಜೀವನೋಪಾಯ..

**आबदार**, वि. ಹೊಳೆಯುವ, ಕಾಂತಿಯುತ, ಮಿನುಗುವ, ಮಿಂಚುವ.

**आबदारी**, स्त्री. ಹೊಳಪು, ಕಾಂತಿ.

**आबनूस**, पु. ಕರಿಮರ, ಬೀಟೆ, ಅಬನಾಸಿ. आबनूस का कुंदा= ಕರಿ ಟೊಣೆಯ.

**आबनूसी**, वि. ಬಹಳ ಕಪ್ಪಾದ.

**आबपाशी**, स्त्री. ನೀರುಹಾಯಿಸುವಿಕೆ; ನೀರಾವರಿ, ಜಲಾಸರೆ.

**आबरवाँ**, स्त्री. ತೆಳುವಾದ ಒಂದು ಬಗೆಯಬಟ್ಟೆ.

**आबरू**, स्त्री. ಮಾನ, ಮರ್ಯಾದೆ, ಗೌರವ.

**आबला**, पु. ಗುಳ್ಳೆ, ಬೊಬ್ಬೆ.

**आबशार**, पु. ಜಲಪ್ರವಾಹ, ಝರಿ; ಜಲಪಾತ, ದಬದಬಿ, ತಡಸಲು.

**आब हवा**, स्त्री. ವಾಯುಗುಣ, ಶೀತೋಷ್ಣಸ್ಥಿತಿ, "ಹವ".

**आबाद**, वि. ವಾಸವಾಗಿರುವ, ಒಕ್ಕಲಿರುವ; ಜನಭರಿತ; ಸಾಗುವಳಿಗೆ ಯೋಗ್ಯವಾದ, ಆಬಾದು; ಹರ್ಷಚಿತ್ತ, ಸಮೃದ್ಧ.

**आबादकार**, पु. ಪರದೇಶಕ್ಕೆ ಹೋಗಿ ಒಕ್ಕಲು ಮಾಡುವವ, ವಸಾಹತು ಮಾಡುವವ, ವಲಸೆ ಮಾಡುವವ.

**आबादानी**, स्त्री. ನೆಲಸುವಿಕೆ; ಜನಸಂದಣಿ, ಜನಸೋತ್ತಮ.

**आबादी**, स्त्री. ವಾಸ, ವಸ್ತಿ; ಜನಸಂಖ್ಯೆ; ಸಾಗುವಳಿ ಜಮೀನು.

**आबी**, वि. ನೀರು ಸಂಬಂಧವಾದ; ನೀರಿನ; ನೀರಿನಲ್ಲಿರುವ. पु. ಸಮುದ್ರದ ಉಪ್ಪು. स्त्री. ತರಿ ಜಮೀನು, ನೀರಾವರಿ ಭೂಮಿ.

**आभा**, स्त्री. ಕಾಂತಿ, ದೀಪ್ತಿ.

**आभार**, पु. ಹೊರೆ; ಕೃತಜ್ಞತೆ.

**आभारी**, वि. ಕೃತಜ್ಞ; ಉಪಕೃತ.

**आभास**, पु. ಛಾಯೆ, ಜಾಡು.

**आभीर**, पु. ಗೊಲ್ಲ, ಗೌಳಿಗ.

**आम**, पु. ಮಾವು; ಮಾವಿನ ಕಾಯಿ ಅಥವಾ ಹಣ್ಣು; ಆಮಶಂಕೆ, ಆಮ. वि. ಹಸಿ; ಮಾಗದ, ಪಕ್ವವಾಗದ; ಸಾಧಾರಣವಾದ; ಜನಸಾಮಾನ್ಯ; ಸರ್ವವಿದಿತ; ಸರ್ವಸಾಮಾನ್ಯ, ಹುದುವು

**आमड़ा**, पु. ಅಮಟೆಕಾಯಿ.

**आमद**, स्त्री. ಬರವು, ಆಗಮನ; ವರಮಾನ, ಹುಟ್ಟುವಳಿ.

**आमदनी**, स्त्री. ಆದಾಯ, ವರಮಾನ; ಜಮಾ; ವಿದೇಶದಿಂದ ತರಿಸಿದ ವಸ್ತು, ಆಮದು ಸರಕು.

**आमना सामना**, पु. ಭೇಟಿ, ಸಂದರ್ಶನ, ಮುಖಾಮುಖಿ.

**आमने सामने**, क्रिवि. ಎದುರುಬದುರಾಗಿ, ಸಮ್ಮುಖ.

**आमलक**, पु. **आमलकी**, स्त्री. ನೆಲ್ಲಿಕಾಯಿ.

**आमादगी**, स्त्री. ಸನ್ನಾಹ, ಸಿದ್ಧತೆ, ತಯಾರಿ.

**आमादा**, वि. ಸನ್ನದ್ಧನಾದ, ಸಿದ್ಧವಾದ, ತಯಾರು.

**आमाल**, पु. ಕರ್ಮ, ಕೃತ್ಯ.

**आमालनामा**, पु. ಉದ್ಯೋಗಸ್ಥರ ಕೆಲಸ ನೀತಿನಡತೆ ಮುಂತಾದುವುಗಳನ್ನು ಬರೆದಿಡುವ ಪುಸ್ತಕ.

**आमाश, आमास**, पु. ಉಬ್ಬರ, ಊದು, ಬಾವು, ಬೀಗು.

**आमिल**, पु. ಕೆಲಸ ಮಾಡುವವ, ಕೆಲಸಗಾರ; ಕರ್ತವ್ಯನಿಷ್ಠ; ಉದ್ಯೋಗಸ್ಥ, ಅಧಿಕಾರಿ; ದೆವ್ವಬಿಡಿಸುವವ, ಮಂತ್ರವಾದಿ, ಮಾಟಗಾರ; ಸಿದ್ಧಿಯುಳ್ಳ ಫಕೀರ. वि. ಹುಳಿಯಾದ.

**आमी**, स्त्री. ಮಾವಿನ ಹೀಚು; ಕೆಂಡದಲ್ಲಿ ಸುಟ್ಟ ರಾಗಿ ಜೋಳ ಮುಂತಾದುವುಗಳ ತೆನೆ.

**आमीन**, क्रिवि. ಹಾಗೆಯೇ ಆಗಲಿ! ತಥಾಸ್ತು! ಸ್ವಸ್ತಿ!

**आमूदा**, वि. ಅಲಂಕೃತ, ಸಿಂಗರಿಸಿದ.

**आमेज़**, वि. ಕಲಸಿದ, ಬೆರಸಿದ, ಬೆರೆದ.

**आमेज़ना**, सक्रि. ಕಲಸು, ಬೆರಸು.

**आमेज़िश**, स्त्री. ಕಲಬೆರಿಕೆ, ಮಿಶ್ರ.

**आमोद**, पु. ಆನಂದ, ಉಲ್ಲಾಸ.

**आमोद प्रमोद**, पु. ಸುಖಸಂತೋಷ, ಆನಂದ, ಉಲ್ಲಾಸ.

**आयंती पायंती**, स्त्री. ಹಾಸಿಗೆಯ ತಲೆಯಕಡೆ ಮತ್ತು ಕಾಲುಕಡೆ.

**आय**, स्त्री. ವರಮಾನ; ಲಾಭ.

**आयत**, वि. ವಿಶಾಲ, ವಿಸ್ತಾರವಾದ. स्त्री. ಕುರಾನಿನ ವಾಕ್ಯ; ವೇದವಾಕ್ಯ.

**आयद**, वि. ಆರೋಪಿಸಿದ, ಸಂಭವಿಸಿದ, ಗುರಿಯಾದ.

**आय-व्यय**, पु. ಜಮಾ ಖರ್ಚು.

**आया**, स्त्री. ಧಾತ್ರಿ, ದಾದಿ. अव्य. ಅಥವಾ; ಏನೋ.

**आयात**, पु. ಆಮದುಸರಕು.

**आयास**, पु. ಪರಿಶ್ರಮ.

**आयु**, स्त्री. ವಯಸ್ಸು, ಆಯುಸ್ಸು.

**आयोजन**, पु. **आयोजना**, स्त्री. ಏರ್ಪಾಡು, ಯೋಜನೆ, ಹಂಚಿಕೆ.

ಅಲೇಖ್ಯ.

आरंभ, पु. ಪ್ರಾರಂಭ, ಮೊದಲು, ಶುರು

आर, स्त्री. ಮುಳ್ಳು; ವಿಷದ ಮುಳ್ಳು, ಕೊಂಡಿ; ಮೋಚಿಯ ಸೂಜಿ; ತಿರಸ್ಕಾರ; ವೈರ, ವಿರೋಧ; ಲಜ್ಜೆ, ಭಿಡೆ, ಸಂಕೋಚ. पु. ದಡ, ಪಾರ್ಶ್ವ; ಚಕ್ರದ ಅರೆ, ಅರೆಕಾಲು.

आरज़ा, पु. ರೋಗ, ಕಾಯಿಲೆ.

आरज़ू, स्त्री. ಇಚ್ಛೆ, ಬಯಕೆ, ಅಭಿಲಾಷೆ; ಕೋರಿಕೆ, ವಿನಂತಿ.

आर पार, पु. ಈಚೆಯ ಮತ್ತು ಆಚೆಯ ದಡ, ಪಾರಾವಾರ; ಈಕಡೆ ಆಕಡೆ, ಇಬ್ಬದಿ. क्रिवि. ದಡದಿಂದ ದಡಕ್ಕೆ, ಒಂದುಕಡೆಯಿಂದ ಮತ್ತೊಂದು ಕಡೆಗೆ; ತಟಾಯ್ದು. आर पार जाना = ಪಾರಾಗು, ತಟಹಾಯು; ಉಚಾಯಿಸು.

आरसी, स्त्री. ಕನ್ನಡಿ, ದರ್ಪಣ; ಹೆಂಗಸರು ಬಲಗೈಹೆಬ್ಬೆಟ್ಟಿಗೆ ಹಾಕಿಕೊಳ್ಳುವ ಒಂದುಬಗೆ ಉಂಗುರ.

आरा, पु. ಕರಗಸ, ಗರಗಸ, ರಂಪ; ಮೋಚಿಯುರ ಸೂಜಿ, ರಂಪಿಗೆ; ಚಕ್ರದ ಎಲೆ.

आराइश, स्त्री. ಅಲಂಕಾರ, ಉದ್ಯಾನ.

आराकश, पु. ಗರಗಸ ಆಡಿಸುವವ, ಮರ ಸಿಗಿಯುವವ, ಗರಗಸಗಾರ.

आराजी, स्त्री. ಭೂಮಿ; ಜಮೀನು, ಗದ್ದೆ.

आराबा, पु. ಎತ್ತಿನ ಗಾಡಿ.

आराम, पु. ಉಪವನ, ನಂದನವನ; ನೆಮ್ಮದಿ, ಸುಖ, ಸೌಖ್ಯ; ವಿರಾಮ, ವಿಶ್ರಾಂತಿ. वि. ಸೌಖ್ಯ, ಸ್ವಸ್ಥ. आराम लेना = ವಿಶ್ರಮಿಸು, ವಿಶ್ರಾಂತಿಗೊಳ್ಳು.

आराम कुर्सी, स्त्री. ವಿಶ್ರಮಿಸಿಕೊಳ್ಳುವ ಉದ್ದವಾದ ಕುರ್ಚಿ, ಆರಾಮ ಕುರ್ಚಿ, ವಿರಾಮಕುರ್ಚಿ.

आराम-तलब, वि. ಸುಖವನ್ನಪೇಕ್ಷಿಸುವವ, ಸುಖಾಭಿಲಾಷಿ; ವಿಲಾಸಪ್ರಿಯ, ವಿಲಾಸಿ; ಸೋಮಾರಿ.

आराम-तलबी, स्त्री. ಸುಖಾಭಿಲಾಷೆ, ವಿಷಯಾಭಿಲಾಷೆ.

आरामदेह, वि. ಸುಖಕೊಡುವ, ಸುಖಕರ.

आरास्तगी, स्त्री. ಸಜ್ಜುಗೊಳಿಸುವಿಕೆ, ಅಲಂಕಾರ.

आरास्ता, वि. ಸಜ್ಜುಗೊಳಿಸಿದ, ಸವಣಿಸಿದ, ಅಲಂಕೃತವಾದ; ಮೇಜು ಕುರ್ಚಿ ಮೊದಲಾದುವುಗಳಿಂದ ಸವಣಿಸಿದ (ಮನೆ).

आरी, स्त्री. ಸಣ್ಣಗರಗಸ, ಕೈಗರಗಸ; ಮೋಚಿಯುರ ಕಂಟಾಣಿ, ರಂಪಿಗೆ; ದನಕರುಗಳನ್ನು ಅಟ್ಟಲು ಉಪಯೋಗಿಸುವ ಕಬ್ಬಿಣದ ಮುಳ್ಳು, ತಿವಿಗೋಲು, ಮುಳ್ಳುಗೋಲು.

आरोगना, सक्रि. ಆರೋಗಣೆಮಾಡು, ಭೋಜನಮಾಡು.

आर्थिक, वि. ಹಣದ, ಹಣಕಾಸಿನ.

आलंग, पु. ಕಾಮದ, ಮಸ್ತಿ, ಬೆದೆ.

आल, पु. ಒಂದು ಖನಿಜ, ಅರಿದಳ;

ಡೇರೆ, ಶಿಬಿರ; ಸೇಂದಿ; ಕೆಂಪು ಬಣ್ಣ ತೆಗೆಯುವ ಒಂದು ಗಿಡ; ಕೆಂಪುಬಣ್ಣ. स्त्री. ಮಗಳ ಸಂತತಿ; ವಂಶ, ಕುಲ. आल औलाद=ಮಕ್ಕಳುಮರಿ.

आलथी पालथी, स्त्री. ಚಕ್ಕಳ ಬಕ್ಕಳ, ಪದ್ಮಾಸನ, ಚಕ್ಕಳು ಮುಕ್ಕಳು, ಚಪ್ಪಣ ಕಾಲು. आलथी पालथी मारना = ಚಪ್ಪಣಕಾಲು ಹಾಕಿ ಕೂಡು.

आलन, पु.=अरहन.

आलपीन, स्त्री. ಗುಂಡುಸೂಜಿ.

आलम, पु. ಪ್ರಪಂಚ, ಜಗತ್ತು; ಸ್ಥಿತಿ; ಜನಸಮೂಹ, ಜನಾಂಗ, ಕೋಮು. आलमगीर=ಜಗದ್ವಿಜಯಿ.

आलमनक, पु. ಪಂಚಾಂಗ.

आलमारी, स्त्री. ಅಲಮಾರು, ಕಪಾಟು.

आलवाल, पु. ಪಾತಿ, ಕಡಗ; ಜಲ ದಾರಿ.

आलस, वि. ಸೋಮಾರಿ. पु. ಸೋಮಾರಿತನ.

आलसी, वि. ಸೋಮಾರಿ.

आलस्य, पु. ಸೋಮಾರಿತನ; ಆಲಸಿಕೆ.

आला, पु. ಗೋಡೆಯಲ್ಲಿನ ಗೂಡು; ಆಯುಧ. वि. ಪ್ರಶಸ್ತ, ಉತ್ಕೃಷ್ಟ, ಶ್ರೇಷ್ಠ; ಉಚ್ಚ, ಉದಾತ್ತ.

आलाइश, स्त्री. ಹೊಲಸು, ಗಲೀಜು; ಶರೀರದ ಮಲ.

आलाटाली, स्त्री.=टालमटूल.

आलान, पु. ಆನೆ ಕಟ್ಟುವ ಗೂಟ.

आलापना, सक्रि. ಹಾಡು; ಆಲಾಪನೆ ಮಾಡು.

आलिंगना, सक्रि. ಆಲಿಂಗಿಸು, ತಬ್ಬಿಕೊಳ್ಳು.

आलिम, वि. ವಿದ್ವಾಂಸ, ಪಂಡಿತ; ಜ್ಞಾನಿ.

आली, स्त्री. ಸಖಿ, ಗೆಳತಿ. वि. ಪ್ರಶಸ್ತವಾದ, ಶ್ರೇಷ್ಠ.

आलीशान, वि. ವಿಶಾಲ; ದಿವ್ಯ, ಭವ್ಯ.

आलू, पु. ಆಲೂಗೆಡ್ಡೆ. ಉರುಳುಗೆಡ್ಡೆ. ಬಟಾಟೆ.

आलूचा, आलूबुखारा, पु. ಒಂದು ಬಗೆ ಹಣ್ಣು.

आलूदा, वि. ಸುತ್ತಿರುವ, ಪರಿವೇಷ್ಟಿತ.

आलूशफतालू, पु. ಮಕ್ಕಳ ಒಂದು ಆಟ.

आलोचक, वि. ನೋಡುವವ; ವಿಮರ್ಶಕ.

आलोचन, पु. ನೋಟ, ದರ್ಶನ; ವಿಮರ್ಶೆ.

आलोचना, स्त्री. ವಿಮರ್ಶೆ, ಟೀಕೆ ಟಿಪ್ಪಣಿ.

आलोचनात्मक, वि. ವಿಮರ್ಶಾತ್ಮಕ.

आलोड़न, पु. ಕಡೆಯುವಿಕೆ, ಮಥನ.

आलोड़ना, सक्रि. ಕಡೆಯು, ಮಥಿಸು, ಕೂಲಂಕಷವಾಗಿ ವಿಚಾರಮಾಡು

आल्हा, पु. ವಿಸ್ತೃತವಾದ ವರ್ಣನೆ; ಆಕಾಶಪುರಾಣ, ಕಂತೆಪುರಾಣ.

आवभगत, स्त्री. ಆದರಸತ್ಕಾರ, ಉಪಚಾರ.

आवर्दा, वि. ಒಯ್ದ, ಮೇಲಕ್ಕೆ ತಂದ.

ಏರಿಸಿದ.

आवली, स्त्री. ಪಂಕ್ತಿ, ಸಾಲು.

आवश्यक, वि. ಅಗತ್ಯವಾದ, ಬೇಕಾದ.

आवश्यकता, स्त्री. ಅಗತ್ಯ. ಅವಶ್ಯಕತೆ

आवाँ, पु. ಆವಿಗೆ, ಬಟ್ಟಿ.

आवागमन, पु. ಹೋಗುವುದು ಬರುವುದು, ಗಮನಾಗಮನ; ಸಂಪರ್ಕ

आवाज़, स्त्री. ಶಬ್ದ, ಧ್ವನಿ; ಸ್ವರ; ಕೂಗು. आवाज देना = ಗಟ್ಟಿಯಾಗಿ ಕರೆ, ಕೂಗುಹಾಕು. आवाज बैठना = ಗಂಟಲು ಕಟ್ಟು, ಗಂಟಲು ಕೂರು

आवाज़ा, पु. ಪರಿಹಾಸ, ಗೇಲಿ, ಎಗತಾಳ.

आवाजाई, स्त्री. ಹೋಗುವಿಕೆ ಬರುವಿಕೆ, ಗಮನಾಗಮನ.

आवारगी, स्त्री. ತಿರುಕತನ; ಉಡಾಳತನ; ಪೋಕರಿತನ.

आवारजा, पु. ಲೆಕ್ಕದ ಪುಸ್ತಕ, ಖಾತೆ.

आवारा, वि. ತಿರುಕ; ಉಡಾಳ; ಪೋಕರಿ, ಪೋಲಿ.

आवारागर्द, वि. ತೊಂಡ, ತಿರುಕ; ಪೋಲಿ.

आविष्कार, पु. ಹೊಸದಾಗಿ ನಿರ್ಮಿಸುವಿಕೆ; ಕಲ್ಪನೆ; ಹೊಸದಾದ ರಚನೆ.

आवेज़ा, पु. ಬುಗುಡಿ, ಲೋಲಾಕು, ಚಳತುಂಬು, ಜುಮುಕಿ.

आवेदन, पु. ಅರಿಕೆ, ಅರ್ಜಿ.

आवेदनपत्र, पु. ಮನವಿ, ಅರ್ಜಿ, ಪ್ರಾರ್ಥನಾಪತ್ರ.

आशना, पु. ಪರಿಚಯಸ್ಥ, ಸ್ನೇಹಿತ; ಪ್ರೇಮಿ, ಇನಿಯ; ಇನಿಯಳು; ಉಪಪತಿ, ಮಿಂಡ.

आशनाई, स्त्री. ಪರಿಚಿತಿ, ಸ್ನೇಹ; ಪ್ರೀತಿ; ಅನುಚಿತ ಪ್ರೇಮ ಅಥವಾ ಸಂಬಂಧ; ಕೂಡಿಕೆ.

आशा, स्त्री. ಆಶೆ, ಹಾರೈಕೆ. आशा करना = ಆಶಿಸು, ಹಾರೈಸು.

आशिक़, पु. ಪ್ರೀತಿಸುವ ವ್ಯಕ್ತಿ, ಪ್ರೇಮಿ; ಇನಿಯಳು; ಮನದನ್ನ.

आशिक़ाना, वि. ಪ್ರೇಮಿಯಂತಹ; ಪ್ರಿಯನ.

आशियाना, पु. ಪಕ್ಷಿಯ ಗೂಡು; ಪರ್ಣಶಾಲೆ, ಕುಟಿ.

आशिश, स्त्री. ಆಶೀರ್ವಾದ. आशिश देना = ಆಶೀರ್ವದಿಸು, ಹರಸು.

आशुफ़्तगी, स्त्री. ಪೇಚಾಟ, ಫಾಸಿ.

आशुफ़्ता, वि. ಪೇಚಾಡುವ.

आश्विन, पु. ಆಶ್ವೀಜ ಮಾಸ

आस, स्त्री. ಆಶೆ, ಭರವಸೆ; ಬೀಸುವ ಕಲ್ಲು.

आसकत, स्त्री. ನಿಶ್ಶಕ್ತಿ, ಸೋಮಾರಿತನ

आसकती, वि. ಸೋಮಾರಿ.

आसते, क्रिवि. ಮೆತ್ತಗೆ, ನಿಧಾನವಾಗಿ

आसन, पु. ಆಸನ, ಪೀಠ; ಮಣೆ; ಬಿಡಾರ, ಪೃಷ್ಠ; ಕುಳಿತುಕೊಳ್ಳುವ ರೀತಿ, ಯೋಗಮುದ್ರೆ.

आसनी, स्त्री. ಚಿಕ್ಕ ಆಸನ.

आसपास, क्रिवि. ಸುತ್ತುಮುತ್ತ, ಅಜುಬಾಜು, ಹತ್ತಿರ.

आसमान, पु. ಆಕಾಶ; ಸ್ವರ್ಗ.

**आसमान सिर पर उठाना** = ಗದ್ದಲ ಮಾಡು, ಗಲಾಟೆ ಎಬ್ಬಿಸು, ಚಳುವಳಿ ಎಬ್ಬಿಸು.

**आसमानी**, वि. ಆಕಾಶದ; ಸ್ವರ್ಗದ; ಆಕಾಶ ಬಣ್ಣದ, ಆಕಾಶನೀಲಿ स्त्री. ಹೆಂಡ, ಕಳ್ಳು; ಆಕಾಶಬಾಣ.

**आसरा**, पु. ಆಶ್ರಯ, ಆಸರೆ; ನೆರವು, ಆಧಾರ; ಭರವಸೆ, ನಂಬಿಕೆ; ಆಶೆ; ನಿರೀಕ್ಷಣೆ. आसरा सहारा = ಬೆಂಬಲ, ದಿಕ್ಕು ದಿವಾಣ.

**आसव**, पु. ಒಂದು ಬಗೆಯ ಮದ್ಯ; ಔಷಧದ ಒಂದು ಬಗೆ, ಕಷಾಯ.

**आसा**, पु. = असा.

**आसाइश**, स्त्री. ಸುಖ, ಸೌಖ್ಯ; ಆನಂದ; ಸಮೃದ್ಧಿ.

**आसान**, वि. ಸುಲಭ, ಸರಾಗ, ಸುಗಮ

**आसानी**, स्त्री. ಸುಲಭ, ಸೌಲಭ್ಯ, ಸರಾಗ.

**आसार**, पु. ಚಿಹ್ನೆ, ಲಕ್ಷಣ, ಕುರುಹು; ಅಸ್ತಿಭಾರ, ಪಾಯ; ಗೋಡೆಯ ಅಗಲ

**आसी**, पु. ವೈದ್ಯ. वि. ದುಃಖಿತ.

**आसीस**, स्त्री. ಆಶೀರ್ವಾದ.

**आसूदगी**, स्त्री ತೃಪ್ತಿ; ಸಮೃದ್ಧಿ; ನಿಶ್ಚಿಂತೆ

**आसूदा**, वि. ತೃಪ್ತ; ಸಮೃದ್ಧ; ನಿಶ್ಚಿಂತ

**आसेब**, पु. ಭೂತಪ್ರೇತಗಳ ಬಾಧೆ, ದೆವ್ವ ಸೋಕು; ಕಷ್ಟ, ದುಃಖ.

**आसेबी**, वि. ಭೂತಪ್ರೇತಗಳ ಬಾಧೆಗೆ ಸಂಬಂಧಪಟ್ಟ; ದೆವ್ವ ಸೋಕಿದ.

**आस्तान**, पु. ಹೆಬ್ಬಾಗಿಲು, ತಲೆಬಾಗಿಲು; ಫಕೀರರ ಮಠ; ಆಸ್ಥಾನ.

**आस्तीन**, स्त्री. ಅಂಗಿಯ ತೋಳು.

**आस्वाद**, पु. ರುಚಿ, ಸವಿ; ಮಾಧುರ್ಯ

**आस्वादन**, पु. ರುಚಿ ನೋಡುವುದು, ಸವಿ ನೋಡುವುದು.

**आह**, अव्य. ಅಯ್ಯೋ! स्त्री. ಸಂಕಟ ಧ್ವನಿ, ಆರ್ತನಾದ, ನಿಟ್ಟುಸಿರು, ನಿಡುಸುಯ್ಲು. आह भरना = ನಿಟ್ಟುಸಿರು ಬಿಡು, ನಿಡುಸುಯ್ಯು. आह लेना = ಪೀಡಿಸು, ಸತಾಯಿಸು, ಗೋಳಾಡಿಸು.

**आहट**, स्त्री. ಸದ್ದು, ಸಪ್ಪಳ; ಸೆಲೆ, ಸುಳಿವು.

**आहन**, पु. ಕಬ್ಬಿಣ.

**आहनरुबा**, पु. ಲೋಹಚುಂಬಕ, ಸೂಜಿಗಲ್ಲು.

**आहरन**, पु. ಅಡಿಗಲ್ಲು, ಅದ್ಗಣಿ

**आहां**, स्त्री. ಘೋಷಣೆ; ಕೂಗು, ಕರೆ.

**आहा**, अव्य. ಅಹಾ! ಭೇಷ್.

**आहिस्तगी**, स्त्री. ಸಾವಕಾಶ, ತಡ, ನಿಧಾನ.

**आहिस्ता**, क्रिवि. ಮೆತ್ತ ಮೆತ್ತಗೆ, ನಿಧಾನವಾಗಿ.

**आहू**, पु. ಜಿಂಕೆ, ಎರಲೆ.

## इ

**इंगलिस्तान**, पु. ಆಂಗ್ಲ ದೇಶ.

**इंगुदी**, स्त्री. ಹೊಂಗೆಯ ಮರ.

**इंगुर**, पु. ಇಂಗಲೀಕ.

**इंगुरौटी**, स्त्री. ಇಂಗಲೀಕದ ಡಬ್ಬಿ;

ಕುಂಕುಮದ ಬರಣಿ.

**इंचना**, अक्रि. = खिचना.

**इंजील**, स्त्री. ಕ್ರೈಸ್ತರ ಧರ್ಮಗ್ರಂಥ, ಬೈಬಲ್.

**इडुरी**, स्त्री. **इंडुवा**, पु. ಸಿಂಬಿ.

**इन्तक़ाल**, पु. ಸ್ಥಾನ ಪರಿವರ್ತನೆ; ಪರಲೋಕಯಾನ, ಮರಣ; ಪರಭಾರೆ.

**इंतख़ाब**, पु. ಆಯುವಿಕೆ, ಆಯ್ಕೆ, ಚುನಾವಣೆ.

**इंतज़ाम**, पु. ಏರ್ಪಾಡು, ವ್ಯವಸ್ಥೆ.

**इंतज़ामकार**, पु. ಏರ್ಪಾಡು ಮಾಡುವವ, ವ್ಯವಸ್ಥಾಪಕ.

**इंतज़ार**, पु. ಇದಿರುನೋಡುವಿಕೆ, ಇದಿರುಕಾಯುವುದು, ನಿರೀಕ್ಷಣೆ.

**इंतशार**, पु. ಹರಡುವಿಕೆ, ಪ್ರಸಾರ.

**इंतहा**, पु. ಮುಕ್ತಾಯ, ಅಂತ, ಕೊನೆ; ಪರ್ಯವಸಾನ, ಪರಿಣಾಮ.

**इंद्रधनुष**, पु. ಕಾಮನ ಬಿಲ್ಲು, ಮಳೆಬಿಲ್ಲು.

**इंद्रवधू**, स्त्री. ಬೆಟ್ಟಬೆನಕ, ಒನಿಕೆಬಂಡೆ ಹುಳು; ಕಪ್ಪರಚಟ್ಟೆ, ಕಪ್ಪರಪುಂಡಿ, ಉಪ್ಪಂಜಿಗ, ಇಂದ್ರಗೋಪ.

**इंद्रिय**, स्त्री. ವಿಷಯಗಳನ್ನು ಅರಿಯುವಶಕ್ತಿ; ಇಂದ್ರಿಯಗಳು.

**इंद्रिजुलाब**, पु. ಮೂತ್ರವನ್ನು ಹೆಚ್ಚಿಸುವ ಔಷಧ.

**इंधन**, पु. ಕಟ್ಟಿಗೆ, ಸೌದೆ.

**इंसाफ**, पु. = इन्साफ़.

**इक**, वि. ಒಂದು (ಸಮಾಸದಲ್ಲಿ).

**इकजोर**, क्रिवि. ಒಟ್ಟಾಗಿ, ಒಟ್ಟಿಗೆ.

**इकट्ठा**, वि. ಒಂದಾದ, ಒಟ್ಟುಗೂಡಿದ, ಶೇಖರಿಸಿದ. इकट्ठा करना = ಒಂದುಗೂಡಿಸು, ಕೂಡಹಾಕು.

**इकता**, स्त्री. ಐಕ್ಯ, ಏಕಮತ್ಯ.

**इकताई**, स्त्री. ಏಕತ್ವ; ಏಕಾಂತವಾಗಿರುವಿಕೆ.

**इकतार**, वि. ಒಂದೇ ಸಮನಾದ. क्रिवि. ಒಂದೇಸಮನಾಗಿ, ಎಡೆಬಿಡದೆ.

**इकतारा**, पु. ಒಂದೇ ತಂತಿಯ ತಂಬೂರಿ, ಚವಡಿಕೆ, ಏಕನಾದ; ಕೈಯಿಂದ ನೆಯ್ದ ಬಟ್ಟೆ.

**इकतालीस**, वि. ನಲವತ್ತೊಂದು.

**इक़्तिदा**, स्त्री. ಹಿಂಬಾಲಿಸುವಿಕೆ, ಅನುಸರಣೆ.

**इकतीस**, वि. ಮೂವತ್ತೊಂದು.

**इकदाम**, पु. ಒಳಸಂಚು, ಕೂಟಯುಕ್ತಿ; ದುರಾಲೋಚನೆ.

**इक़बाल**, पु. ಪ್ರತಾಪ; ಭಾಗ್ಯ; ಅಭ್ಯುದಯ; ತಪ್ಪು ಒಪ್ಪಿಕೊಳ್ಳುವಿಕೆ, ಅಂಗೀಕಾರ.

**इक़बालमंद**, वि. ಭಾಗ್ಯಶಾಲಿ; ಸಂಪನ್ನ.

**इक़राम**, पु. ಬಹುಮಾನ, ಪುರಸ್ಕಾರ, ಸನ್ಮಾನ.

**इक़रार**, पु. ಪ್ರತಿಜ್ಞೆ; ಒಪ್ಪಿಕೆ; ಒಡಂಬಡಿಕೆ.

**इक़रारनामा**, पु. ಪ್ರತಿಜ್ಞಾಪತ್ರ, ಕರಾರುಪತ್ರ, ಒಪ್ಪಂದ, ಕಟ್ಟಡಕ.

**इकलई**, स्त्री. ಒಂದೇ ಮಡಿಕೆಯ ದುಪ್ಪಟಿ; ಒಂಟಿತನ, ಏಕಾಂತ.

इकलौता, वि. ಏಕಮಾತ್ರ (ಪುತ್ರ).
इकल्ला, वि. ಒಂಟಿ ಎಳೆಯು; ಒಂದೇ ಮಡಿಕೆಯು; ಒಂದು ಪದರಿನ; ಒಂಟಿ.
इकसठ, वि. ಅರವತ್ತೊಂದು.
इकहत्तर, वि. ಎಪ್ಪತ್ತೊಂದು.
इकहरा, वि. ಒಂದೆಳೆಯು; ಒಂದು ಮಡಿಕೆಯು.
इकाई, स्त्री. ಒಂದು, ಏಕ; ಮೂಲ ಮಾನ (ಗಣಿತದಲ್ಲಿ).
इकानबे, वि. ತೊಂಭತ್ತೊಂದು.
इकावन, वि. ಐವತ್ತೊಂದು.
इकासी, वि. ಎಂಭತ್ತೊಂದು.
इकौंज, स्त्री. ಒಂದೇ ಮಗುವಿನ ತಾಯಿ, ಕಾಕವಂಧ್ಯೆ.
इक्का, वि. ಒಂಟಿ; ಅದ್ವಿತೀಯ; ಈಡಿಲ್ಲದ. पु. ಒಂದು ಬಗೆಯ ಕಿವಿ ಮುರು; ಒಂಟಿಗ, ಸಲಗ; ಒಂದು ತರದ ಕುದುರೆಗಾಡಿ; ದಾಯ (ಕವಡೆ ಯಾಟದಲ್ಲಿ); ಪೊಗಡೆ, ಎಕ್ಕ. इक्का दुक्का = ಒಬ್ಬಿಬ್ಬರು, ಒಂಟಿಸಂಟಿ.
इक्कीस, वि. ಇಪ್ಪತ್ತೊಂದು.
इक्यानबे, वि. ತೊಂಭತ್ತೊಂದು.
इक्यावन, वि. ಐವತ್ತೊಂದು.
इक्यासी, वि. ಎಂಭತ್ತೊಂದು.
इख़राज, पु. ಬಹಿಷ್ಕಾರ; ಹೊರಡಿಸುವಿಕೆ; ವೆಚ್ಚ, ಖರ್ಚು.
इख़लास, पु. ಸ್ನೇಹ, ಗೆಳೆತನ; ಪ್ರೇಮ, ಪ್ರೀತಿ; ಸಂಬಂಧ.
इख़्तियार, पु. ಅಧಿಕಾರ; ಪ್ರಭುತ್ವ; ಶಕ್ತಿ; ವಶ, ಸ್ವಾಧೀನ; ಆರಿಸುವಿಕೆ, ಆಯ್ಕೆ, ಚುನಾವಣೆ. इख़्तियार करना = ಸ್ವೀಕರಿಸು; ಚುನಾಯಿಸು.
इच्छा, स्त्री. ಆಶೆ, ಬಯಕೆ.
इच्छुक, वि. ಇಚ್ಛಿಸುವವ.
इज़तराब, पु. ಅಶಾಂತಿ; ಕಾತರತೆ.
इजमाल, पु. ಒಟ್ಟು, ಸಮಷ್ಟಿ; ಹಲವರಿಗೆ ಸಾಮಾನ್ಯವಾದ ಹಕ್ಕು ಬಾಧ್ಯತೆಗಳುಳ್ಳದ್ದು, ಹುದುವು; ಸಾರಾಂಶ.
इजमाली, वि. ಒಟ್ಟಿನ, ಊರೊಟ್ಟಿನ; ಸಮಷ್ಟಿಯು, ಹುದುವಿನ; ಸಂಕ್ಷಿಪ್ತ.
इज़राईल, पु. ಯಮದೂತ, ಯಮಕಿಂಕರ.
इजराय, पु. ಜಾರಿಗೆ ತರುವುದು, ಪ್ರಚಾರಕ್ಕೆ ತರುವುದು; ಅಪ್ಪಣೆಯ ಜಾರಿ.
इजलास, पु. ಸ್ಥಾನ, ಪೀಠ; ನ್ಯಾಯಸ್ಥಾನ.
इज़हार, पु. ಹೊರಬೀಳುವಿಕೆ, ಪ್ರಕಟಣೆ; ಹೇಳಿಕೆ; ಸಾಕ್ಷ್ಯ, ವಾಙ್ಮೂಲ.
इजाज़त, स्त्री. ಆಜ್ಞೆ, ಅಪ್ಪಣೆ; ಒಪ್ಪಿಗೆ, ಸಮ್ಮತಿ.
इज़ाफ़ा, पु. ವೃದ್ಧಿ, ಉನ್ನತಿ; ಮಿಗಿಲು, ಉಳಿತಾಯ.
इजा[illegible], स्त्री. ಸ್ವೀಕಾರ, ಒಪ್ಪಿಗೆ; ಮಲ ವಿಸರ್ಜನೆ, ವಿರೇಚನ.
इज़ार, स्त्री. ಷರಾಯಿ; ಪಾಯಜಾಮ, ಇಜಾರು. पु. ಗಲ್ಲ, ಕೆನ್ನೆ, ಮುಖ.
इज़ारबंद, पु. ಲಾಡಿ, ನಮಾರು.
इज़ारदार, वि. ಬಾಡಿಗೆದಾರ; ಗುತ್ತಿಗೆದಾರ.
इज़ारा, पु. ಬಾಡಿಗೆಗೆ ಅಥವಾ ಗುತ್ತಿ

ಗೆಗೆ ಕೊಡುವಿಕೆ, ಗುತ್ತಿಗೆ; ಅಧಿಕಾರ, ವಶ.

**इज़ारेदार,** वि. ಗುತ್ತಿಗೆದಾರ.

**इज़्ज़त,** स्त्री. ಮಾನ, ಮರ್ಯಾದೆ, ಗೌರವ. इज्जत उतारना = ಮಾನ ಕೆಡಿಸು.

**इज़्ज़तदार,** वि. ಗೌರವಸ್ಥ.

**इठलाना,** अक्रि. ಸಿಗರು, ಸೆಟೆ; ಜಂಭ ಮಾಡು, ಬೆಡಗು ತೋರು; ಮೆರೆಯು

**इठलाहट,** स्त्री. ಸಿಗರಾಟ; ಜಂಭ, ಬೆಡಗು; ಪರಿಹಾಸ, ಗೇಲಿ.

**इतना,** वि. ಇಷ್ಟು, ಈಸು. इतने में = ಇಷ್ಟರಲ್ಲಿ.

**इतबार,** पु. = एतबार.

**इतमाम,** पु. ಪೂರಣೆ, ಮುಕ್ತಾಯ; ನೆರವೇರಿಸುವಿಕೆ.

**इतमीनान,** पु. ನಂಬಿಕೆ, ಭರವಸೆ, ತೃಪ್ತಿ; ನೆಮ್ಮದಿ, ಸಮಾಧಾನ.

**इतर,** वि. ಬೇರೆಯ, ಇತರ; ಸಾಮಾನ್ಯವಾದ.

**इतराना,** अक्रि. ಸಿಗರು, ಸೆಟೆಗೊಳ್ಳು; ಜಂಭ ಮಾಡು, ವೈಯಾರ ಮಾಡು.

**इतराहट,** स्त्री. ಗರ್ವ, ಅಹಂಕಾರ.

**इतवार,** पु. ಭಾನುವಾರ.

**इताअत,** स्त्री. ಆಜ್ಞಾಪಾಲನೆ.

**इति,** स्त्री. ಸಮಾಪ್ತಿ, ಮುಕ್ತಾಯ.

**इतिहास,** पु. ಚರಿತ್ರೆ, ಇತಿಹಾಸ.

**इतो,** वि. ಇಷ್ಟು.

**इत्तफ़ाक़,** पु. ಒಪ್ಪಿಗೆ, ಸಮ್ಮತಿ; ಹೊಂದಿಕೆ; ಸಂಯೋಗ, ಯದೃಚ್ಛೆ; ಸಂದರ್ಭ. इत्तफ़ाक़ पड़ना = ಸಂದರ್ಭ ಒದಗು.

**इत्तफ़ाक़न्,** क्रिवि. ಸಂಯೋಗದಿಂದ, ದೈವವಶಾತ್, ಯದೃಚ್ಛೆಯಾಗಿ.

**इत्तला,** स्त्री. ಅರಿಕೆ, ಸೂಚನೆ, "ಇತ್ತಿಲ್ಲೆ".

**इत्तलानामा,** पु. ಸೂಚನಾಪತ್ರ.

**इत्तिहाद,** पु. ಐಕ್ಯ; ಏಕೀಕರಣ.

**इत्तिहाम,** पु. ಗುಮಾನಿ; ಆಪಾದನೆ.

**इत्र,** पु. ಅತ್ತರು, ಪನ್ನೀರು.

**इत्रदान,** पु. ಅತ್ತರು ಇಡುವ ಪಾತ್ರೆ, ಪನ್ನೀರದಾನಿ, ಪನ್ನೀರುಗಿಂಡಿ.

**इद्बार,** पु. ದೌರ್ಭಾಗ್ಯ.

**इद्दआ,** पु. ದಾವಾ ಮಾಡುವಿಕೆ.

**इद्दत,** स्त्री. ಪತಿಯ ಮರಣಾನಂತರ ನಾಲ್ಕು ತಿಂಗಳು ಹತ್ತು ದಿನಗಳ ತನಕ ಅಥವಾ ವಿವಾಹ ವಿಚ್ಛೇದವಾದನಂತರ ಮೂರು ಸಲ ರಜಸ್ವಲೆ ಯಾಗುವ ವರೆಗಿನ ಕಾಲ. (ಮುಹಮ್ಮದೀಯ ಸ್ತ್ರೀಯರು ಈ ಅವಧಿಯೊಳಗೆ ಬೇರೆ ಮದುವೆಯಾಗಕೂಡದು.

**इधर,** क्रिवि. ಇಲ್ಲಿ, ಇತ್ತ; ಇತ್ತಲಾಗಿ; ಈಕಡೆ. इधर उधर करना या लगाना = ಚಾಡಿ ಹೇಳು, ಕಲಹ ಹುಟ್ಟಿಸು.

**इन,** सर्व. "ये" ಶಬ್ದಕ್ಕೆ ವಿಭಕ್ತಿ ಸೇರುವಾಗ ಆಗುವ ವಿಕೃತರೂಪ. ಉದಾ: ये + को = इनको.

**इनकार,** पु. ಅಸ್ವೀಕಾರ, ನಿರಾಕರಣೆ.

**इनसान,** पु. ಮನುಷ್ಯ, ಮಾನವ.

ಸುತ್ತಿಸುತ್ತಿ ಬರು, ಸುಳಿದಾಡು; ಕಣ್ಣಿಗೆ ಬೀಳದೆ ಜಾರಿಕೊಂಡು ಹೋಗು.

**काव्य**, पु. ಕವಿತೆ, ಕಾವ್ಯ.

**काश**, पु. ಕೆಮ್ಮು, ಕಾಶ; ಒಂದು ತರದ ದರ್ಭೆ. ಅವ್ಯ. ಭಗವಂತನು ಹೀಗೆ ಅನುಗ್ರಹಿಸಲಿ, ದೇವರ ದಯೆಯಿಂದಾಗಲಿ.

**काशाना**, पु. ಗುಡಿಸಲು, ಜೋಪಡಿ.

**काशीफल**, पु. ಕುಂಬಳಕಾಯಿ.

**काश्त**, स्त्री. ಕೃಷಿ, ಆರಂಬ, ಸಾಗುವಳಿ, ಬೇಸಾಯ; ಹಿಡುವಳಿ.

**काश्तकार**, पु. ಕೃಷಿಕ, ಬೇಸಾಯಗಾರ, ರೈತ; ಹಿಡುವಳಿದಾರ.

**काश्तकारी**, स्त्री. ಕೃಷಿ, ರೈತತನ, ಒಕ್ಕಲುತನ; ಹಿಡುವಳಿದಾರನ ಹಕ್ಕುಬಾಧ್ಯತೆ.

**काश्मीरा**, पु. ಒಂದು ಬಗೆ ಉಣ್ಣೆಬಟ್ಟೆ

**कास**, पु. ಕೆಮ್ಮು, ಕಾಸ.

**कासनी**, पु. ಒಂದು ಮೂಲಿಕೆ.

**कासबी**, पु. ನೆಯ್ಗೆಯವ.

**कासा**, पु. ಬಟ್ಟಲು, ತಳಿಗೆ; ಪೇಲೆ; ತಟ್ಟೆ; ತೆಂಗಿನ ಕರಟದ ಪಾತ್ರೆ.

**कासार**, पु. ಸಣ್ಣ ಕೆರೆ, ಕೊಳ.

**कासालु**, पु. ಒಂದು ಬಗೆ ಗೆಣಸು.

**क़ासिद**, पु. ದೂತ, ಹರಿಕಾರ; ಪತ್ರವಾಹಕ, ಓಲೆಕಾರ; ನೇರವಾಗಿ ಹೋಗುವವ.

**क़ासिम**, वि. ವಿಂಗಡಿಸುವವ, ಹಂಚುವವ.

**काह**, सर्व. ಯಾವುದು, ಅವುದು ?

**काहकशां**, पु. ಆಕಾಶಗಂಗೆ.

**काहण**, पु. ೧೬ ಎಲೆಗಳ ಕೌಳಿಗೆ.

**काहल**, वि. ತುಂಟ, ಚೇಷ್ಟೆಗಾರ.

**काहिन**, पु. ಪುರೋಹಿತ; ಜೋಯಿಸ; ಮಂತ್ರವಾದಿ.

**काहिल**, वि. ಮಂದವಾದ, ಜಡ್ಡು; ಸೋಮಾರಿಯಾದ, ಅಲಸ.

**काहिली**, स्त्री. ಆಲಸ್ಯ, ಸೋಮಾರಿತನ; ಜಾಡ್ಯ.

**काहिश**, पु. ಕ್ಷೀಣ, ಕ್ಷಯ; ಇಳಿತ.

**काही**, वि. ಪಚ್ಚೆ, ಎಲೆಹಸುರು. सर्व. ಯಾರಿಗೆ; ಯಾರನ್ನು ?

**काहू**, वि. ಅವುದೋ, ಒಂದಾನೊಂದು. पु. ಹಾಲು ಹಕ್ಕರಿಕೆ, ಹಾಲು ಮೂಲಂಗಿ.

**काहे**, सर्व. ಯಾವುದು, ಏನು ? काहे का = ಯಾವುದರ ? काहे को = ಯಾವುದಕ್ಕೆ, ಏತಕ್ಕೆ ?

**किंकर्तव्यविमूढ़**, वि. ಏನು ಮಾಡುವುದೆಂದು ತಿಳಿಯದ, ದಿಕ್ಕು ತೋಚದ, ದಿಙ್ಮೂಢ; ಗಾಬರಿಯಾದ, ಕಕ್ಕುಬಿಕ್ಕಾದ.

**किंगरी**, स्त्री. ಸಣ್ಣ ತಂಬೂರಿ, ಕಿಂದರಿ.

**किंगाइश**, स्त्री. ಕಾರ್ಪಣ್ಯ, ಜಿಪುಣತನ.

**किंचित्**, वि. ಸ್ವಲ್ಪ, ತುಸ.

**किंतु**, क्रिवि. ಆದರೆ, ಪರಂತು.

**किंवदंती**, स्त्री. ಗಾಳಿ ಸುದ್ದಿ, ಜನಶ್ರುತಿ, ಗಲಕು.

**किंवा**, अव्य. ಇಲ್ಲದಿದ್ದರೆ, ಇಲ್ಲವೇ.

**कि**, अव्य. ಏನೆಂದರೆ; ಅಥವಾ; ಇ ಷ್ಟರಲ್ಲಿ.
**किकियाना**, अक्रि. ಅರಚು, ಕಿರಿಚು.
**किचकिच**, स्त्री. ವ್ಯರ್ಥ ವಾಗ್ವಾದ, ಗಳಪ.
**किचकिचाना**, अक्रि. ಹಲ್ಲು ಕಡಿ, ಹಲ್ಲು ಮೊರೆ; ಹರಟು.
**किचकिचाहट**, स्त्री. ಹಲ್ಲು ಕಡಿಯು ವಿಕೆ; ಹರಟೆ.
**किचकिची**, स्त्री. ಹಲ್ಲು ಕಡಿಯುವಿಕೆ.
**किचड़ा**, पु. ಕಣ್ಣಿ ಪಿಸರು, ಕಣ್ಣಿ ಕಿಸುರು, ಸಿಳ್ಳೆ, ಪಿಚ್ಚು.
**किचड़ाना**, अक्रि. ಪಿಸರು ಬರು, ಕ ಣ್ಣು ಕಿಸುರು ಸುರಿ.
**किचपिच**, पु. ಕೆಸರು, ಬದಿ, ಕೊಚ್ಚೆ.
**किचरपिचर**, वि. ಕೆಸರಾದ, ಕೊಚ್ಚೆ ಯಾದ.
**किटकिट**, पु. ವಾಗ್ವಾದ, ಗಳಪ.
**किटकिटाना**, अक्रि. ಹಲ್ಲು ಕಡಿ; ಅಸ ಮಾಧಾನ ಪಡು.
**किटकिना**, पु. ಗುತ್ತಿಗೆ ಚೀಟಿ; ತಂತ್ರ, ಚಾಲಾಕು.
**किट्ट**, पु. ಗಸಿ, ರಾಡಿ, ಮಷ್ಟು, ತುಕ್ಕು.
**किड़**, पु. ಹುಳು.
**किड़किड़ाना**, अक्रि. ಹಲ್ಲು ಕಡಿ.
**किड़हा**, वि. ಹುಳು ಬಿದ್ದ, ಹುಳುಕು.
**कित**, क्रिवि. ಎಲ್ಲಿ, ಎಲ್ಲಿಗೆ ? वि. ಎಷ್ಟು ?
**कितना**, वि. ಎಷ್ಟು ?
**क़िता**, पु. ಹೊಲಿಯುವುದಕ್ಕಾಗಿ ಬಟ್ಟೆ ಯನ್ನು ಕತ್ತರಿಸುವಿಕೆ; ತುಂಡು; ತ ರಹ; ಸಂಖ್ಯೆ; ಭೂಪ್ರದೇಶ.
**किताब**, स्त्री. ಗ್ರಂಥ, ಪುಸ್ತಕ; ಖಾತೆ; ಬರವಣಿಗೆ.
**किताबख़ाना**, पु. ಪುಸ್ತಕಾಲಯ, ಪು ಸ್ತಕ ಭಾಂಡಾರ.
**किताबत**, पु. ಬರೆಯುವಿಕೆ; ಶಾಸನ; ಬರಹ. ख़त-ओ-किताबत = ಪತ್ರ ವ್ಯವಹಾರ.
**किताबिया**, स्त्री. ಸಣ್ಣ ಪುಸ್ತಕ.
**किताबी**, वि. ಪುಸ್ತಕದ; ಪುಸ್ತಕಾಕಾ ರದ.
**कितेक**, वि. ಹಲವು, ಅನೇಕ.
**कितो**, **कित्ता**, वि. ಎಷ್ಟು ?
**किदारा**, पु. ಒಂದು ರಾಗ.
**किधर**, क्रिवि. ಎತ್ತ, ಯಾವ ಕಡೆ ?
**किन**, सर्व. 'कौन' ಶಬ್ದಕ್ಕೆ ಬಹು ವಚನದಲ್ಲಿ ವಿಭಕ್ತಿ ಸೇರುವಾಗ ಆಗು ವ ವಿಕೃತ ರೂಪ. ಉದಾ:—कौन + को = किनको.
**किनका**, पु. ಅಕ್ಕಿ ನುಚ್ಚು, ತರಿ.
**किनकी**, स्त्री. किनका का लघु रूप.
**किनना**, सक्रि. ಕೊಂಡುಕೊಳ್ಳು.
**किनवानी**, स्त्री. ಸೋನೆ.
**किनवैया**, पु. ಕೊಂಡುಕೊಳ್ಳುವವ.
**किनहा**, वि. ಹುಳುಬಿದ್ದ, ಹುಳುಕಲು.
**किनायतन्**, क्रिवि. ಸಂಕೇತದಿಂದ, ಸಾಂಕೇತಿಕವಾಗಿ, ಲಕ್ಷಣೆಯಿಂದ.
**किनाया**, पु. ಸಂಕೇತ, ಲಕ್ಷಣೆ; ಮ ರ್ಮ, ರಹಸ್ಯ.

**किनारदार**, वि. ಅಂಚು ಕಟ್ಟಿದ, ಗೋಟು ಕಟ್ಟಿದ.

**किनारा**, पु. ಸೆರಗು, ಏಣು, ಅಂಚು, ಕರೆ; ದಂಡೆ, ಮಗ್ಗಲು, ಪಕ್ಕ; ದಡ, ತೀರ. किनारा खींचना = ಅಗಲು, ದೂರವಾಗಿರು. किनारा लगना = ದಡ ಸೇರು.

**किनाराकश**, वि. ದೂರವಾಗಿರುವವ, ತಟಸ್ಥನಾಗಿರುವವ.

**किनारी**, स्त्री. ಜರಿಗೆ ಅಂಚು; ನಕ್ಕಿ, ಗೋಟು.

**किनारे**, क्रिवि. ಪಕ್ಕದಲ್ಲಿ, ದಡದಲ್ಲಿ; ಒಕ್ಕಡೆ, ಒತ್ತಟ್ಟಿಗೆ.

**किन्हीं**, सर्व. ಬಹುವಚನದಲ್ಲಿ 'ಕೋಈ' ಶಬ್ದಕ್ಕೆ ವಿಭಕ್ತಿ ಸೇರುವಾಗ ಆಗುವ ವಿಕೃತ ರೂಪ.

**किफ़ायत**, स्त्री. ಸಾಕಾದಷ್ಟು, ಪರ್ಯಾಪ್ತ; ಕಡಮೆ ವೆಚ್ಚ, ಮಿತವ್ಯಯ, ಮಿತವ್ರಯ; ಮಿಗಿತಾಯ, ಉಳಿತಾಯ.

**किफ़ायती**, वि. ಮಿತವ್ಯಯ ಮಾಡುವವ, ಕಡಿಮೆವೆಚ್ಚದ, ಮಿತವ್ಯಯದ.

**किबर**, पु. ವಿಜೃಂಭಣೆ, ವೈಖರಿ.

**क़िबला**, पु. ಪಶ್ಚಿಮ ದಿಕ್ಕು; ಮಕ್ಕಾ ನಗರ; ಪೂಜ್ಯರು; ತೀರ್ಥರೂಪರು, ತಂದೆ.

**क़िबलागाह**, पु. ಮಕ್ಕಾ ಪಟ್ಟಣ; ಪೂಜ್ಯರು; ತೀರ್ಥರೂಪರು.

**क़िबलानुमा**, पु. ಪಶ್ಚಿಮ ದಿಕ್ಕನ್ನು ತೋರಿಸುವ ಒಂದು ಯಂತ್ರ, ದಿಗ್ದರ್ಶಕ ಯಂತ್ರ, ದಿಕ್ ಚಕ್ರ.

**क़िमाम**, पु. ಸಕ್ಕರೆ ಪಾಕ, "ಶ್ಲೀರಾ".

**क़िमार**, पु. ಜೂಜು, ಪಂದ್ಯ, ಜುಗಾಸು

**क़िमारख़ाना**, पु. ಜೂಜಾಡುವ ಸ್ಥಳ, ಜೂಜು ಮನೆ, ಜೂಜಿನ ಕಟ್ಟೆ, ದ್ಯೂತ ಗೃಹ.

**क़िमारबाज़**, वि. ಜೂಜುಗಾರ, ಜೂದಾಳಿ, ಜೂಜಾಳಿ, ಜೂಜುಖೋರ.

**क़िमारबाज़ी**, स्त्री. ಜುಗಾರಾಡುವಿಕೆ, ಜೂಜಾಡುವಿಕೆ; ಜೂಜಾಟ.

**क़िमाश**, पु. ಮಾದರಿ, ರೀತಿ, ತರಹ; ಗಂಜೀಫಿನ ಒಂದು ರಂಗು.

**किया**, पु. ಕಾರ್ಯ, ವರ್ತನೆ.

**कियारी**, स्त्री. ಪಾತಿ, ಮಡಿ; ಉಪ್ಪಿನ ಕಟ್ಟೆ, ಉಪ್ಪು ಮಡಿ.

**किरंटा**, पु. ಚಟ್ಟಿಗಾರ, ಚೊಟ್ಟಿ.

**क़िरअत**, स्त्री. ಕುರಾನನನ್ನು ಓದುವಿಕೆ, ಕುರಾನ್ ಪಠನ.

**किरका**, पु. ಚೂರು, ಕಣ.

**किरकिटी**, स्त्री. ಕಣ್ಣಲ್ಲಿ ಬಿದ್ದ ಧೂಳು.

**किरकिरा**, वि. ಮರಳು ಮರಳಾದ, ತರಿತರಿಯಾದ. किरकिरा हो जाना = ಪುಡಿಪುಡಿಯಾಗು; ಭಂಗವಾಗು; ನಷ್ಟವಾಗು.

**किरकिराना**, अक्रि. ಪುಡಿಪುಡಿಯಾಗು; ಸವೆದು ಹೋಗು; ಕಣ್ಣು ಉರಿ, ಒತ್ತುವ ನೋವಾಗು.

**किरकिरी**, स्त्री. ಕಣ್ಣಲ್ಲಿ ಬಿದ್ದ ಧೂಳು; ಕಣ್ಣುರಿ, ಕಣ್ಣೊತ್ತು; ಅಪಮಾನ.

**किरच**, स्त्री. ಸಣ್ಣ ಕತ್ತಿ, ಖಡ್ಗ; ಸಣೀ

ನು; ಗಾಜಿನ ಚೂರು.

**किरण, किरन,** स्त्री ಕಿರಣ. किरन फूटना = ಸೂರ್ಯೋದಯವಾಗು.

**किरतिया,** पु. ಕುಣಿಯುವವ, ನಾಟ್ಯಗಾರ.

**किरपान, किरबान,** स्त्री. ಕತ್ತಿ, ಕರವಾಲ, ಕೃಪಾಣ.

**किरमिच,** पु. ಕಿತ್ತಾನಾರಿನ ದಪ್ಪವಾದ ಬಟ್ಟೆ, ರಟ್ಟು ಬಟ್ಟೆ; ಪಡಮು, ಸೀರಪಾಟು.

**किररना,** अक्रि. ಹಲ್ಲು ಕಡಿ; ಕೋಪಗೊಳ್ಳು, ರೇಗು.

**किरांची,** स्त्री. ಸಾಮಾನು ಹೇರುವ ದೊಡ್ಡ ಗಾಡಿ, ಚಕ್ಕಡಿ; ಸಾಮಾನು ಒಯ್ಯುವ ರೈಲು ಗಾಡಿಯ ಡಬ್ಬಿ; ಸಾರಟು.

**किरात,** पु. ಕಿರಾತ, ಬೇಡ, ಬೇಟೆಗಾರ.

**क्रिरात,** पु. = क्रात.

**किरातिन, किरातिनी, किराती,** स्त्री. ಕಿರಾತ ಜಾತಿಯ ಹೆಂಗಸು; ಬೇಡಿತಿ.

**किराना,** पु. ಮಸಾಲೆ ಸಾಮಾನು, ಸಂಬಾರ, ಕಿರಾಣಿ. सक्रि. ಗಾಳಿಸು, ಕೇರು; ಸರಿಪಡಿಸು.

**किरानी,** पु. = केरानी.

**किराया,** पु. ಬಾಡಿಗೆ; ಗುತ್ತಿಗೆ; ಹಾಸಲು, ನೋರು; "ಛಾರ್ಜು". किराये का टट्टू = ಹಣದ ಆಸೆಗೆ ಕೆಲಸ ಮಾಡುವವ; ಸೀಚ.

**किरायादार,** पु. ಬಾಡಿಗೆಗೆ ತಕ್ಕೊಳ್ಳುವವ, ಬಾಡಿಗೆದಾರ; ಗುತ್ತಿಗೆದಾರ.

**किरायानामा,** पु. ಗುತ್ತಿಗೆ ಚೀಟಿ; ಬಾಡಿಗೆ ಕರಾರು.

**किरायेदार,** पु. = किरायादार.

**किराव,** पु. ಸಣ್ಣ ಬಟಾಣಿ.

**किरासन,** पु. ಸೀಮೆ ಎಣ್ಣೆ, ಕಲ್ಲೆಣ್ಣೆ.

**किरिया,** स्त्री. ಆಣೆ; ಕರ್ತವ್ಯ, ಕರ್ಮ; ಕರ್ಮಾಂತರ.

**क्रिरूलना, किरोलना,** सक्रि. ಕೆರೆ, ಹೆರೆ.

**किर्म,** स्त्री. ಕ್ರಿಮಿ, ಹುಳು.

**किलक,** स्त्री. ಕಿಲಕಿಲನೆ ನಗುವಿಕೆ, ಹರ್ಷಧ್ವನಿ; ಒಂದು ಬಗೆ ಲಾಳದ ಕಡ್ಡಿ; ರತ್ನಪ್ರಭೆ, ಹೊಳಕು.

**किलकना,** अक्रि. ಹರ್ಷಧ್ವನಿ ಮಾಡು, ಕಿಲಕಿಲಗುಟ್ಟು, ಕೆಲೆ.

**किलकार,** स्त्री. ಹರ್ಷಧ್ವನಿ, ಕಿಲ ಕಿಲ ಧ್ವನಿ.

**किलकारी,** स्त्री. ಹರ್ಷ ಧ್ವನಿ, ಕಿಲ ಕಿಲ. किलकारी मारना = ಕಿಲಕಿಲ ಗುಟ್ಟು.

**किलकिल,** स्त्री. ಜಗಳ. क्लिकिल कांटा = ಒಂದು ತರದ ಆಟ.

**किलकिला,** स्त्री. ಹರ್ಷಧ್ವನಿ, ಕಿಲ ಕಿಲ ಧ್ವನಿ; ಒಂದು ಬಗೆ ಮೀಂಚುಳ್ಳಿ.

**किलकिलाना,** अक्रि. ಹರ್ಷದಿಂದ ಕೂಗಾಡು, ಕಿಲಕಿಲಗುಟ್ಟು, ಕೆಲೆ; ಕಿರಿಚು; ಜಗಳವಾಡು.

**किलकिलाहट,** स्त्री. ಕಿಲಕಿಲನೆ ನಗುವಿಕೆ, ಹರ್ಷಧ್ವನಿ.

**किलन,** अक्रि. ಜಡಿಯಲ್ಪಡು, ಹೊಡೆ

ಯಲ್ಪಡು; ಕಟ್ಟುಬೀಳು, ವಶವಾಗು; ಕೀಲಿಹೋಗು, ಕುಗ್ಗು; ನರಳು.

**किलनी**, स्त्री. ನಾಯಿತೊಣಚಿ, ಉಣ್ಣೆ.

**किलबिलाना**, अक्रि. ತೆವಳು, ದೇಕು, ಹರಿದಾಡು; ವ್ಯಾಕುಲಪಡು.

**किलवाना**, अक्रि. ಜಡಿಸು, ಕೀಲಿಸು, ಮಂತ್ರದಿಂದ ಕಟ್ಟಿಸು; ಕುಗ್ಗಿಸು.

**किलवारी**, स्त्री. ದೋಣಿ ಹೋಗುವ ದಿಕ್ಕನ್ನು ತಿರುಗಿಸಲು ಉಪಯೋಗಿಸುವ ಜಲ್ಲೆ, ಹುಟ್ಟು.

**किलहंटा**, पु. ಒಂದು ಪಕ್ಷಿ.

**क़िला**, पु. ಕೋಟೆ, ದುರ್ಗ, ಕಿಲ್ಲೆ; ವ್ಯೂಹ.

**क़िलादार**, पु. ಕೋಟೆಯ ಅಧಿಪತಿ, ದುರ್ಗರಕ್ಷಕ, ಕಿಲ್ಲೇದಾರ.

**किलाना**, सक्रि. ತೂರು, ಕೇರು; ಗುದ್ದು, ಗುಮ್ಮು; ಜಡಿ.

**क़िलाबंदी**, स्त्री. ಕೋಟೆ ಕಟ್ಟುವಿಕೆ, ವ್ಯೂಹ ರಚನೆ; ಚದುರಂಗದಲ್ಲಿ ಅರಸನನ್ನು ಸುರಕ್ಷಿತವಾದ ಮನೆಯಲ್ಲಿರಿಸುವಿಕೆ.

**किलावा**, पु. ಆನೆಯ ಕೊರಳಿನ ಹಗ್ಗ, ಹೊರಜಿ.

**किलिक**, स्त्री. ಲಾಳದ ಕಡ್ಡಿ, ಗಲಗು.

**क़िलेदार**, पु.=क़िलादार.

**किलोल**, पु. ಅಲ್ಲೋಲಕಲ್ಲೋಲ.

**क़िल्लत**, स्त्री. ಕುಂದು ಕೊರತೆ, ಲೋಪ, ಅಭಾವ; ಬಡತನ.

**किल्ला**, पु. ಮೊಳೆ, ಗೂಟ.

**किल्लाना**, अक्रि. ಕಿರಚು, ಬೊಬ್ಬಿಡು.

**किल्ली**, स्त्री. ಬೀಗದ ಕೈ, ಕೀಲಿ ಕೈ; ಅಗಳಿ, ಮೊಳೆ; ಕೂಗಾಟ, ಬೊಬ್ಬೆ; ತೊಣಚಿ, ಉಣ್ಣೆ.

**किवाड़**, पु. ಕದ, ಬಾಗಿಲು. किवाड़ देना या लगाना = ಕದ ಹಾಕು, ಮುಚ್ಚು.

**किवाड़ी**, स्त्री. किवाड़ का लघु रूप.

**किशमिश**, स्त्री. ದ್ವೀಪದ್ರಾಕ್ಷಿ, ಒಣಗಿದ ದ್ರಾಕ್ಷಿ; ಬೀಜವಿಲ್ಲದ ದ್ರಾಕ್ಷಿ, ಬೇದಾಣ.

**किशमिशी**, वि. ದ್ವೀಪದ್ರಾಕ್ಷಿಯ, ದ್ವೀಪ ದ್ರಾಕ್ಷಿ ಬಣ್ಣದ, ಕಂದು ಬಣ್ಣದ.

**किशोर**, पु. ಯುವಕ, ತರುಣ, ಕುವರ

**किशोरी**, स्त्री. ತರುಣಿ, ಯುವತಿ. वि. ಪ್ರಾಯದ, ಯೌವನದ.

**किश्त**, स्त्री. ಚದುರಂಗದಲ್ಲಿ " ಷಹ ", ಕಟ್ಟು; ಸಾಗುವಳಿ ಜಮೀನು; ಪೈರು, ಬೆಳೆ.

**किश्ती**, स्त्री. ದೋಣಿ, ಓಡ, ನೌಕೆ; ತಟ್ಟೆ, ಪರಾತ; ಚದುರಂಗದ ಆನೆ.

**किस**, सर्व. 'क्या' ಮತ್ತು 'कौन' ಇವುಗಳಿಗೆ ಏಕವಚನದಲ್ಲಿ ವಿಭಕ್ತಿ ಸೇರುವಾಗ ಆಗುವ ವಿಕೃತ ರೂಪ.

**किसनई**, स्त्री. ಕೃಷಿ, ಬೇಸಾಯ.

**किसबत**, पु. ನಾಪಿತನ ಸಂಚಿ, ಹಡಪ.

**किसान**, पु. ರೈತ, ಬೇಸಾಯಗಾರ, ಕೃಷೀವಲ, ಒಕ್ಕಲಿಗ.

**किसानिन**, स्त्री. ರೈತರ ಹೆಂಗಸು, ಒಕ್ಕಲಗಿತ್ತಿ.

**क़िसानी**, स्त्री. ಕೃಷಿ, ಬೇಸಾಯ.
**किसी**, सर्व. ಏಕವಚನದಲ್ಲಿ 'कोई' ಶಬ್ದಕ್ಕೆ ವಿಭಕ್ತಿ ಸೇರುವಾಗ ಆಗುವ ವಿಕೃತ ರೂಪ.
**किसे**, सर्व. ಯಾರಿಗೆ, ಯಾರನ್ನು, ಯಾವುದಕ್ಕೆ, ಯಾವುದನ್ನು ?
**क़िस्त**, स्त्री. ಕಂತು, ಹಪ್ತೆ, ಕಿಸ್ತು.
**क़िस्तबंदी**, स्त्री. ಕಂದಾಯ ಅಥವಾ ಸಾಲವನ್ನು ಕೆಲವು ಕಂತುಗಳಲ್ಲಿ ಸಲ್ಲಿಸುವುದು.
**क़िस्तवार**, क्रिवि. ಕಂತು ಕಂತಾಗಿ; ಪ್ರತಿ ಕಂತಿಗೂ.
**क़िस्वत**, स्त्री. ಹಜಾಮನ ಚೀಲ, ಹಡಪ; ಅಡ್ಡೆಕಾರರು ಅಡ್ಡೆ ಹೊರುವಾಗ ಹೆಗಲಮೇಲಿಟ್ಟುಕೊಳ್ಳುವ ಚರ್ಮದ ಬಿಲ್ಲೆ.
**क़िस्म**, स्त्री. ವಿಧ, ಬಗೆ, ತರಹ, ರೀತಿ.
**क़िस्मत**, स्त्री. ಭಾಗ್ಯ, ದೆಸೆ; ವಿಧಿ; ರಾಜ್ಯದ ಒಂದು ಪ್ರಾಂತ್ಯ. क़िस्मत करना = ವಿಂಗಡಿಸು, ಪಾಲುಮಾಡು.
**क़िस्मतवर**, वि. ಭಾಗ್ಯವಂತ, ದೆಸೆಗಾರ, ದಶಾವಂತ, ಅದೃಷ್ಟಶಾಲಿ.
**क़िस्सा**, पु. ಕಥೆ, ಕತೆ; ಕಾದಂಬರಿ; ವೃತ್ತಾಂತ; ಜಗಳ.
**की**, प्रत्य. ಷಷ್ಠೀ ವಿಭಕ್ತಿ ಪ್ರತ್ಯಯ (ಸ್ತ್ರೀಲಿಂಗ ರೂಪ).
**कीक**, पु. ಚೀತ್ಕಾರ, ಕೂಗಾಟ.
**कीकड़**, **कीकर**, पु. ಜಾಲಿ ಗಿಡ.
**कीकना**, अक्रि. ಕಿರಿಚು, ಅರಚು.
**कीकान**, पु. ಕುದುರೆ.
**कीच**, **कीचड़**, स्त्री. ಕೊಳೆ, ಕೆಸರು, ಬದಿ, ಬುರುದೆ, ಕೊಚ್ಚೆ.
**कीट**, पु. ಹುಳು, ಕ್ರಿಮಿ, ಕೀಟ, ಕೊಳೆ, ಕೊಳಕು.
**कीड़ा**, पु. ಕ್ರಿಮಿ, ಹುಳು; ಹಾವು; ತಿಗಣೆ; ಹೇನು. कीड़ा पड़ना = ಹುಳುಕು ಬೀಳು, ಹುಳು ಹತ್ತು. कीड़े मकोड़े = ಹುಳಹುಪ್ಪಡಿ, ಹುಳಹುಪ್ಪಟೆ.
**कीड़ी**, स्त्री. ಹುಳು; ಇರುವೆ.
**कीन**, पु. ಅಸೂಯೆ, ವಿದ್ವೇಷ.
**कीनना**, सक्रि. ಕೊಂಡುಕೊಳ್ಳು.
**कीना**, पु. ದ್ವೇಷ, ಜಿದ್ದು, ಹಗೆತನ; ಚೋಡಿ, ಮತ್ಸರ.
**कीनावर**, वि. ದ್ವೇಷವುಳ್ಳ, ಮತ್ಸರವುಳ್ಳ.
**कीप**, **कीफ़**, स्त्री. ಲಾಳಿಕೆ, ಆಲಿಕೆ, ಬುದ್ಧಿವಂತ.
**क़ीमत**, स्त्री. ಬೆಲೆ, ಕ್ರಯ, ಕಿಮ್ಮತ್ತು. क़ीमत ठहराना = ಬೆಲೆ ಕಟ್ಟು.
**क़ीमती**, वि. ಬೆಲೆ ಬಾಳುವ, ಬಹುಮೂಲ್ಯವಾದ; ಹೆಚ್ಚು ಬೆಲೆಯ, ದುಬಾರಿ.
**क़ीमा**, पु. ಮಾಂಸದ ಚೂರು.
**कीमिया**, पु. ರಸವಾದ, ರಸಾಯನಶಾಸ್ತ್ರ.
**कीमियागर**, पु. ರಸವಾದ ಬಲ್ಲವ, ರಸವಾದಿ, ರಸಾಯನಜ್ಞ.
**कीमियागरी**, स्त्री. ರಸವಾದ, ರಸಸಿದ್ಧಿ, ರಸಾಯನ ವಿದ್ಯೆ.

कीमुख़्त, पु. ಕುದುರೆ ಅಥವಾ ಕತ್ತೆಯ ತೊಗಲು; ಗುಳ್ಳೆಗುಳ್ಳೆಯಾಗಿರುವ ಚಕ್ಕಳ.

कीमुख़्ती, वि. ಕತ್ತೆ ಅಥವಾ ಕುದುರೆಯ ಚರ್ಮದಿಂದ ಮಾಡಲ್ಪಟ್ಟ.

कीर, पु. ಗಿಳಿ, ಶುಕ; ಬೇಟೆಗಾರ.

कीरत, कीरति, स्त्री. ಕೀರ್ತಿ.

कीर्त्तन, पु. ಗುಣಕಥನ, ಕೀರ್ತನೆ.

कीर्त्तनिया, पु. ಕೀರ್ತನಕಾರ.

कीर्त्ति, स्त्री. ಕೀರ್ತಿ, ಯಶಸ್ಸು, ಖ್ಯಾತಿ, ಹೆಸರುವಾಸಿ

कील, स्त्री. ಆಣಿ, ಮೊಳೆ; ಗೂಟ; ದಶಿ, ಬೆಣೆ; ತಿಗುರಿ ಅಥವಾ ಬೀಸುವ ಕಲ್ಲಿನ ಗೂಟ; ಮಡಿಬಕ್ಕೆ, ಮಡಿಮೆ; ಮೂಗುತಿ. कील कांटा = ಉಪಕರಣ, ಮುಟ್ಟು, ಆಯುಧ.

कीलक, पु. ಗೂಟ, ಮೊಳೆ.

कीलन, पु. ಬಂಧನ, ಕಟ್ಟು.

कीलना, सक्रि. ಮೊಳೆ ಅಥವಾ ಗೂಟ ಹೊಡೆ, ಜಡಿ; ಬಿಗಿಸು, ಕೀಲಿಸು; ಬದ್ಧಿಸು, ಕಟ್ಟು; ಮಂತ್ರ ಹಾಕು, ವಶಪಡಿಸು.

कीला, पु. ಮೊಳೆ; ಗರಗಸ ಮುಂತಾದವುಗಳ ಹಲ್ಲು; ದವಡೆ ಹಲ್ಲು.

कीली, स्त्री. ತಿರುಗಣಿ ಮೊಳೆ, ಮರ ಸುತ್ತು; ಕೀಲಿ; ಅಚ್ಚು, ಅಚ್ಚುಮರ, ಇರ್ಚಿ; ಬೀಗದ ಕೈ.

कीसा, पु. ಚೀಲ, ಸಂಚಿ; ಕಿಸೆ.

कुँअर, पु. ಕುಮಾರ, ಕುವರ; ರಾಜಕುಮಾರ, ಅರಸು ಮಗ.

कुँअरी, स्त्री. ಕುಮಾರಿ, ಕುವರಿ; ರಾಜಪುತ್ರಿ.

कुँआं, पु. ಬಾವಿ.

कुँआर, पु. ಅಶ್ವೀಜ ಮಾಸ.

कुँआरपन, पु. ಬ್ರಹ್ಮಚರ್ಯ.

कुँआरा, वि. ಕುವರ; ಅವಿವಾಹಿತ, ಬ್ರಹ್ಮಚಾರಿ.

कुँआरी, स्त्री. ಕನ್ಯೆ, ಮಗಳು; ರಾಜಕುಮಾರಿ.

कुँई, स्त्री. ಕನ್ನೈದಿಲೆ, ನೀಲೋತ್ಪಲ.

कुंकुमा, पु. ಓಕಳಿ ಅಥವಾ ಗುಲಾಲು ಇಡುವ ಪಾತ್ರೆ.

कुंगड़ा, वि. ಗಟ್ಟಿಮುಟ್ಟಾದ, ಬಲಿಷ್ಠ.

कुंगड़ाई, स्त्री. ಬಲ, ದಾರ್ಢ್ಯ.

कुंचन, पु. ನಲುಗುವಿಕೆ, ಸುಕ್ಕು.

कुंज, पु. ಲತಾಗೃಹ, ನಿಕುಂಜ; ಮೂಲೆ; ಶಾಲುಗಳ ಮೂಲೆಗಳಲ್ಲಿ ಮಾಡಿರುವ ಕಸೂತಿ ಕೆಲಸ.

कुंजड़ा, पु. ಕಾಯಿಪಲ್ಯ ಮಾರುವವ, ತರಕಾರಿ ಬೆಳೆಸುವವ ಅಥವಾ ಮಾರುವವ. कुंजड़ा क़साई = ನೀಚ ಜಾತಿಯವರು.

कुंजड़िन, कुंजड़ी, स्त्री. ಕಾಯಿಪಲ್ಯ ಮಾರುವವಳು. कुंजड़ी का स्वांग = ಒಂದು ಆಟ.

कुंजी, स्त्री. ಬೀಗದಕೈ, ಕೀಲಿಕೈ, ಚಾವಿ; ಟೀಕೆಯ ಪುಸ್ತಕ; ಪ್ರಕಾಶಿಕೆ.

कुंठ, वि. ಮಂದ; ಮೊಂಡು; ದಡ್ಡ.

कुंड, पु. ಕೊಳಗ; ಹೋಮ ಕುಂಡ, ಅಗ್ನಿ ಕುಂಡ; ಹೊಂಡ, ಕೊಳ; ಜಾ

ರಜ ಪುತ್ರ; ಅಂಬಾರಿ
कुंडल, पु. ಕಿವಿಯ ಕುಂಡಲ; ಕಡಗ; ಬಳೆ, ಅಣಸು; ದಾರದುಂಡೆ, ಕಂಡು; ತೇಜೋಮಂಡಲ; ಸೂರ್ಯ ಅಥವಾ ಚಂದ್ರನ ಸುತ್ತಲು ಗುಡಿ ಕಟ್ಟುವಿಕೆ.
कुडलिया, स्त्री. ಒಂದು ಛಂದಸ್ಸು.
कुंडली, स्त्री. ಜಿಲೇಬಿ; ಸುರುಳಿ, ಸಿಂಬೆ; ಹಾವು ತೆಕ್ಕೆಗಟ್ಟುವಿಕೆ; ರಾಶಿ ಕುಂಡಲಿ, ಜಾತಕ.
कुंडा, पु. ಗಡಿಗೆ; ಕಡಾಯಿ; ಬಾಗಿಲಿನ ಚಿಲಕವನ್ನು ಸಿಕ್ಕಿಸುವ ಕೊಂಡಿ.
कुंडी, स्त्री. ಸಣ್ಣ ಗಡಿಗೆ; ಚಿಲಕದ ಕೊಂಡಿ; ಗೊಣಸು.
कुंत, पु. कुंती, स्त्री. ಈಟಿ, ಭರ್ಜಿ.
कुंथना, अक्रि. ತಟ್ಟಿಲ್ಪಡು.
कुंद, वि. ಕುಂಠಿತ; ಮಂದ; ಮೊಂಡಾದ. पु. ಒಂದು ಬಗೆ ಮಲ್ಲಿಗೆ, ಕೋಲು ಮಲ್ಲಿಗೆ.
कुंदज़ेहन, वि. ಮಂದಬುದ್ಧಿ, ದಡ್ಡ, ಮಂಕ.
कुंदन, पु. ಕುಂದಣದ ಚಿನ್ನ, ಅಪರಂಜಿ. वि. ಶುದ್ಧವಾದ, ಚೊಕ್ಕ.
कुंदनसाज़, पु. ಕುಂದಣದ ಕೆಲಸ ಮಾಡುವವ, ಕುಂದಣಗಾರ.
कुंदनकूट, पु. ಸೀಮೆ ಸಾಂಬ್ರಾಣಿ.
कुंदरा, पु. ಹುಲ್ಲಿನ ಬಣವೆ, ಮೆದೆ.
कुंदरू, पु. ತೊಂಡೆಕಾಯಿ.
कुंदला, पु. ಒಂದು ತರದ ಗುಡಾರ, ಡೇರೆ.
कुंदा, पु. ಮರದ ಕೊರಡು, ಮೊದ್ದು, ದಿಮ್ಮಿ; ಅಡಿ ತುಂಡು; ತುಪಾಕಿಯ ಹಿಂಭಾಗ, ಕುಂದೆ; ಹಿಡಿ; ನಾಗವಾಸ ಕೋಳ; ಇಸ್ತ್ರಿ ಮಾಡುವ ಕೊಡತಿ; ಇಸ್ತ್ರೀ ಮಣೆ; ರೆಕ್ಕೆ; ಹಾಲುಕೋಪ; ಒಂದು ಕುಸ್ತಿ ವರಸೆ, ಗುದ್ದು.
कुंदी, स्त्री. ಇಸ್ತ್ರಿ ಮಾಡುವುದು; ಬಡಿಯುವುದು; ಧಮ್ಮಸು ಮಾಡುವುದು.
कुंदीगर, पु. ಇಸ್ತ್ರಿ ಮಾಡುವವ, ಧಮ್ಮಸು ಮಾಡುವವ.
कुंदेरना, सक्रि. ಕೆರೆ, ಕೀರು, ಹೆರೆ.
कुंदेरा, पु. ಕೆರೆಯುವವ, ಹೆರೆಯುವವ.
कुंभकार, पु. ಕುಂಬಾರ; ಹುಂಜ.
कुंभमेला, पु. ಹರಿದ್ವಾರ, ಪ್ರಯಾಗ, ಉಜ್ಜೈನಿ ಮುಂತಾದ ಸ್ಥಳಗಳಲ್ಲಿ ಹನ್ನೆರಡು ವರ್ಷಕ್ಕೊಂದಾವರ್ತಿ ನಡೆಯುವ ಜಾತ್ರೆ
कुंभस्थल, पु. ಆನೆಯ ತಲೆಗುಪ್ಪ.
कुंभी, स्त्री. ಆರು ವರ್ಷಕ್ಕೊಂದಾವರ್ತಿ ನಡೆಯುವ ಒಂದು ಜಾತ್ರೆ.
कुंभीर, पु. ಮೊಸಳೆ.
कुंवर, पु. =कुँअर.
कुंवरानी, स्त्री. कुंवर का स्त्री. रू
कुंवरेटा, पु. ಚಿಕ್ಕ ಹುಡುಗ, ಪೋ
कुंवारी, स्त्री. =कुंआरी.
कुआं, कुआ, पु. ಕೂಪ, ಭಾವಿ. कुआं चलाना = ಭಾವಿಯಿಂದ ನೀರು ಹಾಯಿಸು, ನೀರು ಕಟ್ಟು. कुआं टूटना = ನೀರು ಬತ್ತಿ ಹೋಗು.
कुआर, पु. ಆಶ್ವೀಜ ಮಾಸ.
कुइयाँ, कुईं, स्त्री. ನೀಲೋತ್ಪ

ಕನ್ಯೈದಿಲೆ; ಸಣ್ಣ ಭಾವಿ. कठकुइयाँ =ಹಲಗೆ ಅಥವಾ ಓಡೆಗಳಿಂದಾದ ಭಾವಿ, ಓಡೆ ಭಾವಿ.

**कुकड़ना**, अक्रि. ಮುದುರಿ ಹೋಗು, ಸುಕ್ಕು ಹಿಡಿ.

**कुकड़ी**, स्त्री. ಕೋಳಿ, ಹೇಂಟೆ; ನೂಲಿನ ಕಂಡು.

**कुकड़ूंकूं**, स्त्री. ಕೊಕ್ಕೊಕ್ ಅನ್ನುವ ಶಬ್ದ.

**कुकनू**, पु. ಒಂದು ಕಲ್ಪಿತ ಪಕ್ಷಿ.

**कुकरी**, पु. ಬಾಗಿದ ಚೂರಿ.

**कुकुर**, पु. ನಾಯಿ.

**कुकुरखांसी**, स्त्री. ನಾಯಿಕೆಮ್ಮು, ಎಪ್ಪತ್ತರ ಕೆಮ್ಮು, ಕಪ್ಪೆ ಕೆಮ್ಮು.

**कुकुरदांत**, पु. ಶೂಲದ ಹಲ್ಲು.

**कुकुरमाछा**, स्त्री. ನಾಯಿ ನೊಣ.

**कुकुरमुत्ता**, पु. ನಾಯಿಕೊಡೆ.

**कुकुरी**, स्त्री. ಹೆಣ್ಣು ನಾಯಿ.

**कुख्याति**, स्त्री. ಅಪಯಶಸ್ಸು; ನಿಂದೆ.

**कुघात**, पु. ಅವೇಳೆ, ಅಸಮಯ; ಕಪಟ.

**कुच**, स्त्री. ಸ್ತನ, ಮೊಲೆ.

**कुचकुचाना**, सक्रि. ಕೆದಕು, ಕುಡುಕು, ಕೊಡಚು.

**कुचक्र**, पु. ಒಳಸಂಚು, ಪಿತೂರಿ.

**कुचक्री**, वि ಒಳಸಂಚು ನಡೆಸುವವ.

**कुचना**, अक्रि. ಸಂಕೋಚಪಡು; ಸಂಕುಚಿತವಾಗು.

**कुचलना**, सक्रि. ಮೆಟ್ಟು, ತುಳಿ; ಹಿಸಕು, ಜಜ್ಜು, ನಜುಗು.

**कुचलवाना**, **कुचलाना**, सक्रि. कुचलना का प्रे. रूप.

**कुचला**, पु. ವಿಷಮುಷ್ಟಿ, ಕಾಸರಿಕೆ; ಚಟ್ನಿ.

**कुचली**, स्त्री. ದವಡೆ ಹಲ್ಲು.

**कुचाग्र**, पु. ಮೊಲೆಯ ತುದಿ, ಮೊಲೆ ತೊಟ್ಟು.

**कुचाल**, पु. ದುರಾಚಾರ, ಕೆಟ್ಟ ನಡತೆ.

**कुचाली**, वि. ಕೆಟ್ಟ ನಡತೆಯುಳ್ಳವ, ದುರಾಚಾರಿ, ದುಷ್ಟ.

**कुचेष्ट**, वि. ಕುಚೇಷ್ಟೆಗಾರ.

**कुचेष्टा**, स्त्री. ಕುಚೇಷ್ಟೆ, ಕೀಟಲೆ.

**कुचैन**, वि. ನೆಮ್ಮದಿಯಿಲ್ಲದ, ಅಶಾಂತ.

**कुचैल**, पु. ಕೊಳಕು ಬಟ್ಟೆ.

**कुचैला**, वि. ಕೊಳಕುಬಟ್ಟೆ ಧರಿಸಿದವ; ಚಿಂದಿ ಬಟ್ಟೆಯುಟ್ಟವ, ಕುಚೇಲ.

**कुछ**, वि. ಸ್ವಲ್ಪ, ಕೊಂಚ, ಕೆಲವು. सर्व. ಏನೋ, ಏನಾದರೂ, ಅವು ದೋ. कुछ का कुछ होना = ಏನೇನೋ ಆಗಿ ಹೋಗು, ಪಲ್ಲಟವಾಗು. कुछ न कुछ = ಏನಾದರೂ, ಸ್ವಲ್ಪವಾದರೂ. कुछ हो = ಏನೇ ಆಗಲಿ. बहुत कुछ = ಬಹಳ, ತುಂಬ. सब कुछ = ಸಮಸ್ತ, ಎಲ್ಲ, ಇಡೀ.

**कुज**, पु. ಕುಜ ಗ್ರಹ, ಅಂಗಾರಕ.

**कुजना**, अक्रि. ನಶಿಸು, ಕ್ಷೀಣಿಸು; ಸವೆ.

**कुजा**, क्रिवि. ಎಲ್ಲಿ ?

**कुजात**, वि. ಕೀಳು ಜಾತಿಯ, ನೀಚ.

**कुजाति**, स्त्री. ನೀಚ ಜಾತಿ, ಕೀಳು

ಜಾತಿ.
**कुजाना,** सक्रि. ಸವೆಯಿಸು
**कुज्जा,** पु. ಮಣ್ಣಿನ ಬಟ್ಟಲು; ಮಣ್ಣಿನ ಹೆಂಟೆ.
**कुटंत,** स्त्री. ಕುಟ್ಟುವಿಕೆ.
**कुट,** पु. ಮನೆ; ದುರ್ಗ; ಕುಟ್ಟಿದವಸ್ತು, ಪುಡಿ; ಕುಷ್ಮದ ಗಿಡ; ರಟ್ಟಿನ ಕಾಗದ.
**कुटका,** पु. ಚಿಕ್ಕ ಚೂರು.
**कुटकी,** स्त्री. ಒಂದು ವನಸ್ಪತಿ; ಗುಂಗಾಡು, ಚಿಗಟಿ; ವಿಯೋಗ, ವಿರಹ; ನವಣೆ; ಚೂರು, ಪುಡಿ.
**कुटकुट,** पु. ನವೆ, ತಿಂಡಿ; ತೀಟಿ, ತುರಿ.
**कुटकुटाना,** अक्रि. ಚಂಚಿನಿಂದ ಕುಕ್ಕು, ಕುಡುಕು.
**कुटनपन, कुटनपेशा,** पु. ಕುಂಟಣಗಿತ್ತಿಯ ಕೆಲಸ; ದೌತ್ಯ.
**कुटनहारी,** स्त्री. ಕುಟ್ಟುವವಳು, ಕೊಟ್ಟಣಗಿತ್ತಿ.
**कुटना,** अक्रि. ಪುಡಿಯಾಗು; ಕುಟ್ಟಿಲ್ಪಡು, ಇಡಿ; ಪಾಡು ಪಡು, ದುಡಿ. पु. ಒನಕೆ; ಕುಂಟಣಿಗ, ದೂತ; ಜಗಳ ಹುಟ್ಟಿಸುವವ.
**कुटनाना,** सक्रि. ಹೆಂಗಸರನ್ನು ಮರುಳುಗೊಳಿಸಿ ದುರ್ಮಾರ್ಗಕ್ಕೆ ಒಯ್ಯು, ಬುಲ್ಲವಿಸು; ಇಡಿಸು, ಕುಟ್ಟಿಸು.
**कुटनापा,** पु. ಕುಂಟಣಗಿತ್ತಿಯ ಕೆಲಸ.
**कुटनी,** स्त्री. ಕುಂಟಣಗಿತ್ತಿ, ತಲೆಹಿಡಕಿ; ಕಲಹ ಹಚ್ಚುಸುವ ಸ್ತ್ರೀ.
**कुटवाना,** सक्रि. **कूटना** का प्रे. रूप.
**कुटाई,** स्त्री. ಕುಟ್ಟುವ ಕೆಲಸ; ಕುಟ್ಟುವುದಕ್ಕೆ ಕೂಲಿ, ಕುಟ್ಟಿದ್ದಕ್ಕೆ ಕೂಲಿ.
**कुटाना,** सक्रि. ಕುಟ್ಟಿಸು.
**कुटार,** पु. ಟಾಕಣ, ತಟ್ಟು.
**कुटास,** पु. ಮಾರಾಮಾರಿ, ಹೊಡದಾಟ
**कुटिया,** स्त्री. ಗುಡಿಸಲು.
**कुटिल,** वि. ಡೊಂಕಾದ, ವಕ್ರ; ಕೆಟ್ಟ; ಕ್ರೂರ; ಧೂರ್ತ, ಕಪಟಿ.
**कुटिलता,** स्त्री. **कुटिलपन,** पु. ಡೊಂಕು, ವಕ್ರತೆ; ದುಷ್ಟತನ; ಕಪಟ; ಧೂರ್ತತನ.
**कुटी,** स्त्री. **कुटीर,** पु. ಸಣ್ಣ ಮನೆ. ಗುಡಿಸಲು, ಜೋಪಡಿ.
**कुटुंब,** पु. ಕಟುಂಬ, ಸಂಸಾರ.
**कुटुंबी,** पु. ಗೃಹಸ್ಥ, ಸಂಸಾರಿಕ; ಬಂಧು ಬಳಗ.
**कुटेक,** स्त्री. ಹಟ, ಮುಷ್ಕರ.
**कुटेव,** स्त्री. ಕೆಟ್ಟ ವಾಡಿಕೆ, ದುರಭ್ಯಾಸ.
**कुटोनी, कुटौनी,** स्त्री. ಕುಟ್ಟುವಿಕೆ; ಕುಟ್ಟುವುದರ ಕೂಲಿ.
**कुट्टा,** पु. ರೆಕ್ಕೆ ಕತ್ತರಿಸಿದ ಪಾರಿವಾಳ; ತೋಹಿನ ಹಕ್ಕಿ, ದೀಹದ ಪಕ್ಷಿ.
**कुट्टी,** स्त्री. ಜೋಳದ ಕಡ್ಡಿಯನ್ನು ಕತ್ತರಿಸುವಿಕೆ; ಕತ್ತರಿಸಿದ ಜೋಳದ ಕಡ್ಡಿ, ತುಂಡು; ರೆಕ್ಕೆ ಕತ್ತರಿಸಿದ ಪಾರಿವಾಳ; ನೆನೆಹಾಕಿ ಕುಟ್ಟಿದ ಕಾಗದ; ಸ್ನೇಹಭಂಗ (ಮಕ್ಕಳಾಟದಲ್ಲಿ), ಠೂಠೂ.
**कुठला,** पु. **कुठली,** स्त्री. ಕಣಜ, ಕಣಗೇವು, ಓಡೆ, ಕುಸಾಲ.
**कुठाँव,** स्त्री. ಕೆಟ್ಟ ಸ್ಥಳ.
**कुठाकु,** पु. ಬಡಗಿ ಹಕ್ಕಿ, ಮರಕುಟಿಗ.

ಹಕ್ಕಿ.

**कुठाट**, पु. ಕುಪ್ರಬಂಧ; ದುರಾಲೋಚನೆ.

**कुठार**, पु. ಕೊಡಲಿ, ಪರಶು.

**कुठारी**, स्त्री. ಕೈಗೊಡಲಿ.

**कुठाली**, स्त्री. ಮೂಸೆ, ಕೂವೆ; ಚಿಕ್ಕ ಕೊಡಲಿ

**कुठियार**, पु. ಉಗ್ರಾಣ.

**कुठियारी**, पु. ಉಗ್ರಾಣಿಕ, ಕೊಟ್ಠಾರಿ.

**कुठौर**, पु. ಕೆಟ್ಟ ಸ್ಥಳ; ಅಸಮಯ.

**कुड़क**, स्त्री ಒಡಕು.

**कुड़कना**, अक्रि. ಒಡೆ, ಬಿರಿ, ಚೂರು ಚೂರಾಗು; ಮುಕ್ಕು, ತಿನ್ನು.

**कुड़कुड़ाना, कुड़बुड़ाना**, सक्रि. ಗೊಣಗುಟ್ಟು, ಮುಸುಗುಟ್ಟು; ಕೆರಳು, ಕನಲು.

**कुड़कुड़ी**, स्त्री. ಅಜೀರ್ಣದಿಂದ ಹೊಟ್ಟೆಯಲ್ಲಾಗುವ ಶಬ್ದ, ಗುಳುಕು, ಗುಡುಗುಡು ಶಬ್ದ.

**कुड़ता**, पु. ಅಂಗಿ, ಕುಡತಾ.

**कुड़ती**, स्त्री. ದನಗಳಿಗೆ ನೀರು ಕುಡಿಸುವ ಪಾತ್ರೆ; ರವಿಕೆ, ಕುಪ್ಪಸ.

**कुड़मा**, पु. ಕುಲ, ವಂಶ, ಬುಡಕಟ್ಟು.

**कुड़ल**, स्त्री. **कुड़ला**, पु. ಸಂಧಿವಾತ.

**कुड़व**, पु. ಬೊಗಸೆ, ಕೊಳಗ.

**कुडुक**, पु. ಹೆಂಟೆಯ ಕೂಗು.

**कुडौल**, वि. ಕುರೂಪ, ಅಂದಗೆಟ್ಟ.

**कुढंग**, पु. ದುರ್ವ್ಯವಹಾರ, ಕೆಟ್ಟ ನಡತೆ; ಒರಟುತನ. वि. ಕೆಟ್ಟ, ಕುರೂಪ, ಅಂದಗೆಟ್ಟ.

**कुढंगा**, वि. ಮರ್ಯಾದೆಗೆಟ್ಟ ನಡತೆಯುಳ್ಳವ, ಒಡ್ಡ, ಒರಟ.

**कुढ़न**, स्त्री. ಆಂತರಿಕ ದುಃಖ ಅಥವಾ ಕೋಪ; ರೇಗು, ಮುನಿಸು, ಸಿಟ್ಟು.

**कुढ़ना**, अक्रि. ಒಳಗೊಳಗೆ ರೇಗು ಅಥವಾ ದುಃಖಿಸು, ಕೊರಗು; ಮುಸುಗುಟ್ಟು; ಸೀವರಿಸು; ಅಸೂಯೆಪಡು.

**कुढ़ब**, वि. ಅಂದಗೆಟ್ಟ; ಕಠಿಣವಾದ, ದುಸ್ತರ.

**कुढ़ाना**, सक्रि. ಚಿಡಾಯಿಸು, ಕೆರಳಿಸು, ರೇಗಿಸು; ದುಃಖಗೊಳಿಸು, ಸತಾಯಿಸು

**कुतका**, पु. ಕೋಲು, ದೊಣ್ಣೆ, ದಂಡ; ಭಂಗಿ ಅರೆಯುವ ಕೋಲು.

**कुतना**, अक्रि. ಬೆಲೆ ಕಟ್ಟಲ್ಪಡು; ಎಣಿಸಲ್ಪಡು, ಎಣಿಕೆಯಾಗು.

**कुतबा**, पु. ಬರೆದದ್ದು; ಲೇಖ.

**कुतरन**, पु. ಹಲ್ಲುಗಳಿಂದ ಸಿಗಿದದ್ದು, ಕಡಿದದ್ದು, ಚೂರು.

**कुतरना**, सक्रि. ಹಲ್ಲಿನಿಂದ ಕಡಿ; ಸಿಗಿ; ಕೊತ್ತು, ಕುಡುಕು; ತುಂಡರಿಸು.

**कुतरू**, पु. ನಾಯಿಮರಿ, ಕುನ್ನಿ; ಕಡಿಯುವವ.

**कुतर्क**, पु. ಕುತರ್ಕ, ವಿತಂಡಾವಾದ.

**कुतवाल**, पु. =**कोतवाल**.

**कुतिया**, स्त्री. ಹೆಣ್ಣುನಾಯಿ; ಹಾದರಗಿತ್ತಿ.

**कुतुब**, पु. ( **किताब का ब. रूप.** ) ಪುಸ್ತಕಗಳು, ಗ್ರಂಥಗಳು.

**कुतुब**, पु. =**कुत्ब**.

**कुतुबख़ाना**, पु. ಪುಸ್ತಕ ಭಂಡಾರ,

ಪುಸ್ತಕಾಲಯ.
**कुतुबफ़रोश**, पु. ಪುಸ್ತಕ ಮಾರುವವ, ಪುಸ್ತಕ ವಿಕ್ರೇತ, ಪುಸ್ತಕ ವ್ಯಾಪಾರಿ.
**क़ुतुर**, पु. ವೃತ್ತದ ವ್ಯಾಸರೇಖೆ.
**कुत्ता**, पु. ನಾಯಿ, ಶುನಕ, ಕುನ್ನಿ; ತುಪಾಕಿ ಚಾಪಿನ ಕೀಲು, ತುಪಾಕಿಯ ಕುದುರೆ; ತಿರುಡಿ, ಪಿಡಿಚಿರಾಯಿ; ಅಂಟುಪುರುಲೆ. कुत्ते खसी = ತುಚ್ಛ ಕೆಲಸ.
**कुत्ताख़ाना**, पु. ನಾಯಿಯ ಗೂಡು, ನಾಯಿಕೊಟ್ಟಿಗೆ.
**कुत्तामुत्ता**, पु. ನಾಯಿಕೊಡೆ.
**कुत्ती**, स्त्री. ಹೆಣ್ಣುನಾಯಿ; ಹಾದರಗಿತ್ತಿ
**क़ुत्ब**, पु. ಧ್ರುವನಕ್ಷತ್ರ; ಅಕ್ಷ, ಅಚ್ಚು; ಮುಖಂಡ, ನಾಯಕ.
**क़ुत्बनुमा**, पु. ಉತ್ತರಮುಖಿ; ದಿಗ್ದರ್ಶಕ ಯಂತ್ರ.
**कुदकना**, अक्रि. ಕುಣಿ, ಹಾರಾಡು, ಕುಪ್ಪಳಿಸು.
**कुदक्कड़**, वि. ಕುಣಿಯುವವ, ಹಾರಾಡುವವ.
**कुदक्का**, पु. ಕುಣಿದಾಟ, ನೆಗೆದಾಟ.
**क़ुदरत**, स्त्री. ಶಕ್ತಿ; ಸಹಜ ಗುಣ, ಸ್ವಭಾವ, ಪ್ರಕೃತಿ; ದೈವಿಕ ಶಕ್ತಿ; ಮಾಯೆ; ಸೃಷ್ಟಿ.
**क़ुदरती**, वि. ಸ್ವಾಭಾವಿಕವಾದ; ನೈಸರ್ಗಿಕ; ಪ್ರಾಕೃತಿಕ; ದೈವಿಕವಾದ.
**कुदलाना**, अक्रि. ಕುಣಿ, ನೆಗೆ, ಕುಪ್ಪಳಿಸು.
**कुदवाना**, सक्रि. ಕುಣಿಸು, ನೆಗೆಸು, ಹಾರಾಡಿಸು.
**कुदांव**, पु. ದುಸ್ಥಿತಿ, ದುರವಸ್ಥೆ; ವಿಶ್ವಾಸಘಾತ, ಮೋಸ.
**कुदान**, स्त्री. ಕುಣಿತ, ಕುಣಿದಾಟ; ಹಾರಾಟ, ನೆಗೆತ, ಗಂತು.
**कुदाना**, सक्रि. ಕುಣಿಸು, ನೆಗೆಸು; ರೇಗಿಸು.
**कुदाया**, पु. ಒಂದು ಬಗೆ ಪಾರಿವಾಳ.
**कुदारी**, स्त्री. **कुदाल**, पु. **कुदाली**, स्त्री. ಗುದ್ದಲಿ, ಮೊನೆಗುದ್ದಲಿ, ಪಿಕಾಸಿ.
**कुद्दाल**, पु. ಕರಿ ಕೋವಿದಾರ ಮರ; ಮೊನೆಗುದ್ದಲಿ.
**क़ुद्दूस**, वि. ಪವಿತ್ರ, ಪಾವನ.
**क़ुद्दूसियत**, स्त्री. ಪವಿತ್ರತೆ.
**कुद्दव**, पु. ಕೋದ್ರವ, ಹಾರಕದಕ್ಕಿ; ಒಂದು ಕತ್ತಿ ವರಸೆ.
**कुनकुना**, वि. ಉಗುರು ಬೆಚ್ಚಗಾದ, ಕವೋಷ್ಣ.
**कुनना**, सक्रि. ಕೆತ್ತು, ಕೀಸು, ಕೆರೆ.
**कुनबा**, पु. ಪರಿವಾರ, ಕುಟುಂಬ; ಒಕ್ಕಲು; ಕುಲ, ವಂಶ, ಬುಡಕಟ್ಟು.
**कुनबी**, पु. ಕೃಷಿಕ; ಒಂದು ಜಾತಿ ಒಕ್ಕಲಿಗರು.
**कुनवा**, पु. ಪಾತ್ರೆ ಮೊದಲಾದವನ್ನು ತರಣೆ ಹಿಡಿಯುವವ, ಕಡೆಯುವವ.
**कुनह**, स्त्री. ದ್ವೇಷ, ಮತ್ಸರ.
**कुनही**, वि. ದ್ವೇಷಿಸುವವ.
**कुनाई**, स्त्री. ಕೆತ್ತಿದ ಅಥವಾ ಕೆರೆದ ಚೂರು; ಚಕ್ಕೆ ಪುಡಿ, ರಂಪದ ಧೂಳು; ಕೆತ್ತುವಿಕೆ ಅಥವಾ ಕೆರೆಯುವಿಕೆ;

ಕೆತ್ತಿದ ಅಥವಾ ಕೆರೆದ ಕೂಲಿ.

कुनिंद़ा, वि. ಮಾಸುವವ.

कुनीन, स्त्री. ಕೊಯ್ನಾ.

कुनेरा, वि. ಕೆತ್ತುವವ; ಕೆರೆಯುವವ.

कुन्नस, स्त्री. ಪ್ರಾರ್ಥನೆ; ವಿನಂತಿ.

कुप्पा, पु. ಎಣ್ಣೆ ಇಡುವ ತೊಗಲಿನ ಪಾತ್ರೆ, ಚರ್ಮದ ಸಿದ್ದಿಗೆ, ದುಬ್ಬಿ; ಕುಪ್ಪಿ, ಬುಡ್ಡಿ. कुप्पा होना = ಉಬ್ಬು, ಹಿಗ್ಗು; ದಾತಃಹೋಗು; ಸಿಟ್ಟಿಗೇರು.

कुप्पामल, पु. ಕೊಬ್ಬಿದವ, ಟೊಣಪ, ಟೊಣೆಯ, ದುಬ್ಬ.

कुप्पी, स्त्री. ಸಣ್ಣ ಸಿದ್ದಿಗೆ, ಬುದ್ದಲಿ, ಬುದ್ದಣಿಗೆ; ಕುಪ್ಪಿ, ಬುಡ್ಡಿ; ಹಣತೆ.

कुफ़र, कुफ़्र, कुफ़, पु. ಮುಹಮ್ಮದೀಯ ಮತವಲ್ಲದ ಬೇರೆ ಮತ; ಇಸ್ಲಾಂ ಧರ್ಮಕ್ಕೆ ವಿರುದ್ಧವಾದದ್ದು.

कुफ़्ल, पु. ಬೀಗ, ಕೀಲಿ

कुब, कुबुड़, पु. ಗೂನು, ಡುಬ್ಬ; ಹಿಳಿಲು

कुबड़ा, पु. ಗೂನುಳ್ಳವ, ಕುಬ್ಜ, ಗೂನ. वि. ಗೂನುಳ್ಳ; ಬಗ್ಗಿದ, ವಕ್ರ.

कुबड़ी, कुबरी, स्त्री. ಕುಬ್ಜೆ, ಗೂನಿ; ತುದಿಯಲ್ಲಿ ಡೊಂಕಾದ ಸನ್ಯಾಸಿಗಳ ದಂಡ.

कुबेला, पु. ಅವೇಳೆ, ಅಸಮಯ.

कुब्ज, वि. ಗೂನುಳ್ಳವ, ಗೂನ.

कुब्जा, स्त्री. ಗೂನುಬೆನ್ನಿನವಳು, ಕುಬ್ಜೆ, ಗೂನಿ; ಗೂನು; ಎತ್ತಿನ ಭುಜದ ಮೇಲಿನ ಗೋಪುರ, ಹಿಳಿಲು.

कुब्बा, पु. ಗೂನು, ಡೊಂಕು.

कुमक, स्त्री. ಸಹಾಯ, ಒತ್ತಾಸೆ; ಕುಮ್ಮಕು, ನೆರವು; ಆಶ್ರಯ; ಪಾರಪಕ್ಷ.

कुमकी, वि. ಸಹಾಯದ, ಆಶ್ರಯದ. स्त्री. ಆನೆಗಳನ್ನು ಹಿಡಿಯಲು ನೆರವಾಗುವ ಪಳಗಿಸಿದ ಹೆಣ್ಣಾನೆ, ತೋಹಿನ ಹಿಡಿಯಾನೆ, ಒತ್ತಾನೆ.

कुमकुमा, पु. ಗುಲಾಲಿನ ಪುಡಿ ತುಂಬಿಸಿ ಎರಚಾಡಲು ಉಪಯೋಗಿಸುವ ಅರಗಿನ ಡಬ್ಬಿ, ಕುಡಿಕೆ; ಅಲಂಕಾರಕ್ಕಾಗಿ ತೇಲಾಡಿಸುವ ವಿವಿಧ ಬಣ್ಣದ ಗಾಜಿನ ಪೊಳ್ಳು ಗುಂಡುಗಳು, ರಸ ಬುರುಡೆ, ರಸಗುಂಡು; ಚಿಕ್ಕ ಲಾಟೀನು, ದೀಪದ ಬಲ್ಬು.

कुमरिया, पु. ಒಂದು ಬಗೆ ಆನೆ.

कुमरी, स्त्री. ಒಂದು ಪಕ್ಷಿ, ಬಾನಕ್ಕಿ.

कु लाना, अक्रि. = कुम्हलाना.

कुमाच, पु. ಒಂದು ಬಗೆ ರೇಷ್ಮೆ ಬಟ್ಟೆ; ರೊಟ್ಟಿ.

कुमार, पु. ಮಗ, ಕುಮಾರ; ರಾಜಕುಮಾರ; ಯುವರಾಜ; ಅವಿವಾಹಿತ, ಬ್ರಹ್ಮಚಾರಿ.

कुम्मल, पु. ಕನ್ನ. कुम्मल देना = ಕನ್ನ ಹಾಕು.

कुम्मैत, पु. ಕೆಂಗಪ್ಪು ಬಣ್ಣ, ಅರಗಿನ ಬಣ್ಣ; ಅರಗಿನ ಬಣ್ಣದ ಕುದುರೆ. आठों गांठ कुम्मैत = ಸರ್ವಾಂಗ ಸಂಪನ್ನ; ಚತುರ, ಗಟ್ಟಿಗ.

कुम्हड़ा, पु. ಸಿಹಿ ಕುಂಬಳಕಾಯಿ. कुम्हड़े की बतिया = ಕುಂಬಳಕಾಯಿ ಹೀಚು; ಶಕ್ತಿಯಿಲ್ಲದವ, ಪುಳಿಚಾರು.

कुम्हड़ौरी, स्त्री. ಕುಂಬಳಕಾಯಿ ಸಂಡಿಗೆ
कुम्हलाना, अक्रि. ಬಾಡು, ಸೊರಗು, ಬಳಲು; ಒಣಗು; ಕಳೆಗುಂದು.
कुम्हार, पु. ಕುಂಬಾರ.
कुम्हारनी, कुम्हारिन, स्त्री. ಕುಂಬಾರನ ಹೆಂಡತಿ, ಕುಂಬಾರಗಿತ್ತಿ.
कुम्हारी, स्त्री. ಕುಂಬಾರಗಿತ್ತಿ; ಕುಂಬಾರ ಹುಳು.
कुरंग, पु. ಜಿಂಕೆ, ಹುಲ್ಲೆ. वि. ವಿವರ್ಣ.
कुरंड, पु. ಕುರುವಿಂದ ಕಲ್ಲು, ಸಾಣೆ ಕಲ್ಲು, ಮಸೆಗಲ್ಲು.
कुरकुरा, वि. ಪೆಡಸಾದ, ಗರಗರವಾದ.
कुरकुरी, स्त्री. ಹೊಟ್ಟೆಯಲ್ಲಿನ ಶಬ್ದ, ಗುಳುಕು; ಎಳೆಯ ಎಲುಬು, ಕೋಮಲಾಸ್ಥಿ.
कुरता, पु. ಒಳ ಅಂಗಿ, ಜುಬ್ಬ; ಕುಡತ, "ಷರಟು".
कुरती, स्त्री. ರವಿಕೆ, ಕುಪ್ಪಸ.
कुरपान, पु. ಕೃಪಾಣ, ಚಿಕ್ಕ ಕತ್ತಿ; ಬಾಕು; ಸಿಕ್ಖರು ಯಾವಾಗಲೂ ಧರಿಸುತ್ತಿರುವ ಬಾಕು.
क़ुरब, पु. ಹತ್ತಿರ, ನೆರೆ, ಸಮೀಪ, ಬಳಿ; ಸಂಬಂಧ. क़ुरब-ओ-जवार = ನೆರೆಹೊರೆ, ಅಕ್ಕಪಕ್ಕ.
क़ुरबत, स्त्री. ಸಾಮೀಪ್ಯ; ಬಾಂಧವ್ಯ.
क़ुरबान, पु. ಬಲಿ, ಬಲಿದಾನ; ಯಜ್ಞ; ಆಹುತಿ.
क़ुरबानगाह, स्त्री. ಬಲಿಪೀಠ.
क़ुरबानी, स्त्री. ಬಲಿ; ಯಜ್ಞ ಪಶು; ಆಹುತಿ.
कुरमी, पु. ರೈತ, ಒಕ್ಕಲಿಗ.
कुररा, पु. कुररी, स्त्री. ಚಿಟಕಳಿ ಹಕ್ಕಿ.
कुरवना, सक्रि. ರಾಶಿಮಾಡು, ಒಟ್ಟು.
कुरसी, स्त्री. = कुर्सी.
कुरह, कुरा, पु. ಕೀವುಗಟ್ಟಿದ ಹುಣ್ಣು; ಬೇಲಿ.
क़ुरा, पु. ಪಗಡೆ, ದಾಳ; ಗರ
क़ुरान, पु. ಮುಸಲ್ಮಾನರ ಧರ್ಮಗ್ರಂಥ. क़ुरान उठाना = ಪ್ರಮಾಣ ಮಾಡು, ಆಣೆಯಿಡು.
क़ुराय, पु. ಕೊರಕಲು, ಕವುರಿ.
कुराह, स्त्री. ಕುಮಾರ್ಗ, ದುರ್ಮಾರ್ಗ.
कुराही, वि. ದುರಾಚಾರಿ.
कुरिया, स्त्री. ಗುಡಿಸಲು, ಕುಟಿ; ಕುಗ್ರಾಮ.
कुरियाल, स्त्री. = कुर्याल.
कुरी, स्त्री. ಮಣ್ಣು ದಿಣ್ಣೆ, ದಿಬ್ಬ. ತೆವರು; ಚೂರು, ತುಂಡು; ಒಂದು ಬಗೆ ಹುಲ್ಲು; ಕುಲ, ವಂಶ.
कुरुई, स्त्री. ಪುಟ್ಟಿ, ಬುಟ್ಟಿ, ಸಂಬಳಿಗೆ.
कुरुज, पु. ಪಕ್ಷಿಗಳ ಗರಿ ಉದುರಿಸುವಿಕೆ
कुरूप, वि. ಅಂದಗೆಟ್ಟ, ಕುರೂಪಿ.
कुरूपता, स्त्री. ಕೆಟ್ಟ ರೂಪದಿಂದಿರುವಿಕೆ, ಅಂದಗೇಡು, ಕುರೂಪತೆ.
कुरूपी, वि. ಕೆಟ್ಟ ರೂಪದವ, ಅಂದಗೇಡಿ.
कुरेदना, सक्रि. ಕದಡು, ಕೆದರು; ಕೆರೆ, ಹೆರೆ; ದೂಡು, ದಬ್ಬು.
कुरेदनी, स्त्री. ಹೆರೆ ಮಣೆ.
कुरेलना, सक्रि. ನೂಕು, ದೂಡು

ತುರುಕು.

**कुैरया**, स्त्री. ಇಂದ್ರಜವಿಯ ಗಿಡ, ಹೆ ಮ್ಮಿಷ್ಟಿಗೆ ಗಿಡ, ಕೊಡಸಿಗೆ, ಕುಟಜ.

**कुर्क़**, वि. ಜಪ್ತಿಯಾದ, ಮುಟ್ಟುಗೋಲಾದ. कुर्क़ करना = ಜಪ್ತಿ ಮಾಡು, ಮುಟ್ಟುಗೋಲು ಹಾಕು.

**कुर्क़-अमीन**, पु. ಜಪ್ತಿ ಮಾಡುವ ಉದ್ಯೋಗಸ್ಥ, ಅಮೀನಾ.

**कुर्क़-नामा**, पु. ಜಪ್ತಿಯ ಆಜ್ಞೆ, ಜಪ್ತಿಯ ವಾರಂಟು.

**कुर्क़ी**, स्त्री. ಜಪ್ತಿ, ಮುಟ್ಟುಗೋಲು.

**कुर्मी**, पु. = कुनबी.

**कुर्याल**, स्त्री. ಪಕ್ಷಿಯು ತನ್ನ ಗೂಡಿನಲ್ಲಿ ಸುಖವಾಗಿರುವಿಕೆ; ನೆಮ್ಮದಿಯಾಗಿರುವಿಕೆ, ಹಾಯಾಗಿರುವಿಕೆ.

**कुर्री**, स्त्री. ಎಳೆಯ ಎಲುಬು, ಕೋಮಲಾಸ್ಥಿ.

**कुर्सत**, पु. ಶೋಧಿಸದ ಸಕ್ಕರೆ. ನಾಟಿ ಸಕ್ಕರೆ.

**कुर्सी**, स्त्री. ಕುರ್ಚಿ, ನಾಗಾಲಿ; ಗದ್ದುಗೆ, ಸಿಂಹಾಸನ, ಪೀಠ; ಗದ್ದಿಗೆ ಕಲ್ಲು, ತಳಹದಿ, ಪಾಯ; ವಂಶಾವಳಿ, ಪೀಳಿಗೆ. कुर्सीनशीन = ಸಿಂಹಾಸನಾರೂಢ.

**कुर्सीनामा**, पु. ವಂಶವೃಕ್ಷ.

**कुलंग**, पु. ಕೊಕ್ಕರೆ.

**कुल**, पु. ಕುಲ, ವಂಶ; ಬುಡಕಟ್ಟು; ಜಾತಿ, ಸಮುದಾಯ, ಬಂಧುಬಳಗ; ಒಟ್ಟು; ಮೊತ್ತ. वि. ಎಲ್ಲಾ, ಪೂರಾ, ಒಟ್ಟು, ಒಟ್ಟಾರೆ. कुलजमा = ಎಲ್ಲಾ ಕೂಡಿ, ಒಟ್ಟುಗೂಡಿ.

**कुलकना**, अक्रि. ಕಿಲಕಿಲನೆ ನಗು, ಕೆಲೆ.

**कुलकुलाना**, अक्रि. ಕುಲುಕುಲು ಶಬ್ದ ಮಾಡು; ತುರಿಸು, ನವೆಯಾಗು.

**कुलकुली**, स्त्री. ನವೆ, ತುರಿ, ತೀಟೆ.

**कुलचा**, पु. ಮೂಲಧನ, ಬಂಡವಾಳ; ಒಂದು ಬಗೆ ಚಪಾತಿ.

**कुलट**, वि. ವ್ಯಭಿಚಾರಿ, ಜಾರ.

**कुलटा**, स्त्री. ವ್ಯಭಿಚಾರಿಣಿ, ಜಾರೆ; ಹಾದರಗಿತ್ತಿ, ಬೊಡ್ಡಿ.

**कुलटी**, स्त्री. ಇಲಿ ಪಾಷಾಣ.

**कुलत्तन**, वि. ಕೆಟ್ಟ, ದುಷ್ಟ.

**कुलथी**, स्त्री. ಹುರುಳಿ, ಹುಲುವರ.

**कुलन**, स्त्री. ನವೆ, ತುರಿ.

**कुलना**, अक्रि. ತುರಿ, ನವೆಯಾಗು.

**कुलफ़त**, स्त्री. ದುಃಖ, ವ್ಯಥೆ, ವ್ಯಸನ.

**कुलफ़ा**, पु. ಒಂದು ಬಗೆ ಬಚ್ಚಲೆ ಸೊಪ್ಪು, ಸುಚ್ಚುಗೋಳಿ ಸೊಪ್ಪು.

**कुलफ़ी**, स्त्री. ಹುಕ್ಕದ ನಾಳಕ್ಕೆ ಸೇರಿಸುವ ತಾಮ್ರದ ನಳಿಗೆ; ಮಂಜುಗಡ್ಡೆಯಿಂದ ಹೆಪ್ಪುಗಟ್ಟಿಸುವುದಕ್ಕೆ ಹಾಲನ್ನು ತುಂಬುವ ತಗಡಿನ ಕೊಳವೆ; ಈ ಕೊಳವೆಯಲ್ಲಿಟ್ಟು (ನೀರ್ಗಲ್ಲು) ಮಂಜುಗಡ್ಡೆಯಿಂದ ಹೆಪ್ಪುಗಟ್ಟಿಸಿದ ಹಾಲುಖೋವಾ, ಐಸ್‌ಕ್ರೀಮ್.

**कुलबा**, पु. ಮನೆ; ಗುಡಿಸಲು.

**कुलबुला**, पु. ಹುಳುಗಳ ಹಾರಾಡುವಿಕೆ, ಮುಲುಗುಟ್ಟುವಿಕೆ.

**कुलबुलाना**, अक्रि. ಹಾರಾಡು, ಮುಲುಗುಟ್ಟು, ಒದ್ದಾಡು, ಅಕ್ಕಳಿಸು (ಹೊಟ್ಟೆ).

कुलबुलाहट, स्त्री. ಹಾರಾಡುವಿಕೆ, ಮುಲುಗುಟ್ಟುವಿಕೆ.

कुलबोड़, कुलबोर, कुलबोरन, वि. ಕುಲವನ್ನು ಮುಳುಗಿಸುವವ, ಕುಲ ಗೇಡಿ.

कुलमा, पु. ಮಾಂಸದ ಪಳದ್ಯ.

कुलह, स्त्री कुलहा, पु. ಟೋಪಿ, ಕುಲಾವಿ; ಕಿರೀಟ; ಕಣ್ಣುಪಟ್ಟಿ.

कुलही, स्त्री. ಕಿವಿಗಳನ್ನೂ ಮುಚ್ಚುವ ಮಕ್ಕಳ ಕುಲಾವಿ.

कुलांगार, पु. ಕುಲಗೇಡಿ.

कुलांच, स्त्री. ಕುಣಿದಾಟ, ನೆಗೆತ; ನಾಗಾಲೋಟ.

कुलाग़, पु. ಕಾಡು ಕಾಗೆ.

कुलाबा, पु. ನಾಗವಾಸ, ಕೊಂಡಿ; ತಿರುಗಣಿ ಮೊಳೆ; ಬಿಜಾಗರಿ; ಮೋರಿ, ಚರಂಡಿ.

कुलाल, पु. ಕುಂಬಾರ; ಗೂಬೆ.

कुलालचक्र, पु. ಕುಂಬಾರನ ತಿಗುರಿ.

कुलाह, स्त्री. ಅಫ್ಘಾನಿಸ್ಥಾನದವರು ಧರಿಸುವ ಟೋಪಿ, ಕುಲಾವಿ; ಒಂದು ಬಗೆ ಕುದುರೆ.

कुली, पु. ಕೂಲಿಯವ, ಕೂಲಿಗಾರ, ಹಮಾಲ. कुली कबाड़ी = ಕೀಳು ಜಾತಿಯ ಜನರು.

कुलेल, स्त्री. ಆಟ, ಕ್ರೀಡೆ.

कुल्ट्ट, पु. = कूट्ट.

कुलफ़, पु. ಬೀಗ, ಕೀಲಿ.

कुलफ़ी, स्त्री. = कुलफ़ी.

कुल्या, स्त्री. ಕಾಲುವೆ, ನಾಲಾ, ತೋಡು

कुल्ला, पु. कुल्ली, स्त्री. ಬಾಯಿ ಮು[illegible]ಕ್ಕಳಿಸುವುದು; ಒಂದು ಬಗೆ ಕುದುರೆ; ಗುಂಗುರು ಕೂದಲು, ಕುರುಳು.

कुल्लियात, स्त्री. ಗ್ರಂಥಕರ್ತನ ಸಮಸ್ತ ಲೇಖನಗಳು, ಕೃತಿಗಳ ಸಂಗ್ರಹ.

कुल्हड़, पु. ಮಣ್ಣಿನ ಚಂಬು, ಹೂಜಿ; ಒಂದು ಬಗೆ ಬಾಣಬಿರುಸು, 'ಕುಡಿಕೆ ಬಾಣ.

कुल्हाड़ा, पु. कुल्हाड़ी, स्त्री. ಕೊಡಲಿ.

कुल्हिया, स्त्री. ಮಣ್ಣಿನ ಚಂಬು, ಕು[illegible]ಡಿಕೆ. कुल्हिया में गुड़ फोड़ना = ಗುಪ್ತವಾಗಿ ಒಂದು ಕೆಲಸ ನಡೆಸು. कुल्हिया लगाना = ಬಟ್ಟಲು ಕಟ್ಟಿ[illegible] ರಕ್ತ ತೆಗೆ.

कुवां, पु. = कुआं.

कुवार, पु. ಆಶ್ವೀಜ ಮಾಸ.

कुवारी, स्त्री. ಆಶ್ವೀಜ ಮಾಸದಲ್ಲಿ ಕೊ[illegible]ಯ್ಯುವ ಬೆಳೆ, ಕಾರು ಬೆಳೆ.

कुव्वत, स्त्री. ಶಕ್ತಿ, ಬಲ, ಸಾಮರ್ಥ್ಯ.

कुश, पु. ದರ್ಭೆ.

कुशल, वि. ದಕ್ಷ, ಪ್ರವೀಣ; ಕ್ಷೇಮ, ಕುಶಲ.

कुशलता, स्त्री. ದಕ್ಷತೆ, ಸಾಮರ್ಥ್ಯ.

कुशा, वि. ಬೀರುವ, ವಿಸ್ತರಿಸುವ.

कुशादगी, स्त्री. ವಿಸ್ತಾರ, ವೈಶಾಲ್ಯ.

कुशादा, वि. ವಿಸ್ತೃತವಾದ, ತೆರೆದ.

कुश्तमकुश्ता, पु. ಮಲ್ಲಕಾಳಗ, ಕುಸ್ತಿ.

कुश्ता, पु. ಭಸ್ಮ; ಬೂದಿ.

कुश्ती, स्त्री. ಕುಸ್ತಿ, ಮಲ್ಲಯುದ್ಧ.

कुश्तीबाज़, पु. ಜಟ್ಟಿ, ಪೈಲವಾನ

ಮಲ್ಲ.
**कुसंग**, पु. ದುಷ್ಟ ಸಹವಾಸ.
**कुस, कुसी**, स्त्री. ನೇಗಿಲಿನ ಮೊಳೆ, ಗುಳ.
**कुसली**, स्त्री. ಕರಿಗಡಬು, ಕರ್ಜಿ ಕಾಯಿ; ಮಾವಿನ ಓಟೆ, ಗೊರಟು.
**कुसवारी**, स्त्री ರೇಷ್ಮೆಹುಳು.
**कुसाइत**, स्त्री. ಕೆಟ್ಟವೇಳೆ, ಅಸಮಯ.
**कुसीद**, पु. ಬಡ್ಡಿ; ಬಡ್ಡಿಗೆ ಕೊಟ್ಟಹಣ.
**कुसीदा, कुसीदिक**, वि. ಲೇವಾದೇವಿ ಮಾಡುವವ, ಕುಸೀದಗಾರ.
**कुसुंभा**, पु. ಕುಸುಂಬೆ ಬಣ್ಣ; ಭಂಗಿ ಯ ಕಷಾಯ.
**कुसुंभी**, पु. ಕುಸುಂಬೆ ಬಣ್ಣ ಹಾಕಿದ ಬಟ್ಟೆ.
**कुसुम**, पु. ಪುಷ್ಪ, ಹೂವು; ಕುಸುಂಬೆ.
**कुसूफ़**, पु. ಗ್ರಹಣ; ಗ್ರಹಚಾರ.
**कुसूर**, पु. =क़सूर.
**कुहक**, पु. ಮೋಸ, ಬೂಟಾಟಿಕೆ; ಜಾಲ, ಗಾರುಡಿ ವಿದ್ಯೆ; ಮೋಸಗಾರ, ಜಾಲ ಗಾರ; ಕೋಳಿಯ ಕೂಗು.
**कुहकना**, अक्रि. ಚಿಲಿಪಿಲಿಗುಟ್ಟು, ಉಲಿ
**कुहनी**, स्त्री. ಮೊಣಕೈ, ಕಫೋಣಿ.
**कुहर**, पु. ಗವಿ, ಗುಹೆ; ಕೊರಕಲು, ಕಮರಿ; ಗಂಟಲ ದ್ವಾರ; ಮಂಜು.
**कुहरा**, पु. ಮಂಜು, ಇಬ್ಬನಿ.
**कुहराम**, पु. ಅಳು, ವಿಲಾಪ; ಗೋ ಳಾಟ, ಬೊಂಬ್ಡಿ; ಗದ್ದಲ.
**कुहाना**, अक्रि. ಸಿಟ್ಟಾಗು, ರೇಗು.
**कुहासा**, पु. ಮಂಜು, ಇಬ್ಬನಿ; ಅಪ ಹಾಸ.
**कुही**, स्त्री. ಒಂದು ಬಗೆ ಗಿಡಗ; ಟಾ ಕಣ, ತಟ್ಟು.
**कुहुक**, स्त्री. ಕಲಕಲ ಧ್ವನಿ, ಪಕ್ಷಿಗಳ ಚಿಲಿಪಿಲಿ, ಕೂಜನ.
**कुहुकना**, अक्रि. ಕೋಗಿಲೆಯಂತೆ ಕೂಗು; ಚಿಲಿಪಿಲಿಗುಟ್ಟು, ಉಲಿ.
**कूँकूँ**, पु. ನಾಯಿಮರಿಯ ಕೀಚುಧ್ವನಿ.
**कूँच**, पु. ಗುಲಗಂಜಿ; ಹಿಮ್ಮಡಿ ನರ.
**कूँचना**, सक्रि. ಇರಿ, ತಿವಿ; ಕಚ್ಚು; ಅಗಿ.
**कूँचा**, पु. ಕಸಬರಿಕೆ, ಬಲರ್, ಬೀದಿ.
**कूँची**, स्त्री. ಸಣ್ಣ ಬಲರ್; ತೂಲಿಕೆ, ಕೂರ್ಚ, "ಬ್ರಷ್"; ಕುಂಚ.
**कूंज**, पु. ಕ್ರೌಂಚ ಪಕ್ಷಿ, ನೇರೆ ಹಕ್ಕಿ.
**कूँड़**, पु. ಶಿರಸ್ತ್ರಾಣ, ಕವಚ; ನೀರು ಸೇದುವ ಬಾನೆ, ಏತದ ಬಾನೆ, ಮಟ್ಟೆ; ನೇಗಿಲ ಸಾಲು.
**कूँडा**, पु. ಹರವಿ, ಬಾನೆ; ಗಿಡಗಳನ್ನಿ ಡುವ ಕುಂಡ; ಕಲ್ಲು ಅಥವಾ ಮರದ ತೊಟ್ಟಿ, ಮರಿಗೆ; ಗುಳುಪು.
**कूँडी**, स्त्री. ಕಲ್ಲಿನ ತೊಟ್ಟಿ, ಕಲ್ಲು ದೋಣಿ.
**कूँथना**, अक्रि. ನರಳು, ಮುಲುಕು, ಮುಕ್ಕಿರಿ; (ಪಾರಿವಾಳದಂತೆ)ಕೂಗು. सक्रि. ತಟ್ಟು, ಬಡಿ.
**कूँदला**, पु. ಗುಡಾರ, ಡೇರೆ.
**कू**, स्त्री. ಗಲ್ಲಿ, ಬೀದಿ.
**कूआं**, पु. =कुआं.
**कूईं**, स्त्री. ನೈದಿಲೆ.

**कूईरी,** स्त्री. ಕಾಲ್ಪಿಲ್ಲಿ.
**कूक,** पु. ಕೋಗಿಲೆಯ ಕೂಗು, ಕೂಜನ, ಬಗ್ಗಣೆ; ಗಡಿಯಾರ ಮೊದಲಾದವುಗಳಿಗೆ ಕೀಲಿ ಕೊಡುವುದು.
**कूकना,** सक्रि. ಗಡಿಯಾರಕ್ಕೆ ಕೀಲಿ ಕೊಡು; ಬಿಗಿಸು. अक्रि. ಚಿಲಿಪಿಲಿಗುಟ್ಟು, ಕೂಗು (ಕೋಗಿಲೆ), ಕೇಗು.
**कूकर,** पु. **कूकरी,** स्त्री. ನಾಯಿ.
**कूच,** पु. ಪ್ರಯಾಣ, ಪಯಣ. ಪ್ರವಾಸ. कूच बोलना = ಪಯಣ ಹೊರಡು.
**कूचा,** पु. ಸಂದು, ಗಲ್ಲಿ, ಓಣಿ; ಬಲರ್.
**कूचागर्द,** पु. ಗಲ್ಲಿ ತಿರುಗುವವ, ತಿರುಕ
**कूचागर्दी,** स्त्री. ಗಲ್ಲಿ ತಿರುಗುವುದು; ತಿರುಗಾಟ, ತಿರುಕತನ.
**कूज़,** पु. ಗೂನು, ಡುಬ್ಬ.
**कूजन,** पु. ಕೋಗಿಲೆಯ ಕೂಗು.
**कूज़-पुश्त,** वि. ಗೂನುಬೆನ್ನಿನವ.
**कूजना,** अक्रि. ಮಧುರಧ್ವನಿ ಮಾಡು
**कूज़ा,** पु. ಹೂಜಿ, ಕೂಜ; ಕಲ್ಲುಸಕ್ಕರೆ.
**कूट,** पु. ಪರ್ವತದ ಶಿಖರ; ಕೊಂಬು; ಧಾನ್ಯದ ರಾಶಿ; ಗುಟ್ಟು, ರಹಸ್ಯ; ಗೂಢಾರ್ಥ; ಮೋಸ, ಕಪಟ; ಸುಳ್ಳು. स्त्री. ಬಡಿಯುವಿಕೆ; ಕುಟ್ಟುವಿಕೆ; ಇಡಿಯುವಿಕೆ.
**कूटता,** स्त्री. ಮೋಸ, ಠಕ್ಕು; ಕಷ್ಟ.
**कूटना,** सक्रि. ಕುಟ್ಟು, ಇಡಿ, ಕುಮ್ಮು; ಜಡಿ, ಬಡಿ; ಕಲ್ಲು ಮುಳ್ಳು ಹುಯ್ಯು, ಕಲ್ಲು ಕಟಿ. कूट कूटकर भरना = ಇಡಿದು ತುಂಬು, ಅಡಚಿ ತುಂಬು.
**कूटनीति,** स्त्री. ಕಪಟಾಚಾರ, ಮೋಸದ ನಡವಳಿಕೆ.
**कूटनीतिज्ञ,** पु. ಕಪಟತಂತ್ರವನ್ನರಿತವ; ಮೋಸದಿಂದ ಕಾರ್ಯ ಸಾಧಿಸಿಕೊಳ್ಳುವವ.
**कूटी,** स्त्री. ಪರಿಹಾಸ, ಕೊರಚಾಟ.
**कूट्,** पु. ಒಂದು ಬಗೆ ಧಾನ್ಯ.
**कूड़ा,** पु. ಕಸ, ಕಡ್ಡಿ, ತಿಪ್ಪೆ; ನಿರರ್ಥಕ ವಸ್ತು. कूड़ा कचरा, कूड़ा करकट = ಕಸ ಕಡ್ಡಿ, ಕಸಕಂಟಿ, ಸತ್ತೆ ಸದೆ.
**कूड़ाख़ाना,** पु. ತಿಪ್ಪೆ ಗುಂಡಿ.
**कूढ़,** वि. ದಡ್ಡ, ಮಂಕ. पु. ಕೂರಿಗೆ ಹೊಡೆಯುವಿಕೆ, ಬಿತ್ತನೆ.
**कूढ़-मग़ज़,** वि. ಮಂಕ, ಬೆಪ್ಪ.
**कूत,** पु. ಅಳತೆ, ಅಂದಾಜು; ಪೈಮಾಷಿ, ಬೆಲೆ ಕಟ್ಟುವಿಕೆ; ಕಣದಾಲು.
**कूतक,** पु. ದೊಣ್ಣೆ, ದಡಿ.
**कूतना,** सक्रि. ಅಂದಾಜು ಹಾಕು; ಪೈಮಾಷಿ ಮಾಡು; ಬೆಲೆ ಕಟ್ಟು.
**कूद,** स्त्री. ಕುಣಿದಾಟ, ಕುಣಿತ, ನೆಗೆತ. कूद फांद = ನೆಗೆತ, ಹಾರಾಟ.
**कूदना,** सक्रि. ಉಲ್ಲಂಘಿಸು. अक्रि. ಕುಣಿ, ಜಿಗಿ, ಚಿಮ್ಮು; ಧುಮುಕು; ಹಾರಾಡು; ಆನಂದಪಡು. कूदना फांदना = ಸಂತೋಷದಿಂದ ಹಾರಾಡು; ನೆಗೆದು ಬೀಳು.
**कूप,** पु. ಬಾವಿ, ಕೂಪ.
**कूबड़,** पु. ಗೂನು, ಡುಬ್ಬ; ಡೊಂಕು.
**कूमांछ,** पु. ಒಂದು ಬಗೆ ರೊಟ್ಟಿ.
**कूम्हल,** स्त्री. ಕನ್ನ; ಕನ್ನಗಳ್ಳ. कूम्हल देना = ಕನ್ನಹಾಕು.

**क्रूर**, वि. ಕ್ರೂರ; ಒರಟು, ಒಡ್ಡು.
**क्रूरनी**, स्त्री. ದೊಡ್ಡ ಸೌಟು.
**क्रूरा**, पु. ರಾಶಿ, ಕುಪ್ಪೆ; ಭಾಗ, ಹಿಸ್ಸೆ.
**कूल**, पु. ದಡ, ತೀರ; ಹೊಂಡ, ಕೊಳ; ಕಾಲುವೆ; ಸೇನೆಯ ಹಿಂಭಾಗ.
**कूली**, पु. ಕೂಲಿಗಾರ, ಕೂಲಿಯುವ, ಹಮಾಲ.
**कूल्ह**, पु. ಟೊಂಕ; ನಿತಂಬ, ಪಿರ್ರೆ.
**कूवत**, स्त्री. ಶಕ್ತಿ, ಬಲ.
**कूवर**, पु. ರಥದ ಮುಂಭಾಗ; ಸಾರಥಿಯ ಪೀಠ.
**कृत**, वि. ಮಾಡಲ್ಪಟ್ಟ, ಮಾಡಿದ.
**कृतघ्न**, वि. ಮಾಡಿದ ಉಪಕಾರವನ್ನು ಸ್ಮರಿಸದವ.
**कृतज्ञ**, वि. ಮಾಡಿದ ಉಪಕಾರವನ್ನು ಸ್ಮರಿಸುವವ; ಆಭಾರಿ.
**कृतज्ञता**, स्त्री. ಮಾಡಿದ ಉಪಕಾರವನ್ನು ನೆನಸುವಿಕೆ, ಉಪಕಾರ ಸ್ಮರಣೆ.
**कृपण**, वि. ಜಿಪುಣ, ಲೋಭಿ.
**कृपया**, क्रिवि. ದಯೆಯಿಂದ, ದಯವಿಟ್ಟು.
**कृपा**, स्त्री. ಕೃಪೆ, ದಯೆ.
**कृपाण**, पु. ಚಿಕ್ಕ ಕತ್ತಿ, ಬಾಕು, ಸಿಕ್ಖರು ಯಾವಾಗಲೂ ಧರಿಸುತ್ತಿರುವ ಬಾಕು, ಕುರ್ಪಾನ್.
**कृपाल, कृपालु**, वि. ಕೃಪೆ ತೋರುವವ, ಕೃಪಾಳು, ದಯಾಳು.
**कृमि**, पु. ಹುಳು, ಕ್ರಿಮಿ, ಕೀಟ.
**कृषि**, स्त्री. ಕೃಷಿ, ಆರಂಬ, ಬೇಸಾಯ.
**केंचुआ**, पु. ಮಣ್ಣು ಹುಳು, ಮಣ್ಣುಣಿ; ಹೊಟ್ಟೆಯಲ್ಲಿನ ಜಂತು ಹುಳು.
**केंचुली**, स्त्री. ಹಾವಿನ ಪರೆ, ಹೆರೆ, ಸೋಲೆ.
**केंडा**, पु. ಮಾದರಿ, ಪಡಿಯಚ್ಚು.
**केंद्र**, पु. = केन्द्र.
**के**, प्रत्य. ಷಷ್ಠೀ ವಿಭಕ್ತಿ ಪ್ರತ್ಯಯ (ಬಹುವಚನ ರೂಪ).
**केकड़ा**, पु. ಏಡಿಕಾಯಿ, ಏಡಿ, ನಳ್ಳಿ.
**केकर**, वि. ಮೆಳ್ಳೆಗಣ್ಣಿನವ.
**केका**, स्त्री. ನವಿಲಿನ ಕೂಗು, ಕೇಗು.
**केकी**, पु. ನವಿಲು, ಮಯೂರ.
**केचित**, वि. ಕೆಲವು, ಕೊಂಚ.
**केड़ा**, पु. ಚಿಗುರು, ಕೊನರು.
**केतकी**, स्त्री. ತಾಳೆ ಹೂವು, ಕೇತಗೆ.
**केतना, केता**, वि. ಎಷ್ಟು ?
**केतली**, स्त्री. ಹಿಡಿಯುಳ್ಳ ಸಣ್ಣ ಕಡಾಯಿ, "ಕೆಟಲು".
**केन्द्र**, पु. ಮಧ್ಯ, ನಡು; ಮಧ್ಯಬಿಂದು; ನಾಭಿ.
**केन्द्रस्थान**, पु. ಕೇಂದ್ರವಾಗಿರುವ ಸ್ಥಳ; ನಡು ಪ್ರದೇಶ, ಮಧ್ಯಸ್ಥಾನ, ಮಧ್ಯರಾಷ್ಟ್ರ.
**केराना**, पु. = किराना.
**केरानी**, पु. ಚಟ್ಟಿಗಾರ, "ಆಂಗ್ಲೋ ಇಂಡಿಯನ್", ಚೊಟ್ಟಿ.
**केराव**, पु. ಬಟಾಣಿ.
**केरी**, स्त्री. ಮಾವಿನ ಹೀಚು.
**केलन**, स्त्री. ಸೊಸೆ.
**केला**, पु. ಬಾಳೆ, ಬಾಳೆ ಹಣ್ಣು.
**केलि, केली**, स्त्री. ಚಲ್ಲಾಟ, ಚಕ್ಕಂದ;

ರತಿ ಕ್ರೀಡೆ.
**केवका**, पु. ಬಾಣಂತಿ ಔಷಧ.
**केवट**, पु. ಅಂಬಿಗ, ಓಡಗಾರ.
**केवड़ई**, वि. ತಾಳೆ ಹೂ ಬಣ್ಣದ.
**केवड़ा**, पु. ಬಿಳೀ ತಾಳೆ ಹೂವು; ತಾಳೆ ಹೂವಿನ ಆಸವ.
**केवल**, वि. ಕೇವಲ, ಮಾತ್ರ, ಬರಿಯ.
**केवांच**, स्त्री. =कौंच.
**केवा**, पु. ತಾವರೆ; ತಾಳೆ ಹೂವು, ಕೇದಗೆ; ನೆಪ, ವ್ಯಾಜ.
**केवाड़**, पु. =किवाड़.
**केश**, पु. ಕೂದಲು, ಜುಟ್ಟು.
**केशरी**, पु. ಸಿಂಹ.
**केशाकेशी**, स्त्री. ಜುಟ್ಟುಹಿಡಿದು ಜಗಳ ವಾಡುವಿಕೆ, ಕೇಶಾಕೇಶಿ.
**केसर**, पु. ಹೂವಿನೊಳಗಿನ ಸಣ್ಣ ಎಳೆ, ಹೂವಿನ ರೇಕು, ಕೇಸರ ತಂತು; ಕುಂಕುಮದ ಹೂ, ಕೇಸರಿ; ಸಿಂಹ ಅಥವಾ ಕುದುರೆಯ ಕುತ್ತಿಗೆಯ ಮೇಲಿನ ಕೂದಲು, ಕೇಸರ; ಜೂಗು; . ನಾಗ ಕೇಸರ ಗಿಡ.
**केसरिया**, वि. ಕೇಸರಿ ಬಣ್ಣದ, ಹಳದಿ; ಕೇಸರಿ ಮಿಶ್ರಿತವಾದ.
**केसरी**, **केहरी**, पु. ಸಿಂಹ; ಕುದುರೆ.
**केसारी**, स्त्री. ಒಂದು ಬಗೆ ಬಟಾಣಿ.
**केसू**, पु. ಪಲಾಶ, ಮುತ್ತುಗ.
**केहू**, सर्व. ಯಾವುದೋ, ಯಾರೋ.
**कैंचा**, वि. ಮೆಳ್ಳೆಗಣ್ಣಿನವ, ಮಾಲುಗಣ್ಣಿನವ. पु. ಗಂಡುಗತ್ತರಿ.
**कैंची**, स्त्री. ಕತ್ತರಿ; ಅಡ್ಡಗತ್ತರಿ.

**कैंडा**, पु. ಮಾನ, ಪ್ರಮಾಣ, ಅಳತೆ, "ಸ್ಕೇಲು"; ಚಾತುರ್ಯ, ತಂತ್ರ.
**कै**, वि. ಎಷ್ಟು, ಏನು. अव्य. ಅಥವಾ
**क़ै**, स्त्री. ವಾಕರಿಕೆ, ವಾಂತಿ, ಕಾರಿಕೆ
**क़ैतून**, स्त्री. ಸರಿಗೆಯಂಚು, ಗೋಟು, ನಕ್ಕಿ.
**कैथा**, पु. ಬೇಲದ ಹಣ್ಣು.
**कैथिन**, स्त्री. कायस्थ का स्त्री. रू
**क़ैद**, स्त्री. ಕೈದು, ದಸ್ತಗಿರಿ; ಬಂಧನ, ಕಾರಾವಾಸ; ಸಜಾ; ಪ್ರತಿಬಂಧ, ಕಟ್ಟು, ನಿರ್ಬಂಧ. क़ैद सख़्त = ಕಠಿಣ ಸಜಾ. क़ैद महज़ = ಸಾದಾ ಸಜಾ.
**क़ैदक**, स्त्री. ಕಾಗದ ಪತ್ರಗಳ ಕಟ್ಟು. "ಫೈಲ್".
**क़ैदख़ाना**, पु. ಸೆರೆಮನೆ, ಕಾರಾಗೃಹ
**क़ैदी**, पु. ಕೈದಿ, ಬಂದೀವಾನ, ಸೆ ಯಾಳು; ಸಜಾ ಹೊಂದಿದವ.
**कैन**, स्त्री. ಬಿದಿರಿನ ರೆಂಬೆ.
**कैफ़**, पु. ಮದ, ಮತ್ತು, ಅಮಲು ಮಾದಕ ಪದಾರ್ಥ.
**कैफ़ियत**, स्त्री. ವೃತ್ತಾಂತ, ವಿವ ವರ್ಣನೆ; ಪರಿಸ್ಥಿತಿ; ಆಶ್ಚರ್ಯಕ ವಾದ ದೃಶ್ಯ ಅಥವಾ ಘಟನೆ, ಮರ; ಪರಿ, ವಿಧ, ರೀತಿ; ವಾಜ್ಮೂ ಹೇಳಿಕೆ; ಸಮಜಾಯಿಷಿ. कैफ़ियत तलब करना = ಕಾರಣ ಕೇಳು ವಾಜ್ಮೂಲ ಕೇಳು; ಸಮಜಾಯಿ ಕೇಳು.
**कैफ़ी**, वि. ಮದಿಸಿದ, ಮದೋನ್ಮ
**कैबर**, पु. ಇಳಕಲು, ಇಳಿಜಾ

स्त्री. ಬಾಣದ ಅಲಗು.
कैरा, वि. ಕೆಂಬಿಳುಪು, ಕಂದುಬಣ್ಣ.
कैरी, स्त्री. ಮಾವಿನ ಹೀಚು.
कैल, पु. ಚಿಗುರು, ಕೊನರು; ರೆಂಬೆ.
क़ैसर, पु. ಚಕ್ರವರ್ತಿ, ಸಾರ್ವಭೌಮ.
कैसा, वि. ಎಂಥ, ಯಾವ ತರಹದ.
कैसे, कैसो, क्रिवि. ಹೇಗೆ, ಎಂತು ? ಯಾವ ಪ್ರಕಾರ ?
कोंच, स्त्री. ತಿವಿಯುವ ನೋವು, ಶೂಲೆ.
कोंचना, सक्रि. ತಿವಿ, ಇರಿ, ಚುಚ್ಚು.
कोंचला, पु. ಹಂದಿಯ ಕೋರೆಹಲ್ಲು.
कोंचा, पु. ಪಕ್ಷಿಗಳನ್ನು ಹಿಡಿಯುವ ಅಂಟಿನ ಕೋಲು; ಮಗುಚುವ ಕೈ; ಕಿವಿಯಿರುವ ಬಾಣಲಿ.
कोंछ, पु. कोंछी, स्त्री. ಸೀರೆಯ ನಿರಿಗೆ
कोंछना, कोंछियाना, सक्रि. ನಿರಿಗೆ ಹಿಡಿ; ನಿರಿಗೆ ಸೀರೆ ಉಡು; ಉಡಿಯಲ್ಲಿ ಕಟ್ಟಿಕೊಳ್ಳು.
कोंढा, पु. कोंढी, स्त्री. ಕೊಕ್ಕೆ, ಕೊಂಡಿ; ಗೊಣಸು, ಬಳೆ; ಆಭರಣಗಳಲ್ಲಿನ ತೂತು ಕೊರೆದ ನಾಣ್ಯಗಳು.
कोंपर, पु. ಗಿಡದಲ್ಲೇ ಮಾಗಿದ ಮಾವಿನ ಹಣ್ಣು.
कोंपल, स्त्री. ಚಿಗುರು, ತಳಿರು.
कोंहड़ा, पु. ಸಕ್ಕರೆಗುಂಬಳಕಾಯಿ.
को, सर्व. ಯಾರು, ಯಾವುದು ? अव्य. ದ್ವಿತೀಯಾ ಮತ್ತು ಚತುರ್ಥೀ ವಿಭಕ್ತಿ ಪ್ರತ್ಯಯ; -ಅನ್ನು, -ಗೆ.
कोआ, पु. ಕಡೆಗಣ್ಣು; ಕಣ್ಣು ಗುಡ್ಡೆ; ರೇಷ್ಮೆ ಹುಳುವಿನ ಗೂಡು; ಹಲಸಿನ ತೊಳೆ; ಹಿಪ್ಪೆ ಹಣ್ಣು.
कोइरी, पु. ತರಕಾರಿ ಬೆಳೆಯುವವ, ತೋಟಗಾರ.
कोइली, स्त्री. ಮಾವಿನ ಕಾಯಿ; ಮಾವಿನ ಓಟೆ, ಗೊರಟು.
कोईं, स्त्री. ನೈದಿಲೆ.
कोई, सर्व. ಒಂದು, ಯಾವುದೋ, ಯಾವನೋ; ಒಂದಾನೊಂದು. कोई न कोई = ಯಾವನಾದರೂ ಒಬ್ಬನು, ಯಾವುದಾದರೂ ಒಂದು. कोई पचास = ಒಂದು ಐವತ್ತು. कोई है = ಯಾರೋ ಅಲ್ಲಿ ? कोई हो = ಯಾರೇ ಆಗಲಿ.
कोकई, कोकची, वि. ಸ್ವಲ್ಪ ಕಪ್ಪು ಮಿಶ್ರಿತವಾದ ಬಿಳುಪು ಬಣ್ಣದ.
कोकनी, स्त्री. ಚಿಕ್ಕ, ಕಿರಿಯ.
कोका, पु. ದಾದಿಯ ಮಗ; ಸಾಕು ತಾಯಿಯ ಮಕ್ಕಳು; "ಕೋಕೋ" (ಪಾನೀಯ); ದಾಟು ಹೊಲಿಗೆ, ಟಾಕಾ; ನೈದಿಲೆ.
कोकिल, कोकिला, स्त्री. ಕೋಗಿಲೆ.
कोको, स्त्री. ಕಾಗೆ.
कोख, स्त्री. ಹೊಟ್ಟೆ, ಜಠರ; ಆಳ್ಳೆ; ಬಸುರು, ಗರ್ಭಕೋಶ; ಅಜೀರ್ಣ. कोख मारी जाना = ಬಂಜೆಯಾಗು; ಗರ್ಭಸ್ರಾವವಾಗು. कोख खुलना = ಮಕ್ಕಳಾಗು. कोख बंद = ಗೊಡ್ಡು, ಬಂಜೆ.
कोगी, पु. = सोनहा.
कोच, पु. ಕೋಚುಬಂಡಿ, ಸಾರೋಟ್

**कोचकी**, वि. =कोकची.

**कोचना**, सक्रि. ತಿವಿ, ಇರಿ, ಚುಚ್ಚು.

**कोचवान**, पु. ಕೋಚುಬಂಡಿ ಅಥವಾ ಸಾರೋಟ್ ಹೊಡೆಯುವವ.

**कोचा**, पु. ಕತ್ತಿಯ ಗಾಯ; ಚುಚ್ಚುವ ಮಾತು.

**कोछा**, स्त्री. ವಕ್ಷಸ್ಥಳ; ಮಡಿಲು.

**कोजागर**, पु. ಶರತ್ಪೂರ್ಣಿಮೆಯಲ್ಲಾಗುವ ಲಕ್ಷ್ಮೀಪೂಜೆ ಮತ್ತು ಜಾಗರಣೆ.

**कोट**, पु. ಕೋಟೆ, ದುರ್ಗ; ಪ್ರಾಕಾರ, ಗೋಡೆ, ಸುತ್ತಾಲೆ, ಅಲಂಗ; ಅರಮನೆ; ಕೋಟು, ಅಂಗಿ.

**कोटपाल**, पु. ದುರ್ಗ ರಕ್ಷಕ, ಕೋಟೆಯ ಅಧಿಕಾರಿ.

**कोटर**, पु. ಮರದ ಡೊಗರು, ಪೊಟ್ರೆ.

**कोटापिली**, स्त्री. ಮರದ ಸುತ್ತಿಗೆ, ಕೊಡತಿ.

**कोटि**, स्त्री. ವರ್ಗ, ಶ್ರೇಣಿ, ತರಗತಿ वि. ನೂರು ಲಕ್ಷ, ಕೋಟಿ.

**कोटू**, पु.=कूटू.

**कोठ**, वि. ಹುಳಿಯಿಂದ ಚಳಿತ(ಹಲ್ಲು), ಕೊಳಚಿಹೋದ (ಹಲ್ಲು).

**कोठड़ी, कोठरी**, स्त्री. ಕೊಠಡಿ,ಕೋಣೆ

**कोठा**, पु. ದೊಡ್ಡ ಕೋಣೆ; ಮನೆ; ಭಂಡಾರ, ಉಗ್ರಾಣ; ಉಪ್ಪರಿಗೆ, ಮಹಡಿ; ಹೊಟ್ಟೆ; ಬಸುರು, ಗರ್ಭಾಶಯ; ಮುಗ್ಗಿ ಕೋಷ್ಟಕ; ಶರೀರದೊಳಗಿನ ಕೋಶ (ಪಿತ್ತಕೋಶ, ಶ್ವಾಸಕೋಶ ಆದಿ). कोठेवाली = ವೇಶ್ಯೆ, ಸೂಳೆ.

**कोठार**, पु. ಭಂಡಾರ, ಉಗ್ರಾಣ.

**कोठारी**, पु. ಉಗ್ರಾಣಿಕ, ಭಂಡಾರಿ, ಕೊಟ್ಟಾರಿ.

**कोठी**, स्त्री. ಉಪ್ಪರಿಗೆ, ಸೌಧ; ಬಂಗ್ಲೆ; ಮಳಿಗೆ; ಉಗ್ರಾಣ; ಕಣಜ, ಹಗೇವು; ಕಾರ್ಖಾನೆ, ಕೋಠಿ; ಹುಂಡೀಶಾಲೆ, ಬ್ಯಾಂಕು; ಕೌಳಿಗೆ; ಕೊಳಗದಪ್ಪಲೆ; ಗರ್ಭಾಶಯ, ಬಿದಿರಿನ ಮೆಳೆ; ನೀರು ಮಟ್ಟಕ್ಕೆ ಕೆಳಗೆ ಇರುವ ಬಾವಿಯ ಕಲ್ಲು ಕಟ್ಟಡ.

**कोठीवाल**, पु. ವ್ಯಾಪಾರಿ, ಸಾಹುಕಾರ; ಒಂದು ಬಗೆ ಮೋಡಿ ಅಕ್ಷರ.

**कोठीवाली**, स्त्री. ವ್ಯಾಪಾರ ನಡೆಸುವಿಕೆ; ಒಂದು ಬಗೆ ಮೋಡಿ ಅಕ್ಷರ.

**कोड़ना**, सक्रि. ಅಗಿ, ತೋಡು, ಅಗತೆ ಮಾಡು

**कोड़ा**, पु. ಕಶೆ, ಚಬುಕು, ಚಾವುಟಿ, ಬಾರುಗೋಲು; ಚುಚ್ಚುವ ಮಾತು, ಎಚ್ಚರಿಕೆ; ವಕ್ಷಸ್ಥಳ.

**कोड़ाना**, सक्रि. ಅಗತೆ ಮಾಡಿಸು.

**कोड़ी**, स्त्री. ಇಪ್ಪತ್ತು, ಬೀಸಿಗೆ; ಕೆರೆಯ ಕೋಡಿ.

**कोढ़**, पु. ಕುಷ್ಠ. कोढ़ चूना या टपकना = ಕುಷ್ಠ ಹಿಡಿ, ತೊನ್ನು ಹತ್ತು. कोढ़ में खाज निकलना = ಕಷ್ಟದ ಮೇಲೆ ಕಷ್ಟ ಬರು.

**कोढ़ना**, सक्रि. ಕಾಡು, ಪೀಡಿಸು.

**कोढ़िन**, स्त्री. ಕುಷ್ಠ ಹಿಡಿದವಳು.

**कोढ़ी**, पु. ಕುಷ್ಠರೋಗಿ.

**कोण**, पु. ಕೋಣ, ಕೋನ, ಮೂಲೆ.

कोतमीर, पु. ಕೊತ್ತುಂಬರಿ ಬೀಜ, ಧನಿಯಾ.
कोतल, पु. ಪ್ರದರ್ಶನಕ್ಕಾಗಿ ನಡೆಸಿಕೊಂಡು ಬರುವ ಕುದುರೆ, ಪಿಡಿಕುದುರೆ, ಪಟ್ಟದ ಕುದುರೆ; ಅರಸನ ಸವಾರಿಯ ಕುದುರೆ; ವಿಶಾಸಲು ಕುದುರೆ. वि. ಬರಿಯ, ಖಾಲಿ.
कोतलकश, पु. ಕುದುರೆಗೆ ಬಿಗಿಯುವ ಬಾರು, ತಂಗುವಾರು
कोतवाल, पु. ಠಾಣೆಯ ಅಧಿಕಾರಿ, ಕೊತ್ವಾಲ; "ಪೋಲೀಸ್ ಇನ್ಸ್ಪೆಕ್ಟರ್"; ಮೇಲ್ವಿಚಾರಕ.
कोतवाली, स्त्री. ಠಾಣೆ, "ಪೋಲೀಸ್ ಸ್ಟೇಷನ್"; ಕೊತ್ತವಾಲನ ಕೆಲಸ ಅಥವಾ ಪದವಿ.
कोता, कोताह, वि. ಸಣ್ಣ, ಅಲ್ಪ, ನೀಚ.
कोताही, स्त्री. ಕೊರತೆ, ಲೋಪ; ಕಡಮೆ ಮಾಡುವಿಕೆ, ಸಂಕ್ಷೇಪಣ.
कोथ, पु. ಕಣ್ಣುರಿ.
कोथला, पु. ಚೀಲ, ತೈಲಿ; ಹೊಟ್ಟೆ.
कोथली, स्त्री. ಸಣ್ಣ ಚೀಲ; ಸೊಂಟಕ್ಕೆ ಕಟ್ಟುವ ಹಣದ ಚೀಲ, ಹಿಮ್ಮಣಿ ಚೀಲ.
कोदों, कोदो, पु. ಒಂದು ಬಗೆ ಧಾನ್ಯ, ಕೋದ್ರವ, ಹಾರಕದಕ್ಕಿ. छाती पर कोदों दलना = ಹಿಂಸಿಸು, ಪೀಡಿಸು.
कोन, पु. ಕೋಣ, ಮೂಲೆ.
कोना, पु. ಕೋಣ, ಮೂಲೆ; ಏಕಾಂತ ಸ್ಥಳ. कोना कुथरा = ಸಂದಿಗೊಂದಿ, ಇರಕು ಮುರಕು.
कोनिया, स्त्री. ಮೂಲೆದಂಡಿಗೆ.
कोप, पु. ಕೋಪ, ಸಿಟ್ಟು.
कोपना, अक्रि. ಕೋಪಿಸು, ಮುನಿಸು.
कोपीन, स्त्री. ಕೌಪೀನ, ಲಂಗೋಟಿ.
कोफ़्त, स्त्री. ದುಃಖ, ಸಂಕಟ, ಕಷ್ಟ, ತಾಪತ್ರಯ; ಚಿನ್ನಬೆಳ್ಳಿಯ ಪಚ್ಚಿಯ ಕೆಲಸ.
कोफ़्तगर, वि. ಚಿನ್ನಬೆಳ್ಳಿಯ ಪಚ್ಚಿಯ ಕೆಲಸ ಮಾಡುವವ.
कोफ़्ता, वि. ಅರೆದ, ಜಜ್ಜಿದ; ಕುಟ್ಟಿದ. पु. ಚೆನ್ನಾಗಿ ಕುಟ್ಟಿ ಸುಟ್ಟ ಮಾಂಸ.
कोबा, पु. ಗಟ್ಟಣೆ ಮಣೆ, ಧಮ್ಮಸು.
कोबी, स्त्री. ಒಂದು ಬಗೆ ಕೋಸು ಹೂವು, ಹೂಗೋಸು.
कोमल, वि. ಮೃದುವಾದ, ಕೋಮಲ.
कोमलता, स्त्री. ಮೃದುತ್ವ, ಕೋಮಲತೆ.
कोयर, पु. ಸೊಪ್ಪು ಪಲ್ಯ; ಸೊಪ್ಪುಸದೆ; ಹಸಿಹುಲ್ಲು.
कोयल, स्त्री. ಕೋಗಿಲೆ, ಅಪರಾಜಿತೆ.
कोयला, पु. ಇದ್ದಲು; ಕಲ್ಲಿದ್ದಲು.
कोया, पु. ಕಡೆಗಣ್ಣು; ಕಣ್ಣುಗುಡ್ಡೆ; ಹಲಸಿನ ತೊಳೆ.
कोरंगी, स्त्री. ಏಲಕ್ಕಿ.
कोरंजा, पु. ಕೂಲಿ, ಕಂಬಳ.
कोर, पु. ದಡ, ಅಂಚು, ಕರೆ; ಕೊನೆ, ತುದಿ; ದೋಷ, ಕುಂದು; ಮನಸ್ತಾಪ; ಪಂಕ್ತಿ, ಸಾಲು; ಕೆಲಸಗಾರರು ಜತೆಯಲ್ಲಿ ತರುವ ಊಟ, ಬುತ್ತಿ. कोर

कसर = ಕುಂದು ಕೊರತೆ, ನ್ಯೂನಾಧಿಕ್ಯಗಳು.

**कोरक**, पु. ಮೊಗ್ಗು, ಅರುಂಬು, ನನೆ.

**कोरनिश**, स्त्री. ಬಗ್ಗಿ ಬಗ್ಗಿ ಸಲಾಮು ಮಾಡುವಿಕೆ, ಕೂರ್ನಿಸಾತು.

**क़ोरमा**, पु. ಕೆಂಡದಲ್ಲಿ ಸುಟ್ಟ ಮಾಂಸ.

**कोरा**, वि. ಹೊಸ; ತಿದ್ದದ; ಸಲವೆ ಮಾಡದ; ಕೋರಾ; ಹದ ಮಾಡದ; ಖಾಲಿಯಾದ, ಶೂನ್ಯವಾದ, ಬರಿಯ. पु. ಅಂಚಿಲ್ಲದ ವಸ್ತ್ರ, "ಮಲ್ಲು"; ಮಡಿಲು.

**कोरापन**, पु. ನವೀನತೆ, ಹೊಸದು.

**कोरिन**, स्त्री. ನೆಯಿಗೆಯವಳು

**कोरी**, पु. (ಹಿಂದುಗಳಲ್ಲಿ) ನೆಯಿಗೆಯವ; ಜಾಡ.

**कोरो**, पु. ಜಂತಿ, ಸರ; ಅಡ್ಡಜಂತೆ.

**कोल**, पु. ಒಂದು ಜಾತಿಯ ಕಾಡು ಮನುಷ್ಯರು; ಕುನ್ನಿನರಿ, ಬಳ್ಳು; ಕೊಲ್ಲಿ, ಖಾರಿ; ಸಂದಿ; ಬೀದಿ.

**कोला**, पु. ಕುನ್ನಿನರಿ, ಬಳ್ಳು.

**कोलाहल**, पु. ಗದ್ದಲ, ಸಂದಣಿ.

**कोलिया**, स्त्री. ಸಂದಿ, ಓಣಿ.

**कोली**, पु. ನೆಯಿಗೆಯವ. स्त्री. ಮಡಲು

**कोलँदा**, पु. ಹಿಪ್ಪೆ ಹಣ್ಣು.

**कोल्हू**, पु. ಗಾಣ, ಆಲೆ, ಆಲೆಗಾಣ.

**कोवली**, स्त्री. ಹೆಂಜು.

**कोविद**, पु. ಪಂಡಿತ.

**कोश**, पु. ಪೊಟ್ಟೆ; ಸಂಪುಟ; ಮೊಗ್ಗು; ತಾಮ್ರದ ಪಂಚಪಾತ್ರೆ; ಕತ್ತಿಯ ಒರೆ; ಚೀಲ; ಖಜಾನೆ, ಬೊಕ್ಕಸ; ನಿಘಂಟು; ರೇಷ್ಮೆ ಹುಳುವಿನ ಗೂಡು; ತೊಳೆ (ಹಣ್ಣಿನ).

**कोशकार**, पु. ಕತ್ತಿಯ ಒರೆ ಮಾಡುವವ; ನಿಘಂಟು ಬರೆದವ, ನಿಘಂಟುಕಾರ; ರೇಷ್ಮೆ ಹುಳು.

**कोशिश**, स्त्री. ಯತ್ನ, ಪ್ರಯತ್ನ.

**कोष**, पु. = कोश.

**कोषाध्यक्ष**, पु. ಕೋಶಾಧ್ಯಕ್ಷ, ಖಜಾಂಚಿ.

**कोष्ठक**, पु. ಆವರಣ, ಕಂಸ, ಆವರಣ ಚಿಹ್ನೆ.

**कोस**, पु. ಕ್ರೋಶ, ಕೋಸು ದೂರ, ಹರಿದಾರಿ. कोसों दूर = ಬಹಳ ದೂರ.

**कोसना**, सक्रि. ಶಾಪ ಕೊಡು, ಶಪಿಸು. कोसना काटना = ಶಪಿಸು, ಬೈಯು.

**कोसली**, स्त्री. ಚಿಗುರು, ತಳಿರು.

**कोसा**, पु. ಶಾಪ, ಬೈಗಳು; ಒಂದು ಬಗೆಯ ರೇಷ್ಮೆ; ದೊಡ್ಡ ಹಣತೆ, ಶರಾವೆ. कोसा काटी = ಬೈಗಳು.

**कोसिया**, स्त्री. ಪಣತೆ, ಹಣತೆ.

**कोहँडौरी**, स्त्री. ಕುಂಬಳಕಾಯಿ ಸಂಡಿಗೆ

**कोह**, पु. ಪರ್ವತ, ಬೆಟ್ಟ, ಮಲೆ.

**कोहकन**, वि. ಬೆಟ್ಟ ತೋಡುವವ.

**कोहड़**, पु. ಬಾವಿಯ ಬಾಯ ಚೌಕಟ್ಟು

**कोहनी**, स्त्री. = कुहनी.

**कोहनूर**, पु. ಬೆಳಕಿನ ಬೆಟ್ಟ, ತೇಜಃಪುಂಜ; ಒಂದು ದೊಡ್ಡ ವಜ್ರದ ಹೆಸರು, ಕೊಹಿನೂರು.

**कोहान**, पु. ಒಂಟೆಯ ಡುಬ್ಬ.

**कोहिस्तान**, पु. ಬೆಟ್ಟದ ಸೀಮೆ, ಮಲೆ

ನಾಡು.

**कोहिस्तानी**, वि. ಮಲೆನಾಡಿನ, ಬೆಟ್ಟದ. पु. ಮಲೆನಾಡಿನವ, ಗಟ್ಟದವ.

**कोही**, वि. ಕೋಪಿಷ್ಠ; ಬೆಟ್ಟಗುಡ್ಡಗಳುಳ್ಳ; ಬೆಟ್ಟದ, ಮಲೆನಾಡಿನ.

**कौंच**, पु. ಒಂದು ಬಳ್ಳಿ, ಕಪಿಕಚ್ಛು.

**कौंध**, स्त्री. ಮಿಂಚಿನ ಹೊಳಪು, ಮಿಂಚು

**कौंधना**, अक्रि. ಹೊಳೆ, ಮಿಂಚು.

**कौंधा**, पु. ಮಿಂಚು.

**कौंला**, पु. ಒಂದು ಬಗೆ ಕಿತ್ತಳೆ ಹಣ್ಣು.

**कौआ**, पु. ಕಾಗೆ; ಕಿರುನಾಲಿಗೆ, ಅಣ್ಣಾಲಿಗೆ; ಹೆಂಚಿನ ಚಾವಣಿಯ ಅಡ್ಡದಬ್ಬೆ, ರೀಪು.

**कौआ-ठोंठी**, स्त्री. ಕಾಕತುಂಡಿ ಗಿಡ, ಕಾಕನಾಸಿಕೆ.

**कौआना**, अक्रि. ಬೆಚ್ಚು, ಒಟಗುಟ್ಟು.

**कौड़ा**, पु. ದೊಡ್ಡ ಕವಡೆ; ಚಳಿಗಾಲದಲ್ಲಿ ಬೆಂಕಿ ಕಾಯುವ ಒಲೆ.

**कौड़िया**, वि. ಕವಡೆಯ ಬಣ್ಣದ, ತುಸ ಕಪ್ಪು ಮಿಶ್ರಿತ ಬಿಳುಪು. पु. ಮಿಾಂಚುಳ್ಳಿ, ಜಾಲಗಾರನ ಹಕ್ಕಿ.

**कौड़ियाला**, वि. ಕವಡೆಯ ಬಣ್ಣದ; ಕಪ್ಪುಮಿಶ್ರಿತವಾದ ಬಿಳುಪು; ಜಿಪುಣನಾದ ಹಣವಂತ; ಶಂಖಪುಷ್ಪ ಬಳ್ಳಿ; ಒಂದು ಬಗೆ ಮಿಾಂಚುಳ್ಳಿ, ಜಾಲಗಾರನ ಹಕ್ಕಿ; ಒಂದು ಬಗೆ ಹಾವು.

**कौड़िल्ला**, पु. ಒಂದು ಬಗೆ ಮಿಾಂಚುಳ್ಳಿ, ಜಾಲಗಾರನ ಹಕ್ಕಿ.

**कौड़ी**, स्त्री. ಸಣ್ಣ ಚಿಪ್ಪು; ಕವಡೆ, ಕವಡಿ; ಕಾಸು, ಚಿಕ್ಕಾಸು; ಧನ; ಪೊಗದಿ, ಕಪ್ಪ; ಕಣ್ಣುಗುಡ್ಡೆ; ಮಾಂಸಗ್ರಂಥಿ; ಎದೆ ಹುರಿ; ಕಠಾರಿಯ ತುದಿ, ಮೊನೆ. कौड़ी कौड़ी जोड़ना = ಕಾಸಿಗೆ ಕಾಸು ಕೂಡಹಾಕು. दो कौड़ी का = ಬೆಲೆಯಿಲ್ಲದ, ತುಚ್ಛ.

**कौतुक**, पु. ಕುತೂಹಲ, ಆಶ್ಚರ್ಯ; ವಿನೋದ, ತಮಾಷೆ.

**कौतुकिया**, **कौतुकी**, पु. ವಿನೋದಗಾರ, ತಮಾಷೆ ಮಾಡುವವ; ವಿವಾಹ ಮಾಡಿಸುವ ಪುರೋಹಿತ; ನಾಪಿತ, ಕ್ಷೌರಿಕ.

**कौतूहल**, पु. ಕುತೂಹಲ.

**कौथ**, स्त्री. ಯಾವ ತಾರೀಖು? ಯಾವತ್ತು?

**कौन**, सर्व. ಯಾರು, ಯಾವ, ಯಾವುದು? कौन सा = ಎಂತಹ?

**क़ौम**, पु. ಜಾತಿ, ಕೋಮು; ಬುಡಕಟ್ಟು, ಜನಾಂಗ.

**कौमरी**, स्त्री. ಬೇಯಿಸಿದ ಕಾಳು, ಉಸಲಿ.

**क़ौमियत**, स्त्री. ಜಾತೀಯತೆ, ರಾಷ್ಟ್ರೀಯತೆ.

**क़ौमी**, वि. ಜಾತಿಸಂಬಂಧವಾದ, ಜಾತೀಯ, ರಾಷ್ಟ್ರೀಯ. क़ौमी ज़बान = ರಾಷ್ಟ್ರಭಾಷೆ. क़ौमी मजलिस = ರಾಷ್ಟ್ರೀಯ ಮಹಾಸಭೆ, ರಾಷ್ಟ್ರಕೂಟ, ಕಾಂಗ್ರೆಸ್ಸು.

**कौर**, पु. ತುತ್ತು, ಗುಕ್ಕು, ಕವಳ; ಹಿಡಿ. कौर ग्रास न करना = ಉಪವಾಸ

ಮಾಡು.

**कौरना,** सक्रि. ಬೆಂಕಿಯಲ್ಲಿ ಸುಡು, ಕಾಯಿಸು.

**कौरी,** स्त्री. ಗೋರಿಕಾಯಿ, ಚವಳಿ ಕಾಯಿ; ವಕ್ಷಸ್ಥಳ; ಮಡಿಲು.

**कौल,** वि. ಉತ್ತಮ ಕುಲದ, ಒಳ್ಳೇ ವಂಶದ, ಕುಲೀನ पु. ಕವಳ.

**क़ौल,** पु. ಮಾತು, ವಚನ; ಪ್ರತಿಜ್ಞೆ, ಶಪಥ; ವಾಗ್ದಾನ; ಒಪ್ಪಂದ, ಕೌಲು. क़ौल क़रार = ಕೌಲು ಕರಾರು, ಒಡಂಬಡಿಕೆ, ಸಂಧಿ.

**कौला,** पु. ಮೂಲೆ; ಪಕ್ಕ ಗೋಡೆ; ಒಂದು ಬಗೆ ಕಿತ್ತಳೆಹಣ್ಣು; ಆಲಿಂಗನ, ತೆಕ್ಕೆ.

**कौलियाना,** सक्रि. ಆಲಿಂಗಿಸು.

**कौली,** स्त्री. ಆಲಿಂಗನ. कौली भरना = ಆಲಿಂಗಿಸು; ಅತ್ಯಾಸೆಪಡು.

**कौवा,** पु. = कौआ.

**क़ौवाल,** पु. ಪದ ಹೇಳುವವ, ಕೀರ್ತನ ಕಾರ.

**क़ौवाली,** स्त्री. ದೇವರನಾಮ, ಕೀರ್ತನೆ, ದಾಸರ ಪದ; ಈ ಪದ ಹಾಡುವವ.

**कौवी,** स्त्री. ಹೆಣ್ಣು ಕಾಗೆ.

**क़ौस,** स्त्री. ಬಿಲ್ಲು, ಧನುಸ್ಸು; ವೃತ್ತದ ಒಂದು ಭಾಗ, ಕಂಸ, ಚಾಪ. क़ौस कुज़ह = ಕಾಮನ ಬಿಲ್ಲು, ಇಂದ್ರಚಾಪ

**कौहा,** पु. ಚಾವಣಿಯ ಅಡ್ಡ ದಬ್ಬೆ, ರೀಪು.

**क्या,** सर्व. ಏನು ? वि. ಎಂಥಾ, ಎಷ್ಟು ? क्रिवि. ಏತಕ್ಕೆ ?

**क्यारी,** स्त्री. = क्यारी.

**क्यों,** क्रिवि. ಏತಕ್ಕೆ, ಯಾಕೆ; ಯಾವ ಕಾರಣದಿಂದ; ಏತರಿಂದ.

**क्योंकर,** क्रिवि. ಹೇಗೆ; ಏತಕ್ಕೆ, ಏಕೆ.

**क्योंकि,** अव्य. ಏತಕ್ಕೆಂದರೆ, ಏಕೆಂದರೆ.

**क्योड़ा,** पु. ತಾಳೆ ಹೂ, ಕೇದಗೆ.

**क्रंदन,** पु. ಅಳು, ಪ್ರಲಾಪ.

**क्रम,** पु. ಕ್ರಮ, ಅಣಿಪಾಟು; ನಿಯಮ.

**क्रमशः,** क्रिवि. ಕ್ರಮವಾಗಿ.

**क्रय,** पु. ಕೊಂಡುಕೊಳ್ಳುವಿಕೆ; ಕ್ರಯ, ಖರೀದಿ. क्रय विक्रय = ಕೊಳ್ಳುವುದು ಮಾರುವುದು, ಕ್ರಯ ವಿಕ್ರಯ; ವ್ಯಾಪಾರ.

**क्रांति,** स्त्री. ಸೂರ್ಯನ ಪಥ, ಕ್ರಾಂತಿ ವೃತ್ತ; ಬದಲಾವಣೆ, ಪಲ್ಲಟ, ಮಾರ್ಪಾಟು; ರಾಜ್ಯಕ್ರಾಂತಿ

**क्रांतिकारी,** वि. ದೇಶದಲ್ಲಿ ದೊಡ್ಡ ಮಾರ್ಪಾಟನ್ನುಂಟುಮಾಡುವ; ರಾಜ್ಯ ಕ್ರಾಂತಿಯುಂಟುಮಾಡುವ; ಕ್ರಾಂತಿಕಾ

**क्रिया,** स्त्री. ಕ್ರಿಯೆ, ಕೆಲಸ, ಕಾರ್ಯ. क्रिया कर्म = ಕರ್ಮಾಂತರ.

**क्रिस्तान,** पु. ಕ್ರೈಸ್ತ ಮತದವ.

**क्रिस्तानी,** स्त्री. ಕ್ರೈಸ್ತ ಮತ.

**क्रीड़ा,** स्त्री. ಆಟ, ಕ್ರೀಡೆ, ವಿನೋದ

**क्रीत,** वि. ಬೆಲೆಗೆ ಕೊಂಡ.

**क्रुद्ध,** वि. ಕೋಪಗೊಂಡ, ಸಿಟ್ಟಾದ.

**क्रूर,** वि. ಕ್ರೂರ, ನಿರ್ದಯಿ.

**क्रूरता,** स्त्री. ಕ್ರೂರತನ, ಕ್ರೌರ್ಯ.

**क्रोड़पत्र,** पु. ಪರಿಶಿಷ್ಟ, ಪುರವಣಿ.

**क्रोध**, पु. ಕೋಪ, ಸಿಟ್ಟು.
**क्रोधित**, वि. ಕೋಪಗೊಂಡ, ರೇಗಿದ.
**क्लांत**, वि. ಆಯಾಸಹೊಂದಿದ, ದಣಿದ.
**क्लांति**, स्त्री. ಆಯಾಸ, ದಣಿವು.
**क्लिष्ट**, वि. ದುಃಖಿತ; ಕಷ್ಟ, ಕಠಿಣ.
**क्लीव**, पु. ನಪುಂಸಕ; ಪುಕ್ಕ, ಹೇಡಿ.
**क्लेश**, पु. ದುಃಖ, ವ್ಯಸನ, ಕ್ಲೇಶ.
**क्वार**, पु. ಆಶ್ವೀಜ ಮಾಸ.
**क्वारपन**, **क्वारापन**, पु. ಬ್ರಹ್ಮಚರ್ಯ
**क्वारा**, वि. ಬ್ರಹ್ಮಚಾರಿ.
**क्वारी**, स्त्री. ಕನ್ಯೆ, ಬ್ರಹ್ಮಚಾರಿಣಿ.
**क्षण**, पु. ಕ್ಷಣ.
**क्षति**, स्त्री. ಕೆಡಕು, ಹಾನಿ.
**क्षम**, वि. ಶಕ್ತ, ತಕ್ಕ; ಅರ್ಹತೆಯುಳ್ಳ.
**क्षमता**, स्त्री. ಶಕ್ತಿ, ಸಾಮರ್ಥ್ಯ, ಯೋಗ್ಯತೆ.
**क्षमा**, स्त्री. ಕ್ಷಮೆ, ಮನ್ನಣೆ, ಮಾಫಿ.
**क्षितिज**, पु. ಆಕಾಶವೂ ಭೂಮಿಯೂ ಸೇರುವಂತೆ ಕಾಣುವ ಸ್ಥಳ, ದಿಗಂತ, ಕ್ಷಿತಿಜ, ಹರಿಜ.
**क्षीण**, वि. ಕ್ಷೀಣವಾದ, ಕುಗ್ಗಿದ.
**क्षीणता**, स्त्री. ಕ್ಷೀಣತೆ, ಬಲಹೀನತೆ.

# ख

**खंक**, वि. ನಿರ್ಬಲ, ಅಶಕ್ತ. स्त्री. ಬಿರುಗಾಳಿ.
**खंख**, वि. ಶೂನ್ಯವಾದ, ಬರಿದು; ಬೆಂಗಾಡಾದ, ಬಂಜರು.
**खंखड़**, वि. ಒಣಗಿದ, ಗಟ್ಟಿಯಾದ.
**खंखरा**, पु. ತಾಮ್ರದ ಬೋಸಿ, ತಪ್ಪಲೆ. वि. ತೂತುಗಳುಳ್ಳ, ತೆರಪುಳ್ಳ; ಚಳತಿ ನೆಯಿಗೆಯ, ಜರಗು; ಜಾಳು (ಬಟ್ಟೆ).
**खंखा**, स्त्री. ದುಷ್ಟ ಸ್ತ್ರೀ, ತಾಟಕಿ.
**खंखार**, पु. ಕಫ, ಶ್ಲೇಷ್ಮ, ತೊಂಟೆ; ಉಗುಳು.
**खंखारना**, अक्रि. ಕೆಮ್ಮು, ಕೇಕರಿಸು, ಕ್ಯಾಕರಿಸು; ಉಗುಳು.
**खंग**, पु. ಕತ್ತಿ, ಖಡ್ಗ; ಗೇಂಡಾಮೃಗ.
**खंगना**, अक्रि. ಕಡಿಮೆಯಾಗು, ತಗ್ಗು.
**खंगर**, पु. ಒಂದು ಬಗೆ ಇಟ್ಟಿಗೆ.
**खंगहा**, वि. ಕೋರೆ ಹಲ್ಲುಳ್ಳ. पु. ಗೇಂಡಾಮೃಗ.
**खंगालना**, **खंवारना**, सक्रि. ತೊಳೆ, ಗಲಬರಿಸು; ಕುಕ್ಕು, ಕುಸುಬು.
**खंगी**, स्त्री. ಕಡಿಮೆ, ಕೊರತೆ, ನ್ಯೂನತೆ
**खंचना**, अक्रि. ಅಂಕಿತವಾಗು.
**खंचाना**, सक्रि. ಅಂಕಿತ ಮಾಡು; ಗೀಚು.
**खंज**, पु. ಕುಂಟ, ಹೆಳವ.
**खंजड़ी**, स्त्री. = **खंजरी**.
**खंजन**, पु. ಖಂಜರೀಟ, ಗವುಜು ಹಕ್ಕಿ.
**खंजर**, पु. ಕಠಾರಿ.
**खंजरी**, स्त्री. ಒಂದು ವಾದ್ಯ, ಖಂಜರ; ಒಂದು ತರದ ತಮಟೆ; ಬಟ್ಟೆಯಲ್ಲಿನ ಗೆರೆ; ಪಟ್ಟೆಪಟ್ಟೆಯಾದ ಬಟ್ಟೆ, ಪಟಾವಳಿ ಬಟ್ಟೆ.
**खंजरीट**, पु. ಗವುಜು ಹಕ್ಕಿ, ಮಡಿವಾಳ ಹಕ್ಕಿ.

**खंड**, पु. ತುಂಡು; ಭಾಗ; ಹಿಸ್ಸೆ; ದೇಶ; ಸಕ್ಕರೆ; ಕಲ್ಲುಸಕ್ಕರೆ.

**खंडकाव्य**, पु. ಕಥಾತ್ಮಕವಾದ ಸಣ್ಣ ಪ್ರಬಂಧಕಾವ್ಯ.

**खंडन**, पु. ಕಡಿಯುವುದು, ತುಂಡರಿಸುವಿಕೆ; ಖಂಡನೆ.

**खंडनी**, स्त्री. ಕಂದಾಯ, ಕಿಸ್ತು.

**खंडपूरी**, स्त्री. ಸಕ್ಕರೆ ಪೂರಿ, ಹೂರಣ ಹೋಳಿಗೆ.

**खंडबरा**, पु. ಸಿಹಿ ವಡೆ.

**खंडरा**, पु. ಒಂದು ಬಗೆ ವಡೆ.

**खंडरीच**, पु. ಖಂಜನ, ಗವುಜು ಹಕ್ಕಿ.

**खंडला**, पु. ತುಂಡು, ತುಣುಕು, ಚೂರು.

**खंडवानी**, स्त्री. ಸಕ್ಕರೆ ಪಾನಕ; ವರಪೂಜೆಗೆ ಮೊದಲು ಪಾನಕ ಮೊದಲಾದವನ್ನು ಕೊಟ್ಟು ಬೀಗರನ್ನು ಸ್ವಾಗತಿಸುವಿಕೆ, ಪಾನಕಶಾಸ್ತ್ರ.

**खंडसाल**, पु. ಸಕ್ಕರೆ ಕಾರ್ಖಾನೆ.

**खंडहर**, पु. ಹಾಳುಬಿದ್ದಮನೆ, ಪಾಳು; ಭಗ್ನಾವಶೇಷ.

**खंडित**, वि. ತುಂಡುಬಿದ್ದ, ಅಪೂರ್ಣ.

**खंडिया**, स्त्री. ಸಣ್ಣ ಚೂರು.

**खंडौरा**, पु. ಕಲ್ಲುಸಕ್ಕರೆಯಿಂದ ಮಾಡಿದ ಲಾಡು, ಚಿಲ್ಮ ಲಾಡು.

**खंतरा**, पु. ಬಿರುಕು; ಕಮರಿ; ಕೊಳ್ಳ.

**खंता**, पु. **खंती**, स्त्री. ಸಮ್ಮಟಿ, ಎಲೆಗುದ್ದಲಿ, ಎಲೆಕೋಟು.

**ख़ंदक़**, पु. ಕಂದಕ, ಅಗಳು, ಅಗಳತೆ; ಕೊಳ್ಳ.

**खंदल**, पु. ಬಯಲು, ಮೈದಾನ.

**ख़ंदाँ**, पु. ನಗು, ಹಾಸ್ಯ. ख़ंदाँ पेशानी = ನಗು ಮೊಗ.

**खंदाना**, पु. ಮರದಲ್ಲಿನ ಕಚ್ಚು; ಇಟ್ಟಿಗೆಗಾಗಿ ಮಣ್ಣು ತೋಡಿದ ಗುಳಿ.

**खखवाना**, सक्रि. ಖಾಲಿ ಮಾಡಿಸು, ಬರಿದು ಮಾಡಿಸು.

**खखियाना**, सक्रि. ಹೊರಗೆಡಹು; ಖಾಲಿ ಮಾಡು, ತೆರವು ಮಾಡು.

**खंभ**, **खंभा**, पु. ಕಂಬ, ಸ್ತಂಭ.

**खंभिया**, स्त्री. 'खंभा' का लघु रूप.

**खकेड़**, स्त्री. ಕಷ್ಟ, ಸಂಕಟ.

**खक्खा**, पु. ಪಕಪಕ ನಗು, ಅಟ್ಟಹಾಸ; ಒಂದು ಜಾತಿ, ಖತ್ರಿ, ಕ್ಷತ್ರಿಯ.

**खखार**, पु. ಕಫ, ಶ್ಲೇಷ್ಮ, ತೊಂಟಿ; ಉಗುಳು.

**खखारना**, अक्रि. ಕೆಮ್ಮು, ಕೇಕರಿಸು; ಉಗುಳು.

**खखेटना**, सक्रि. ಅಟ್ಟು, ತಗುಳಿಸು.

**खखोड़ल**, स्त्री. ಪೊಳ್ಳು, ಟೊಳ್ಳು.

**खखोड़ना**, **खखोरना**, सक्रि. ಹುಡುಕು; ಅರಿಸು; ಜಾಲಿಸು.

**खग**, पु. ಪಕ್ಷಿ; ಅಂಬು; ನಕ್ಷತ್ರ; ಮೇಘ.

**खगना**, अक्रि. ಚುಚ್ಚು; ನಾಟು; ಅಂಟು.

**खगहा**, पु. ಗೇಂಡಾಮೃಗ.

**खगेश**, पु. ಗರುಡ; ಹದ್ದು.

**खगोल**, पु. ಆಕಾಶಮಂಡಲ.

**खचन**, पु. (ರತ್ನ) ಕೆತ್ತುವಿಕೆ, ಕಟ್ಟುವಿಕೆ; ಕುಂದಣ; ಅಂಕಿತ ಮಾಡುವುದು.

**खचना,** अक्रि. ಖಚಿತವಾಗು, ಕೆತ್ತಲ್ಪಡು(ರತ್ನ). सक्रि. ಕೆತ್ತು, ಪಚ್ಚಿಯ ಕೆಲಸ ಮಾಡು.

**खचर,** वि. ವರ್ಣಸಂಕರ, ಅಡಜಾತಿಯವ; ನೀಚ.

**खचा, खचित,** वि. ರತ್ನಖಚಿತ.

**खचाखच,** वि. ದಟ್ಟವಾದ, ಕಿಕ್ಕಿರಿದ. खचाखच भरना = ಅಡಚಿ ತುಂಬು, ಕಿಕ್ಕಿರಿಯುವಂತೆ ತುಂಬು.

**खचिया,** स्त्री. ಸಣ್ಣ ಕುಕ್ಕೆ, ಬುಟ್ಟಿ.

**खचर,** पु. ಹೇಸರಗತ್ತೆ, ಅಶ್ವತರ.

**खचरी,** स्त्री. ಹೆಣ್ಣು ಹೇಸರಗತ್ತೆ.

**खजला,** पु. ಕಜ್ಜಾಯ, ಪಣ್ಯಾರ.

**ख़ज़ानची,** पु. ಖಜಾಂಚಿ, ಬೊಕ್ಕಸದವ, ಕೋಶಾಧಿಕಾರಿ.

**ख़ज़ानचीगरी,** स्त्री. ಕೋಶಾಧಿಕಾರಿಯ ಉದ್ಯೋಗ.

**ख़ज़ाना,** पु. ಖಜಾನೆ, ಬೊಕ್ಕಸ, ರಾಜಕೋಶ; ಭಂಡಾರ; ತೆರಿಗೆ.

**ख़जिल,** वि. ಭಿಡೆಯುಳ್ಳವ, ಸಿಗ್ಗಾಳಿ; ಲಜ್ಜೆಯುಳ್ಳವ.

**ख़ज़ीना,** पु. ಖಜಾನೆ, ಬೊಕ್ಕಸ.

**खजुआ,** पु. ಕಜ್ಜಾಯ.

**खजुरा,** पु. ಹೆರಳಿಗೆ ಕಟ್ಟುವ ದಾರ.

**खजुली,** स्त्री. = **खुजली.**

**खजूर,** पु. ಖರ್ಜೂರ, ಉತ್ತುತ್ತೆ; ಒಂದು ಮಿಠಾಯಿ. खजूर छड़ी = ಒಂದು ತರದ ರೇಷ್ಮೆ ಬಟ್ಟೆ.

**खजूरा,** पु. ಛಾವಣಿಯ ಬೆಲಗು, ಬೆಂತೊಲೆ.

**खजूरिया,** स्त्री. ಖರ್ಜೂರ.

**खजूरी,** वि. ಖರ್ಜೂರದ; ಖರ್ಜೂರದಂಥ; ಮೂರು ಕಾಲು ಹಾಕಿ ಹೆಣೆದ (ಹೆರಳು).

**खट,** पु. ಹೊಡೆಯುವ ಅಥವಾ ಮುರಿಯುವ ಶಬ್ದ. खट से = ತಕ್ಷಣ.

**खटक,** स्त्री. ಶಂಕೆ, ಭಯ; ಚಿಂತೆ, ತಳ್ಳಂಕ, ತಲ್ಲಣ.

**खटकना,** अक्रि. ಪಟಿಪಟಿ ಅನ್ನು; ಅನುಮಾನವಾಗು; ಭಯವಾಗು; ಅಸಹ್ಯಕರವಾಗು; ವ್ಯಥೆಯಾಗು; ಕೆಟ್ಟದನಿಸು, ಒತ್ತು, ಅನಿಷ್ಟದೋರು.

**खटका,** पु. ಕಟಿಕಟಿ ಶಬ್ದ; ನೋವು; ಭಯ, ಶಂಕೆ; ಚಿಂತೆ; ಅಗಳಿ, ಚಿಲುಕ; ಕೀಲು; ಪಕ್ಷಿಗಳನ್ನು ಓಡಿಸಲು ಮರಕ್ಕೆ ಕಟ್ಟಿದ ಗಳು.

**खटकाना,** सक्रि. ಕಟಿಕಟಿ ಶಬ್ದ ಮಾಡು; (ಬಾಗಿಲು) ತಟ್ಟು; ಹೊಡೆ; ಭಯ ಅಥವಾ ಶಂಕೆ ಹುಟ್ಟಿಸು.

**खटकीड़ा,** पु. ತಿಗಣೆ, ಮತ್ಕುಣ.

**खटखट,** पु. ತಟ್ಟುವ ಶಬ್ದ, ಲಟಿಪಟಿ; ಜಗಳ, ತಂಟೆ; ತೊಡಕು, ಪೇಚಾಟ.

**खटखटा,** पु. ಗೊಂದಲ, ತೊಡಕು; ಪಕ್ಷಿಗಳನ್ನು ಬೆದರಿಸಲು ಮರಕ್ಕೆ ಕಟ್ಟಿ ಅಲ್ಲಾಡಿಸುವ ಗಳು.

**खटखटाना,** सक्रि. ಕಟಿಕಟಿ ಶಬ್ದ ಮಾಡು; ಬಾಗಿಲು ತಟ್ಟು; ಬಡಿ.

**खटगीर,** पु. ತಿಗಣೆ, ಮತ್ಕುಣ.

**खटछप्पर,** पु. ಸೊಳ್ಳೆ ಪರದೆ ಕಟ್ಟಿದ ಮಂಚ.

**खटना**, अक्रि. ಕೆಲಸ ಮಾಡು, ದುಡಿ; ಬಾಳಿಕೆ ಬರು. सक्रि. ಸಂಪಾದಿಸು, ಗಳಿಸು, ಕಮಾಯಿಸು.

**खटपट**, स्त्री. ಹೊಡೆಯುವ ಶಬ್ದ, ಲಟಿಪಟಿ; ಜಗಳ, ಲಟಾಪಟಿ.

**खटपटाना**, अक्रि. ಲಟಿಪಟಿ ಶಬ್ದವಾಗು

**खटपटिया**, वि. ಜಗಳಗಂಟಿ.

**खटपद**, पु. ದುಂಬಿ, ಭೃಂಗ.

**खटपाटी**, स्त्री. ಮಂಚದ ಹಲಗೆ.

**खटबुना**, पु. ಮಂಚ ಹೆಣೆಯುವವ.

**खटमल**, पु. ತಿಗಣೆ, ಮತ್ಕುಣ.

**खटमिट्ठा**, **खटमीठा**, वि. ಹುಳಿ ಮತ್ತು ಸಿಹಿ ಎರಡೂ ಮಿಶ್ರಿತವಾದ.

**खटयाल**, वि. ಮಾಸಿದ, ಕೊಳೆಯಾದ.

**खटराग**, पु. ತಂಟೆ, ಜಗಳ; ಜಂಜಡ, ಗೊಂದಲ; ತಾಪತ್ರಯ.

**खटरिया**, पु. ಒಂದು ಹುಳು.

**खटवा**, स्त्री. ಮಂಚ, ಪಲ್ಲಂಗ.

**खटवाट**, **खटवाटी**, स्त्री. ಮಂಚದ ಹಲಗೆ.

**खटवारा**, पु. ತಿಪ್ಪೆಗುಂಡಿ.

**खटाई**, स्त्री. ಹುಳಿ; ಹುಳಿ ಪದಾರ್ಥ; ಮಾವಿನ ಕಾಯಿಯ ಬಾಳಕ.

**खटाका**, पु. ಧಢಾಲ್ ಎಂಬ ಶಬ್ದ.

**खटाखट**, पु. ಪಟಪಟ ಶಬ್ದ, ಹೊಡೆಯುವ ಶಬ್ದ. क्रिवि. ಶಬ್ದಮಾಡುತ್ತ; ಸರಸರನೆ, ಚುರುಚುರಿಗ.

**खटाना**, अक्रि. ಹುಳಿಯಾಗು, ಹುಳಿ ಹಿಡಿ; ಸಾಗು, ಜರುಗು; ತೇರ್ಗಡೆ ಯಾಗು.

**खटापटी**, स्त्री. ಲಟಾಪಟಿ, ಜಗ[ಳ], ಆಯುಧಗಳ ಬಡಿದಾಟ.

**खटाल**, पु. ಸಮುದ್ರದ ಉಬ್ಬರ, ಭರತ.

**खटाव**, पु. ದೋಣಿಯನ್ನು ಕಟ್ಟುವ ಗೂಟ; ಜೀವನೋಪಾಯ, ಕಾಲ ಕ್ಷೇಪ, ನಿರ್ವಾಹ.

**खटास**, पु. ಪುನುಗು ಬೆಕ್ಕು, ಜವಾ[ದಿ] ಬೆಕ್ಕು. स्त्री. ಹುಳಿ.

**खटिक**, पु. ತರಕಾರಿ ಮಾರುವವ.

**खटिया**, स्त्री. ಸಣ್ಣ ಮಂಚ; ಚಟ್ಟ, ಸಿದಿಗೆ. खटिया निकलना = ಹೆ[ಣ] ಹೊತ್ತು ಹೋಗು.

**खटियाना**, अक्रि. ವಿಶ್ವಾಸವಾಗಿರು; ಸಮರಸದಿಂದ ಬಾಳು.

**खटोलना**, पु. ಮಂಚ, ಪಲ್ಲಂಗ, ಒಂದು ಬಗೆ ಚೋನು.

**खटोला**, पु. **खटोली**, स्त्री. ಚಿಕ್ಕ ಮಂಚ.

**खट्टा**, वि. ಹುಳಿಯಾದ, ಹುಳಿ ಹಿಡಿದ. पु. ಹೆರಳೆ ಕಾಯಿ. खट्टा होना = ಹುಳಿಯಾಗು, ಹುಳಿ ಹಿಡಿ.

**खट्टापन**, **खट्टास**, पु. ಹುಳಿ.

**खट्टी**, स्त्री. ಹೆರಳೆ ಕಾಯಿ.

**खट्टू**, पु. ಸಂಪಾದಿಸುವವ, ಕೂಲಿಯವ, ಶ್ರಮಜೀವಿ.

**खट्वांग**, पु. ಮಂಚದ ಕಾಲು.

**खट्वा**, पु. ಮಂಚ.

**खडंक**, **खडंख**, वि. ಒಣಗಿದ, ಶುಷ್ಕ.

**खडंजा**, पु. ಇಟ್ಟಿಗೆಯನ್ನು ನಿಲ್ಲಿಸಿಟ್ಟು ಜೋಡಿಸಿದ ನೆಲಗಟ್ಟು.

**गठरी**, स्त्री. ಸಣ್ಣ ಮೂಟೆ, ಗಂಟು; ಕೂಡಿಟ್ಟ ಹಣ.

**गठवांसी**, स्त्री. ಜಮೀನಿನ ಒಂದು ಅಳತೆ, (ನೋಡಿ–बीघा).

**गठवाना**, सक्रि. गठाना का प्रे. रूप.

**गठाना**, सक्रि. ಜೋಡಿಸು; ಸೇರಿಸು, ಕೂಡಿಸು; ಹೊಲಿ.

**गठानी**, स्त्री. ಜಮೀನುದಾರರಿಗೆ ರೈತರು ಕೊಡುವ ಒಂದು ಬಗೆ ತೆರಿಗೆ.

**गठाव**, पु. ಜೋಡಣೆ; ಒಂದುಗೂಡಿಸುವಿಕೆ, ಸೇರಿಸುವಿಕೆ, ಹವಣಿಕೆ; ಸಂಬಂಧ, ಸೇರಿಕೆ; ರಚನೆ, ಕಟ್ಟಡ.

**गठित**, वि. ಜೋಡಿಸಿದ, ಸೇರಿಸಿದ; ನಿರ್ಮಿತವಾದ, ರಚಿತ.

**गठिया**, स्त्री. ಹಸಿಬೆ ಚೀಲ; ಮೂಟೆ; ವಾತಗುಲ್ಮ, ಸಂಧಿವಾತ.

**गठियाना**, सक्रि. ಗಂಟು ಹಾಕು, ಗಂಟು ಕಟ್ಟು.

**गठीला**, वि. ಗಂಟುಗಳುಳ್ಳ; ಬಿಗಿಯಾದ; ಬಲವುಳ್ಳ, ಗಟ್ಟಿಮುಟ್ಟಾದ.

**गठौत, गठौती**, स्त्री. ಅನ್ಯೋನ್ಯ, ಸ್ನೇಹ; ಕಟ್ಟು; ಸಂಚು, ಹೂಟ.

**गडंग**, पु. ಗರ್ವ, ಹೆಮ್ಮೆ; ಬಡಾಯಿ, ಬಡಿವಾರ.

**गडंगिया**, वि. ಗರ್ವಿಷ್ಠ; ಬಡಾಯಿಖೋರ.

**गडंत**, स्त्री. ಚಿನ್ನಿಕೋಲಾಟ; ಮಂತ್ರಪ್ರಯೋಗ; ಪ್ರತಿಮೆ.

**गड़**, पु. ಮರೆ, ತಡಿಕೆ, ನೆರಕೆ; ಸುತ್ತುಗೋಡೆ; ಕುಳಿ, ಗುಂಡಿ.

**गड़गड़ा**, पु. ಒಂದು ಬಗೆ ಹುಕ್ಕಾ, ಗುಡುಗುಡಿ.

**गड़गड़ाना**, अक्रि. ಗುಡುಗು, ಗರ್ಜಿಸು. सक्रि. ಗಡಗಡ ಶಬ್ದ ಮಾಡು.

**गडगड़ाहट**, स्त्री. ಗಡಗಡಶಬ್ದ, ಗರ್ಜನೆ

**गड़गूदड़**, पु. ಹರಕು ಬಟ್ಟೆ, ಚಿಂದಿ, ಶತಕಂತೆ.

**गड़ना**, अक्रि. ಚುಚ್ಚು, ನೋಯು; ಹೂಳು, ಹೂತುಹೋಗು; ತಳಕ್ಕೆ ಹೋಗು, ಕುಸಿ; ಕುದುರು, ನೆಲೆಗೊಳ್ಳು; ನಟ್ಟುಹೋಗು.

**गड़पंख**, पु ಒಂದು ಪಕ್ಷಿ.

**गड़प**, पु. ಗಡಪು, ಗಬಕ್, ಗುಟುಕು. गड़प कर जाना = ನುಂಗಿಬಿಡು, ಗಡಪು ಮಾಡು.

**गड़पना**, सक्रि. ನುಂಗು, ಮಿಂಗು; ಜೀರ್ಣಿಸಿಕೊಳ್ಳು.

**गड़प्पा**, पु. ಕುಳಿ; ಮುಚ್ಚಿದ ಕುಳಿ; ಕಪ್ಪುಕುಳಿ; ಮೋಸಹೋಗುವ ಸ್ಥಳ.

**गड़बड़**, वि. ಹಳ್ಳದಿಣ್ಣೆಗಳುಳ್ಳ; ಭಿನ್ನಭಿನ್ನವಾದ, ಯದ್ವಾತದ್ವಾ. स्त्री. ಹೆಚ್ಚುಕಡಿಮೆ; ಅವ್ಯವಸ್ಥೆ, ಅನವಸ್ಥೆ, ಗಡಿಬಿಡಿ; ಗಲಾಟೆ, ಗಲಭೆ; (ರೋಗದ) ಉಪಾಧಿ, ಉಪದ್ರವ.

**गड़बड़झाला, गड़बड़ाध्याय**, पु. ಅವ್ಯವಸ್ಥೆ, ಅವಾಂತರ.

**गड़बड़ानंद**, पु. ಗಡಿಬಿಡಿ ಮಾಡುವವ, ಗಡಿಬಿಡಿಕಾರ.

**गड़बड़ाना**, अक्रि. ಗಾಬರಿಯಾಗು, ಕಳವಳಗೊಳ್ಳು; ಕಂಗೆಡು. सक्रि.

ಗಾಬರಿ ಮಾಡು, ಕಂಗೆಡಿಸು.

**गड़बड़िया**, वि. ಗಲಾಟೆ ಮಾಡುವವ, ಉಪದ್ರವಿ.

**गड़बड़ी**, स्त्री. ಅವ್ಯವಸ್ಥೆ; ಗಲಾಟೆ, ಗಡಿಬಿಡಿ; ಉಪದ್ರವ, ಉಪಾಧಿ.

**गड़रिया**, पु. ಕುರುಬ.

**गड़वा**, पु. ದೊಡ್ಡ ಗಿಂಡಿ; ಚೆಂಬು.

**गड़वाना**, सक्रि. गड़ाना का प्रे. रूप.

**गड़हा**, पु. ಕುಳಿ, ಹಳ್ಳ; ಹೊಂಡ.

**गड़ही**, स्त्री. ಸಣ್ಣ ಹಳ್ಳ, ಕುಳಿ.

**गड़ा**, पु. ರಾಶಿ, ಸಮೂಹ.

**गड़ाना**, सक्रि. ಭೇದಿಸು; ಚುಚ್ಚಿಸು, ತಿವಿಸು; ಹೂಳಿಸು; ನಾಟಿಸು; ನೆಡಿಸು; ಗಡಾಯಿಸು; ಮುಚ್ಚಿಸು.

**गड़ारी**, स्त्री. ವಲಯ, ವೃತ್ತ, ಸುತ್ತು; ಅಡ್ಡಗೆರೆಗಳು; ಬಾವಿಯ ರಾಟೆ, ಕಪ್ಪಿ, ಗಡೆಗಡೆ.

**गड़ारीदार**, वि. ಗೆರೆಗಳುಳ್ಳ, ಗೀರಿನ; ಸುತ್ತಿಕೊಳ್ಳುವ; ಸಡಿಲವಾದ.

**गडुआ**, पु. **गडुई**, स्त्री. ಗಿಂಡಿ, ಮೂಗಿನ ಪಾತ್ರೆ.

**गडुरी**, पु. = गुड़रू.

**गड़ेरिया**, पु. ಕುರುಬ.

**गड़ेरिन**, स्त्री. ಕುರುಬಗಿತ್ತಿ.

**गड़ेरी**, स्त्री. = गंडेरी.

**गड़ोना**, सक्रि. = गड़ाना.

**गड़ोलना**, पु. ಚಿಕ್ಕ ಬಂಡಿ.

**गड़ौना**, पु. ಒಂದು ಬಗೆ ವೀಳ್ಯದೆಲೆ.

**गड्ड**, पु. ರಾಶಿ, ಗುಡ್ಡೆ.

**गड्डवड्ड**, **गड्डमड्ड**, वि. ಕಲತ, ಬೆರಿಕೆಯಾದ. पु. ಕಲಬೆರಿಕೆ, ಕದಂಬಕ.

**गड्डलिका**, पु. ಕುರುಬ.

**गड्डा**, पु. ಗೆಡ್ಡೆ.

**गड्डामी**, वि. ನೀಚ; ಪಾಜಿ; ನಾಸ್ತಿಕ.

**गड्डी**, स्त्री. ಗುಡ್ಡೆ, ಕಟ್ಟು; ಹತ್ತು ದಸ್ತು ಕಾಗದದ ಕಟ್ಟು, ಗಡ್ಡಿ.

**गड्ढा**, पु. ಕುಳಿ, ಹಳ್ಳ; ಹೊಂಡ.

**गढ़ंत**, वि. ಸೃಷ್ಟನೆಯ, ಕಲ್ಪಿತ. स्त्री. ಕಲ್ಪಿತ ಪ್ರಸಂಗ.

**गढ़**, पु. ಕೋಟೆ, ದುರ್ಗ; ಕಂದಕ.

**गढ़त**, **गढ़न**, पु. ರಚನೆ, ರೂಪ, ಆಕಾರ; ಮೈಕಟ್ಟು.

**गढ़ना**, सक्रि. ರೂಪಿಸು, ಕೆತ್ತಿಸು, ರೂಪುಗೊಳಿಸು; ರಚಿಸು, ನಿರ್ಮಿಸು, ಸೃಷ್ಟಿಸು, ಕಲ್ಪಿಸು; ಹೊಡೆ, ಬಡಿ.

**गढ़पति**, **गढ़पाल**, पु. ದುರ್ಗರಕ್ಷಕ, ಕೋಟೆಯ ಅಧಿಪತಿ, ಕಿಲ್ಲೇದಾರ.

**गढ़ा**, पु. = गड्हा.

**गढ़ाई**, स्त्री. ರಚಿಸುವಿಕೆ, ರಚನೆ; ರೂಪಿಸುವಿಕೆ; ರಚಿಸುವುದಕ್ಕೆ ಅಥವಾ ಕೆತ್ತಿಸುವುದಕ್ಕೆ ಕೊಡುವ ಕೂಲಿ.

**गढ़ाना**, सक्रि. ಮಾಡಿಸು, ರಚಿಸು, ಮಾಡಿಸು; ಕಟ್ಟಿಸು; ಕೆತ್ತಿಸು, ನಿರ್ಮಾಣ ಮಾಡಿಸು. अक्रि. ಕಷ್ಟವಾಗಿ ತೋರು, ಕೆಟ್ಟದನಿಸು.

**गढ़िया**, वि. ರಚಿಸುವವ, ನಿರ್ಮಿಸುವವ, ನಿರ್ಮಾತೃ.

**गढ़ी**, स्त्री. ಸಣ್ಣ ಕೋಟೆ, ಚಿಕ್ಕ ದುರ್ಗ.

**गढ़ेला**, पु. ದ್ವಾರ, ಕಂಡಿ; ಗುಂಡಿ, ಕುಳಿ; ಹಳ್ಳ.

गढ़ैया, वि. ರಚಿಸುವವ, ರೂಪಿಸುವವ. स्त्री. ಹೊಂಡ, ಕೊಳ; ಸಣ್ಣ ಕೋಟೆ.

गढ़ोला, पु. ಸಣ್ಣ ಕೋಟೆ, ಸಣ್ಣ ದುರ್ಗ

गण, पु. ಸಮೂಹ, ಗುಂಪು, ಸೇನೆಯ ಒಂದು ವಿಭಾಗ; ದೂತ, ಅನುಚರ.

गणक, पु. ಗಣಿತ ಬಲ್ಲವ; ಜ್ಯೋತಿಷ್ಯ.

गणन, पु. ಎಣಿಕೆ, ಗಣನೆ.

गणना, स्त्री. ಗಣನೆ, ಎಣಿಕೆ, ಲೆಕ್ಕ.

गणेश, पु. ಗಣಪತಿ, ವಿನಾಯಕ. श्रीगणेश = ಪ್ರಾರಂಭ, ಮೊದಲು.

गण्य, वि. ಗಣಿಸಲರ್ಹವಾದ; ಗೌರವಸ್ಥ, ಗಣ್ಯರು. गण्यमान्य = ಗಣ್ಯರು, ಗೌರವಸ್ಥರು.

गत, वि. ಕಳೆದ; ತೀರಿಹೋದ; ರಹಿತವಾದ. स्त्री. ವೇಷ; ಅವಸ್ಥೆ, ದುರವಸ್ಥೆ, ಗೋಳು; ರಾಗದ ಮಿಳಿತ; ಗತ್ತು, ನರ್ತನ. गत बनाना = ಗೋಳು ಹುಯ್ಯಿಸು, ಸತಾಯಿಸು.

गतका, पु. ದೊಣ್ಣೆ, ಕೋಲು, ಗುದಿಗೆ; ಲಾಠಿ ವರಸೆ.

गतांक, वि. ಆದದ್ದು ಹೋದದ್ದು, ಕಳೆದದ್ದು. पु. ಪತ್ರಿಕೆಯ ಹಿಂದಿನ ಸಂಚಿಕೆ, ಕಳೆದ ಅಂಕ.

गति, स्त्री. ಗತಿ; ವೇಷ; ಅವಸ್ಥೆ; ಆಶ್ರಯ; ಕುಣಿತದಲ್ಲಿ ಒಂದು ವಿಧ, ಗತ್ತು.

गतिया, पु. ತಬಲಾ ಬಾರಿಸುವವ, ತಬಲೆಗಾರ, ಮದ್ದಲೆಗಾರ.

गत्ता, पु. ರಟ್ಟು, ರಟ್ಟಿನ ಕಾಗದ.

गत्ताल खाता, पु. ಮುಳುಗಿದ ಸಾಲದ ಬಾಬ್ತು; ಹೋಕು ಬಾಕಿ ಲೆಕ್ಕ.

गथ, पु. ಕೂಡಿಟ್ಟ ಹಣ, ಗಳಿಕೆ.

गथना, सक्रि. ಜೋಡಿಸು, ಸೇರಿಸು.

गदका, पु. = गतका.

गदकारा, वि. ಮೆತ್ತಗಿರುವ, ಮೆದು, ಮೃದು; ಬೊಜ್ಜುಬೊಜ್ಜಾಗಿರುವ.

गदगदा, वि. ದಪ್ಪ, ಕೊಬ್ಬಿದ.

गदगरा, वि. ಹಳ್ಳ ತಿಟ್ಟುಗಳುಳ್ಳ; ಕರಡು ಮುರುಡಾದ; ತೇವವಾದ, ಜವುಗು (ನೆಲ).

ग़दर, पु. ಗಲಭೆ, ಕಲಹ, ದಂಗೆ, ಬಂಡಾಯ.

गदरा, वि. ಅರ್ಧ ಹಣ್ಣಾದ, ದೋರೆ.

गदराना, अक्रि. ಅರ್ಧ ಹಣ್ಣಾಗು, ಮಾಗು, ಬಲಿ; ಮೈನೆರೆ, ಹರೆ; ಕೊಳೆಯಾಗು, ಮಾಸು.

गदराहट, स्त्री. ಅರ್ಧ ಮಾಗಿದ ಸ್ಥಿತಿ, ದೋರೆಗಾಯಾಗಿರುವಿಕೆ.

गदल, पु. ತೊಗಲುಬಾವಲಿ, ಗಬ್ಬಿಲ.

गदहपन, पु. ದಡ್ಡತನ, ಹೆಡ್ಡತನ.

गदहपूरना, स्त्री. ಪುನರ್ನವೆ ಗಿಡ, ಕೊಮ್ಮೆ.

गदहा, पु. ವೈದ್ಯ, ಚಿಕಿತ್ಸಕ; ಕತ್ತೆ; ಹೆಡ್ಡ

गदहाचंद, पु. ಗಾರ್ದಭರಾಯ, ದಡ್ಡದಾಮೋದರ, ಮೂರ್ಖ.

गदहापन, पु. ದಡ್ಡತನ.

गदा, पु. ಗದೆ, ದೊಣ್ಣೆ; ಜೋಗಿ, ಭಿಕ್ಷುಕ

गदाई, स्त्री. ಭಿಕ್ಷುಕತನ, ತಿರುಕತನ, ಯಾಚಕ ವೃತ್ತಿ. वि. ತುಚ್ಛ, ನೀಚ; ಹೊಲಸು.

गदागिरी, स्त्री. ಭಿಕ್ಷುಕತನ, ತಿರುಕತನ,

ಯಾಚಕ ವೃತ್ತಿ.

**गद्दाला**, पु. ಗಡಾರಿ, ಹಾರೆ; ಆನೆಯ ತಂಗುಳ, ಪಕ್ಕರೆಕ್ಕೆ.

**गदेल**, पु. ಹುಡುಗ.

**गदेला**, पु. = गद्दा.

**गद्दोरी**, स्त्री. ಅಂಗ್ಯೆ.

**गदगद**, वि. ಸಂತೋಷದ, ಸದ್ಗದಿತ, ಗದ್ಗದ (ಸ್ವರ).

**गद्द**, पु. ಅಜೀರ್ಣದಿಂದುಂಟಾಗುವ ಹೊಟ್ಟೆ ಭಾರ.

**गद्दर**, वि. ಅರ್ಧ ಮಾಗಿದ, ದೋರೆ. पु. ದೊಡ್ಡ ಸುಪ್ಪತ್ತಿಗೆ.

**गद्दा**, पु. ಸುಪ್ಪತ್ತಿಗೆ, ಮೆತ್ತೆ, ರಜಾಯಿ.

**ग़द्दार**, पु. ಬಂಡಾಯಗಾರ, ದಂಗೆ ಖೋರ, ವಿದ್ರೋಹಿ.

**गद्दी**, स्त्री. ಮೆತ್ತೆ, ಸುಪ್ಪತ್ತಿಗೆ, ಕವುದಿ, ದಿಂಬು; ಗಾದಿ, ಗದ್ದುಗೆ, ಪೀಠ; ಸಿಂಹಾಸನ, ಪಟ್ಟವಣೆ; ಅಧಿಕಾರಿಯ ಪದವಿ; ಅಂಗ್ಯೆ; ಅಂಗಾಲು.

**गद्दीनशीन**, पु. ಪಟ್ಟವನ್ನೇರಿದವ, ಸಿಂಹಾಸನಾರೂಢ; ಉತ್ತರಾಧಿಕಾರಿ.

**गद्दीनशीनी**, स्त्री. ಪಟ್ಟವನ್ನೇರುವಿಕೆ, ಸಿಂಹಾಸನಾರೋಹಣ.

**गद्य**, पु. ವಚನ ಕಾವ್ಯ, ಗದ್ಯ.

**गधा**, पु. ಕತ್ತೆ.

**गधी**, **गधैया**, स्त्री. ಹೆಣ್ಣು ಕತ್ತೆ.

**गनगन**, स्त्री. ಕಂಪನ, ನಡುಕ.

**गनगनाना**, अक्रि. ನಡುಗು, ಕಂಪಿಸು.

**गनना**, सक्रि. = गिनना.

**ग़नी**, वि. ಹಣಗಾರ, ಧನಿಕ; ಸ್ವತಂತ್ರ.

**ग़नीम**, पु. ಶತ್ರು; ಕೊಳ್ಳೆಗಾರ, ದರೋಡೆಗಾರ.

**ग़नीमत**, स्त्री. ಲೂಟಿ, ಸೂರೆ, ಕೊಳ್ಳೆ; ಉಚಿತವಾಗಿ ದೊರೆತ ವಸ್ತು, ಬಿಟ್ಟಿ ಮಾಲು; ಅದೃಷ್ಟ; ಪರ್ಯಾಪ್ತ, ಯಥೇಷ್ಟ; ಹೇರಳ.

**गनौरी**, स्त्री. ಜೊಂಡು, ಆಪು, ಚೀಪ ಹುಲ್ಲು.

**गन्ना**, पु. ಕಬ್ಬು.

**गप**, स्त्री. ಹರಟೆ, ಗಪ್ಪಿ; ಬುರುಡೆ, ಸುಳ್ಳು ಮಾತು, ಜಲ್ಲಿ; ಬಡಾಯಿ, ಡೌಲು.

**गपकना**, सक्रि. ಗಬಕ್ಕನೆ ನುಂಗು, ಮುಕ್ಕು, ಗಿಡಿ; ಗಪ್ಪನೆ ಹಿಡಿ.

**गपक्कड़**, वि. ಬುರುಡೆ ಅಥವಾ ಹರಟೆ ಕೊಚ್ಚುವವನ, ಹರಟೆ ಮಲ್ಲ.

**गपड़चौथ**, स्त्री. ನಿರರ್ಥಕ ಮಾತು, ಕಾಡಹರಟೆ. वि. ಉಪಯೋಗವಿಲ್ಲದ.

**गपड़शपड़**, पु. ಹರಟೆ, ಜಲ್ಪ.

**गपना**, सक्रि. ಗಪ್ಪಿ ಹೊಡೆ, ಹರಟು.

**गपागप**, क्रिवि. ಗಪ್ಪನೆ, ಕೂಡಲೆ.

**गपशप**, **गपोड़ा**, पु. ಸುಳ್ಳು ಮಾತು, ಬುರುಡೆ, ಜಲ್ಲಿ.

**गपोड़ेबाज़**, वि. ಹರಟೆ ಕೊಚ್ಚುವವ; ಬುರುಡೆ ಬಿಡುವವ.

**गपोड़ेबाज़ी**, स्त्री. ಹರಟೆ ಕೊಚ್ಚುವಿಕೆ; ಬುರುಡೆ ಬಿಡುವಿಕೆ.

**गप्प**, स्त्री. ಹರಟೆ, ಗಪ್ಪಿ; ಸುಳ್ಳು ಮಾತು, ಬುರುಡೆ, ಜಲ್ಲಿ; ಬಡಾಯಿ.

गप्प उड़ाना = ಗಪ್ಪಿ ಹೊಡೆ, ಹರಟೆ

ಕೊಚ್ಚು.

**गप्पा**, पु. ಮೋಸ.

**गप्पी**, पु. ಗಪ್ಪಿ ಹೊಡೆಯುವವ, ಹರಟೆ ಮಲ್ಲ.

**गप्फा**, पु. ಕವಳ, ತುತ್ತು; ಲಾಭ.

**गफ़**, वि. ಒತ್ತಾಗಿ ನೆಯ್ದ, ದಟ್ಟವಾದ; ಗಾಢಾ (ಬಟ್ಟೆ).

**ग़फ़्र**, पु. ಕ್ಷಮಾಪಣೆ, ಮಾಫಿ.

**ग़फ़लत**, स्त्री. ಅಜಾಗ್ರತೆ, ಅಶ್ರದ್ಧೆ; ಎಚ್ಚರಗೇಡಿತನ, ಅಸಡ್ಡೆ; ತಪ್ಪು.

**ग़फ़लती**, वि. ಅಜಾಗ್ರತೆಯಾದ, ಅಶ್ರದ್ಧೆಯಾದ; ಎಚ್ಚರಗೇಡಿ.

**ग़फ़स**, वि. ಒತ್ತಾಗಿ ನೆಯ್ದ, ಮಂದವಾದ, ಧಡೂತಿ.

**गबदा**, वि. ದಪ್ಪವಾದ, ಕೊಬ್ಬಿದ.

**ग़बन**, पु. ಹಣದ ಅಪಹಾರ, ಧನಾಪಹರಣ, ಛಪಾವಣೆ.

**गबरू**, पु. ತರುಣ, ಯುವಕ, ಚೆಲುವಿನ ಯುವಕ; ನಲ್ಲ.

**गबरूत**, पु. ಒಂದು ಬಗೆ ಪಪ್ಪಳಿ ಬಟ್ಟೆ.

**ग़बावत**, स्त्री. ಅಶ್ರದ್ಧೆ;ಅಜಾಗರೂಕತೆ

**ग़बी**, वि. ಎಚ್ಚರಗೇಡಿ, ಅಜಾಗರೂಕ; ಮರಕುಳಿ.

**गब्बर**, वि. ಅಹಂಕಾರಿ; ಮಂದಮತಿ; ಬಹಳ ಬೆಲೆಯುಳ್ಳ; ಧನಿಕ.

**गब्र**, पु. ಅಗ್ನಿಪೂಜಕ; ಪಾರ್ಸಿಯರು; ಮುಸಲ್ಮಾನೇತರರು.

**गभीर**, वि. ಗಂಭೀರವಾದ, ಗಭೀರ; ಆಳವಾದ; ದಟ್ಟವಾದ.

**गभुआर**, वि. ಹುಟ್ಟುವಾಗ ಬೆಳೆದಿರುವ (ತಲೆಗೂದಲು); ಚೌಳಕರ್ಮವಾಗದಿರುವವ; ಅರಿಯದವ.

**ग़म**, पु. ದುಃಖ, ವ್ಯಥೆ, ವ್ಯಸನ; ಶೋಕ; ಚಿಂತೆ, ಪರಿವೆ.

**गमक**, स्त्री. ಗಮಕ; ಮೃದಂಗದ ಧ್ವನಿ; ಗಂಧ, ಪರಿಮಳ.

**गमकना**, अक्रि. ಪರಿಮಳಿಸು, ಘಮಘಮಿಸು.

**गमकीला**, वि. ಸುವಾಸನೆಯುಳ್ಳ.

**ग़मख़ोर, ग़मख़्वार**, वि. ತಾಳ್ಮೆಯುಳ್ಳವ, ಸಹಿಷ್ಣು, ಸಹನಶೀಲ.

**ग़मख़ोरी, ग़मख़्वारी**, स्त्री. ಸಹನಶೀಲತೆ, ಸಹಿಷ್ಣುತೆ, ಸೈರಣೆ.

**ग़म-गलत**, पु. ಕ್ರೀಡೆ, ವಿನೋದ; ಸಾರಾಯಿ.

**ग़मगीन**, वि. ದುಃಖಿತ, ವ್ಯಥಿತ.

**ग़मगीनी**, स्त्री. ದುಃಖ, ವಿಷಾದ, ಕ್ಲೇಶ

**ग़मगुसार**, वि. ದುಃಖವನ್ನು ಹೋಗಲಾಡಿಸುವವ; ದುಃಖದಲ್ಲಿ ಭಾಗಿ; ಸ್ನೇಹಿತ.

**गमछा**, पु. ಕೈವಸ್ತ್ರ, ಚೌಕ, ಟವಲು, ಬಚಕಾನೆ.

**ग़म-ज़दा**, वि. ದುಃಖಾಕ್ರಾಂತ, ವ್ಯಥಿತ

**ग़मज़ा**, पु. ಓರೆ ನೋಟ, ಕಟಾಕ್ಷ; ಬೆಡಗು, ಒಯ್ಯಾರ, ಹಾವಭಾವ.

**गमन**, पु. ಹೋಗುವಿಕೆ, ರಸ್ತೆ.

**ग़मनाक**, वि. ವಿಷಾದಕರ, ಶೋಕಕರ

**गमनागमन**, पु. ಹೋಗುವುದು ಬರುವುದು, ಸಂಪರ್ಕ.

**गमला**, पु. ಹೂವಿನ ಗಿಡದ ತೊಟ್ಟಿ,

ಕುಂಡ; ಪಾಯಖಾನೆ ಮಾಡುವ ಪಿಂಗಾಣಿ ಪಾತ್ರೆ.

गमाना, सक्रि. = गंवाना.

ग़मी, स्त्री. ವ್ಯಾಕುಲ, ಶೋಕ, ಮೃತ್ಯು ಶೋಕ; ಮೃತ್ಯು, ಸಾವು.

गम्मत, स्त्री. ಸಭೆ, ಸದಸ್ಸು; ಕೂಟ; ಲಾಭ.

ग़म्माज़, वि. ಚಾಡಿಖೋರ.

ग़म्माज़ी, स्त्री. ಚಾಡಿಖೋರತನ.

गम्यस्थान, पु. ಮುಟ್ಟತಕ್ಕ ಸ್ಥಳ; ಗುರಿ, ಧ್ಯೇಯ.

गया, वि. ಹೋದ, ತೀರಿಹೋದ. गया गुज़रा, गया बीता = ಸಂದು ಹೋದ, ಆಗಿಹೋದ, ಕಳೆದ; ಕೀಳು ತರದ, ಕಳಪೆ.

गयावाल, पु. ಗಯಾ ಕ್ಷೇತ್ರದಲ್ಲಿ ಶ್ರಾದ್ಧ ಮಾಡಿಸುವ ಒಂದು ಜಾತಿ ಬ್ರಾಹ್ಮಣರು, ಗಯಾವಾಳ.

गर, पु. ರೋಗ; ವಿಷ; ವತ್ಸನಾಭ. अव्य. ಒಂದು ವೇಳೆ; ಆದಲ್ಲಿ. प्रत्य. ಮಾಡುವವ, -ಕಾರ, -ಗಾರ. ಉದಾ:- बाज़ीगर, क़लईगर, सौदागर.

ग़रक़, वि. = ग़र्क़.

गरगज, पु. = गर्गज.

गरगया, पु. ಗುಬ್ಬಚ್ಚಿ, ಗುಬ್ಬಿ.

गरगरा, पु. ಗಡೆಗಡೆ, ಬಾವಿಯ ರಾಟೆ, ಕಪ್ಪಿ.

गरगराना, अक्रि. ಬುಡಬುಡನೆ ಪರಿ; ಗುಡುಗು, ಗರ್ಜಿಸು, ಮೊರೆ.

गरगवा, पु. ಗುಬ್ಬಚ್ಚಿ, ಗುಬ್ಬಿ.

गरज, स्त्री. ಗುಡುಗು, ಗರ್ಜನೆ, ಗ... ವಣೆ; ಗುಟುರು.

ग़रज़, स्त्री. ಉದ್ದೇಶ; ಗುರಿ; ಆಶ... ತಾತ್ಪರ್ಯ; ನಿಮಿತ್ತ; ಅಗತ್ಯ, ಜರೂ... ಅಪೇಕ್ಷೆ, ಆಶೆ. अव्य. ಕೊ... ಅರ್ಥಾತ್, ಅಂದರೆ. बेग़रज़ = ಅಗತ್ಯವಿಲ್ಲದವ, ನಿರಪೇಕ್ಷ.

गरजना, अक्रि. ಗರ್ಜಿಸು, ಮೊ... ಅಬ್ಬರಿಸು; ಗುಟುರು ಹಾಕು; ಬಿ... ಹಿಸಿ (ಮುತ್ತು).

ग़रज़मंद, ग़रज़ी, ग़रज़ू, वि. ಅಗ... ವುಳ್ಳವ; ಇಚ್ಛೆಯುಳ್ಳವ, ಅಭಿಲಾ...

ग़रज़मंदी, स्त्री. ಸ್ವಾರ್ಥತೆ; ಅಗ... ದರ್ಜು; ಅಪೇಕ್ಷೆ, ಅಕ್ಕರೆ.

गरदन, स्त्री. ಕತ್ತು, ಕುತ್ತಿಗೆ, ಕ...

गरदना, पु. ಸಣ್ಣ ಕುತ್ತಿಗೆ, ಕ... ಕುತ್ತಿಗೆ ಏಟು.

गरदनियां, स्त्री. ಕತ್ತು ಹಿಡಿದು ನೂ... ವಿಕೆ, ದಬ್ಬುಪಟ್ಟೆ, ಅರ್ಧಚಂ... ಪ್ರಯೋಗ, ಗಲೀತಾ.

गरदनी, स्त्री. ಕುದುರೆಗೆ ಹೊದಿಸು... ಬಟ್ಟೆ; ಕತ್ತುಪಟ್ಟಿ; ಅಡ್ಡಿಕೆ, ಅಸ... ಕತ್ತು ಹಿಡಿದು ನೂಕುವಿಕೆ, ಗಲೀ... ದಬ್ಬುಪಟ್ಟೆ; ಒಂದು ಕುಸ್ತಿ ಪರ...

गरदा, पु. = गर्द.

गरदान, वि. ತಿರುಗಿ ತಿರುಗಿ ಒಂ... ಸ್ಥಳಕ್ಕೆ ಬರುವ, ಆವರ್ತಿಸುವ. ... ತಿರುಗುವಿಕೆ, ಆವರ್ತನ; ಶಬ್ದ... ರೂಪಸಾಧನೆ (ವ್ಯಾಕರಣ).

गरदानना, सक्रि. ಮತ್ತೆಮತ್ತೆ ಹೇ...

ಸಂತೆ ಹೇಳು; ಎಣಿಸು, ಮನ್ನಣೆ ಮಾಡು; ಶಬ್ದಗಳರೂಪಸಾಧನೆಮಾಡು

**गरदूँ**, पु. ಆಕಾಶ; ಕಾಲ, ಸಮಯ; ಪ್ರಪಂಚ; ಗಾಡಿ.

**गरनाल**, स्त्री. ದೊಡ್ಡಬಾಯಿಯ ಫಿರಂಗಿ

**गरब**, पु. ಗರ್ವ.

**गरबीला**, वि. ಗರ್ವಿಷ್ಠ.

**ग़रब**, पु. ಪಶ್ಚಿಮ, ಪಡುವಲು; ಬಕೀಟು

**ग़रबी**, वि. ಪಶ್ಚಿಮದ, ಪಾಶ್ಚಾತ್ಯ.

**गरभाना**, अक्रि. ಗರ್ಭ ಧರಿಸು; ತೆನೆಗೆ ಬರು; (ಧಾನ್ಯದ) ತೆನೆ ಬಿಡು.

**गरम**, वि. ಉರಿಯುವ, ಉಷ್ಣವಾದ; ಬೆಚ್ಚಗಾದ, ಬಿಸಿ; ತೀಕ್ಷ್ಣ, ಉಗ್ರ, ತೀವ್ರ; ಉತ್ಸಾಹವುಳ್ಳ. गरम करना = ಬಿಸಿ ಮಾಡು, ಬೆಚ್ಚಗೆ ಮಾಡು; ಲಂಚಕೊಡು; ಪ್ರೇರೇಪಿಸು; ರೇಗಿಸು; ಛೂ ಬಿಡು. गरम होना = ಬಿಸಿಯಾಗು, ಕಾವು ಏರು; ರೇಗು; ಗಿರಾಕಿ ಹೆಚ್ಚಾಗು, ಸರಕು ತಗ್ಗಾಗು, ತುಟ್ಟಿಯಾಗು. गरम ख़बर = ಹೊಸ ವರ್ತಮಾನ, ಬಿಸಿ ಬಿಸಿ ಸುದ್ದಿ.

**गरम जोशी**, स्त्री. ಪ್ರೇಮ ತಾಪ, ಪ್ರೇಮಾಧಿಕ್ಯ.

**गरम-मसाला**, पु. ಸಂಬಾರದ ಸಾಮಾನು, ಗರಂ ಮಸಾಲೆ.

**गरम-सर्द**, वि. ಉಗುರು ಬೆಚ್ಚಗಾದ. पु. ಜೀವನದ ಕೀಳು ಮೇಲುಗಳು, ಕಷ್ಟ ಸುಖಗಳು.

**गरमाई**, स्त्री. ಉಷ್ಣ; ಉಷ್ಣಪದಾರ್ಥ; ಉದ್ದೀಪಕ ವಸ್ತು.

**गरमागरम**, वि. ಬಿಸಿ ಬಿಸಿ; ತಾಜಾ.

**गरमागरमी**, स्त्री. ಉತ್ಸಾಹ; ಬಿಸಿ, ಕಾವು; ವಾಗ್ವಾದ.

**गरमाना**, अक्रि. ಉಷ್ಣವಾಗು, ಬಿಸಿಯಾಗು, ಕಾವು ಏರು; ಕೋಪಗೊಳ್ಳು, ರೇಗು; ಚೈತನ್ಯ ಬರು; ಉತ್ಸಾಹ ಹುಟ್ಟು; ಬೆದೆಗೊಳ್ಳು, ಮದ ಹತ್ತು; ವೇಗ ಹುಟ್ಟು, ಪ್ರಬಲವಾಗು, ಜೋರಾಗು. सक्रि. ಬಿಸಿ ಮಾಡು, ಕಾಸು; ಕಾವು ಕೊಡು. हाथ गरमाना = ಕೈ ಬೆಚ್ಚಗೆ ಮಾಡು, ಲಂಚ ಕೊಡು.

**गरमाहट**, स्त्री. ಉಷ್ಣ, ಬಿಸಿ.

**गरमी**, स्त्री. ಉಷ್ಣ, ಕಾವು; ಉಷ್ಣತೆ, ಸೆಕೆ; ಬೇಸಿಗೆ; ತೀಕ್ಷ್ಣತೆ, ಆವೇಶ; ಕೋಪ; ಉದ್ರೇಕ; ಉಷ್ಣ ರೋಗ, ಮೇಹ ರೋಗ, ಫರಂಗಿ ರೋಗ. गरमी पड़ना = ಉಷ್ಣವಾಗಿರು, ಸೆಕೆಯಾಗು.

**गरराना**, अक्रि. ಅಬ್ಬರಿಸು, ಮೊರೆ.

**गरल**, पु. ವಿಷ.

**गरां**, वि. ಭಾರಿ; ಘನವಾದ; ಅಸಹ್ಯ.

**गरांव**, पु. ಪಶುಗಳ ಕುತ್ತಿಗೆಗೆ ಕಟ್ಟುವ ಎರಡು ಹುರಿಯ ಹಗ್ಗ, ಕಣ್ಣಿ, ದಾಮನಿ

**गरा**, पु. ಕತ್ತು, ಕುತ್ತಿಗೆ, ಕಂಠ.

**गराड़ी**, स्त्री. ಬಾವಿಯ ರಾಟೆ, ಗಡೆಗಡೆ; ನೂಲು ಹೊಸೆಯುವ ರಾಟೆ; ಸವೆಯುವುದರಿಂದಾಗುವ ಆಳವಾದ ಗೆರೆ, ಸಂದು ಗೆರೆ.

**गराना**, सक्रि. ಕರಗಿಸು; ಗಂಧ ತೇಯು.

**ग़राम**, पु. ಅತ್ಯಾಸೆ, ಲೋಭ; ಪ್ರೀತಿ,

ಪ್ರೇಮ; ಅನರ್ಥ.

**गरारा,** वि. ಗರ್ವವುಳ್ಳ; ಪ್ರಬಲ, ಪ್ರಚಂಡ. पु. ಡೇರೆಯ ಸಾಮಾನು ಗಳನ್ನು ಕಟ್ಟಿ ಇಡುವ ಚೀಲ.

**ग़रारा,** पु. ಬಾಯಿ ಮುಕ್ಕಳಿಸುವಿಕೆ; ಬಾಯಿ ಮುಕ್ಕಳಿಸುವ ಔಷಧ; ದೊಡ್ಡ ಚೀಲ; ಷರಾಯಿಯ ಕಾಲುಗಳು.

**गरारी,** स्त्री. = **गराड़ी.**

**गरावन,** पु. = **गरांव.**

**गरिमा,** स्त्री. ಭಾರ, ಗುರುತ್ವ; ಮಹತ್ವ

**गरियाना,** सक्रि. ನಿಂದಿಸು, ಬೈಯು.

**गरियार,** वि. ಸೋಮಾರಿಯಾದ, ಮಂದವಾದ.

**गरी,** स्त्री. ತೆಂಗಿನ ಗಿಟಕು; ತಿರುಳು.

**ग़रीब,** वि. ಪರದೇಶಿ, ಅನಾಥ, ದೀನ; ಗರೀಬ, ದರಿದ್ರ, ಬಡ; ನಮ್ರ; ವಿಲಕ್ಷಣ.

**ग़रीबख़ाना,** पु. ಬಡವನ ಮನೆ, ಗುಡಿಸಲು.

**ग़रीबनवाज़,** वि. ಬಡವರಲ್ಲಿ ದಯೆ ತೋರುವವ, ದೀನದಯಾಲು, ದೀನ ಬಂಧು.

**ग़रीबनवाज़ी,** स्त्री. ದಯೆ, ಆದರಣೆ.

**ग़रीबपरवर,** वि. ಬಡವರನ್ನು ಕಾಪಾ ಡುವವ, ದೀನರಕ್ಷಕ.

**ग़रीबपरवरी,** स्त्री. ಬಡವರ ರಕ್ಷಣೆ, ದೀನೋದ್ಧಾರ.

**ग़रीबाना,** वि. ದರಿದ್ರದ, ಬಡರೀತಿಯ; ಬಡವರಂತಹ.

**ग़रीबी,** स्त्री. ದರಿದ್ರ, ದಾರಿದ್ರ್ಯ, ಬಡತನ; ದೈನ್ಯ, ನಮ್ರತೆ.

**गरू,** वि. ಭಾರವಾದ; ಭಾರಿ.

**ग़रूर,** पु. ಗರ್ವ, ಅಹಂಕಾರ.

**ग़रूरी,** वि. ಅಹಂಕಾರಿ, ಗರ್ವಿಷ್ಠ.

**गरेबान,** पु. ಅಂಗಿಯ ಕತ್ತು ಪಟ್ಟಿ, ಕೊರಳು ಪಟ್ಟಿ, "ಕಾಲರು".

**गरेरना,** सक्रि. ಮುತ್ತಿಕೊಳ್ಳು.

**गरैयाँ,** स्त्री. = **गरांव.**

**गरोह,** पु. ದಳ, ಹಿಂಡು, ಗುಂಪು.

**ग़र्क़,** वि. ಮಗ್ನನಾದ, ಮುಳುಗಿದ; ಲುಪ್ತವಾದ; ಹಾಳಾದ.

**ग़र्क़ाब,** वि. ನೀರಲ್ಲಿ ಮುಳುಗಿದ, ಮಗ್ನ

**ग़र्क़ी,** स्त्री. ಪ್ರವಾಹ, ಜಲಪ್ರಳಯ; ಮುಳುಗುವಿಕೆ; ನೀರಿನ ಕೆಳಗಿರುವ ಭೂಮಿ, ತಗ್ಗು ನೆಲ, ಕಿನ್ನೆಲ. ग़र्क़ी में आना = ಮುಳುಗಿಹೋಗು.

**गर्गज,** पु. ಅಟ್ಟ; ಗಲ್ಲು ಮರ; ಗೋ ಪುರ, ಬುರುಜು, ಕೊತ್ತಳ; ಕೋಟೆಯ ಮೇಲಿನ ಕೈಪಿಡಿ ಗೋಡೆ; ಅಳುವೇ...

**गर्गरी,** स्त्री. ಬಟ್ಟಲು, ಲೋಟಾ.

**गर्ज,** स्त्री. = **गरज.**

**गर्जन,** पु. ಗುಟುರು; ಗರ್ಜನೆ; ಅಬ್ಬರ, ಗುಡುಗು.

**गर्जना,** अक्रि. = **गरजना.**

**गर्त्त,** पु. ಕುಣಿ; ಗುಂಡಿ; ಹಳ್ಳ, ಹೊಂಡ; ಬಿರುಕು; ಕಮರಿ.

**गर्द,** स्त्री. ಧೂಳು, ದುಂಬು; ಮಣ್ಣು. गर्द गुबार = ಧೂಳು ದುಂಬು, ಮಣ್ಣು ಮಸಂಡಿ.

**गर्दख़ोर, गर्दख़ोरा,** वि. ಧೂಳು ಬಿದ್ದರೂ ಬೇಗನೆ ಮಾಸದ. पु. ಧೂ...

ಒರೆಸುವ ಗೋಣಿ ತಟ್ಟು; ತೆಂಗಿನ ನಾರಿನ ತಾಟು, ಕಾಲೊರೆಸಿ.
**गर्दन**, पु. = गरदन.
**गर्दाबाद**, वि. ಧೂಳು ಸೇರಿದ, ಮಣ್ಣು ಗೂಡಿದ; ಹಾಳು ಬಿದ್ದ.
**गर्दाल्ल**, पु. ಒಂದು ಬಗೆ ಬಾದಾಮಿ.
**गर्दिश**, स्त्री. ತಿರುಗುವಿಕೆ, ಸುತ್ತುವಿಕೆ; ಕಾಲಚಕ್ರ; ವಿಪತ್ತು, ದುರದೃಷ್ಟ.
**गर्भ**, पु. ಗರ್ಭ, ಬಸುರು; ಸೂಲು; ಹೊಟ್ಟೆ; ಗರ್ಭಾಶಯ.
**गर्भपात**, पु. ಗರ್ಭಸ್ರಾವ, ಹಲಿವಿಳಿಯುವಿಕೆ.
**गर्रा**, वि. ನಸುಗೆಂಪು, ಕೆಂಚ ಬಣ್ಣದ.
**ग़र्रा**, पु. ಗರ್ವ, ಅಹಂಕಾರ.
**गर्री**, स्त्री. ನೂಲು ಸುತ್ತುವ ರಾಟೆ, ಅರಟೆ; ಹುಲ್ಲು ಮೆದೆ, ಬಣವೆ.
**गर्व**, पु. ಗರ್ವ, ಅಹಂಕಾರ.
**गर्वी**,**गर्वीला**,वि.ಗರ್ವಿಷ್ಠ,ಅಹಂಕಾರಿ
**गर्हण**, पु. ಬೈಗಳು, ದೂರು.
**गलंदा**, वि. ಬೈಯುವವ, ನಿಂದಿಸುವವ, ದುರ್ಭಾಷಿ.
**गल**, पु. ಕಂಠ, ಕತ್ತು, ಗಂಟಲು; ಗಾಳ.
**गलकंज**, पु. ಗಲಾಟೆ, ಗದ್ದಲ.
**गलकंजना**, अक्रि. ಗದ್ದಲ ಮಾಡು, ಗಲಾಟೆ ಮಾಡು.
**गलकंबल**, पु. ಹಸುವಿನ ಕುತ್ತಿಗೆಯ ಕೆಳಭಾಗದಲ್ಲಿ ನೇತಾಡುವ ಚರ್ಮ, ಗಂಗೆದೊಗಲು.
**गलका**, स्त्री. ಗುಳ್ಳೆ; ಬೆರಳು ಕುರು, ಉಗುರುಸುತ್ತು; ಚಾವಟಿ, ಚಬುಕು.
**गलगंड**, स्त्री. ಗಂಡಮಾಲೆ.
**गलगल**, पु. ಹೇರಳೆಕಾಯಿ, ದೆಗ್ಗಿರಳೆ ಕಾಯಿ; ಒಂದು ಪಕ್ಷಿ; ವಜ್ರಗಾರೆ.
**गलगला**, वि. ಒದ್ದೆಯಾದ, ತೇವ.
**गलगलाना**, अक्रि. ಒದ್ದೆಯಾಗು.
**गलगाजना**, अक्रि. ಜಂಭ ಕೊಚ್ಚು; ಬಡಿವಾರ ಹೇಳು; ಬಾಯಿ ಬಡಿ.
**गलगुथना**, वि. ಉಬ್ಬುಗಲ್ಲದವ, ದುಬ್ಬ, ಡೊಳ್ಳ.
**गलछट**, स्त्री. = गलफड़ा.
**गलजंदड़ा**, पु. ಕುತ್ತಿಗೆ ಮೇಲೆ ಕೂಡುವವ; ಘಾಯವಾದ ಕೈಯನ್ನು ಮಡಿಸಿ ಕುತ್ತಿಗೆಗೆ ಸೇರಿಸಿ ಕಟ್ಟುವ ಪಟ್ಟಿ.
**गलझफ**,पु. ಆನೆಯ ಕುತ್ತಿಗೆಯ ಸರಪಳಿ
**ग़लत**, वि. ಅಶುದ್ಧ, ತಪ್ಪುಳ್ಳ, ತಪ್ಪಾದ, ಅಪದ್ಧ; ಸುಳ್ಳು.
**ग़लतनामा**, पु. ಶುದ್ಧಾಶುದ್ಧ ಪತ್ರಿಕೆ, ಒಪ್ಪೋಲೆ.
**गल-तकिया**, पु. ಚಿಕ್ಕ ದಿಂಬು.
**ग़लत-फ़हमी**, स्त्री. ತಪ್ಪು ತಿಳಿವಳಿಕೆ; ಭ್ರಾಂತಿ, ಭ್ರಮೆ.
**गलतनी**, स्त्री. ಕುದುರೆಯ ಮುಖ ಪಟ್ಟಿ, ಮೊಗವಾಡ.
**गलतां**, पु. ಒಂದು ಬಗೆ ಬಟ್ಟೆ.
**ग़लता**, पु. ಚರ್ಮದ ಒರೆ; ದಟ್ಟವಾಗಿ ನೆಯ್ದ ರೇಷ್ಮೆ ಬಟ್ಟೆ.
**गलताड़**, पु. ನೊಗದ ಕೀಲಿ.
**ग़लतान**, पु. ಒಂದು ಬಗೆ ಬಟ್ಟೆ. वि. ಹೊರಳುವ, ತಿರುಗುವ.
**ग़लती**, स्त्री. ತಪ್ಪು, ಅಶುದ್ಧ; ಭ್ರಮೆ.

**गलथन, गलथना**, पु. ಆಡಿನ ಕೊರಳ ಮೊಲೆ, ಮಣಿ, ಸುಮ್ಮನ ಮೊಲೆ, ಅಜಾಗಳಸ್ತನ.

**गलथैली**, स्त्री. ಆಹಾರ ವಸ್ತುಗಳನ್ನು ಅಡಗಿಸಿಕೊಳ್ಳಲು ಕೋತಿಯ ಬಾಯೊಳಗಿರುವ ಚೀಲ.

**गलन**, पु. ಪತನ; ಕರಗುವಿಕೆ.

**गलना**, अक्रि. ಕರಗು, ಜಿನುಗು; ಬೇಯು; ಕೊಳೆ, ಹಳಸು, ಮುಗ್ಗು; ಬಡವಾಗು, ಕ್ಷೀಣಿಸು.

**गलनी**, स्त्री. ಕ್ಷಯ, ಕ್ಷಯ ರೋಗ.

**गलफट**, स्त्री. ಜಂಭ, ಬಡಿವಾರ, ಜಲ್ಲಿ.

**गलफटाकी**, स्त्री. ಜಂಭ, ಬಡಿವಾರ; ಬಾಯಿ ಬಡಿಯುವಿಕೆ; ಬೈಯುವಿಕೆ.

**गलफड़ा**, पु. ದವಡೆ, ಕದಪು; ಜಲಜಂತುಗಳ ಶ್ವಾಸಕೋಶ; ಕಿವುರು.

**गलफांसी**, स्त्री. ಗಲ್ಲಿಗೆ ಏರಿಸುವಿಕೆ, ಫಾಸಿ; ಶೂಲ.

**गलफूला**, वि. ಉಬ್ಬು ಗಲ್ಲದವ; ಕೊಬ್ಬಿದವ.

**गलबही, गलबांही**, स्त्री. ಕಂಠದಲ್ಲಿ ಕೈ ಹಾಕುವಿಕೆ; ಕಂಠಾಲಿಂಗನ, ಕಂಠಲಗ್ನ. गलबहियां डालना = ಕತ್ತಿನ ಮೇಲೆ ಕೈಹಾಕಿ ಆಲಿಂಗನ ಮಾಡು.

**गलमंदरी**, स्त्री. ದೇವರ ಪೂಜೆಯಾಗುವಾಗ ಕೆನ್ನೆಗೆ ಹೊಡೆದುಕೊಳ್ಳುವಿಕೆ, ಗಲ್ಲ ಗಲ್ಲ ಬಡಿದುಕೊಳ್ಳುವಿಕೆ.

**गलमुच्छा**, पु. ದವಡೆಯ ಮೇಲಿನ ಕೂದಲು, ಗಲ್ಲಮೀಸೆ.

**गलमुद्रा**, स्त्री. = गलमंदरी.

**गलवाना**, सक्रि. गलना का प्रे. रू.

**गलशुंडी**, स्त्री. ಅಣ್ಣಾಲಿಗೆ, ಕಿರುನಾಲಿಗೆ; ಕಿರುನಾಲಿಗೆಯ ಬಾವು.

**गलसुआ**, पु. ಗಂಟಲುವಾಳ, ಗಂಟಲು ಉಬ್ಬು; ಮಂಗಬಾವು.

**गलसुई**, स्त्री. ಚಿಕ್ಕ ದಿಂಬು.

**गलस्तन**, पु. = गलथना.

**गलहड़, गलहर**, पु. ಗಂಟಲುನಾಳ.

**गलही**, स्त्री. ಹಡಗಿನ ಮುಂಭಾಗ.

**गलहैया**, पु. ಹಡಗಿನ ಮುಂಭಾಗದ ನಿಗಾವಣೆ ಮಾಡುವ ಉದ್ಯೋಗಸ್ಥ; ತಂಡೇಲು.

**गला**, पु. ಕತ್ತು, ಕುತ್ತಿಗೆ; ಕೊರಳು; ಕಂಠ, ಗಂಟಲು; ಗಂಟಲುವಾಳ, ನಳಿಗೆ, ಗೊಟ್ಟಿ. गला फूटना = ಗಂಟಲು ಒಡೆ, ಕೊರಳೊಡೆ. गले बांधना या मढ़ना = ಬಲವಂತಪಡಿಸಿ ಕೊಡು, ಕುತ್ತಿಗೆಗೆ ಕಟ್ಟು. गले लगाना = ಆಲಿಂಗನ ಮಾಡು; ಬಲವಂತಪಡಿಸಿ ಕೊಡು.

**गलाऊ**, वि. ಕರಗುವ; ಕರಗಿಸುವ; ಕೊಳೆಯಿಸುವ, ಹಳಸುವ.

**गलाना**, सक्रि. ಕರಗಿಸು, ಜಿನುಗಿಸು; ಬೇಯಿಸು; ಬಡವಾಗಿಸು; ವ್ಯರ್ಥ ಖರ್ಚುಮಾಡು, ಸೂರೆಮಾಡು; ಹೀಣ...

**गलार**, पु. ಮೈನ, ಗೊರವಂಕ.

**गलाव**, पु. ಕರಗುವಿಕೆ; ಕರಗಿದ್ದು; ದ್ರಾವಣ.

**गलित**, वि. ಬಿದ್ದುಹೋದ; ಜೀರ್ಣವಾದ; ಕರಗಿ ಹೋದ.

गलिया, पु. ಕೆಲಸದ ಮಧ್ಯದಲ್ಲಿ ಮಲಗಿ ಬಿಡುವ ಎತ್ತು, ಜಂಡಿಎತ್ತು; ಬೀಸುವ ಕಲ್ಲಿನಲ್ಲಿ ಕಾಳು ಹಾಕುವ ರಂಧ್ರ.

गलियाना, सक्रि. ಬೈಯು, ನಿಂದಿಸು; ಬಲಸಂತದಿಂದ ಔಷಧವನ್ನು ಕುಡಿಸು

गलियारा, पु. ಸಣ್ಣ ಗಲ್ಲಿ, ಓಣಿ.

गली, स्त्री. ಗಲ್ಲಿ, ಓಣಿ, ಸಂದು; ಮೊಹಲ್ಲ. गली व गली = ಬೀದಿ ಬೀದಿಗೂ, ಗಲ್ಲಿ ಗಲ್ಲಿಗೂ.

ग़लीचा, पु. ರತ್ನಗಂಬಳಿ, ಜಮಖಾನೆ, ತಿವಾಸಿ.

ग़लीज़, वि. ದಪ್ಪವಾದ; ಹೊಲಸಾದ, ಗಲೀಜಾದ; ಕೊಳಕಾದ. पु. ಕಸಕಡ್ಡಿ, ಕೊಳಕು, ಗಲೀಜು; ಮಲ.

गलेबाज़, वि. ಒಳ್ಳೆಯ ಕಂಠವುಳ್ಳವ, ಮಧುರ ಸ್ವರವುಳ್ಳವ.

गल्प, स्त्री. ಹರಟೆ, ಜಲ್ಪ; ಜಲ್ಲಿ, ಬಡಿವಾರ, ಜಂಭ; ಸಣ್ಣ ಕಥೆ, ಲಘು ಕಥೆ, ಕಿರುಗತೆ

गल्ला, पु. ಮಂದೆ, ಹಿಂಡು; ಗುಲ್ಲು, ಗುಬಾರು.

ग़ल्ला, पु. ದವಸ, ಧಾನ್ಯ; ಬೆಳೆ, ಪೈರು; ಹುಟ್ಟುವಳಿ, ಬಿಕರಿಯ ಹಣ; ಬಿಕರಿಯ ಹಣವನ್ನಿಟ್ಟುಕೊಳ್ಳುವ ಬಟ್ಟಲು ಅಥವಾ ಪೆಟ್ಟಿಗೆ.

ग़ल्लादान, पु. ಧಾನ್ಯದ ಕೋಠಿ, ಕಣಜ.

ग़ल्लाफ़रोश, पु. ದಿನಸಿ ವ್ಯಾಪಾರಿ.

गल्लाबान, पु. ದನ ಕಾಯುವವ, ಗೊಲ್ಲ

गल्लाबानी, स्त्री. ದನ ಕಾಯುವಿಕೆ.

गवँ, स्त्री. ಸುಸಮಯ, ಹೊಂಚು; ಪ್ರಯೋಜನ. गवँ से = ಸಮಯ ನೋಡಿ, ಮೆತ್ತಗೆ.

गवनचार, गवना, पु. = गौना.

गवाक्ष, गवाख, गवाछ, स्त्री. ಗವಾಕ್ಷಿ, ಬೆಳಕಂಡಿ, ಜಾಳಾಂಧ್ರ.

गवाना, सक्रि. गाना का प्रे. रूप.

गवारा, वि. ರುಚಿಕರ, ಪಸಂದಾದ; ಮಧುರ; ಅನುಕೂಲವಾದ; ಒಪ್ಪಿಕೆಯ

गवासा, स्त्री. ತಲೆ ಕಡಿಯುವ ಸ್ಥಳ, ವಧ್ಯಸ್ಥಾನ.

गवाह, पु. ಸಾಕ್ಷಿ, ಸಾಕ್ಷಿಗಾರ. चश्मदीद गवाह = ಕಣ್ಣಾರೆ ನೋಡಿದ ಸಾಕ್ಷಿ.

गवाही, स्त्री. ಸಾಕ್ಷ್ಯ, ಪ್ರಮಾಣ; ಪುರಾವೆ, ತಾರ್ಕಣೆ.

गवेजा, पु. ಮಾತುಕತೆ; ಹರಟೆ.

गवेरुक, पु. ಕಾವಿ ಕಲ್ಲು.

गवेषणा, स्त्री. ಪರಿಶೋಧನೆ, ಹುಡುಕುವಿಕೆ.

गवैंहाँ, वि. ಹಳ್ಳಿಯವ, ಗಮಾರ.

गवैया, पु. ಹಾಡುಗಾರ, ಗಾಯಕ.

ग़श, पु. ಮೂರ್ಛೆ, ಬವಳಿ, ಜೋಂಗುಳಿ. ग़श खाना = ಮೂರ್ಛೆ ಹೋಗು.

ग़श्त, पु. ಸುತ್ತು; ತಿರುಗಾಟ, ಅಡ್ಡಾಟ, ಸಂಚಾರ; ಪೋಲೀಸರ ಗಸ್ತು, ಗಸ್ತಿ, ಲೋಂದು. ग़श्त फिरना या लगाना = ಗಸ್ತು ತಿರುಗು, ಲೋಂದು ತಿರುಗು

ग़श्ती, पु. ಸುತ್ತುವವ, ಪಹರೇದಾರ; ಗಸ್ತು ತಿರುಗುವವ; ಸರ್ವರಿಗೂ ಬರೆದು ಕಳುಹಿಸಿದ ಪತ್ರ, ಸುತ್ತೋಲೆ. स्त्री. ವ್ಯಭಿಚಾರಿಣಿ.

गसना, सक्रि. ಬಿಗಿಸು, ಜಡಾಯಿಸು.

ग़सब, पु. ಅಪಹರಣ, ಧನಾಪಹರಣ.
गसीला, वि. ಬಿಗಿಯಾದ, ಒತ್ತಾದ; ದಟ್ಟವಾಗಿ ನೆಯ್ದ.
गस्सा, पु. ತುತ್ತು, ಕವಳ.
गह, स्त्री. ಮುಷ್ಟಿ; ಹಿಡಿ; ಕಾವು; ಮುಹಡಿ
गहक, स्त्री. ಉತ್ಸಾಹ, ಮುತಃವರ್ಜಿ.
गहकना, अक्रि. ಆಸಕ್ತನಾಗು, ಹುರಿದುಂಬು; ಸೊಕ್ಕು, ಗರ್ವಗೊಳ್ಳು; ಹರ್ಷಿಸು.
गहगड्ड, वि. ಗಡದು, ಗಾಢ.
गहगहाना, अक्रि. ಸಂತೋಷದಿಂದ ಉಬ್ಬು, ಹಿಗ್ಗು; ಕೊನರು, ಚಿಗುರು.
गहगहे, क्रिवि. ಉತ್ಸಾಹದಿಂದ, ಉಬ್ಬಿನಿಂದ; ವಿಜೃಂಭಣೆಯಿಂದ.
गहडोरना, सक्रि. ಕದಡು, ಕಲಕು.
गहन, वि. ಆಳವಾದ; ಕಠಿಣವಾದ; ನಿಬಿಡ पु. ಆಳ, ಗಹನತೆ; ಗ್ರಹಣ; ಕಷ್ಟ; ಹೊದರು; ವನ; ಅಡವಾನ, ಒತ್ತೆ, ಗಿರಿವಿ.स्त्री. ಹಿಡಿತ, ಪಟ್ಟು; ಹಟ, ಜಿದ್ದು.
गहना, सक्रि. ಹಿಡಿ, ಹಿಡುಕೊಳ್ಳು, ತುಡುಕು. अक्रि. ಸಂಕೋಚ ಪಡು, ನಾಚು. पु. ಒಡವೆ, ದಾಗೀನು, ನಗ; ಒತ್ತೆ, ಗಿರಿವಿ, ಅಡವಾನ.
गहबरना, अक्रि. ಆವೇಶಗೊಳ್ಳು; ಕಳವಳಗೊಳ್ಳು, ಕಾತರಿಸು.
गहर, स्त्री. ಹೊತ್ತು, ತಡ, ವಿಳಂಬ.
गहरना, अक्रि. ತಡಮಾಡು, ಹೊತ್ತುಮಾಡು; ರೇಗು, ಸಿಟ್ಟಾಗು; ಜಗಳವಾಡು
गहरा, वि. ಆಳವಾದ, ಅಗಾಧವಾದ; ಗಾಢ; ಗಂಭೀರವಾದ; ಗಟ್ಟಿಯಾದ, ದೃಢ; ಬಹಳವಾದ. गहरा रंग= ಅಚ್ಚ ಬಣ್ಣ. गहरी घुटना या छनना =ಬಹಳ ಸ್ನೇಹವಾಗು.
गहराई, स्त्री. ಆಳ; ಗಾಂಭೀರ್ಯ.
गहराना, अक्रि. ಆಳವಾಗು. सक्रि. ಆಳವಾಗಿ ಮಾಡು.
गहराव, पु. ಆಳ; ಗಾಂಭೀರ್ಯ.
गहवा, पु. ಇಕ್ಕಳ, ಪಟಕಾರು, ತಂ[illegible]
गहलौत, पु. ರಾಜಪುತ್ರಸ್ಥಾನದ ಒಂ[illegible] ಕ್ಷತ್ರಿಯ ವಂಶ.
गहवाना, सक्रि. गहना का प्रे. [illegible]
गहवारा, पु. ಉಯ್ಯಾಲೆ, ತ[illegible] ಮಂಚ; ತೊಟ್ಟಿಲು.
गहाई, स्त्री. ಧಾನ್ಯದ ಒಕ್ಕಣೆ.
गहाना, सक्रि. ಹಿಡಿಯಿಸು, ಹಿ[illegible] ಗೊಡು.
गहेजुआ, ಸುಂಡಿಲಿ.
गहेला, वि. ಹಟಮಾರಿ; ಅಹಂಕಾ[illegible] ಹುಚ್ಚ; ದಡ್ಡ.
गहैया, वि. ಹಿಡುಕೊಳ್ಳುವವ; ಸ್ವೀ[illegible]ರಿಸುವವ.
गांछना, सक्रि. ಬಿಗಿ ಹಿಡಿ; ಕ[illegible] ಕೊಳ್ಳು, ಅಪ್ಪಿಕೊಳ್ಳು.
गांज, पु. = गंज.
गांजना, सक्रि. ಕೂಡಿಡು, ಗ[illegible] ರಾಶಿ ಹಾಕು.
गांजा, पु. ಸಣಬು; ಗಾಂಜಾ.
गांठ, स्त्री. ಗಂಟು, ಮೂಟೆ; [illegible] ಕಟ್ಟು; ಗಣಲು, ಗಿಣ್ಣು, ಗಣಿಕೆ; [illegible] ಯಾದ ಮಾಂಸಗ್ರಂಥಿ; ಅರಿ[illegible]

ಕೊನೆ; ಗೋಡೆ; ಅಡಚಣೆ, ತೊಡಕು; ವೈಮನಸ್ಯ, ಮನಸ್ತಾಪ. गांठ पड़ना = ಸಿಕ್ಕಾಗು, ಗಂಟುಬೀಳು; ವೈಮನಸ್ಯ ವುಂಟಾಗು. गांठ का = ಸ್ವಂತವಾದ. गांठ का पूरा = ಧನಿಕ, ಹಣವಂತ. गांठ काटना = ಗಂಟುಕತ್ತರಿಸು, ಕದಿ

**गांठगोभी,** स्त्री. ಒಂದು ಬಗೆ ಕೋಸುಗೆಡ್ಡೆ.

**गांठदार,** वि. ಗಂಟುಗಂಟಾದ, ಗಣಿಕೆಗಳುಳ್ಳ.

**गांठना,** सक्रि. ಗಂಟು ಹಾಕು, ಕಟ್ಟು; ಸೇರಿಸು; ಸೇರಿಸಿ ಹೊಲಿ, ತೇಪೆ ಹಾಕು; ನಿಭಾಯಿಸು, ಸಾಧಿಸು; ಒಲಿಸಿಕೊಳ್ಳು, ವಶಪಡಿಸು; ಬಿಗಿ ಹಿಡಿ; ಪೆಟ್ಟನ್ನು ತಡೆ, ಅಡಗಣಿಸು; ಮುಚ್ಚು, ಮರೆ ಮಾಡು; (ಸಾಹಿತ್ಯ) ರಚಿಸು.

**गांड,** स्त्री. ಗಾಂಡು, ಗುದ, ಕುಂಡೆ.

**गांडर,** स्त्री. ಗಂಡಾಲಿ, ಬಳ್ಳಿಗರುಕೆಹುಲ್ಲು

**गांडा,** पु. ತುಂಡು; ಕಬ್ಬಿನ ತುಂಡು.

**गांथना,** सक्रि. ಜೋಡಿಸು, ಪೋಣಿಸು, ಪವಣಿಸು; ಟಾಕ ಹಾಕು, ಹೊಲಿ; ವಶ ಮಾಡು.

**गांधी,** पु. ಗಂಧ ದ್ರವ್ಯ ಮಾರುವವ; ಹಸುರು ಬಣ್ಣದ ಒಂದು ಹುಳು; ಗುಜರಾತಿ ವೈಶ್ಯರ ಒಂದು ಒಳ ಜಾತಿ.

**गाँव, गाँव,** पु. ಹಳ್ಳಿ, ಗ್ರಾಮ. गाँव गिराव = ಹಳ್ಳಿ ಪಳ್ಳಿ, ಹಳ್ಳಿಗಾಡು. गाँव देना = ಔತಣ ಮಾಡಿಸು.

**गांवना,** सक्रि. ಗಾನ ಮಾಡು, ಹಾಡು.

**गांस,** स्त्री. ಅಡ್ಡಿ, ಅಡಚಣೆ, ತೊಡಕು; ಇರಕು, ತೊಂದರೆ; ದ್ವೇಷ; ಗುಟ್ಟು, ರಹಸ್ಯ; ಗಂಟು; ವೈಮನಸ್ಯ; ಮೊನೆ; ಅಡಳಿತ; ಹತೋಟಿ, ಮೇಲಾರೈಕೆ.

**गांसना,** सक्रि. ಕಚ್ಚಿಕೊಳ್ಳು; ಇರಕು; ಇರಿ, ಚುಚ್ಚು, ತಿವಿ; ತುರುಕು; ದೂಡು; ಬಿಗಿಸು; ಪೋಣಿಸು; ಅಂಕೆಯಲ್ಲಿಡು, ಹತೋಟಿಯಲ್ಲಿಡು; ಇರಿ ಹಿಡಿ.

**गांसा,** पु. ಬೆರಳಿನ ಗಣಿಕೆ, ಗಣಲು, ಗಿಣ್ಣು.

**गांसी,** स्त्री. ಬಾಣದ ತುದಿ, ಮೊನೆ; ಕೊಕ್ಕೆ, ಗಂಟು; ವೈಮನಸ್ಯ, ಮನಸ್ತಾಪ; ಕಪಟ, ಮೋಸ.

**गागर, गागरी,** स्त्री. ಬಿಂದಿಗೆ, ಕೊಡಪಾನೆ.

**गाच,** स्त्री. ತೆಳುವಾದ ಒಂದು ಬಗೆ ಬಟ್ಟೆ

**गाछ,** पु. ಗಿಡ, ಮರ.

**गाछी,** स्त्री. ಹಸಿಬೆಚೀಲ, ಕಂಟಲೆ, ಕವುದಿ

**गाज,** स्त्री. ಸಿಟ್ಟು; ಗರ್ಜನೆ; ಗುಡುಗು; ಸಿಡಿಲು; ಗಾಜಿನ ಬಳೆ. पु. ನೊರೆ, ಬುರುಗು.

**गाजना,** अक्रि. ಗರ್ಜಿಸು, ಅಬ್ಬರಿಸು; ಕೆಲೆ, ಹರ್ಷಿಸು.

**गाजर,** स्त्री. ಗಾಜಿನ ಗೆಡ್ಡೆ, ಗಜ್ಜರಿ. गाजर मूली = ತುಚ್ಛವಾದ ವಸ್ತು.

**गाजा बाजा,** पु. ಹಲವು ವಾದ್ಯಗಳ ಘೋಷ, ಬಾಜಾ ಬಜಂತ್ರಿ.

**ग़ाज़ा,** पु. ಮುಖಕ್ಕೆ ಹಚ್ಚಿಕೊಳ್ಳುವ ಲೇಪ ಅಥವಾ ಪೌಡರ್, ಅಂಗಲೇಪನ, ಅಂಗರಾಗ.

**ग़ाज़ी,** पु. ಧರ್ಮಕ್ಕಾಗಿ ಯುದ್ಧಮಾಡು

ವವ, ವೀರ ಪುರುಷ, ಕಡುಗಲಿ.

**गाटा**, पु. ಭೂಮಿ, ಜಮೀನು.

**गाड़**, स्त्री. ಕುಳಿ, ಹಳ್ಳ, ಹೊಂಡ. गाड़-थोप = ಹೂಳಿಡುವುದು, ಹೂಳಿಕೆ, ಭೂಸ್ಥಾಪನೆ.

**गाड़ना**, सक्रि. ಹುಗಿ, ಹೂಳು; ನೆಡು, ನಾಟು; ಚುಚ್ಚು, ತಿವಿ; ಜಡಿ.

**गाड़र**, स्त्री. ಹೆಣ್ಣು ಕುರಿ.

**गाड़रू**, पु. ಹಾವಾಡಿಗ, ಗಾರುಡಿಗ; ಗರುಡ ಮಂತ್ರ.

**गाड़ा**, पु. ಕುಳಿ; ಹೊಂಚು ಕಾಯುವ ಕುಳಿ; ದರಿ; ಗವಿ; ದೊಡ್ಡ ಗಾಡಿ.

**गाड़ी**, स्त्री. ಗಾಡಿ, ಬಂಡಿ, ಚಕ್ಕಡಿ.

**गाड़ीख़ाना**, पु. ಗಾಡಿ ನಿಲ್ಲುವ ಸ್ಥಳ, ಗಾಡಿಯ ನಿಲ್ದಾಣ, ಗಾಡೀಖಾನೆ.

**गाड़ीवान**, पु. ಗಾಡಿ ಹೊಡೆಯುವವ, ಗಾಡಿಯವ, ಬಂಡಿಯಾಳು.

**गाढ़**, वि. ಹೆಚ್ಚಾದ; ದೃಢ; ಗಟ್ಟಿ; ಆಳವಾದ; ಕಠಿಣ. पु. ಕಷ್ಟ; ಸಂಕಟ.

**गाढ़ा**, वि. ಗಟ್ಟಿಯಾದ, ಘನೀಭೂತವಾದ; ಒತ್ತಾಗಿ ನೆಯ್ದ, ಧಡೂತಿ; ಗೂಢವಾದ; ಘನಿಷ್ಠ; ಕಷ್ಟವಾದ. पु. ಒಂದು ಬಗೆಯ ಒರಟು ಬಟ್ಟೆ, ಗಾಢಾ ಬಟ್ಟೆ; ಮದ ಹಿಡಿದ ಆನೆ.

**गात**, पु. ದೇಹ, ಮೈ.

**गाती**, स्त्री. ಹೊದೆಯುವ ವಸ್ತ್ರ.

**गात्र**, पु. ದೇಹ, ಶರೀರ, ಮೈ.

**गाथ**, पु. ಪ್ರಶಂಸೆ, ಕೀರ್ತಿ, ಗುಣಕಥನ.

**गाथा**, पु. ಸ್ತುತಿ, ಸ್ತೋತ್ರ, ಶ್ಲೋಕ; ಗೀತೆ, ಪದ.

**गाद**, स्त्री. ಮಡ್ಡಿ, ರಾಡಿ, ಗಸಿ; ಜರಟು, ಬಗ್ಗಡ; ಗೋಡು.

**गादड़**, पु. = गीदड़.

**गादना**, सक्रि. ಜಡಿ, ಜಡಾಯಿಸು.

**गादा**, पु. ಹಸಿ ಧಾನ್ಯ; ಚೆನ್ನಾಗಿ ಬಲಿಯದ ಕಾಳು, ಅರ್ಧ ಬಲಿತ ಧಾನ್ಯ.

**गादी**, स्त्री. ಒಂದು ಪಕ್ವಾನ್ನ; ಸುಪ್ಪತ್ತಿಗೆ; ಕವುದಿ, ದಿಂಬು; ಗದ್ದುಗೆ, ಗಾದಿ; ಪೀಠ; ಸಿಂಹಾಸನ.

**गाध**, पु. ಸ್ಥಳ; ತಳ; ನೀರಿನ ಬುಡ; ನದಿಯ ದಡ; ಲೋಭ. वि. ಆಳವಿಲ್ಲದ; ಸ್ವಲ್ಪ.

**गान**, पु. ಹಾಡುಗಾರಿಕೆ, ಗಾನ, ಹಾಡು.

**गाना**, पु. ಹಾಡು, ಗಾನ, ಹಾಡಿಕೆ; ಸಂಗೀತ. सक्रि. ಹಾಡು; ಪಠಿಸು; ಸ್ತುತಿಸು; ವರ್ಣಿಸು. गाना बजाना = ಹಾಡು ಬಜಾಯಿಸು. अपनी ही गाना = ತನ್ನ ಮಾತನ್ನೇ ಹೇಳುತ್ತಿರು.

**ग़ाफ़िल**, वि. ಅಜಾಗ್ರತೆಯಾದ, ಅಜಾಗರೂಕ, ಎಚ್ಚರಗೇಡಿ, ಪ್ರಮತ್ತ; ಅಶ್ರದ್ಧೆಯಾದ.

**गाब**, पु. ಒಂದು ಮರ.

**गाबा**, पु. = गाभा.

**गाभ**, स्त्री. ಸೂಲು, ತೆನೆ, ಗಬ್ಬ; ಅಂಕುರ. गाभ डालना = ಹಲಿಬೀ..

**गाभना**, सक्रि. ಜಬರಿಸು, ದಬಾಯಿಸು, ಪಚಾರಿಸು; ತಡೆ, ತಡೆಗಟ್ಟು.

**गाभा**, पु. ಚಿಗುರು; ಬಾಳೆಯ ಸುಳಿ; ಸುಪ್ಪತ್ತಿಗೆಯ ಒಳಗಿನಿಂದ ತೆಗೆದ ಹಳೆಯ ಹತ್ತಿ.

गाभिन, वि. ಸೂಲಾದ, ಗಬ್ಬಾದ (ಆಕಳು).
गाम, पु. ಗ್ರಾಮ, ಹಳ್ಳಿ; ಪಾದ, ಅಡಿ; ಹೆಜ್ಜೆ, ದಾಪು.
गामिज़, वि. ಕಠಿಣವಾದ; ಗೂಢ.
गाय, स्त्री. ಆಕಳು, ಹಸು, ದನ. गाय गोरू = ದನಕರು, ದನಗಂಟಿ.
गायक, पु. ಸಂಗೀತಗಾರ, ಹಾಡುಗಾರ
गायन, पु. ಹಾಡು, ಹಾಡುಗಾರಿಕೆ.
ग़ायब, वि. ಲುಪ್ತ, ವಿಲೀನ; ಅದೃಶ್ಯವಾದ, ಮಾಯವಾದ, ಮರೆಯಾದ; ಬಚ್ಚಿದ, ಗುಪ್ತ. पु. ಅದೃಶ್ಯವಾದದ್ದು; ಭವಿಷ್ಯ; ಅನ್ಯ ಪುರುಷ, ಪ್ರಥಮ ಪುರುಷ (ವ್ಯಾಕರಣ).
ग़ायबाना, क्रिवि. ಗುಪ್ತ ರೀತಿಯಲ್ಲಿ, ಮರೆಯಾಗಿ, ಗೋಪ್ಯವಾಗಿ.
गार, स्त्री. ಬೈಗಳು, ನಿಂದೆ, ತೆಗಳಿಕೆ. प्रत्य. ಮಾಡುವವ, -ಕಾರ -ಗಾರ. ಉದಾ:- कामगार, मददगार.
ग़ार, पु. ಹಳ್ಳ, ಗುಂಡಿ; ಕಮರಿ; ಗವಿ.
ग़ारत, वि. ನಷ್ಟವಾದ, ಹಾಳಾದ. पु. ನಾಶ, ಹಾಳು; ಸೂರೆ.
गारद, पु. ಪಹರೆ, ಪಾರಾ. ಕಾವಲು.
गारना, सक्रि. ಹಿಸುಕು, ಹಿಂಡು, ಕಿವುಚು; ಗಂಧ ತೇಯು, ಅರೆಯು; ಕರಗಿಸು; ನಾಶ ಮಾಡು.
गारा, पु. ಕಲಸಿದ ಮಣ್ಣು, ಗಾರೆ, ಗಚ್ಚು
गाल, पु. ಕೆನ್ನೆ, ಗಲ್ಲ; ಕಪಾಳ; ವಾಚಾಲತೆ, ಬಾಯಿ ಬಡಿದು ಮಾತಾಡುವಿಕೆ, ಮಾತು ಉಚಾಯಿಸುವಿಕೆ; ಮಧ್ಯ, ನಡು; ತುತ್ತು, ಕವಳ. गाल फुलाना = ಸಿಟ್ಟಾಗು, ರೇಗು. गाल बजाना या मारना = ಜಂಭ ಕೊಚ್ಚಿಕೊಳ್ಳು.
गालमसूरी, स्त्री. ಒಂದು ಮಿಠಾಯಿ.
गाला, पु. ಹತ್ತಿಯ ಹಂಜಿ, ಹಂಜಿಬತ್ತಿ; ಬಾಯಿ ಬಡುಕತನ; ಕೂಗಾಟ; ತುತ್ತು, ಕವಳ.
ग़ालिब, वि. ಬಲಿಷ್ಠ, ಬಲಯುತ; ಗೆದ್ದವ, ಜಯಿಸಿದವ; ಮೀರಿದ; ಉತ್ಕೃಷ್ಟ; ಸಂಭಾವಿತ, ಸಂಭಾವ್ಯ. गालिब आना या होना = ಗೆಲ್ಲು, ಜಯಿಸು; ಮೀರಿಸು.
ग़ालिबन्, क्रिवि. ಸಂಭಾವ್ಯ, ಸಂಭವತಃ, ಬಹುಶಃ.
गाली, स्त्री. ಬೈಗಳು, ನಿಂದೆ; ದೂರು, ತೆಗಳಿಕೆ. गाली खाना = ಬೈಯಿಸಿಕೊಳ್ಳು. गाली देना = ಬೈಯು.
गाली गलौज, स्त्री. गाली गुफ़्ता, पु. ಪರಸ್ಪರ ಬೈಯುವಿಕೆ, ಬಯ್ದಾಟ, ಡಕಾರ ಮಕಾರ.
ग़ालीचा, पु. = ग़लीचा.
गाल्ह, वि. ಜಂಭಗಾರ; ಹರಟೆ ಮಲ್ಲ; ಬಾಯಿ ಬಡುಕ; ವಾಚಾಲ.
गाव, स्त्री. ಗೋವು, ಆಕಳು, ಹಸು.
गावकुशी, स्त्री. ಗೋಹತ್ಯ, ಗೋವಧೆ.
गाव-खुर्द, वि. ಹಾಳಾದ, ಪೋಲಾದ.
गाव-ज़बान, स्त्री. ಗೋಜಿಹ್ವೆ ಗಿಡ.
गाव-तकिया, स्त्री. ದೊಡ್ಡ ದಿಂಬು, ಲೋಡು.
गावदी, पु. ಮುಟ್ಠಾಳ; ಕಿಸಬಾಯಿ.

गावदुम, गावदुमा, वि. ಗೋಪುಚ್ಛಾಕಾರದ, ತುದಿ ಕಡೆಗೆ ಸಣ್ಣದಾಗುತ್ತ ಹೋಗುವ; ಇಳಕಲ.

गासिया, पु. ಕುದುರೆ ಜೀನಿನ ಮೇಲೆ ಹಾಸುವ ಬಟ್ಟೆ, ಗಾಸಿ.

गाह, स्त्री. ಕೊಂಡುಕೊಳ್ಳುವವ, ಗ್ರಾಹಕ, ಗಿರಾಕಿ; ಹಿಡಿತ, ವಶ; ಸ್ಥಾನ, ಸ್ಥಳ; ಮೊಸಳೆ. गाह गाह = ಎಡೆಗೆಡೆಗೆ, ಆಗಾಗ್ಯೆ.

गाहक, पु. ಕೊಂಡುಕೊಳ್ಳುವವ, ಗಿರಾಕಿ; ವರ್ತನೆಗಾರ; ಮೆಚ್ಚುವವ; ಅಪೇಕ್ಷಿಸುವವ.

गाहकी, स्त्री. ಬಿಕರಿ, ಗಿರಾಕಿ.

गाहटा, पु. ಹುಲ್ಲೊಕ್ಕಲು.

गाहन, पु. ಮುಳುಗು, ಜಳಕ; ಕುಂಟೆ, ಗೋರುಮಣೆ, ಗೋರಿ.

गाहना, सक्रि. ತೆನೆ ಬಡಿ, ಒಕ್ಕು; ಕಡೆಯು, ಗೋಟಾಡಿಸು; ಕೂಲಂಕಷವಾಗಿ ವಿಚಾರಿಸು; ಅರಸು, ಹುಡುಕು.

गाहा, पु. ಗಾಥೆ, ಕಥೆ, ವೃತ್ತಾಂತ.

गाही, स्त्री. ಐವರ ಸಮೂಹ, ಪಂಚಕ.

गाहे, क्रिवि. ಯಾವಾಗಲಾದರೂ. गाहे गाहे = ಆಗಾಗ್ಗೆ. गाहे माहे = ಯಾವಾಗಲಾದರೂ, ಅಪರೂಪವಾಗಿ.

गिंजना, अक्रि. ನಲುಗು; ಕಿವುಚಲ್ಪಡು.

गिंजाई, स्त्री. ಒಂದು ಹುಳು; ನಲುಗುವಿಕೆ.

गिंडुरी, स्त्री. ಸಿಂಬೆ.

गिंदौड़ा, गिंदौरा, पु. ವಿವಾಹದಲ್ಲಿ ನೆಂಟರಿಷ್ಟರಿಗೆ ಹಂಚುವ ಕಲ್ಲುಸಕ್ಕರೆಯ ಅಗಲವಾದ ತುಂಡು

गिचपिच, गिचिर पिचिर, वि. ಅಸ್ಪಷ್ಟವಾದ, ಗಿಜಗಿಜ (ಮಾತು).

गिजगिजा, वि. ಗಿಜಟ, ಜಿಬಿಜಿಬಿ, ಗಿಜಿಗಿಜಿ (ಹಣ್ಣು).

ग़िज़ा, स्त्री. ಆಹಾರ, ಭೋಜನ.

गिजाफ़, पु. ಹರಟೆ, ಗಪ್ಪೆ; ಜಲ್ಲಿ, ಬುರುಡೆ.

गिटकिरी, स्त्री. ಆಲಾಪನೆ, ಸ್ವರಕಂಪನ, ಅಲುಗು, ಪಲುಕು; ಚಪ್ಪಟೆಯಾದ ಬೆಣಚು ಕಲ್ಲು.

गिटकौरी, स्त्री. ಜಲ್ಲಿ, ನೊರಜುಗಲ್ಲು.

गिटपिट, स्त्री. ಅರ್ಥವಿಲ್ಲದ ಮಾತು. गिटपिट करना = ಕೊಚ್ಚೆ ಕೊಚ್ಚೆಯಾಗಿ ಇಂಗ್ಲಿಷ್ ಮಾತನಾಡು.

गिट्टक, स्त्री. ಹುಕ್ಕಾದ ನಳಿಗೆಯೊಳಗೆ ಇಡುವ ಕಲ್ಲು, ಚಿಲ್ಲು, ಬಚ್ಚು; ಬಿರಟೆ.

गिट्टी, स्त्री. ಕಲ್ಲಿನ ಚೂರು, ಚಿಲ್ಲು, ಬಚ್ಚು; ಬೋಕಿ ಹೆಂಚು.

गिड़गिड़ाना, अक्रि. ದಮ್ಮಯ್ಯಗುಡ್ಡೆ ಇಡು, ಅಂಗಲಾಚು; ಹಲ್ಲು ಗಿಂಜು, ಗೋಗರೆ, ಬೇಡುಕೊಳ್ಳು.

गिड़गिड़ाहट, स्त्री. ಬೇಡುವಿಕೆ, ಅಂಗಲಾಚುವಿಕೆ, ಗೋಗರೆಯುವಿಕೆ.

गिद्ध, गिध, पु. ರಣಹದ್ದು, ಗಿಡಗ.

गिनती, स्त्री. ಗಣನೆ, ಎಣಿಕೆ; ಸಂಖ್ಯೆ.

गिनना, सक्रि. ಎಣಿಸು, ಎಣಿಕೆ ಮಾಡು; ಲೆಕ್ಕ ಮಾಡು, ಗಣಿಸು; ಗೌರವಿಸು, ಲೆಕ್ಕಿಸು.

गिनवाना, गिनाना, सक्रि. गिनना का प्रे. रूप.

गिनी, गिन्नी, स्त्री. ಒಂದು ಚಿನ್ನದ ನಾಣ್ಯ, "ಗಿನಿ"(= ೨೧ ಷಿಲಿಂಗು).

गियाह, स्त्री. ಹಸುರು ಹುಲ್ಲು. पु. ಒಂದು ಜಾತಿ ಕುದುರೆ.

गिरई, स्त्री. ಒಂದು ಜಾತಿ ಮೀನು.

गिरगिट, गिरगिटान, पु. ಕೃಕಲಾಸ, ಗೋಸುಂಬೆ. गिरगिट की तरह रंग बदलना = ಕ್ಷಣಕ್ಕೊಂದು ಸಲ ಬಣ್ಣ ಅಥವಾ ಅಭಿಪ್ರಾಯ ಬದಲಾಯಿಸು.

गिरगिरी, स्त्री. ಮಕ್ಕಳ ಒಂದು ಆಟದ ಸಾಮಾನು.

गिरजा, गिरजाघर, पु. ಕ್ರೈಸ್ತರ ದೇವಾಲಯ, ಚರ್ಚ್, ಇಗರ್ಜಿ.

गिरदा, पु. ದುಂಡಗಿರುವ ವಸ್ತು; ಚಕ್ರ; ಗುಂಡು ತಟ್ಟೆ; ದುಂಡಗಿರುವ ದಿಂಬು, ಗಿರದೆ; ಗೋಳ, ಗುಳಿಗೆ. स्त्री. ರೊಟ್ಟಿ.

गिरदान, पु. = गिरगिट.

गिरदावर, पु. = गिर्दावर.

गिरना, अक्रि. ಬೀಳು, ಬಿದ್ದುಹೋಗು; ಕುಗ್ಗು, ಇಳಿ; ಹಾಯು; ಕುಸಿ; ಮುಗ್ಗರಿಸು; ಪ್ರಾಪ್ತವಾಗು; ಯುದ್ಧದಲ್ಲಿ ಸಾಯು, ಮಡಿ.

गिरफ़्त, स्त्री. ಹಿಡಿಯುವಿಕೆ, ಹಿಡಿತ; ಹಿಡಿಕೆ; ತಪ್ಪು ಹಿಡಿಯುವಿಕೆ, ಆಕ್ಷೇಪಣೆ

गिरफ़्तार, वि. ಹಿಡಿಯಲ್ಪಟ್ಟ, ಬಂಧಿಸಲ್ಪಟ್ಟ; ಕೈಸೆರೆಯಾದ, ಕೈದಾದ, ದಸ್ತಗಿರಿಯಾದ; ಸಿಕ್ಕಿಕೊಂಡ.

गिरफ़्तारी, स्त्री. ಸೆರೆ, ಬಂಧನ; ದಸ್ತಗಿರಿ, ಕೈದು; ಸಿಕ್ಕಿಕೊಳ್ಳೋಣ.

गिरमाटी, स्त्री. ಕಾವಿ, ಕಾವಿ ಕಲ್ಲು.

गिरमिट, पु. ದೊಡ್ಡ ಬೈರಿಗೆ, ಹಿಡಿಸರಳು.

गिरवान, पु. = गरेबान.

गिरवाना, सक्रि. गिराना का प्रे. रूप.

गिरवी, वि. ಗಿರಿವಿ ಇಟ್ಟ, ದೀಡಿಟ್ಟ, ಒತ್ತೆ ಹಾಕಿದ, ಅಡವಿಕ್ಕಿದ. स्त्री. ಒತ್ತೆ. ಈಡು, ಗಿರಿವಿ, ದೀಡು.

गिरवीदा, वि. ಮೋಹಗೊಂಡ, ಮರುಳಾದ.

गिरवीदार, पु. ಗಿರಿವಿ ತಕ್ಕೊಳ್ಳುವವ, ಅಡವು ಇಟ್ಟುಕೊಂಡು ಸಾಲ ಕೊಡುವವ, ಅಡವು ಇಟ್ಟುಕೊಂಡವನು.

गिरस्त, पु. = गिरहस्त.

गिरस्तिन, स्त्री. ಗರತಿ, ಗೃಹಿಣಿ.

गिरस्ती, स्त्री. = गिरहस्ती.

गिरह, स्त्री. ಗಂಟು, ಗಣಿಕೆ; ಕೀಲು, ಸಂಧಿ; ಜೇಬು; ಗಜದ ಹದಿನಾರನೆಯ ಒಂದು ಭಾಗ, ಗೆರೆ; ಲಾಗ, ಪಲ್ಟಿ.

गिरहकट, वि. ಗಂಟು ಕತ್ತರಿಸುವವ, ಗಂಟುಗೊಯ್ಕ, ಕತ್ತರಿಗಳ್ಳ.

गिरहदार, वि. ಗಂಟು ಗಂಟಾದ.

गिरहबाज़, पु. ಲಾಗ ಅಥವಾ ಗಿರಕೆ ಹೊಡೆಯುವ ಪಾರಿವಾಳ, ಗಿರೇಬಾಜ

गिरहस्त, पु. ಗೃಹಸ್ಥ, ಸಂಸಾರಿಕ.

गिरहस्ती, स्त्री. ಒಗತನ, ಗೃಹಕೃತ್ಯ, ಸಂಸಾರ.

गिरां, वि. ಭಾರವಾದ; ದುಃಖಕರವಾದ; ಅಸಹ್ಯ; ಬೆಲೆಯೇರಿದ, ತುಟ್ಟಿ.

गिराऊ, वि. ಬೀಳುವ, ಬೀಳತಕ್ಕ.

गिराना, सक्रि. ಬೀಳಿಸು, ಕೆಡವು; ಬೀಳಗೆಡವು; ಕೆಳಕ್ಕೆ ಹಾಕು, ತಳ್ಳು;

ಮಲಗಿಸು; ಹಾಯಿಸು; ಸುರಿಯು; ಕುಗ್ಗಿಸು; ಕುಸಿಸು; ಇಳಿಸು; ಯುದ್ಧ ದಲ್ಲಿ ಕೊಂದು ಹಾಕು.

**गिरानी,** ಸ್ತ್ರೀ. ಬರ, ಕ್ಷಾಮ; ತುಟ್ಟಿ; ಕೊರತೆ, ಖೋತ, ಕಡಿಮೆ; ಹೊಟ್ಟೆ ಭಾರ; ಅಜೀರ್ಣದಿಂದಾಗುವ ಮಕ್ಕಳ ಹೊಟ್ಟೆ ಕಳತ.

**गिरामी,** वि. ಪೂಜ್ಯರು, ಹಿರಿಯರು.

**गिरावट,** ಸ್ತ್ರೀ. ಬೀಳುವಿಕೆ, ಪತನ; ಬೀಳುವ ರೀತಿ; ಕುಸಿಯುವಿಕೆ.

**गिरी,** ಸ್ತ್ರೀ. = गरी.

**गिरैयाँ,** ಸ್ತ್ರೀ. ಮಿಣಿ, ಮಿಳಿ, ಕಣ್ಣಿ.

**गिरो,** वि. = गिरवी.

**गिर्द,** वि. ಸುತ್ತಲು ಇರುವ; ಪಕ್ಕದ, ನೆರೆಯ. इर्द गिर्द = ಸುತ್ತಲೂ, ನೆರೆ ಹೊರೆಯಲ್ಲಿ.

**गिर्दबाद,** पु. ಸುಳಿಗಾಳಿ, ಚಕ್ರವಾತ, ಸುಂಟರಗಾಳಿ.

**गिर्दागिर्द,** पु. ಸುತ್ತಲು, ಅಕ್ಕ ಪಕ್ಕ, ನೆರೆ ಹೊರೆ.

**गिर्दाब,** पु. ನೀರಿನ ಸುಳಿ, ಜಲಾವರ್ತ.

**गिर्दावर,** पु. ಸುತ್ತ ಲೂ ತಿರುಗುವವ; ಸಂಚರಿಸುವವ, ಸಂಚಾರಿ; ಸಂಚರಿಸುತ್ತ ಮೇಲ್ವಿಚಾರಣೆ ಮಾಡುವವ; ಗಸ್ತು ತಿರುಗುವವ.

**गिर्दौना,** पु. = गिरगिट.

**गिल,** ಸ್ತ್ರೀ. ಮಣ್ಣು, ಜೇಡಿ ಮಣ್ಣು; ಕಲಸು ಮಣ್ಣು, ಗಾರೆ

**गिलकार,** पु. ಗಾರೆಕೆಲಸದವ, ಗಾರೆಕಾರ

**गिलकारी,** ಸ್ತ್ರೀ. ಗಾರೆ ಕೆಲಸ.

**गिलगिला,** वि. ಜಿಗಟಾದ, ಜೇಡಿ ಮಣ್ಣಿನ; ಮೃದುವಾದ; ಜಿಡ್ಡಾದ.

**गिलगिलाहट,** ಸ್ತ್ರೀ. ಜಿಗಟು, ಸ್ನಿಗ್ಧತೆ, ಜಿಡ್ಡು; ನುಣುಪು; ಮೆದು.

**गिलगिलिया,** ಸ್ತ್ರೀ. ಒಂದು ಪಕ್ಷಿ.

**गिलगिली,** पु. ಒಂದು ಜಾತಿ ಕುದುರೆ.

**गिलट,** ಸ್ತ್ರೀ. ಚಿನ್ನದ ಮುಲಾಮು, ಬಂಗಾರದ ನೀರು, ಗಿಲೀಟು; ಬೆಳ್ಳಿ ಯಂತಹ ಒಂದು ಧಾತು.

**गिलटी,** ಸ್ತ್ರೀ. ಮಾಂಸ ಗ್ರಂಥಿ, ಗೆಡ್ಡೆ; ವಾಳ, ಬಾವು.

**गिलन,** पु. ನುಂಗುವಿಕೆ.

**गिलना,** सक्रि. ನುಂಗು, ಮಿಂಗು.

**गिलबिलाना,** सक्रि. ಅಸ್ಪಷ್ಟವಾಗಿ ಮಾತನಾಡು, ಗೊಜಗುಟ್ಟು.

**गिलम,** ಸ್ತ್ರೀ. ಕಂಬಳಿ; ಜಮಖಾನೆ; ಮೆತ್ತೆ, ಸುಪ್ಪತ್ತಿಗೆ. वि. ಮೆದುವಾದ, ಮೃದು.

**गिलमिल,** पु. ಒಂದು ಬಗೆ ಬಟ್ಟೆ.

**गिलहरा,** पु. ಒಂದು ಬಗೆ ಬಟ್ಟೆ; ಮೀಳ್ಯದೆಲೆಯ ಬುಟ್ಟಿ.

**गिलहरी,** ಸ್ತ್ರೀ. ಅಳಿಲು, ಇಣಚಿ, ಅಳಿಲ ಕುಂಚ, ಚಿಣಿಲು.

**गिला,** पु. ದೂರು, ಪುಕಾರು, ನೊರೆ.

**ग़िलाज़त,** ಸ್ತ್ರೀ. ಕೊಳೆ, ಕೊಳಕು; ಮಲ

**ग़िलाफ़,** पु. ಆವರಣ, ಗವಸಣಿಗೆ; ದಿಂಬಿನ ಚೀಲ, ಗಲೇಫು; ರಜಾಯಿ; ಖಡ್ಗಕೋಶ, ಒರೆ.

**गिलावा, गिलाचा,** पु. ಮಣ್ಣು ಗಾರೆ, ಕಲಸು ಮಣ್ಣು, ಗಚ್ಚು.

गिलास, पु. ಲೋಟ, ಬಟ್ಟಲು.
गिली, वि. ಮಣ್ಣಿನ. स्त्री. = गुल्ली.
गिलोय, स्त्री. ಅಮೃತ ಬಳ್ಳಿ, ಗಡೂಚಿ, ಜೀವಂತಿ.
गिलोला, पु. ಕವಣೆ ಕಲ್ಲು, ಮಿಡಿಗುಂಡು
गिलौंदा, पु. ಹಿಪ್ಪೆಯ ಹೂ.
गिलौरी, स्त्री. ಪಟ್ಟೀ ವೀಳ್ಯ, "ಬೀಡಾ"
गिलौरीदान, पु. ವೀಳ್ಯದ ಪೆಟ್ಟಿಗೆ ಅಥವಾ ಡಬ್ಬಿ.
गिल्टी, स्त्री. = गिलटी.
गिल्ली, स्त्री. ಅಳಿಲ ಕುಂಚ, ಅಳಿಲು; ಗೇಣು; ಚಿಣ್ಣಿ. गिल्ली डंडा = ಚಿಣ್ಣಿ ಕೋಲು.
गींज, स्त्री. ಮೊಹರಂ ಹಬ್ಬದಲ್ಲಿ ಮಾಡುವ ಒಂದು ವಿಧದ ಆಡಿಗೆ.
गींजना, सक्रि. ನಲುಗಿಸು; ಮುದುರು; ಹಿಚಕು; ಜಜ್ಜು; ಚಿಚ್ಚು.
गीठम, पु. ಕೀಳು ತರದ ಜಮುಖಾನೆ.
गीत, पु. ಹಾಡು, ಗೀತೆ.
गीती, स्त्री. ಜಗತ್ತು, ಪ್ರಪಂಚ.
गीदड़, पु. ನರಿ, ಬಳ್ಳು; ಪುಕ್ಕ, ಹೇಡಿ.
गीदड़ भबकी, स्त्री. ಒಳಗೊಳಗೆ ಅಂಜುತ್ತ ಹೊರಕ್ಕೆ ಸಾಹಸ ತೋರಿಸಿ ಬೆದರಿಸುವುದು, ಜಳ್ಳು ಗದರಿಕೆ, ಗೊಡ್ಡು ಗದರಿಕೆ.
गीदड़ी, स्त्री. ಹೆಣ್ಣು ನರಿ.
गीदी, वि. ದಡ್ಡ; ಪುಕ್ಕ, ಹೇಡಿ; ನಪುಂಸಕ; ನಿರ್ಲಜ್ಜ, ನಾಚಿಕೆ ಗೇಡಿ.
गीध, पु. ರಣಹದ್ದು, ಗಿಡಗ.
गीधना, अक्रि. ಹಂಬಲಿಸು, ಹಾತೊರೆಯು, ಕೊಸರು.
गीबत, स्त्री. ಅನುಪಸ್ಥಿತಿ, ಗೈರುಹಾಜರು; ಚಾಡಿ.
गीर, वि. ಹಿಡಿಯುವವ; ಧರಿಸುವವ.
गीला, वि. ಒದ್ದೆಯಾದ, ತೇವವಾದ, ನೆನೆದ.
गीलापन, पु. ಒದ್ದೆ, ತೇವ.
गुंग, पु. ಮೂಕತನ, ಮೂಗ.
गुंगी, स्त्री. ಇರ್ತಲೆ ಹಾವು, ಇತ್ತಲೆ ಗುಯ್ಯ.
गुंगुआना, अक्रि. ಹೊಗೆಯು, ಹೊಗೆಯಾಡು.
गुंचा, पु. ಮೊಗ್ಗು; ಆನಂದೋತ್ಸವ.
गुंचा, पु. = गुनचा.
गुंज, पु. ಝೇಂಕಾರ, ಗೊಂಗಾಟ, ಕಲರವ; ಗುಲಗಂಜಿ; ಒಂದು ಆಭರಣ.
गुंजन, पु. ಝೇಂಕಾರ, ಗುಂಯಿಗುಟ್ಟುವಿಕೆ; ಗೊಂಗಾಟ.
गुंजना, अक्रि. ಝೇಂಕರಿಸು, ಗುಂಯಿಗುಟ್ಟು; ಧ್ವನಿತವಾಗು.
गुंजरना, अक्रि. ಗುಂಯಿಗುಟ್ಟು, ಝೇಂಕರಿಸು.
गुंजाइश, स्त्री. ಸ್ಥಳ, ಅವಕಾಶ; ಆಸ್ಪದ, ಇಂಬು; ಲಾಭ.
गुंजाइशी, वि. ಅನುಕೂಲವಾದ, ತಕ್ಕ; ಲಾಭಕರವಾದ.
गुंजान, वि. ದಟ್ಟವಾದ, ನಿಬಿಡ; ಸಾಂದ್ರ
गुंजार, पु. ಝೇಂಕಾರ.
गुंजारना, अक्रि. ಝೇಂಕರಿಸು, ಗುಂಯಿಗುಟ್ಟು.

**गुंठा**, पु. ತಟ್ಟು, ಟಾಕಣ.
**गुंडपना**, पु. ಪುಂಡತನ, ಪುಂಡಾಟ.
**गुंडली**, स्त्री. ಸುತ್ತು, ಸುರುಳಿ; ಸಿಂಬಿ.
**गुंडा**, वि. ಪುಂಡ, ಪೋಲಿ; ಪಟಿಂಗ.
**गुंडापन**, पु. ಪೋಕರಿತನ, ಪುಂಡತನ, ಪಟಿಂಗತನ, ಪುಂಡಾಟ.
**गुंथना**, अक्रि. ಹೆಣೆ, ಹೆಣಕೊಳ್ಳು; ಸಿಕ್ಕು ಬೀಳು; ಪೋಣಿಸಲ್ಪಡು.
**गुंथवाना**, सक्रि. गूंथना का प्रे. रूप.
**गुंदेला**, वि. ಅಂಟಿನ, ಜಿಗಟಿನ.
**गुंधना**, अक्रि. ನಾದಲ್ಪಡು, ಹಿಸಕಲ್ಪಡು; ಹೆಣೆಯಲ್ಪಡು, ಹೆಣಕೊಳ್ಳು.
**गुंधवाना**, सक्रि. गूंधना का प्रे. रूप.
**गुंधाई**, स्त्री. ನಾದುವಿಕೆ; ಹಿಸುಕುವುದು; ಹೆಣಿಗೆ; ನಾದುವುದರ ಅಥವಾ ಹೆಣೆಯುವುದರ ಕೂಲಿ.
**गुंधावट**, स्त्री. ನಾದುವಿಕೆ, ಹಿಸುಕುವಿಕೆ; ಹೆಣಿಗೆ.
**गुंफ**, पु. ಗಂಟು, ಸಿಕ್ಕು; ಗೊಂಚಲು; ಗಲ್ಲ ಮೀಸೆ; ದಾಡಿ.
**गुंफन**, पु. ಸಿಕ್ಕು; ಕಚ್ಚಿಕೊಳ್ಳುವಿಕೆ; ತೊಡಕು.
**गुंबज़**, **गुंबद**, पु. ಗುಂಡು ಗೋಪುರ, ಗುಂಡು ಶಿಖರ, ಗುಮ್ಮಟ, ಗೋಲ ಗುಮ್ಮಟ, ಬುರುಜು.
**गुंबज़दार**, वि. ಗುಂಡು ಶಿಖರವುಳ್ಳ, ಗುಮ್ಮಟವುಳ್ಳ.
**गुबा**, पु. ತಲೆಯಲ್ಲಿ ಏಟಿನಿಂದ ಎದ್ದ ಬೋರೆ, ಗದುವು.
**गुआ**, पु. ಅಡಕೆ
**गुइयां**, स्त्री. ಗೆಳತಿ, ಸಖಿ. पु. (ಆಟದಲ್ಲಿ) ಜೊತೆಗಾರ.
**गुग्गुल**, पु. ಗುಗ್ಗುಳ.
**गुची**, स्त्री. ೧೦೦ ಎಲೆಯ ಕೌಳಿಗೆ.
**गुच्ची**, स्त्री. ಸಣ್ಣ ಕುಳಿ; ಹೊಂಡ; ಚಿಣ್ಣಿ ಕೋಲಾಟದ ಸಣ್ಣ ಕುಳಿ, ಬದ್ದು वि. ಇರುಳುಗಣ್ಣಿನ.
**गुच्चीपारा**, **गुच्चीपाला**, पु. ಒಂದು ಬಗೆ ಗೋಲಿಯಾಟ; ಚಿಣ್ಣಿಕೋಲಾಟ
**गुच्छ**, **गुच्छक**, पु. ಗೊಂಚಲು, ಕುಚ್ಚು; ತುರಾಯಿ, ಗುತ್ತಿ; ಪೊದೆ.
**गुच्छा**, पु. ಗೊನೆ, ಗೊಂಚಲು; ಕುಚ್ಚು; ಗುತ್ತಿ. ಸ್ತಬಕ; ತೆನೆ; ಒಂದು ಆಭರಣ; ತಲೆ ಕುಚ್ಚು, ಗೊಂಡೆ. गुच्छा तारा = ಕೃತ್ತಿಕಾ ನಕ್ಷತ್ರ.
**गुच्छेदार**, वि. ಗೊಂಚಲುಗಳುಳ್ಳ, ಕುಚ್ಚುಗಳುಳ್ಳ.
**गुज़द**, पु. ಏಟು, ಪೆಟ್ಟು; ನಷ್ಟ.
**गुज़र**, पु. ಸಾಗುವಿಕೆ; ಗತಿ; ಪ್ರವೇಶ; ನಿರ್ವಾಹ, ಕಾಲಕ್ಷೇಪ; ಜೀವನೋಪಾಯ; ಮಾರ್ಗ.
**गुज़रगाह**, स्त्री. ದಾಟುವ ಮಾರ್ಗ; ರೇವು, ಬಂದರು.
**गुज़रना**, अक्रि. ಹೋಗು; ಕ್ರಮಿಸು, ಕಳೆದುಹೋಗು(ಕಾಲ); ನಡೆ,ಸಾಗು; ತೀರಿ ಹೋಗು, ಗತಿಸು, ಸಾಯು
**गुज़र बसर**, पु. ಜೀವನ ನಿರ್ವಾಹ, ಕಾಲಕ್ಷೇಪ; ಬದುಕು ಬಾಳು.
**गुज़रान**, पु. ನಿರ್ವಾಹ, ಕಾಲಕ್ಷೇಪ; ಬದುಕು.

**गुज़रानना**, सक्रि. ಮುಂದಿರಿಸು, ಸಮರ್ಪಿಸು; ಗುಜರಾಯಿಸು.

**गुजरिया**, स्त्री. गूजर का स्त्री. रूप.

**गुजरी**, स्त्री. ಮಣಿಕಟ್ಟಿನಲ್ಲಿ ಧರಿಸುವ ಆಭರಣ; ಕಿವಿ ಹರಕ ಕುರಿ; ಗೊಲ್ಲತಿ.

**गुज़री**, स्त्री. ಹಳೆಯ ಸಾಮಾನುಗಳ ಅಂಗಡಿ, ಗುಜರಿ ಅಂಗಡಿ.

**गुजश्ता**, वि. ಕಳೆದು ಹೋದ, ಗತ; ಭೂತ (ಕಾಲ).

**गुज़ार**, पु. ಸಲ್ಲಿಸುವಿಕೆ; ಸಾಗುವಿಕೆ.

**गुज़ारना**, सक्रि. (ಕಾಲ)ಕಳೆ, ದಾಟು; ಮುಂದಿರಿಸು, ಸಮರ್ಪಿಸು, ಗುಜರಾಯಿಸು.

**गुज़ारा**, पु. ಜೀವಿತ, ಬದುಕು; ಕಾಲಕ್ಷೇಪ, ಜೀವನೋಪಾಯ, ನಿರ್ವಾಹ; ಸುಂಕದ ಕಟ್ಟೆ, ಉಕ್ಕಡ.

**गुज़ारिश**, स्त्री. ಅರಿಕೆ, ವಿಜ್ಞಾಪನೆ, ಬಿನ್ನಹ. गुजारिश करना = ವಿಜ್ಞಾಪಿಸು, ಬಿನ್ನವಿಸು.

**गुझिया**, स्त्री. ಒಂದು ಬಗೆ ಪಣ್ಯಾರ, ಕರ್ಜಿಕಾಯಿ; ಒಂದು ಮಿಠಾಯಿ.

**गुटकना**, सक्रि. ಪಾರಿವಾಳದಂತೆ ಕೂಗು, ಕುಟುರುಹಾಕು; ನುಂಗು, ತಿನ್ನು.

**गुटका**, पु. ಸಣ್ಣ ಪುಸ್ತಕ, ಕೈಪಿಡಿ; ಗುಟಿಕೆ, ಗುಳಿಗೆ; ಗುಟಿಕಾಸಿದ್ಧಿ; ಬುಗುರಿ; "ಗುಪ್ಚುಪ್" ಎಂಬ ಮಿಠಾಯಿ

**गुटरगूँ**, स्त्री. ಪಾರಿವಾಳದ ಕೂಗು, ಕುಟುರು.

**गुटिका**, स्त्री. ಗುಟಿಕೆ, ಗುಳಿಗೆ; ಗುಟಿಕಾಸಿದ್ಧಿ.

**गुट्ट**, पु. ಕೂಟ, ಸಮೂಹ; ಹಿಂಡು, ಪಡೆ

**गुट्टबंदी**, स्त्री. ಕೆಲವೇ ಜನರ ಕಕ್ಷಿ, ಒಳಗೊಳಗಿನ ಪಾರ್ಟಿ.

**गुट्टा**, पु. ಗಿಡ್ಡ, ಗುಜ್ಜ; ಆಟಗಾಯಿ.

**गुट्टी**, स्त्री. ಪಗಡೆಯ ಕಾಯಿ.

**गुट्ठल**, पु. ಗಲ್ಲೆಗಟ್ಟುವಿಕೆ, ಗಲ್ಲೆ, ಗೆಡ್ಡೆ; ಬಾವು, ವಾಳ. वि. ದೊಡ್ಡ ವಾಟೆಯುಳ್ಳ; ಮಂದಬುದ್ಧಿ, ದಡ್ಡ.

**गुठली**, स्त्री. ವಾಟೆ, ಗೊರಟು, ಬೀಜ.

**गुडंबा**, पु. ಮಾವಿನ ಹಣ್ಣಿನ ಲೇಹ್ಯ ಅಥವಾ ಮುರಬ್ಬ.

**गुड़**, पु. ಬೆಲ್ಲ; ಜೋನಿಬೆಲ್ಲ, ಕಾಕಂಬಿ.

**गुड़गी**, स्त्री. ಒಂದು ಬಗೆ ಇಜಾರು, ಬಿಗಿಯಾದ ಷರಾಯಿ, ಗುಡಿಗಿ ಚಳ್ಣ.

**गुड़गुड़**, स्त्री. ಹುಕ್ಕಾ ಸೇದುವ ಶಬ್ದ, ಗುಳುಗುಳು ಶಬ್ದ.

**गुड़गुड़ाना**, अक्रि. ಗುಳುಗುಳು ಶಬ್ದ ಮಾಡು. सक्रि. ಹುಕ್ಕಾ ಸೇದು.

**गुड़गुड़ाहट**, स्त्री. ಗುಳುಗುಳು ಶಬ್ದ ಮಾಡುವಿಕೆ.

**गुड़गुड़ी**, स्त्री. ಚಿಕ್ಕಹುಕ್ಕಾ, ಗುಡುಗುಡಿ

**गुड़धानी**, स्त्री. ಗೋಧಿಯ ಲಾಡು.

**गुड़फूल**, पु. ಹಿಪ್ಪೆಯ ಹೂ.

**गुड़रू**, पु. ಒಂದು ಪಕ್ಷಿ.

**गुड़सी**, स्त्री. ಗುಡಿಸಲು, ಜೋಪಡಿ.

**गुड़हर**, **गुड़हल**, पु. ದಾಸವಾಳದ ಹೂ

**गुड़ाकू**, **गुड़ाखू**, पु. ಬೆಲ್ಲ ಕಲಸಿದ ಹೊಗೆಸೊಪ್ಪಿನ ಪುಡಿ;ಹುಕ್ಕಾ ಸೇದಲು ಉಪಯೋಗಿಸುವ ಹೊಗೆ ಸೊಪ್ಪು, ಗುಡಾಕು.

गुड़ाना, सक्रि. गोड़ना का प्रे. रूप.

गुड़िया, गुड़ी, गुड्डुवा, स्त्री. ಬೊಂಬೆ, ಗೊಂಬೆ; ಪುತ್ಥಳಿ.

गुड्डा, पु. ಬೊಂಬೆ; ಪುತ್ಥಳಿ; ದೊಡ್ಡ ಗಾಳಿ ಪಟ.

गुड्डी, स्त्री. ಗಾಳಿ ಪಟ, ಪತಂಗ; ಮೊಣಕಾಲು ಚಿಪ್ಪು; ಚಿಕ್ಕ ಹುಕ್ಕಾ.

गुढ़ा, पु. ಅವಿತುಕೊಳ್ಳುವ ಸ್ಥಳ; ಆಸರೆ, ಆಶ್ರಯ.

गुण, पु. ಗುಣ; ಲಕ್ಷಣ; ಮೇಲ್ಮೆ; ಶೀಲ; ಪ್ರಭಾವ; ಕುಶಲತೆ; ಗುಣಾಕಾರ; ದಾರ, ಸರ.

गुणन, पु. ಗುಣಿಸುವಿಕೆ, ಗುಣಾಕಾರ; ಎಣಿಸುವಿಕೆ; ಉರು; ಜಪ; ಚಿಂತನೆ.

गुणा, पु. ಗುಣಿಸುವಿಕೆ, ಗುಣಾಕಾರ; ಪಾಲು, ಮಡಿ.

गुणी, वि. ಗುಣವುಳ್ಳ; ಸಾಮರ್ಥ್ಯವುಳ್ಳ. पु. ದೆವ್ವ ಬಿಡಿಸುವವ, ಮಂತ್ರಗಾರ, ಮಾಟಗಾರ; ಕಲಾ ಕುಶಲ.

गुत्थम गुत्था, पु. ಸಿಕ್ಕು, ತೊಡಕು; ಕಚ್ಚಿಕೊಳ್ಳುವಿಕೆ; ಕಚ್ಚಾಟ, ಹೊಡೆದಾಟ, ಗುದ್ದಾಟ; ಸಂದಣಿ.

गुत्थी, स्त्री. ಸಿಕ್ಕು, ಗಂಟು, ತೊಡಕು.

गुथना, अक्रि. ಹೆಣೆಯಲ್ಪಡು, ಪೋಣಿಸಲ್ಪಡು, ಅಪ್ಪಿಕೊಳ್ಳು, ಸಿಕ್ಕುಬೀಳು.

गुथवां, वि. ಹೆಣೆಯಲ್ಪಟ್ಟ, ಪೋಣಿಸಲ್ಪಟ್ಟ.

गुथवाना, सक्रि. गुथना का प्रे. रूप.

गुदकार, वि. ಕುಸುರಿಯುಳ್ಳ, ಬಸೆಯುಳ್ಳ; ಕೊಬ್ಬಿದ.

गुदकीलक, पु. ಮೊಳೆರೋಗ, ಮೂಲವ್ಯಾಧಿ.

गुदगुदा, वि. ಕೊಬ್ಬಿದ, ಮೃದುವಾದ.

गुदगुदाना, सक्रि. ಚಕ್ಕಲಗುಳಿಯಿಕ್ಕು; ಕಟ್ಬಾಡಿಸು, ನಗಿಸು; ಹಂಬಲ ಹುಟ್ಟಿಸು

गुदगुदाहट, गुदगुदी, स्त्री. ಚಕ್ಕಲಗುಳಿ; ಉಲ್ಲಾಸ, ಮೋಜು, ಉಬ್ಬು.

गुदड़ी, स्त्री. ಕಂಥೆ, ಚಿಂದಿ, ಬೊಂತೆ. गुदड़ी बाज़ार = ಒಡಕು ಮುರುಕು ಸಾಮಾನು ಮಾರುವ ಅಂಗಡಿ, ಗುಜರಿ

गुदना, अक्रि. ಚುಚ್ಚು. सक्रि. = गोदना

गुदा, पु. ಮಲದ್ವಾರ, ಗುದ.

गुदाज़, वि. ಕೊಬ್ಬಿದ; ಮೃದುವಾದ; ಕರಗಿದ; ಕನಿಕರವುಳ್ಳ.

गुदाना, अक्रि. गोदना का प्रे. रूप.

गुदाम, पु. ಉಗ್ರಾಣ, ಕೋಠಿ, ಗಡಂಗು.

गुद्दा, पु. ಮಗು; ಕುದುರೆ ಗೊರಸಿನ ಹುಣ್ಣು; ಕೊಂಬೆ, ರೆಂಬೆ.

गुद्दी, स्त्री. ಹೆಗ್ಗತ್ತು, ಹೆಡಕು; ಅಂಗೈಯ ಮಾಂಸ; ತಿರುಳು, ಕುಸುರಿ.

गुन, पु. = गुण.

गुनगुना, वि. ಉಗುರು ಬೆಚ್ಚಗಿರುವ, ಕವೋಷ್ಣ; ಮೂಗಿನಲ್ಲಿ ಮಾತಾಡುವ, ಗೊಣಗುವ.

गुनगुनाना, अक्रि. ಮೂಗಿನಲ್ಲಿ ಮಾತಾಡು, ಮುಸಗರಿ; ಗೊಣಗುಟ್ಟು; ಒಟಗುಟ್ಟು.

गुनगुनाहट, स्त्री. ಝೇಂಕಾರ, ಗುಂಜಾರವ; ಮುಸಗರಿಯುವುದು; ಗೊಣಗಾಟ

गुनचा, पु. ಕಲಿ, ಮೊಗ್ಗು; ನಾಟ್ಯ;

ಗಾನ; ವಿಲಾಸ, ವಿಲಾಸಕೇಲಿ.

**गुनहगार**, पु. = गुनाहगार.

**गुना**, पु. ಗುಣಿಸೆ; ಗುಣಾಕಾರ. प्रत्य. ಪಾಲು, ಅಷ್ಟು, ಪಟ್ಟು, ಮಡಿ. दुगुना = ಇಮ್ಮಡಿ. कई गुना = ಹಲವು ಪಟ್ಟು. दस गुना = ಹತ್ತು ಪಾಲು.

**गुनाह**, पु. ಪಾಪ; ದೋಷ; ತಪ್ಪು; ಅಪರಾಧ. गुनाह बख्शना = ತಪ್ಪನ್ನು ಮನ್ನಿಸು.

**गुनाहगार, गुनाही**, पु. ಪಾಪಿಷ್ಠ, ಪಾಪಿ; ದೋಷ; ತಪ್ಪುಗ, ತಪ್ಪಿತಸ್ಥ; ಅಪರಾಧಿ

**गुनाहगारी**, स्त्री. ಪಾಪ, ತಪ್ಪುಗತನ, ತಪ್ಪಿತಸ್ಥಿಕೆ.

**गुनिया**, पु. ಬಡಗಿಯ ಮೂಲೆ ಮಟ್ಟ; ಗುಣಶಾಲಿ, ಸದ್ಗುಣಿ.

**गुनी**, पु. = गुणी.

**गुन्ना**, पु. ಅನುಸ್ವಾರ, ಅರ್ಧಾನುಸ್ವಾರ

**गुन्नी**, स्त्री. ದೊಂಬರು ಬಟ್ಟೆಯನ್ನು ಹೊಸೆದು ಮಾಡುವ ಚಾವಟಿ.

**गुप**, वि. ಗಕುಂ ಎನ್ನುವ, ನಿಬಿಡ (ಅಂಧಕಾರ).

**गुपचुप**, पु. ಒಂದು ಮಿಠಾಯಿ. क्रिवि. ಗುಟ್ಟಾಗಿ; ಸುಮ್ಮನೆ, ಗಪ್‌ಚಿಪ್.

**गुप्त**, वि. ಗುಪ್ತವಾದ, ಮರೆಯಾದ; ರಹಸ್ಯವಾದ, ಗುಟ್ಟಾದ; ಗೂಢವಾದ. पु. ವೈಶ್ಯರ ಪಟ್ಟದ ಹೆಸರು.

**गुप्तचर**, पु. ಗೂಢಚಾರ, ಬೇಹುಗಾರ.

**गुप्ति**, स्त्री. ಬಚ್ಚಿಡುವಿಕೆ, ಭದ್ರಮಾಡುವಿಕೆ; ಕಾವಲು; ಕಾರಾಗೃಹ; ಗುಹೆ.

**गुप्ती**, स्त्री. ಒಳಗಡೆ ಕತ್ತಿ ಬಚ್ಚಿಟ್ಟಿರುವ ಕೋಲು, ಗುಪ್ತಿ.

**गुफा**, स्त्री. ಗುಹೆ, ಗವಿ; ಕವುರಿ, ಕೊಳ್ಳ.

**गुफ़्तगू, गुफ़्तार**, स्त्री. ಸಂಭಾಷಣೆ, ಮಾತುಕತೆ, ಸಂವಾದ, ಸಲ್ಲಾಪ.

**गुबरैला, गुबरौला**, पु. ಸಗಣೀಹುಳು, ಡೊಣ್ಣೆ ಹುಳು.

**गुबार**, पु. ಧೂಳು, ದುಂಬು; ಧೂಳಿನ ಸುಂಟರಗಾಳಿ; ಇಬ್ಬನಿ; ಹಗೆ; ಕಲ್ಮಷ; ಕ್ಲೇಶ, ದುಮ್ಮಾನ; ಎದೆ ಗುದಿ.

**गुब्बारा**, पु. ಹೊಗೆ ಗುಮ್ಮಟ, ಹೊಗೆ ಗೂಡು, ಆಕಾಶ ಬುಟ್ಟಿ, ಬಲೂನ್.

**गुभ**, स्त्री. ಅಖಾತ, ಕೊಲ್ಲಿ.

**गुभाना, गुभोना**, सक्रि. ಇರಿ, ತಿವಿ.

**गुम**, वि. ಬಚ್ಚಿಟ್ಟ, ಗುಪ್ತವಾದ, ಮರೆಯಾದ, ಮಾಯವಾದ; ಲುಪ್ತವಾದ, ಕಳೆದುಹೋದ. गुम सुम होना = ಕಳೆದುಹೋಗು, ಮಾಯವಾಗು.

**गुमजी**, स्त्री. ಶಿಖರ, ಗುಮ್ಮಟ.

**गुमटा**, पु. ಪೆಟ್ಟು, ನೊಕ್ಕು; ಪೆಟ್ಟಾದ ಸ್ಥಳದಲ್ಲಿ ಎದ್ದ ಬೋರೆ, ಗದುವು.

**गुमटी**, स्त्री. ಮನೆಯ ತುದಿ ಅಥವಾ ಶಿಖರ; ಗುಮ್ಮಟ, ಚಿಕ್ಕ ಬುರುಜು.

**गुमना**, अक्रि. ಕಳೆದು ಹೋಗು; ಮಾಯವಾಗು.

**गुमनाम**, वि. ಅನಾಮಧೇಯ; ಅಪ್ರಸಿದ್ಧ, ಹೆಸರಿಲ್ಲದ.

**गुमर**, पु. ದರ್ಪ, ಅಹಂಕಾರ; ಮನೋವಿಕಾರ; ಗುಸುಗುಸು ಮಾತು.

**गुमराह**, वि. ಹಾದಿತಪ್ಪಿದವ, ಪಥಭ್ರಷ್ಟ

**गुमरी**, स्त्री. ತಲೆ ತಿರುಗುವಿಕೆ, ಶಿರೋ

ಭ್ರಮಣ, ತಲೆದಿಮ್ಮು.
**गुमान**, पु. ಅನುಮಾನ, ಅಂದಾಜು; ಅಭಿಪ್ರಾಯ, ವಿಚಾರ; ಹೆಮ್ಮೆ, ದರ್ಪ.
**गुमानी**, वि. ಅಹಂಕಾರಿ, ಗರ್ವಿಷ್ಠ.
**गुमाश्ता**, पु. ಗುಮಾಸ್ತೆ; ಕಾರ್ಯಸ್ಥ; ಪಾರುಪತ್ಯಗಾರ; ಏಜಂಟು.
**गुमाश्तागिरी**, स्त्री. ಗುಮಾಸ್ತನ ಕೆಲಸ, ಗುಮಾಸ್ತಿಕೆ; ಪಾರುಪತ್ಯ; ಏಜನ್ಸಿ.
**गुम्मज़, गुम्मट**, पु. = **गुमटी**.
**गुम्मा**, वि. ಹೆಚ್ಚು ಮಾತನಾಡದವ, ಗುಮ್ಮನ ಗುಸಕ. पु. ಒಂದು ಬಗೆ ದೊಡ್ಡ ಇಟ್ಟಿಗೆ.
**गुर**, पु. ಮೂಲ ಮಂತ್ರ; ಯುಕ್ತಿ, ಸೂತ್ರ
**गुरगा**, पु. ಶಿಷ್ಯ; ಸೇವಕ; ಬೇಹುಗಾರ
**गुरगाबी**, पु. ಎಕ್ಕಡ, ಚಪ್ಪಲಿ.
**गुरची**, स्त्री. ಸುಕ್ಕು, ತೆರೆ.
**गुरचों**, स्त्री. ಗುಸುಗುಸು ಮಾತು.
**गुरजी**, पु. ಸೇವಕ, ಆಳು; ನಾಯಿ.
**गुरदा**, पु. ಮೂತ್ರಪಿಂಡ, ಮೂತ್ರ ಕೋಶ; ಧೈರ್ಯ; ಎದೆ, ಸಾಹಸ; ಸಣ್ಣ ಕೋವಿ.
**गुरफ़ा**, पु. ಮಹಡಿ, ಉಪ್ಪರಿಗೆ; ಜಾಳಾಂದ್ರ, ಕಿಟಕಿ.
**गुरबत**, स्त्री. ದೇಶ ಸಂಚಾರ, ದೇಶಾಂತರ ವಾಸ, ಪ್ರವಾಸ; ದುಃಖ; ದೈನ್ಯ.
**गुरबा**, पु. ಬೆಕ್ಕು.
**गुरवाइन, गुराइन**, स्त्री. **गुरू** का स्त्री. रूप.
**गुरसंगी**, स्त्री. ಹಸಿವು.
**गुराई**, स्त्री. ಬಿಳಿ ಬಣ್ಣ; ಸೌಂದರ್ಯ, ಅಂದ
**गुराब**, पु. ಫಿರಂಗಿ ಗಾಡಿ.
**गुरिया**, स्त्री. ತುಳಸಿ ಮಣಿ; ಬೆನ್ನುಹುರಿಯ ಮಣಿ; ಚಕ್ಕೆ, ತುಂಡು.
**गुरु**, पु. ಗುರು; ಉಪಾಧ್ಯಾಯ; ಬೃಹಸ್ಪತಿ. वि. ಭಾರಿ, ದೊಡ್ಡ; ತೂಕವುಳ್ಳ.
**गुरुआई**, स्त्री. ಗುರುವಿನ ಕೆಲಸ ಅಥವಾ ಧರ್ಮ; ತಂತ್ರ, ಯುಕ್ತಿ; ಚಾತುರ್ಯ.
**गुरुआनी**, स्त्री. ಗುರುಪತ್ನಿ; ಸ್ತ್ರೀಗುರು; ಉಪಾಧ್ಯಾಯಿನಿ.
**गुरुडम**, पु. ಠಕ್ಕು; ಬೂಟಾಟಿಕೆ.
**गुरुद्वारा**, पु. ಗುರುಗಳ ಮಠ; ಸಿಕ್ಖರ ದೇವಾಲಯ.
**गुरुभाई**, पु. ಸಹಾಧ್ಯಾಯಿ, ಸಹಪಾಠಿ.
**गुरुमुख**, वि. ಮಂತ್ರೋಪದೇಶ ಪಡೆದವ, ದೀಕ್ಷಿತ. स्त्री. ಜಪಮಾಲೆಯನ್ನಿಟ್ಟುಕೊಳ್ಳುವ ಮಡಿಚೀಲ.
**गुरुमुखी**, स्त्री. ಸಿಕ್ಖರಲ್ಲಿ ಬಳಕೆಯಲ್ಲಿರುವ ಒಂದು ಲಿಪಿ.
**गुरू**, पु. ಗುರುಗಳು; ಧೂರ್ತ, ಸಮರ್ಥ, ಚಾಣಾಕ್ಷ. **गुरू घंटाल**= ದೊಡ್ಡ ಧೂರ್ತ; ಪಕ್ಕಾ ಆಸಾಮಿ; ಬಲು ಗಟ್ಟಿಗ, ಘಾಟಿ.
**ग़ुरूब**, पु. ಅಸ್ತ, ಅಸ್ತಮನ.
**ग़ुरूर**, वि. = **ग़रूर**.
**गुरेरना**, सक्रि. ದುರುಗುಟ್ಟಿ ನೋಡು; ಕಣ್ಣು ಮಿಟಕಿಸು.
**गुरोह**, स्त्री. ಗುಂಪು, ಹಿಂಡು, ಪಡೆ.
**गुर्ज़**, पु. ದೊಣ್ಣೆ, ದಡಿ, ಬಡಿಗೆ, ಗದೆ.
**गुर्ज़-बरदार**, पु. ದೊಣ್ಣೆ ಸಿಪಾಯಿ.
**गुर्जर**, पु. ಗುಜರಾತ ದೇಶ; ಗುಜರಾತಿ

ಜನರು; ಗೊಲ್ಲರ ಒಂದು ಒಳ ಜಾತಿ.

**गुर्दा**, पु. = गुरदा.

**गुर्रा**, पु. ಬಿಲ್ಲಿನ ದಾರ, ಹೆದೆ; ಪಾಡ್ಯ; ಉಪವಾಸ.

**गुर्राना**, अक्रि. ಗುರುಗುಟ್ಟು, ಗುರ್ರೆನ್ನು; ಗುರಕಾಯಿಸು, ದುಮುಗುಟ್ಟು.

**गुर्राहट**, स्त्री. ಗುರುಗುಟ್ಟುವಿಕೆ.

**गुर्री**, स्त्री. ಹುರಿದ ಜವೆ ಗೋಧಿ.

**गुल**, पु. ಪುಷ್ಪ, ಹೂ; ಗುಲಾಬಿ ಹೂ, ರೋಜಾ; ಹೂಗಣ್ಣು; ಆಭರಣ, ನಗ; ಮಚ್ಚೆ, ಕಲೆ; ಬರೆ, ಮುದ್ರೆ; ಕೆನ್ನೆಯ ಕುಣಿ, ಗಲ್ಲ ತಗ್ಗು; ದೀಪದ ಕುಡಿ; ಹುಕ್ಕದ ಸುಟ್ಟು ಹೋದ ಹೊಗೆಸೊಪ್ಪು; ಕೆಂಡ; ಗಂಡಸ್ಥಳ, ಕಣ್ತುಲೆ. गुल करना =(ದೀಪ) ಆರಿಸು. गुल खिलना = ವಿಚಿತ್ರಘಟನೆ ಒದಗು; ಕಲಹ ಹುಟ್ಟು.

**ग़ुल**, पु. ಗದ್ದಲ, ಗುಲ್ಲು, ರಂಪು. ग़ुल करना या मचाना = ಗದ್ದಲ ಮಾಡು, ಗಲಾಟೆ ಮಾಡು, ಕೂಗಾಡು.

**गुल अब्बास**, पु. ಬೈಗು ಮಲ್ಲಿಗೆ, ಸಂಜೆ ಮಲ್ಲಿಗೆ.

**गुलक़ंद**, पु. ಗುಲಾಬಿ ಹೂವಿನ ಮುರಬ್ಬಾ, ಗುಲ್ಕಂ.

**गुलकारी**, स्त्री. ಹೂವಿನ ಕೆಲಸ, ಬೂಟಾ ಕೆಲಸ.

**गुल गपाड़ा**, पु. ಗುಲ್ಲು, ಗುಬಾರು, ರಂಪು ರವಳಿ, ರಂಬಾಟ.

**गुलगीर**, पु. ಕುಡಿ ಕತ್ತರಿಸುವ ಕತ್ತರಿ.

**गुलगुला**, वि. ಮೃದುವಾದ, ಮೆದುವಾದ; ಕೋಮಲ. पु. ಕಜ್ಜಾಯ, ಎರೆಯಪ್ಪ; ಕೆನ್ನೆ, ಕಣ್ತುಲೆ.

**गुलगुलाना**, सक्रि. ಮೃದು ಮಾಡು, ಮೆತ್ತಗೆ ಮಾಡು.

**गुलगुलिया**, स्त्री. ಡೊಂಬ ಕಾಗೆ.

**गुलगूँ**, वि. ಗುಲಾಬಿ ಬಣ್ಣದ. पु. ಗುಲಾಬಿ ಬಣ್ಣ.

**गुलगना**, पु. = गाज़ा.

**गुलगोथना**, वि. ದುಬ್ಬ, ದಡೂಮ, ದಾಂಡಿಗ; ದೃಢ ಗಾತ್ರ, ದಿಟ ಪುಟ.

**गुलचला**, पु. ತುಪಾಕಿ ಹೊರುವ ಸಿಪಾಯಿ; ಫಿರಂಗಿ ಹಾರಿಸುವವ, ಗೋಲಂದಾಜು.

**गुलचा**, पु. ಕೆನ್ನೆಗೆ ಹೊಡೆದ ಪೆಟ್ಟು, ತಪರಾಖಿ.

**गुलचीं**, पु. ಹೂವು ಕೊಯ್ಯುವವ; ತೋಟಗಾರ, ಮಾಲಿ.

**गुलछर्रा**, पु. ವಿಲಾಸ, ಸುಖ, ಮಜಾ, ಷೋಕು.

**गुलज़ार**, पु. ಗುಲಾಬಿ ಗಿಡದ ಪಾತಿ; ನಂದನವನ, ಉದ್ಯಾನ; ಜನಭರಿತವಾದ ನಗರ. वि. ಹಚ್ಚ ಹಸುರಾದ; ಆನಂದಕರವಾದ; ಶೋಭಿತ, ರಮ್ಯ.

**गुलझटी**, स्त्री. ಸಿಕ್ಕು, ತೊಡಕು, ಗೋಜಲು; ಸುಕ್ಕು, ಮುಖದ ತೆರೆ.

**गुलतराश**, पु. ಕುಡಿ ಕತ್ತರಿಸುವ ಕತ್ತರಿ, ಗಿಡ ಮರಗಳನ್ನು ಸವರುವ ಕತ್ತಿ, ಕಸಿಗತ್ತಿ; ಕತ್ತನೆ ಮೊಳೆ, ಉಳಿ, ಚಾಣ, ಚೀರಣ; ಗಿಡ ಸವರುವವ; ತೋಟಗಾರ

**गुलथी**, स्त्री. ಹೆಪ್ಪುಗಟ್ಟಿದ ಗೆಡ್ಡೆ; ಮಾಂಸದ ಗೆಡ್ಡೆ.

गुलदस्ता, पु. ಹೂವಿನ ಗುತ್ತಿ, ಸ್ತಬಕ, ತುರಾಯಿ.

गुल-दाऊदी, स्त्री. ಒಂದು ಬಗೆ ಹೂ.

गुलदान, पु. ಹೂವಿನ ಜಾಡಿ; ಪುಷ್ಪಧಾನಿ

गुलदार, वि ಪುಷ್ಪಗಳುಳ್ಳ, ಹೂವುಳ್ಳ. पु. ಬಿಳಿ ಪಾರಿವಾಳ, ಒಂದು ಬಗೆ ಕಸೂತಿ.

गुलदुम, पु. ಬುಲ್ ಬುಲ್ ಪಕ್ಷಿ.

गुलनार, पु. गुलनारी, स्त्री. ದಾಳಿಂಬೆ ಹೂ; ದಾಳಿಂಬೆ ಹೂ ಬಣ್ಣ, ಕೆಂಪು.

गुलफ़ाम, वि. ಗುಲಾಬಿ ಬಣ್ಣದ; ಸುಂದರ, ಮುದ್ದು.

गुल-बकावली, स्त्री. ಒಂದು ಬಗೆಯ ಬಿಳಿಯ ಹೂ.

गुलबदन, पु. ಒಂದು ತೆರದ ರೇಷ್ಮೆ ಬಟ್ಟೆ. वि. ಗುಲಾಬಿ ಹೂವಿನಂತಹ; ಸುಂದರ; ಪ್ರೇಮಿಕೆ.

गुलबर्ग, पु. ಗುಲಾಬಿಯ ಎಸಳು

गुलमगर्दा, पु. ಕಾಲಿನ ಧೂಳನ್ನೊರೆಸಿ ಕೊಳ್ಳುವ ತೆಂಗಿನ ನಾರಿನ ತಾಟು, ಮೆಟ್ಟುಗಂಬಳಿ, ಕಾಲೊರೆಸಿ.

गुलमी, स्त्री. = गुमटा.

गुलमेंहदी, स्त्री. ಗೋರಂಟಿಯ ಹೂ, ಮದರಂಗಿಯ ಹೂ.

गुलमेख़, स्त्री. ಗುಬ್ಬಿ ಮೊಳೆ.

गुल-रुख़, गुलरू, वि. ಗುಲಾಬಿಯಂತಹ ಮುಖವುಳ್ಳ, ಬಲು ಸುಂದರ.

गुलरेज़, पु ಹೂಬಾಣ, ಕುಡಿಕೆ ಬಾಣ.

गुललाला, पु. ಒಂದು ಬಗೆ ಕೆಂಪು ಹೂ

गुल-शकरी, स्त्री. = गुलक़ंद.

गुलशन, पु. ಹೂದೋಟ, ಪುಷ್ಪ ವಾಟಿಕೆ, ಉದ್ಯಾನ.

गुल-शब्बो, स्त्री. ಸುಗಂಧರಾಜ ಗಿಡ್ಡೆ, ರಜನೀಗಂಧ.

गुलसम, पु. ನಕಾಸಿ ಉಳಿ, ಚೀರಣ, ಚಾಣ.

गुलहज़ारा, पु. ಕರ್ಣಕುಂಡಲ ಗಿಡ

गुलहत्ती, स्त्री. ಅಕ್ಕಿ ಗಂಜಿ, ಅಂಬಲಿ

गुलाब, पु. ರೋಜಾ ಹೂ, ಗುಲಾಬಿ ಹೂ; ಪನ್ನೀರು.

गुलाबजल, पु. ಪನ್ನಿರು.

गुलाब जामुन, स्त्री. ಜಂಬು ನೇರಳೆ ಹಣ್ಣು; ಒಂದು ಮಿಠಾಯಿ.

गुलाबपाश, पु. ಪನ್ನೀರಿಡುವ ಪಾತ್ರೆ, ಪನ್ನೀರದಾನಿ, ಪನ್ನೀರು ಗಿಂಡಿ; ಅತ್ತರ ದಾನಿ, ಗುಲಾಬದಾನಿ.

गुलाब-पाशी, स्त्री. ಪನ್ನಿರು ಚಿಮುಕಿ ಸುವಿಕೆ.

गुलाब-बांस, पु. ಸಂಜೆ ಮಲ್ಲಿಗೆ.

गुलाबी, वि. ಗುಲಾಬಿ ಬಣ್ಣದ; ಪನ್ನೀರು ಸೇರಿಸಿದ; ಲಘುವಾದ, ಹೂ(ಬಣ್ಣ). पु. ಗುಲಾಬಿ ಬಣ್ಣ; ಒಂದು ಬಗೆ ಸೀಬೆ ಹಣ್ಣು, ಸಾರಾಯಿಯ ಬುದ್ದಲಿ, ಸು ರೆಯ ಪಾತ್ರೆ.

गुलाम, पु. ಗುಲಾಮ, ದಾಸ, ಅಡಿ ಯಾಳು; ಆಳು; ನೌಕರ; ಇಸ್ಪೀಟು ಆಟದಲ್ಲಿ ಒಂದು ಎಲೆ.

गुलाम-गर्दिश, पु. ಗೋಷಾ ಜನಾ ಮನೆಯ ಬಾಗಿಲ ಮುಂದೆ ಮರೆಗಾಗಿ ಕಟ್ಟಿದ ಸಣ್ಣ ಗೋಡೆ, ಇಡಿಗೋಡೆ,

ಸೇವಕರು ಅಥವಾ ಜವಾನರು ಕುಳಿತುಕೊಳ್ಳುವ ಜಗಲಿ, ವರಾಂಡ.

**गुलामी**, स्त्री. ಗುಲಾಮಗಿರಿ, ದಾಸತ್ವ, ದಾಸ್ಯ, ಅಡಿಮೆ; ಸೇವೆ; ಪರಾಧೀನತೆ, ಪಾರತಂತ್ರ್ಯ.

**गुलाल**, पु. ಕಾಮನ ಹಬ್ಬದಲ್ಲಿ ಒಬ್ಬರ ಮೇಲೊಬ್ಬರು ಎರಚಾಡುವ ಬಣ್ಣದ ಪುಡಿ, ಪಿಷ್ಟಾತಕ, ಗುಲಾಲು ಪುಡಿ.

**गुलाल बाड़ी**, स्त्री. ನಂದನವನ, ಕ್ರೀಡಾವನ.

**गुलाली**, वि. ಗುಲಾಲಿನ; ಗುಲಾಲು ಬಣ್ಣದ.

**गुलियाना**, सक्रि. ಬಿದಿರಿನ ನಳಿಗೆಯಲ್ಲಿ ಔಷಧ ತುಂಬಿಸಿ ದನಕರುಗಳಿಗೆ ಕುಡಿಸು, ಔಷಧ ಕುಡಿಸು.

**गुलिस्तां**, पु. ಹೂದೋಟ, ಉದ್ಯಾನ.

**गुलू**, पु. ಕತ್ತು; ಗಂಟಲು, ಕಂಠ; ಕಂಠನಾಳ.

**गुलूबंद**, पु. ಕತ್ತುಪಟ್ಟಿ; ಕುತ್ತಿಗೆಯ ಮುಸುಕು, ಮಫ್ಲರು; ಅಡ್ಡಿಕೆ, ಕಂಠಿ.

**गुलेनार**, पु. = गुलनार.

**गुलेल**, स्त्री. ಪಕ್ಷಿಗಳನ್ನು ಹೊಡೆಯುವ ಚಿಕ್ಕ ಬಿಲ್ಲು, ಮಿಡಿಬಿಲ್ಲು.

**गुलेलची**, पु. ಮಿಡಿಬಿಲ್ಲು ಹೊಡೆಯುವವ ಅಥವಾ ಮಾಡುವವ.

**गुलेला**, पु. ಚಿಕ್ಕ ಗೋಲಿ, ಮಿಡಿಗುಂಡು

**गुल्फ**, पु. ಕಾಲಿನ ಹರಡು, ಗಿರಿಗೆ.

**गुल्म**, पु. ಸೇನೆಯ ಒಂದು ವಿಭಾಗ; ಪ್ಲೀಹ, ತೊರಳೆ, ಗುಲ್ಮ, ಗುಲ್ಮವ್ಯಾಧಿ; ಹೊದರು.

**गुल्ला**, पु. ಮಿಡಿಬಿಲ್ಲಿನಿಂದೆಸೆದ ಗೋಲಿ; ಮಿಡಿಗುಂಡು; ಗುಲ್ಲು, ಗುಬಾರು.

**गुल्ली**, स्त्री. ವಾಟೆ, ಬೀಜ; ಚಿಣ್ಣಿ; ಜೇನು ಗೂಡಿನ ಒಳಭಾಗ, ಜೇನು ಹುಟ್ಟು, ರಾಡೆ; ಮಸೆಗಲ್ಲು, ಸಾಣೆಕಲ್ಲು. पु. ಒಂದು ಬಗೆ ಪಾರಿವಾಳ.

**गुसांई**, पु. ಸಾಧು, ಯೋಗಿ; ಒಂದು ಬಗೆ ಬೈರಾಗಿ, ಗೋಸ್ವಾಮಿ.

**गुसेल**, वि. ಕೋಪಿಷ್ಠ, ಶೀಘ್ರಕೋಪಿ

**गुस्ताख़**, वि. ಅಧಿಕ ಪ್ರಸಂಗಿಯಾದ, ಅವಿಧೇಯ, ಮರ್ಯಾದೆಗೆಟ್ಟ, ಉದ್ಧಟ.

**गुस्ताख़ी**, स्त्री. ಎದೆಗೊಬ್ಬು, ಉದ್ದುರುಟುತನ; ಅಧಿಕ ಪ್ರಸಂಗಿತನ, ಅವಿಧೇಯತೆ, ಉದ್ಧಟತನ.

**गुस्ल**, पु. ಸ್ನಾನ, ಜಳಕ, ಪ್ರಕ್ಷಾಳನೆ.

**गुस्लख़ाना**, पु. ಸ್ನಾನದ ಮನೆ, ನೀರುಮನೆ, ಬಚ್ಚಲು ಮನೆ.

**गुस्सा**, पु. ಕೋಪ, ಸಿಟ್ಟು; ಮುಂಗೋಪ. गुस्से में आना = ಕೋಪಿಸಿಕೊಳ್ಳು, ರೇಗು.

**गुस्सावर**, **गुस्सैल**, वि. ಸಿಟ್ಟುಗಾರ, ಕೋಪಿಷ್ಠ, ಮುಂಗೋಪಿ.

**गुह**, पु. ಅಮೇಧ್ಯ, ಮಲ.

**गुहना**, सक्रि. = गूथना.

**गुहर**, पु. ಮುಕ್ತಾಫಲ, ಮುತ್ತು.

**गुहराना**, सक्रि. ಕೂಗು, ಕರೆ; ಸಹಾಯ ನೀಡು. अक्रि. ಕೂಗಾಡು, ಬೊಬ್ಬಿಡು, ಹುಯಿಲಿಡು.

**गुहवाना**, सक्रि. गुहना का प्रे. रूप.

**गुहांजनी**, स्त्री. ಕಣ್ಣು ಕುರು, ಕಣ್ಣು

ಚಿಟ್ಟಿ, ಕಣ್ಣಿ ಕುಟಿಕೆ.

**गुहा**, पु. ಗುಹೆ, ಗವಿ, ಕಂದರ.

**गुहाई**, स्त्री. = **गुंधाई**.

**गुहार**, स्त्री. ಕೂಗು, ಕರೆ; ಕುಮ್ಮಕ್ಕು, ನೆರವು, ಸಹಾಯ; ಸಹಾಯಕ; ಗುಲ್ಲು, ಗದ್ದಲ, ಹುಯಿಲು.

**गूंगा**, पु. ಮೂಕ, ಮೂಗ.

**गूंज**, स्त्री. ಝೇಂಕಾರ; ಧ್ವನಿ, ಸಲೆ; ಪ್ರತಿಧ್ವನಿ, ಮಾರ್ದನಿ; ಟೊಳ್ಳು ಶಬ್ದ; ಬುಗುರಿಯ ಮೊಳೆ; ಕಿವಿಯ ಬಾವಲಿಯ ತಂತಿ.

**गूंजना**, अक्रि. ಪ್ರತಿಧ್ವನಿಸು; ದಿವಿಗುಟ್ಟು; ಗರ್ಜಿಸು, ಮೊಳಗು; ಝೇಂಕರಿಸು; ಗದುಗವಿಸು.

**गूंथनहार**, वि. ಪೋಣಿಸುವವ, ಕೋದುವವ.

**गूंथना**, सक्रि. ಪೋಣಿಸು, ಕೋದು; ಹೆಣೆ; ಮುಡಿ; ಹೊಲಿ.

**गूंधना**, सक्रि. ನಾದು, ಹಿಸುಕು; ಹೆಣೆ; ಹೆರಳು ಹಾಕು; ಪೋಣಿಸು; ಹೊಲಿ.

**गू**, पु. ಮಲ; ಕೊಳೆ.

**गूगल**, पु. ಗುಗ್ಗುಳ.

**गूगली**, स्त्री. ಕಪ್ಪೆ ಚಿಪ್ಪು.

**गूजर**, पु. ಗೊಲ್ಲರ ಒಂದು ಜಾತಿ.

**गूजरिया**, स्त्री. ಗೊಲ್ಲತಿ.

**गूजरी**, स्त्री. ಗೊಲ್ಲ ಸ್ತ್ರೀ, ಗೊಲ್ಲತಿ; ಕಾಲು ಬಳೆ; ಒಂದು ರಾಗ.

**गूझा**, पु. ಒಂದು ಮಿಠಾಯಿ, ಹುರಿಗಡುಬು, ಕರ್ಜಿಕಾಯಿ; ಮಾವಿನ ಹಣ್ಣಿನ ನಾರು, ಜುಂಗು.

**गूढ़**, वि. ಕಠಿಣ; ಗಂಭೀರ; ರಹಸ್ಯ.

**गूढ़ता**, स्त्री. ಕಾಠಿಣ್ಯ; ಗುಟ್ಟು; ಗೂಢ

**गूढ़ा**, पु. ದೋಣಿಯ ತೊಲೆ.

**गूथना**, सक्रि. = **गूंथना**.

**गूदड़**, पु. **गूदड़ी**, स्त्री. = **गुदड़ी**.

**गूदा**, पु. ಮೆದಳು, ಮಸ್ತಿಷ್ಕ; ನೆಣ; ರಸ, ಸಾರ; ಹುರುಳು, ಸತ್ವ; ತಿರುಳು; ಕುಸುರಿ, ದುದ್ದು; ಚೀಗು, ಕೆಚ್ಚು.

**गून**, स्त्री. ದೋಣಿ ಎಳೆಯುವ ಹಗ್ಗ; ವರ್ಣ; ವಿಧ.

**गूना**, पु. ವರ್ಣ, ಬಣ್ಣ; ತರಹ, ವಿಧ

**गूमड़ा**, पु. ಕುರು, ಗುಳ್ಳೆ.

**गूमड़ी**, स्त्री. ಮಡಿಮೆ, ಮಡಿಬಕ್ಕೆ; ಬೆವರು ಗುಳ್ಳೆ.

**गूलर**, पु. ಅತ್ತಿ ಮರ.

**गूह**, पु. ಮಲ, ಅಮೇಧ್ಯ; ಗಲೀಜು.

**गृह**, पु. ಮನೆ; ನಿವಾಸ; ಬೀಡು.

**गृहगोधा**, पु. **गृहगोधिया**, स्त्री. ಹಲ್ಲಿ

**गृहस्थ**, पु. ಗೃಹಸ್ಥ, ಸಂಸಾರಿ; ಯಜಮಾನ.

**गृहस्थिन**, स्त्री. ಗೃಹಿಣಿ, ಗರತಿ.

**गृहस्थी**, स्त्री. ಗೃಹಸ್ಥಧರ್ಮ; ಕುಟುಂಬ; ಮನೆತನ, ಸಂಸಾರ; ಸಂತಾನ, ಸಂತತಿ.

**गेंजन**, पु. ಸ್ವಲ್ಪ, ತುಸ.

**गेंठी**, स्त्री. ಗೃಷ್ಟಿ ಗೆಡ್ಡೆ, ವಾರಾಹಿ ಕಂದ

**गेंड**, पु. ಕಬ್ಬಿನ ಸೋಗೆ ಅಥವಾ ಸುಳಿ, ಸೂಲಂಗಿ; ಬೇಲಿ, ಪೌಳಿ.

**गेंडक**, पु. ಚೆಂಡು ಮಲ್ಲಿಗೆ, ಚೆಂಡು ಹೂ.

**गेंडना**, सक्रि. ಗದ್ದೆ ಬದು ಹಾಕು;

ಸುತ್ತುಗಟ್ಟು, ಬೇಲಿ ಹಾಕು.
**गेंडली,** स्त्री. ಸಿಂಬಿ, ಸುರುಳಿ; ಹಾವು ತೆಕ್ಕೆಗಟ್ಟುವಿಕೆ.
**गेंडा,** पु. **गेंडी,** स्त्री. ಕಬ್ಬಿನ ತುಂಡು; ಕಬ್ಬು; ಕಬ್ಬಿನ ಸೋಗೆ, ಸೂಲಂಗಿ.
**गेंडुआ,** पु. ತಲೆದಿಂಬು; ದೊಡ್ಡ ಚೆಂಡು.
**गेंडुरी,** स्त्री. ಸಿಂಬಿ, ಸುರುಳಿ; ಹಾವು ತೆಕ್ಕೆಗಟ್ಟುವಿಕೆ.
**गेंद,** स्त्री. ಚೆಂಡು; ಗೋಳ.
**गेंदवा,** पु. ದಿಂಬು, ತಲೆ ದಿಂಬು; ಹೊಟ್ಟೆಯಲ್ಲಿನ ಜಂತು, ನಾಡೀ ಕೀಟ.
**गेंदा,** पु. ದೊಡ್ಡ ಚೆಂಡು; ಚೆಂಡುಮಲ್ಲಿಗೆ
**गेंदुआ,** पु. ದಿಂಬು, ಲೋಡು.
**गेगटा,** पु. ಏಡಿ ಕಾಯಿ, ನಳ್ಳಿ.
**गेगली,** स्त्री. ಮುಗ್ಗಲಗೇಡಿ ಹೆಂಗಸು, ಹೊಲಸಿ.
**गेड़ना,** सक्रि. ಸುತ್ತುಗಟ್ಟು, ಆವರಿಸು; ಸುತ್ತು, ಬಳಸು.
**गेदरा,** वि. ನಿಷ್ಕಪಟವಾದ, ಸಾಧು; ಮಂಕ; ಕಿಸಬಾಯ.
**गेदा,** पु. ಚಿಕ್ಕ ಮರಿ, ಗರಿಗಟ್ಟದ ಮರಿ.
**गेपा,** पु. ಮೊಲೆ ತೊಟ್ಟು, ಕುಚಾಗ್ರ.
**गेबर,** पु. ಒಂದು ಪಕ್ಷಿ.
**गेरना,** सक्रि. ಬೀಳಿಸು; ಹೊಯ್ಯು, ಚೆಲ್ಲು; ಮಡಗು, ಇಟ್ಟುಕೊಳ್ಳು (ಉಪಪತ್ನಿ).
**गेरुआ,** वि. ಕಾವಿ ಬಣ್ಣದ, ಕಾವಿ.
**गेरुई,** स्त्री. ಕಾಡಿಗೆ; ಇಲ್ಲಣ, ಬೂಜು; ಗಿಡಗಳ "ಕಾಡಿಗೆ" ರೋಗ, ಜಿಗಿ.
**गेरू,** पु. ಕಾವಿ ಕಲ್ಲು, ಕಾವಿ.
**गेसू,** स्त्री. ಸುರುಳುಗೂದಲು, ಗುಂಗುರುಗೂದಲು; ಮುಂಗುರುಳು.
**गेह,** पु. ಗೃಹ, ಮನೆ.
**गेहुँअन,** पु. ಗೋಧಿಯ ನಾಗರ, ಗೋಧುಮೆ ಹಾವು.
**गेहुँआ,** वि. ಗೋಧಿಯ; ಗೋಧಿಯ ಬಣ್ಣದ.
**गेहूँ,** पु. ಗೋಧಿ, ಗೋಧುಮೆ.
**गैंडा,** पु. ಖಡ್ಗಮೃಗ, ಗೇಂಡಾಮೃಗ.
**गैंती,** स्त्री. ಗುದ್ದಲಿ.
**गैना,** पु. ಚಿಕ್ಕ ಎತ್ತು.
**गैनी,** स्त्री. ಎತ್ತಿನ ಗಾಡಿ.
**ग़ैब,** पु. ಎದುರಿನಲ್ಲಿ ಇಲ್ಲದಿರುವುದು, ಅಪ್ರತ್ಯಕ್ಷ, ಪರೋಕ್ಷ; ಗುಟ್ಟು.
**ग़ैबत,** स्त्री. ಚಾಡಿ, ದೂರು; ಅನುಪಸ್ಥಿತಿ
**गैबदाँ,** पु. ಪರೋಕ್ಷ ಜ್ಞಾನವುಳ್ಳವ.
**ग़ैबानी,** स्त्री. ನಾಚಿಕೆಯಿಲ್ಲದ ಅಥವಾ ದುರ್ನಡತೆಯ ಹೆಂಗಸು; ಸೂಳೆ.
**गैबी,** वि. ಅಪ್ರತ್ಯಕ್ಷವಾದ, ಪರೋಕ್ಷದ; ಮರೆಯಾದ, ಗುಪ್ತವಾದ.
**गैया,** स्त्री. ಗೋವು, ಹಸು.
**गैर,** स्त्री. ಅತ್ಯಾಚಾರ, ಅನ್ಯಾಯ.
**ग़ैर,** पु. ಹೊರಗಿನವ; ಪ್ರತಿಸ್ಪರ್ಧಿ. वि. ಅನ್ಯ, ಇತರ; ಪರ, ಪರಕೀಯ; ಬೇರೆಯ; ಕೆಟ್ಟ. ತಪ ಅಭಾವ ಸೂಚಕ ಮತ್ತು ನಿಷೇಧಾರ್ಥಕ ಶಬ್ದ. ಉದಾ:-ग़ैर-हाज़िर, ग़ैर-मुमकिन.
**ग़ैर आबाद,** वि. ವಾಸವಿಲ್ಲದ, ಒಕ್ಕಲಿಲ್ಲದ; ಬೀಳು (ಜಮೀನು).
**ग़ैर-ज़रूरी,** वि. ಅನಾವಶ್ಯಕ, ಅನಗತ್ಯ.

ग़ैरत, स्त्री. ನಾಚಿಕೆ, ಲಜ್ಜೆ, ಭಿಡೆ.
ग़ैरतमंद, वि. ಲಜ್ಜೆಯುಳ್ಳವ, ಲಜ್ಜಾಲು
ग़ैर-मनकूला, वि. ಅಚರ, ಸ್ಥಿರ, ಸ್ಥಾವರ
ग़ैर-मामूल, ग़ैर-मामूली, वि. ಅಸಾಧಾರಣವಾದ, ಅಪರೂಪ.
ग़ैर-मुनासिब, वि. ಅನುಚಿತ, ಅಯುಕ್ತ
ग़ैर-मुमकिन, वि. ಆಗದ, ಅಸಾಧ್ಯ, ಅಸಂಭವವಾದ.
ग़ैर-मुल्क, पु. ಪರದೇಶ.
ग़ैर-मौजूदगी, स्त्री. ಅನುಪಸ್ಥಿತಿ, ಗೈರುಹಾಜರಿ.
ग़ैर-वाजिब, वि. ಅಯೋಗ್ಯವಾದ, ಸರಿಯಲ್ಲದ, ಅಯುಕ್ತ.
ग़ैर-शख़्स, पु. ಪರಕೀಯ; ಹೊರಗಿನವ; ಮೂರನೇಯವ; ಹೊಸಬ.
ग़ैर-समझी, स्त्री. ಬೇರೆಯಾಗಿ ತಿಳಿಯುವುದು; ವೈಮನಸ್ಯ.
ग़ैर-सरकारी, वि. ಸರ್ಕಾರಿ ಅಲ್ಲದ, ಖಾಸಗಿ.
ग़ैर हाज़िर, वि. ಇಲ್ಲದಿರುವ, ಗೈರುಹಾಜರಾದ, ಅನುಪಸ್ಥಿತ.
ग़ैर-हाज़िरी, स्त्री. ಅಭಾವ; ಗೈರುಹಾಜರಿ, ಅನುಪಸ್ಥಿತಿ.
गैरा, पु. ಛತ್ತದರಿ, ಕಟ್ಟು.
गैरिक, पु. ಕಾವಿ, ಕಾವಿ ಕಲ್ಲು.
गैल, पु. ದಾರಿ, ಮಾರ್ಗ, ಹಾದಿ.
गोंटिया, पु. ಪಟೇಲ, ಹೆಗ್ಗಡೆ, ಗೌಡ.
गोंठ, पु. ಪಂಚೆಯನ್ನು ಸೊಂಟಕ್ಕೆ ಸುತ್ತಿ ಕಟ್ಟುವ ಗಂಟು, ನೀವಿ.
गोंठना, सक्रि. ತುದಿ ಅಥವಾ ಕೊನೆಯನ್ನು ಮಡಿಸು, ಅಂಚನ್ನು ಮಡಿಸು, ಅಂಚುಗಟ್ಟು; ಆವರಿಸು.
गोंडरा, पु. ಮಂಡಲ; ಕಪಿಲೆಯ ಚಕ್ರಕ್ಕೆ ಹಾಕಿರುವ ಕಬ್ಬಿಣದ ಬಳೆ; ಬಳೆ.
गोंडपट्टा, पु. = ग्वारपाठा.
गोंडा, पु. ಕೊಟ್ಟಿಗೆ, ರೊಪ್ಪ, ದೊಡ್ಡಿ; ಕುಗ್ರಾಮ.
गोंद, पु. ಗೋಂದು, ಬಂಕೆ, ಅಂಟು, ಹಗಿನು.
गोंददानी, स्त्री. ಗೋಂದಿನ ಪಾತ್ರೆ, ಬಂಕೆಯ ಕುಡಿಕೆ, ಗೋಂದುದಾನಿ.
गोंद-पंजीरी, गोंद-माखाने, स्त्री. ಗೋಂದು ಸೇರಿಸಿ ಮಾಡುವ ಚಾಣಂತಿ ಲೇಹ್ಯ.
गोंदरी, स्त्री. ಚೇಣಿ ಹುಲ್ಲು, ಆಪು; ಚೇಣಿ ಹುಲ್ಲಿನ ಚಾಪೆ, ಮಂದಲಿಕೆ.
गोंदी, स्त्री. ಹೊಂಗೆಯ ಮರ.
गो, स्त्री. ಹಸು. पु. ಹೇಳುವವ (ಸಮಾಸದಲ್ಲಿ). अव्य. ಆದರೂ, ಆದಾಗ್ಯೂ, ತಥಾಪಿ. गोकि = ಆದಾಗ್ಯೂ, ಯದ್ಯಪಿ
गोइंठा, पु. ಬೆರಣಿ, ಕುರುಳು.
गोइंदा, पु. ಹೇಳುವವ; ಮಾತನಾಡುವವ; ಗುಪ್ತಚಾರ, ಬೇಹುಗಾರ.
गोइ, पु. ಚೆಂಡು.
गोइयाँ, पु. ಜೊತೆಗಾರ, ಒಡನಾಡಿ.
गोई, स्त्री. ಸಖಿ, ಗೆಳತಿ; ಹೇಳುವುದು; ದಾರದ ಕಂಡು, ಕಂಡಿಕೆ.
गोकुल, पु. ದನಗಳ ಮಂದೆ; ಕೊಟ್ಟಿಗೆ.
गोखरू, पु. ನೆಗ್ಗಿಲು ಮುಳ್ಳು; ಕತ್ತರಿಬೋನು; ಕಿವಿಯ ಒಂದು ಆಭರಣ;

ಕಲಾಬತ್ತಿನ ಕಸೂತಿ ಕೆಲಸ ಮಾಡಿದ ಬಟ್ಟೆ, ಕಿನಕಾಬು.

**गोखा**, पु. ಗವಾಕ್ಷಿ, ಜಾಳಾಂದ್ರ.

**गोचना**, सक्रि. ಹಿಡಿ, ಹಿಡಕೊಳ್ಳು.

**गोचनी**, स्त्री. ಗೋಧಿ ಮತ್ತು ಕಡಲೆಯ ಬೆರಿಕೆ; ಇವೆರಡು ಧಾನ್ಯಗಳನ್ನೂ ಒಟ್ಟಿಗೆ ಬೆಳೆಯುವ ಜಮೀನು.

**गोचर**, पु. ಬುದ್ಧಿಗೋಚರ, ಅರಿವು; ಗ್ರಹಣ ಶಕ್ತಿ; ಗೋಮಾಳ, ಹುಲ್ಲುಗಾವಲು.

**गोचरी**, स्त्री. ಶಿಷ್ಯರಿಂದ ಕಾಣಿಕೆಯನ್ನು ಸ್ವೀಕರಿಸಲು ಮಠಾಧಿಪತಿಗಳು ಮಾಡುವ ಸಂಚಾರ, ಶಿಷ್ಯಾರ್ಜನೆ.

**गोज़**, पु. ಅಪಾನವಾಯು, ಹೂಸು.

**गोजई**, स्त्री. ಗೋಧಿ ಮತ್ತು ಜವೆಗೋಧಿಯ ಬೆರಿಕೆ.

**गोजर**, पु. ಕರ್ಣ ಜಲೂಕೆ, ಜರಿ, ಲಕ್ಷ್ಮೀ ಚೇಳು, ಸಾವಿರ ಕಾಲು.

**गोजिया**, स्त्री. ಒಂದು ಗಿಡ, ಗೋಜಿಹ್ವೆ

**गोजी**, स्त्री. ಕೋಲು, ದೊಣ್ಣೆ.

**गोझनवट**, स्त्री. ಸೀರೆ ಅಂಚು, ಸೆರಗು.

**गोझा**, पु. ಒಂದು ಮುಳ್ಳು ಗಿಡ; ಹಣದ ಚೀಲ; ಜೇಬು, ಕಂದೋಟಿ; ಕರಿಗಡುಬು, ಕರ್ಜಿಕಾಯಿ.

**गोझिया**, स्त्री. गोझा का लघु रूप.

**गोट**, पु. ಬಟ್ಟೆಯ ಅಂಚು, ಕರೆ; ನಕ್ಕಿ, ಗೋಟು; ದಡ; ಪಗಡೆಯ ಕಾಯಿ; ಆಟಗಾಯಿ; ಗೋಷ್ಠಿ, ಮಂಡಲಿ; ಉತ್ಸವ; ಹಳ್ಳಿ.

**गोटा**, पु. ಜರತಾರಿ ಅಂಚು, ಕಿನಕಾಬಿನ ಗೋಟು, ನಕ್ಕಿ; ಕೊತ್ತುಂಬರಿ ಬೀಜ, ಏಲಕ್ಕಿ ಮುಂತಾದುವು ಕಲಸಿದ ಅಡಿಕೆ ಪುಡಿ; ಒಣಗಿದ ಮಲ, ವಿಷ್ಠೆ.

**गोटी**, स्त्री. ಹುಡುಗರ ಆಟದ ಬೋಕಿ; ಬಟುವಾದ ಕಲ್ಲು, ಬಚ್ಚ; ಪಗಡೆಯ ಕಾಯಿ, ಆಟಗಾಯಿ; ಆಟ.

**गोठ**, स्त्री. ಗೋಷ್ಠಿ; ಗೋಶಾಲೆ, ಕರುಹಟ್ಟಿ; ಸಂಚಾರ.

**गोड़**, पु. ಕಾಲು, ಪಾದ.

**गोड़ना**, सक्रि. ತೋಡು, ಅಗಿ, ಡೊಗೆ.

**गोड़ा**, पु. ಮಂಚದ ಕಾಲು; ಕಾಲು, ಪಾದ; ಆಧಾರ.

**गोड़ाई**, स्त्री. ತೋಡುವಿಕೆ, ಅಗತೆ; ತೋಡುವ ಕೆಲಸ; ತೋಡುವುದರ ಕೂಲಿ.

**गोड़ाना**, सक्रि. गोड़ना का प्रे. रूप.

**गोड़ापाई**, स्त्री. ಪದೇ ಪದೇ ಹೋಗಿ ಬರುವಿಕೆ, ಎಡತಾಕುವಿಕೆ.

**गोड़ारी**, स्त्री. ಮಂಚದಲ್ಲಿ ಕಾಲಿಡುವ ಕಡೆ, ಕಾಲು ದೆಸೆ; ಮೋಜ, ಮೆಟ್ಟು, ಜೋಡು.

**गोड़िया**, स्त्री. ಸಣ್ಣ ಕಾಲು.

**गोड़ी**, स्त्री. ತಕ್ಕೊಳ್ಳುವಿಕೆ, ಪ್ರತಿಗ್ರಹ, ಪಡೆಯುವಿಕೆ; ಲಾಭ, ಆದಾಯ.

**गोड़ैत**, पु. ಹಳ್ಳಿಯ ಲೋಂದುಗಾರ, ತಳವಾರ; ಕಾವಲುಗಾರ, ಚೌಕಿದಾರ

**गोण**, **गोणी**, स्त्री. ಗೋಣಿ ಚೀಲ; ಹಸಿಬೆ ಚೀಲ.

**गोत**, पु. ಗೋತ್ರ; ಕುಲ; ವಂಶ, ತಳಿ; ಬಾಡಕಟ್ಟು.

**ग़ोता**, पु. ಮುಳುಗುವುದು; ಸ್ನಾನ ಮಾಡುವುದು; ಮುಳುಗು, ಗೋತ. ग़ोता खाना = ಮುಳುಗು; ಮೋಸ ಹೋಗು. ग़ोता मारना = ಮುಳುಗು, ಇಳಿ ಮುಳುಗು; ಡುಬ್ಬಾಯಿಸು; ಗೋತ ಹೊಡೆ; ಮಧ್ಯೆ ಮಧ್ಯೆ ಗೈರು ಹಾಜರಾಗು.

**ग़ोताख़ोर**, पु. ನೀರಿನಲ್ಲಿ ಮುಳುಗುವವನು, ಮುಳುಗು ಹಾಕುವವನು, ಗೋತ ಹೊಡೆಯುವವನು.

**ग़ोताख़ोरी**, स्त्री. ಮುಳುಗುವಿಕೆ.

**गोतिया, गोती**, पु. ಸಗೋತ್ರದವ, ಬಂಧು ಬಳಗ.

**गोथ**, पु. ನೇಗಿಲ ನೊಗ.

**गोथान**, पु. ಗೋಸ್ಥಾನ, ದೊಡ್ಡಿ.

**गोद**, स्त्री. ವಕ್ಷಸ್ಥಳ, ಸೊಂಟ; ಅಂಕ, ಅಂಕ ಪೀಠ; ತೊಡೆ, ಕ್ರೋಡ; ಉಡಿ, ಮಡಿಲು; ದತ್ತು ಸ್ವೀಕಾರ. गोद पसारना = ಸೆರಗೊಡ್ಡು, ಪ್ರಾರ್ಥಿಸು. गोद लेना = ದತ್ತು ತೆಗೆದುಕೊ.

**गोदनहारी**, स्त्री. ಹಚ್ಚೆ ಚುಚ್ಚುವ ಒಂದು ಜಾತಿ ಸ್ತ್ರೀ.

**गोदना**, सक्रि. ಭೇದಿಸು, ಚುಚ್ಚು; ಮನನೋಯಿಸು; ಹಚ್ಚೆ ಚುಚ್ಚು; ದಾಕು ಹಾಕು, ದೇವೀ ಹಾಕು. पु. ಹಚ್ಚೆ, ದಾಕು; ಚುಚ್ಚುವ ಉಪಕರಣ.

**गोदरी**, स्त्री. ಸಿಂಬಿ, ಸಿವಡು.

**गोदा**, पु. ಆಲದ ಹಣ್ಣು.

**गोदाम**, पु. ಉಗ್ರಾಣ, ಕೋಠಿ, ಗಡಂಗು

**गोदी**, स्त्री. ವಕ್ಷಸ್ಥಳ, ತೊಡೆ.

**गोदोहनी**, स्त्री. ಹಾಲು ಕರೆಯುವ ಪಾತ್ರೆ, ಹಾಲಿನ ಮೊಗೆ.

**गोंधड़ा**, पु. ಕೊಂಬೆ, ರೆಂಬೆ.

**गोधा**, स्त्री. ಬೇಡರು ಎಡಗೈಯಲ್ಲಿ ಕಟ್ಟಿಕೊಳ್ಳುವ ಚರ್ಮದ ಗುರಾಣಿ; ಒಂದು ಬಗೆ ಉಡ, ಗೋಧೆ

**गोधूम**, पु. ಗೋಧುಮೆ, ಗೋಧಿ.

**गोधूली**, स्त्री. ಸಂಜೆ

**गोन**, स्त्री. ಚೀಲ, ಗೋಣಿ ಚೀಲ; ಮೂಟೆ; ದೋಣಿ ಎಳೆಯುವ ಹಗ್ಗ.

**गोना**, सक्रि. ಮುಚ್ಚು, ಬಚ್ಚಿಡು.

**गोनिया**, स्त्री. ಮೂಲೆ ಮಟ್ಟ. पु. ಮೂಟೆ ಹೊರುವವ ಅಥವಾ ಒಯ್ಯುವವ, ಹೊರೆಯಾಳು.

**गोनी**, स्त्री. ಗೋಣಿ, ಗೋಣಿ ತಟ್ಟು; ಗೋಣಿ ಚೀಲ.

**गोप**, पु. ಗೊಲ್ಲ, ಗೌಳಿಗ. स्त्री. ಕಂಠಿಯ ಸರ, ಗೋಪು, ಗೋಪಿನ ಸರ.

**गोपक**, पु. ನೂಲಿನ ಗುಂಡಿ, ಬಟನು.

**गोपन**, पु. ಬಚ್ಚಿಡುವಿಕೆ; ಮುಚ್ಚು ಮರೆ; ರಕ್ಷಣೆ.

**गोपना**, सक्रि. ಬಚ್ಚಿಡು, ಮುಚ್ಚು ಮರೆ ಮಾಡು.

**गोपुर**, पु. ಗೋಪುರ; ಅಗಸೆ ಬಾಗಿಲು, ಕೋಟೆ ಬಾಗಿಲು; ಹೆಬ್ಬಾಗಿಲು.

**गोफन, गोफना**, पु. ಕವಣೆ.

**गोफा**, पु. ಚಿಗುರು, ಕೊನರು, ತಳಿರು.

**गोफिया**, स्त्री. ಕವಣೆ.

**गोबर**, पु. ಗೋಮಯ, ಸಗಣಿ.

**गोबरगणेश**, पु. ಗೋಮಯದಿಂದ

ಮಾಡಿದ ಗಣೇಶನ ಪ್ರತಿರೂಪ; ಪೆದ್ದ, ಅಣ್ಣಪ್ಪ.

**गोबरी,** स्त्री. ಸಗಣಿ ಹಾಕಿ ಸಾರಿಸುವಿಕೆ; ಸಾರಣೆ; ಬೆರಣಿ.

**गोबरैला,** पु. ಸಗಣಿ ಹುಳು, ಡೊಣ್ಣೆ ಹುಳು.

**गोभी,** स्त्री. ಕೋಸುಗೆಡ್ಡೆ.

**गो-म-गो,** वि. ಬೆರಕೆಯ; ಮಿಶ್ರಿತ.

**गोमय,** पु. ಸಗಣಿ.

**गोमुख,** पु. ಬಿರುಕು, ಕವುರಿ; ಕಹಳೆ, ತುತ್ತೂರಿ.

**गोमुखी,** स्त्री. ಜಪಮಾಲೆಯನ್ನು ಮುಚ್ಚಿಕೊಳ್ಳುವ ಚೀಲ; ಗಂಗಾ ನದಿ ಹುಟ್ಟುವ ಕವುರಿ, ಗಂಗೋತ್ರಿ.

**गोमेद, गोमेदक,** पु. ಒಂದು ಬಗೆ ರತ್ನ, ಗೋಮೇದಿಕ.

**गोयंदा,** पु. = **गोइंदा.**

**गोय,** पु. ಚೆಂಡು.

**गोयबाज़,** वि. ಚೆಂಡು ಆಡುವವ.

**गोया,** क्रिवि. ಅಂತೆ, ಹಾಗೆ, ಎಂಬಂತೆ, ಅನ್ನುವ ರೀತಿಯಲ್ಲಿ.

**गोयाई,** स्त्री. ಮಾತುಕತೆ; ಭಾಷಣ.

**गोर,** पु. ಹೆಣವನ್ನು ಹೂಳುವ ಕುಣಿ, ಸಮಾಧಿ ಸ್ಥಳ, ಗೋರಿ; "ಜೀಬ್ರಾ". वि. ಬೆಳ್ಳಗಿರುವ, ಬಿಳಿಯ.

**गोरकन,** पु. ಹೆಣದ ಕುಣಿ ತೋಡುವವ.

**गोरकफ़न,** पु. ಪ್ರೇತ ಸಂಸ್ಕಾರ, ಕರ್ಮಾಂತರ, ಅಂತ್ಯೇಷ್ಟಿ.

**गोरखइमली,** स्त्री. ಕಲ್ಪವೃಕ್ಷ.

**गोरखधंधा,** पु. ಬಹಳ ತೊಡಕಿನ ಅಥವಾ ಸಿಕ್ಕಿನ ಕೆಲಸ, ರಗಳೆಯ ಕೆಲಸ.

**गोरखपंथी,** पु. ಸಂತ ಗೋರಖನಾಥರ ಸಂಪ್ರದಾಯವನ್ನನುಸರಿಸುವವರು.

**गोरख़र,** पु. ಕಾಡು ಕತ್ತೆ, ಜವುಖಾನೆ ಕುದುರೆ, "ಜೀಬ್ರಾ".

**गोरस,** पु. ಹಾಲು; ಮೊಸರು; ಇಂದ್ರಿಯ ಸುಖ, ವಿಷಯ ಸುಖ.

**गोरसह, गोरसा,** पु. ಹಸುವಿನ ಹಾಲಿನಿಂದ ಬೆಳೆದ ಮಗು.

**गोरसी,** स्त्री. ಹಾಲು ಕಾಯಿಸುವ ಅಗ್ಗಿಷ್ಟಿಗೆ.

**गोरा,** वि. ಬೆಳ್ಳಗಿರುವ, ಬಿಳಿಯ; ಸುಂದರವಾದ. पु. ಸುಂದರ ಪುರುಷ; ಬಿಳಿಯ ಜನ, ಫರಂಗಿಯವರು; ಚಟ್ಟಿಗಾರ.

**गोराई,** स्त्री. ಬಿಳುಪು; ಸೌಂದರ್ಯ.

**गोरिस्तान,** पु. ಶವಗಳನ್ನು ಹೂಳಿಡುವ ಸ್ಥಳ, ಸಮಾಧಿ ಭೂಮಿ.

**गोरी,** स्त्री. ಸುಂದರಿ, ಚೆಲುವೆ; ತಟ್ಟಿ.

**गोरू,** पु. ಕೊಂಬುಳ್ಳ ಪ್ರಾಣಿಗಳು, ಕಾಲುನಡೆಗಳು, ದನ, ದನಗಂಟಿ.

**गोलंदाज,** पु. ಗುಂಡು ಹಾರಿಸುವವ, ತುಪಾಕಿ ಸುಡುವವ.

**गोलंदाजी,** स्त्री. ಗುಂಡು ಹಾರಿಸುವಿಕೆ.

**गोलंबर,** पु. ಗುಮ್ಮಟ; ಗೋಳಾಕಾರದ ವಸ್ತು, ಗುಬ್ಬಿ; ಟೋಪಿ ಮತ್ತು ಜೋಡು ಹೊಲಿಯಲು ಉಪಯೋಗಿಸುವ ಮರದ ಗೋಳಾಕಾರದ ತುಂಡು, ಸಾಚ, ಕರವಾಯಿ, ಅಸಂಗಿ.

**गोल,** वि. ಗೋಳ, ಗುಂಡಾದ; ಉಂಗುರದಂತೆ ಗುಂಡಾದ, ದುಂಡಾದ;

ಸ್ಥೂಲವಾದ. पु. ಗೋಳ; ಉಂಡೆ; ದೊಡ್ಡ ಮಡಕೆ; ಹೆಡ್ಡ, ಮುಟ್ಠಾಳ. गोल मटोल = ಕೊಬ್ಬಿದ ಮತ್ತು ದಡ್ಡನಾದವ, ದಡಿಯ, ದಾಂಡಿಗ.

**ग़ोल**, पु. ಭೂತ; ಗುಮ್ಮ, ಗೊಗ್ಗಯ್ಯ, ಬೂಚಿ; ಸೇನೆಯ ಒಂದು ಭಾಗ, ದಳ; ಗುಂಪು, ಸಮೂಹ; ತಂಡ; ಹಿಂಡು.

**गोलक**, पु. ಸಣ್ಣ ಗೋಳ, ಗೋಳ; ಉಂಡೆ; ವಿಧವೆಯ ಜಾರ ಪುತ್ರ; ಮಣ್ಣಿನ ತೊಟ್ಟಿ; ಗುಮ್ಮಟ; ಹಣ ವಸೂಲು ಮಾಡುವ ಅಥವಾ ಕೂಡಿ ಹಾಕುವ ಡಬ್ಬಿ, ಗೋಲಕ, ಹುಂಡಿ ಗಡಿಗೆ; ಹುಟ್ಟುವಳಿ; ಸಿಧಿ. ಪುದುವಟ್ಟು; ಕಣ್ಣು ಗೊಂಬೆ, ಕಣ್ಣು ಪಾಪೆ.

**गोलगप्पा**, पु. ತುಪ್ಪದಲ್ಲಿ ಕರಿದ ಪೂರಿ.

**गोलमाल**, पु. ಅವಾಂತರ, ಗಲಿಬಿಲಿ, ಟಾಳಾ ಟೋಳಿ, ತಿರುಗಂಚಿ ಮರು ಗಂಚಿ, ಅಕ್ಕಡಿ ತಕ್ಕಡಿ.

**गोलमिर्च**, स्त्री. ಮೆಣಸು.

**गोलमोल**, वि. ದುಂಡ ದುಂಡಗಿರುವ; ಮೊದ್ದು.

**गोलयोग**, पु. ಅನವಸ್ಥೆ, ಅವಾಂತರ.

**गोला**, पु. ಗೋಳ, ತೆರಳೆ; ದಾರದ ಉಂಡೆ; ದೊಡ್ಡ ಗೋಲಿ; ಗುಂಡು, ಫಿರಂಗಿಯ ಗುಂಡು; ಗಿಟಕು; ತೊಲೆ, ದೂಲ, ಅಡ್ಡ ಮರ; ಸೇತುವೆಯ ಕಂಬ; ದಿನಸಿ ಅಂಗಡಿ; ಮಂಡಿಯ ಪೇಟೆ; ದನದ ಮಂದೆ.

**गोलाई**, स्त्री. ದುಂಡು, ಗೋಳಾಕಾರ, ದುಂಡಾಕಾರ.

**गोलाकार**, वि. ದುಂಡಾದ, ಗುಂಡಾದ.

**गोलादार**, पु. ಜಿನಸಿ ಅಂಗಡಿಯವ, ದವಸಿಗ; ಮಂಡಿ ವ್ಯಾಪಾರಿ.

**गोलाधार**, पु. ಧಾರಾ ಸಂಪಾತ, ದೊಡ್ಡ ಮಳೆ, ಹುಚ್ಚು ಮಳೆ.

**गोलार**, पु. ಗೋಳಾಕಾರ, ದುಂಡು.

**गोलिका**, स्त्री. ಜಾರ ಪುತ್ರಿ.

**गोली**, स्त्री. ಗೋಲಿ; ಗೋಲಿ ಕಲ್ಲು; ಗುಂಡು; ಉಂಡೆ; ಗುಳಿಗೆ, ಮಾತ್ರೆ. गोली दाग़ना = ಗುಂಡು ಹಾರಿಸು.

**गोवना**, सक्रि. ಮುಚ್ಚು, ಬಚ್ಚಿಡು.

**गोश**, पु. ಕರ್ಣ, ಕಿವಿ.

**गोशगुज़ारी**, स्त्री. ಸುದ್ದಿ, ವಾರ್ತೆ.

**गोशपेच**, पु. ಕಿವಿ ಮುರು.

**गोशमाली**, स्त्री. ಕಿವಿ ಹಿಂಡುವುದು; ದಂಡನೆ; ಗದರಿಕೆ.

**गोशवारा**, पु. ಚಿಪ್ಪಿನಲ್ಲಿನ ದೊಡ್ಡ ಮುತ್ತು, ಆಣಿ ಮುತ್ತು; ಒಂದು ತೆರದ ಗೋಂದು; ಕಲಾಬತ್ತು ಪೇಟಾ ವಿನ ಅಂಚು; ತುರಾಯಿ; ಶಿಖೆ; ಕೊಂಡೆ, ತುಪ್ಪಳ; ಮೊತ್ತ, ಜುಮ್ಲಾ, ಅಡ್ಡಂಕೆ; ಲೆಕ್ಕದ ಸಂಕ್ಷಿಪ್ತ ಪಟ್ಟಿ, ಗೋಷ್ವಾರೆ; ಕಿವಿ ಕಡಕು.

**गोशा**, पु. ಮೂಲೆ; ಏಕಾಂತ ಸ್ಥಾನ; ಗೋಷಾ; ದಿಕ್ಕು, ಕಡೆ; ಬಿಲ್ಲಿನ ತುದಿ, ಕೊಪ್ಪು. गोशानशीन = ಏಕಾಂತ ಸ್ಥಳದಲ್ಲಿರುವ; ಗೋಷಾ (ಸ್ತ್ರೀ.)

**गोश्त**, पु. ಮಾಂಸ; ಬಾಡು, ಹಪ್ಪು.

**गोश्तख़ोर**, वि. ಮಾಂಸ ಭಕ್ಷಕ, ಮಾಂಸಾಹಾರಿ.

**गोसफंद**, स्त्री. ಆಡು, ಮೇಕೆ.

**गोसमावल**, पु. = गोशवारा.

**गोसा**, पु. ಬೆರಣಿ.

**गोसाइँ, गोसैयाँ**, पु. ಸ್ವಾಮಿ, ಒಡೆಯ; ಸಾಧು; ಗೋಸ್ವಾಮಿ, ಗೋಸಾಯಿ, ಗೋಸಾವಿ.

**गोस्तनी**, स्त्री. ಒಂದು ಬಗೆ ಒಣ ದ್ರಾಕ್ಷಿ, ಕಿಸಮಿಸು.

**गोहंठी**, स्त्री. ಬೆರಣಿ, ಕುರುಳು.

**गोह**, स्त्री. ಒಂದು ಬಗೆ ಉಡ, ಗೋಧೆ.

**गोहन**, स्त्री. ಸಂಗತಿ, ಸಹವಾಸ.

**गोहर**, पु. ದನಗಳು ಹೋಗುವ ದಾರಿ, ಒಂದು ಬಗೆ ಹುಳು.

**गोहरा**, पु. ಬೆರಣಿ, ಕುರುಳು.

**गोहराना**, सक्रि. ಕರೆ, ಕೂಗು.

**गोहरी**, स्त्री. ಸಣ್ಣ ಬೆರಣಿ; ಅಪರಾಧ, ದಂಡ.

**गोहान**, पु. ದನಗಳು ಸೇರುವ ಸ್ಥಳ.

**गोहार**, पु. ಆರ್ತನಾದ; ಗದ್ದಲ; ಬೈದಾಟ; ಲಾಠಿ ಯುದ್ಧ.

**गोहारी**, स्त्री. ಆರ್ತನಾದ; ಕೂಗಾಟ, ಗದ್ದಲ; ಫಲವತ್ತಾದ ಗದ್ದೆ, ಕಸುವು ಭೂಮಿ.

**गोहिया**, स्त्री. ತೊಡೆವಾಳ.

**गौं**, स्त्री. ಸುಸಮಯ, ಒಳ್ಳೆಯ ಹೊತ್ತು, ಸುಸಂಧಿ; ಅನುಕೂಲ್ಯ, ಅನುವು; ಉದ್ದೇಶ; ರೀತಿ, ತರಹ; ಪಕ್ಕ. गौं निकालना = ಕಾರ್ಯ ಸಾಧಿಸು.

**गौंगीर**, वि. ಸ್ವಾರ್ಥಪರ, ಸ್ವಾರ್ಥಿ.

**गौंडा**, पु. ಗ್ರಾಮ, ಹಳ್ಳಿ; ದಾನ, ಧರ್ಮ; ಗಾಡಿಯ ರಸ್ತೆ; ೧ ಗಜ.

**गौख**, स्त्री. ಬೆಳಕಂಡಿ, ಕಿಟಕಿ; ಜಗಲಿ, ವರಾಂಡ.

**गौखा**, पु. ಹಸುವಿನ ಚರ್ಮ.

**ग़ौग़ा**, पु. ಕೋಲಾಹಲ; ಗುಲ್ಲು, ಗದ್ದಲ; ವದಂತಿ.

**ग़ौग़ाई**, वि. ಗದ್ದಲ ಮಾಡುವವ, ಗಲಾಟೆಖೋರ; ಜನಶ್ರುತಿಗೆ ಸಂಬಂಧಪಟ್ಟ, ವದಂತಿಯ. ग़ौग़ाई ख़बर = ಗಾಳೀ ಸುದ್ದಿ.

**गौचरी**, स्त्री. ದನಕರುಗಳನ್ನು ಮೇಯಿಸಲು ಕೊಡುವ ತೆರಿಗೆ; ಹುಲ್ಲುಗಾವಲಿನ ಸುಂಕ.

**गौछी**, स्त्री. ತೂತು; ಕುಣಿ; ಚಿಗುರು.

**ग़ौज़**, स्त्री. ಮಾತುಕತೆ, ಹರಟೆ.

**गौड़**, पु. ಗೌಡಬ್ರಾಹ್ಮಣ ಜಾತಿ; ವಂಗ ದೇಶದ ಒಂದು ವಿಭಾಗ.

**गौड़िया**, वि. ಗೌಡ ದೇಶ ಅಥವಾ ಗೌಡಬ್ರಾಹ್ಮಣರಿಗೆ ಸಂಬಂಧಪಟ್ಟ.

**गौड़ी**, स्त्री. ಬೆಲ್ಲದಿಂದಿಳಿಸಿದ ಹೆಂಡ.

**गौण**, वि. ಅಪ್ರಧಾನವಾದ, ಗೌಣ.

**गौद**, पु. ಹಣ್ಣಿನ ಗೊನೆ, ಜೊಂಪ.

**गौनहार**, स्त्री. ಮದುವೆಯ ಹೆಣ್ಣನ್ನು ಅತ್ತೆಯ ಮನೆಗೆ ಕರೆತರುವ ಹೆಂಗಸು.

**गौनहारिन, गौनहारी**, स्त्री. ಹಾಡುಗಾತಿ, ಗಾಯಕಿ.

**गौना**, पु. ವಧುವನ್ನು ಮನೆಗೆ ಎರಡನೇ ಬಾರಿ ಕರೆತರುವುದು; ಶೋಭನ ಪ್ರಸ್ತ, ಫಲಶೋಭನ.

**गौर**, वि. ಸುಂದರವಾದ; ಬೆಳ್ಳಗಿರುವ.

पु. ಗೌಡ ದೇಶ; ಗೌಡಬ್ರಾಹ್ಮಣ.

**ग़ौर**, पु. ಧ್ಯಾನ; ಯೋಚನೆ; ವಿಚಾರ, ಗಮನ, ನಿಗಾ.

**गौरव**, पु. ಗೌರವ, ಮರ್ಯಾದೆ; ಆದರಣೆ, ಮಾನ್ಯತೆ.

**गौरवा**, पु. ಗುಬ್ಬಚ್ಚಿ.

**गौरा**, स्त्री. ಗೌರವರ್ಣದ ಸ್ತ್ರೀ; ಅರಿಸಿನ. पु. ಗಂಡು ಗುಬ್ಬಚ್ಚಿ.

**गौरिया, गौरैया**, स्त्री. ಹೆಣ್ಣು ಗುಬ್ಬಚ್ಚಿ, ಚಟಕೆ; ಮಣ್ಣಿನ ಸಣ್ಣ ಹುಕ್ಕಾ.

**गौलना**, अक्रि. ಮನಸ್ಸಿಗೆ ತಟ್ಟು, ಮನವರಿಕೆಯಾಗು.

**ग़ौस**, पु. ಫಿರ್ಯಾದು, ವ್ಯಾಜ್ಯ, ಮೊಕದ್ದಮೆ; ಮುಹಮ್ಮದೀಯ ಸನ್ಯಾಸಿಗಳ ಪಟ್ಟದ ಹೆಸರು.

**गौहर**, पु. ಮುಕ್ತಾಫಲ, ಮುತ್ತು; ವಿವೇಕ, ಬುದ್ಧಿವಂತಿಕೆ; ರಸ, ಸಾರ; ಸ್ವಭಾವ.

**गौहान**, पु. ನಾಡು, ಹಳ್ಳಿಗಾಡು.

**ग्यारस**, स्त्री. ಏಕಾದಶಿ.

**ग्यारह**, वि. ಹನ್ನೊಂದು.

**ग्यारहवां**, वि. ಹನ್ನೊಂದನೆಯ.

**ग्रंथ**, पु. ಗ್ರಂಥ, ಪುಸ್ತಕ; ಗಂಟು.

**ग्रंथ साहब** = ಸಿಕ್ಖರ ಧರ್ಮಗ್ರಂಥ.

**ग्रंथि**, स्त्री. ಗ್ರಂಥಿ, ವಾಳ; ಗಂಟು, ಗಿಣ್ಣು.

**ग्रसना**, सक्रि. ಹಿಡಿ, ಹಿಡಕೊಳ್ಳು.

**ग्रस्त**, वि. ಹಿಡಿಯಲ್ಪಟ್ಟ, ಸಿಕ್ಕಿಬಿದ್ದ.

**ग्रह**, पु. ಗ್ರಹ; ಗ್ರಹಣ; ಬಾಲಗ್ರಹ.

**ग्रहणी**, स्त्री. ಅತಿಸಾರ, ಆಮಶಂಕೆ.

**ग्रामीण**, वि. ಹಳ್ಳಿಗಾಡಿನ; ಅನಾಗರಿಕ.

**ग्रास**, पु. ಕವಳ, ತುತ್ತು; ಹಿಡಿತ, ಗ್ರಹಣ.

**ग्राह**, पु. ಮೊಸಳೆ.

**ग्राहक**, पु. ಹಿಡಿಯುವವ; ಸ್ವೀಕರಿಸುವವ; ಕೊಂಡುಕೊಳ್ಳುವವ, ಗಿರಾಕಿ, ವರ್ತನೆಗಾರ; ಪತ್ರಿಕೆಯ ಚಂದಾದಾರ, ವರ್ಗಣಿದಾರ; ಭೇದಿಯನ್ನು ಕಟ್ಟುವ ಔಷಧ.

**ग्वार**, स्त्री. ಚವಳಿಕಾಯಿ, ಗೋರಿಕಾಯಿ.

**ग्वारपाठा**, पु. ಲೋಳಿ ಸರ.

**ग्वाल, ग्वाला, ग्वालिया**, पु. ಗೊಲ್ಲ, ಗೌಳಿಗ, ಕವಾಡಿಗ.

**ग्वालिन**, स्त्री. ಗೊಲ್ಲತಿ, ಗೌಳಗಿತ್ತಿ, ಕವಾಡಗಿತ್ತಿ; ಒಂದು ಬಗೆ ಹುಳು.

## घ

**घंघरा**, पु. **घंघरी**, स्त्री. ಲಂಗ, ಪಾವಡೆ.

**घंघोरना, घंघोलना**, सक्रि. ಕದಡು; ಕುಲುಕು; ಕಲಕಾಡು, ಅಡಿಯಾಡಿಸು

**घंट**, पु. ಬಿಂದಿಗೆ, ಘಟ.

**घंटा**, पु. ಘಂಟೆ, ಜಾಗಟೆ; ಅರವತ್ತು ನಿಮಿಷದ ಕಾಲ, ಒಂದು ಗಂಟೆ, ತಾಸು

**घंटाघर**, पु. ಘಂಟಾಗಾರ, ಘಂಟೆ ಗೋಪುರ, ಗಡಿಯಾರ ಗೋಪುರ

**घंटाली**, स्त्री. ಸಣ್ಣ ಘಂಟೆ, ಕಿರುಗಂಟೆ.

**घंटिका**, स्त्री. ಚಿಕ್ಕ ಗಂಟೆ, ಗೆಜ್ಜೆ.

**घंटी**, स्त्री. ಹಿತ್ತಾಳೆಯ ಚಂಬು, ತಂಬಿಗೆ; ಜಾಗಟೆ; ಚಿಕ್ಕ ಗಂಟೆ, ಗೆಜ್ಜೆ; ಗಂಟೆಯ ಶಬ್ದ; ಗಂಟಲು ಮಣಿ; ಕಿರುನಾಲಿಗೆ, ಅಣ್ಣಾಲಿಗೆ.

**घंटु**, पु. ಆನೆಯ ಕತ್ತಿಗೆ ಕಟ್ಟುವ ಗಂಟೆಗಳ ಮಾಲೆ.

**घघरा**, पु. **घघरी**, स्त्री. ಲಂಗ, ಪಾವಡೆ.

**घचाघच**, स्त्री. ಕತ್ತಿಯ ಘಾಯ.

**घट**, पु. ಘಟ, ಬಿಂದಿಗೆ, ಕೊಡಪಾನ; ಶರೀರ; ಹೃದಯ. वि. ಕಡಿಮೆಯಾದ, ಕುಗ್ಗಿದ, ಇಳಿದ, ಮಟ್ಟಾದ.

**घटक**, पु. ಮಧ್ಯಸ್ಥ; ವಿವಾಹ ನಿಷ್ಕರ್ಷೆ ಮಾಡಿಸುವವ; ದಳ್ಳಾಳಿ; ಕೆಲಸ ಸಾಧಿಸುವವ, ಗಟ್ಟಿಗ; ಮಾಗಧ; ಪವಾಡಿಗ.

**घटका**, पु. ಉಸುರು ಕಟ್ಟುವಿಕೆ, ಉಸುರಡಗುವಿಕೆ.

**घटती**, स्त्री. ಕಡಿಮೆ, ಕುಂದು, ಕೊರತೆ; ಇಳಿತ, ತಗ್ಗು.

**घटन**, पु. ಘಟನೆ, ಒದಗುವಿಕೆ, ಸಂಭವ.

**घटना**, अक्रि. ಕಡಿಮೆಯಾಗು; ಇಳಿ, ಕುಗ್ಗು; ಉಡುಗು; ಕ್ಷೀಣವಾಗು; ಕುಂದು; ಸಂಭವಿಸು, ಘಟಿಸು, ಒದಗು; ಆಗು, ಉಂಟಾಗು. स्त्री. ಸಂಭವ, ಘಟನೆ, ಒದಗಿದ ಪ್ರಸಂಗ.

**घटबढ़**, स्त्री. ಹೆಚ್ಚು ಕಡಿಮೆ, ನ್ಯೂನಾಧಿಕ್ಯ.

**घटवाई**, स्त्री. ಕಡಿಮೆ ಮಾಡುವಿಕೆ, ಇಳಿಸುವಿಕೆ; ಕುಗ್ಗಿಸುವಿಕೆ. पु. ಘಟ್ಟದ ಸುಂಕ ತಕ್ಕೊಳ್ಳುವವ.

**घटवाना**, सक्रि. घटना का प्रे. रूप.

**घटवार**, **घटवाल**, पु. ಬಂದರಿನ ಸುಂಕ ವಸೂಲು ಮಾಡುವವ; ದೋಣಿ ಒತ್ತುವವ, ನಾವಿಕ; ಸ್ನಾನ ಘಟ್ಟದಲ್ಲಿ ದಕ್ಷಿಣೆ ತಕ್ಕೊಳ್ಳುವ ಬ್ರಾಹ್ಮಣ.

**घटहा**, पु. ಬಂದರಿನ ಸುಂಕದ ಗುತ್ತಿಗೆದಾರ; ತಪ್ಪಿತಸ್ಥ, ಅಪರಾಧಿ.

**घटा**, स्त्री. ಮುಗಿಲು, ಮೋಡ. **घटा छाना** = ಮೋಡ ಕವಿ.

**घटाटोप**, वि. ಮೋಡ ಕವಿದ. पु. ಪಲ್ಲಕ್ಕಿಯನ್ನು ಮುಚ್ಚುವ ಬಟ್ಟೆ, ಚತ್ತು; ದೊಡ್ಡ ಟೋಪಿ.

**घटाना**, सक्रि. ಕಳೆ, ಕಡಿಮೆ ಮಾಡು; ವಜಾ ಮಾಡು, ಉತ್ತಾರ ಹಾಕು; ಕುಗ್ಗಿಸು, ಕುಂದಿಸು; ಅವಮಾನಪಡಿಸು

**घटाव**, पु. ಕಡಿಮೆಯಾಗುವಿಕೆ, ತಗ್ಗು; ವಜಾ; ಕಡಿಮೆ, ಇಳಿತ; ಅವನತಿ.

**घटिका**, स्त्री. ಸಣ್ಣ ಬಿಂದಿಗೆ; ಒಂದು ಘಳಿಗೆ; ಗಳಿಗೆ ಬಟ್ಟಲು.

**घटिया**, वि. ಅಗ್ಗವಾದ, ಕಡಿಮೆಯಾದ; ಕ್ಷುದ್ರ, ಕೀಳು ತರದ.

**घटिहा**, वि. ಸಮಯ ನೋಡಿ ಕೆಲಸ ಸಾಧಿಸಿಕೊಳ್ಳುವವ; ಗಟ್ಟಿಗ, ಘಾಟಿ, ಚತುರ; ಮೋಸಗಾರ; ದುಷ್ಟ, ಲಂಪಟ.

**घटी**, स्त्री. ೨೪ ನಿಮಿಷ, ಗಳಿಗೆ; ಗಡಿಯಾರ; ಕಡಿಮೆ, ಇಳಿತ; ತಗ್ಗು; ನಷ್ಟ.

**घटुका**, पुं. = घटका.

**घट्ट**, पु. ತೊರೆಯ ಘಟ್ಟ, ಕಡವು; ರೇವು, ಬಂದರು.

**घट्टा**, पु. ಕಲ್ಲೊತ್ತು; ಬಿರುಕು; ಬಿರಡೆ, ಬೆಣೆ; ತಡೆ, ಅಡ್ಡಿ; ಅನಾನುಕೂಲ.

**घट्ठा**, पु. ಬಾಸುಂಡೆ, ಗಾದರಿ, ಗಂದೆ.

**घड़घड़ाना**, अक्रि. ಗುಡುಗು, ಗರ್ಜಿಸು

**घड़घड़ाहट**, स्त्री. ಗಡಗಡ ಶಬ್ದ, ಅಬ್ಬರ

**घड़ना**, सक्रि. = गढ़ना.

**घड़नाई, घड़नैल,** पु. ಮಡಕೆ ಅಥವಾ ಸೀಪಾಯಿಗಳಿಂದ ಕಟ್ಟಿದ ದೋಣಿ, ತೆಪ್ಪ, ಕಟ್ಟುಮರ.

**घड़वा,** पु. = घरौंदा.

**घड़ा,** पु. ಕೊಡಪಾನೆ, ಮಡಕೆ, ಗಡಿಗೆ. घड़ों पानी पड़ना = ಅತ್ಯಂತ ಲಜ್ಜಿತನಾಗು.

**घड़ाना,** सक्रि. = गढ़ाना.

**घड़िया,** स्त्री. ಮಣ್ಣಿನ ಬಟ್ಟಲು; ಮೂಸೆ, ಕೂವೆ.

**घड़ियाल,** पु. ಕುಂಭೀರ, ನೆಗಳು, ಮೊಸಳೆ; ಜಾಗಟೆ; ದೊಡ್ಡ ಗಂಟೆ.

**घड़ियाली,** पु. ಗಂಟೆ ಹೊಡೆಯುವವ, ಜಾಗಟೆ ಹೊಡೆಯುವವ.

**घड़ी,** स्त्री. ಕಾಲಮಾಪಕ ಯಂತ್ರ, ಗಳಿಗೆ ಬಟ್ಟಲು; ಗಡಿಯಾರ; ಒಂದು ಗಳಿಗೆ; ಹೊತ್ತು, ಕಾಲ. घड़ी घड़ी = ಗಳಿಗೆ ಗಳಿಗೆಗೂ, ಕ್ಷಣಕ್ಷಣಕ್ಕೂ, ಪದೇಪದೇ.

**घड़ीसाज़,** पु. ಗಡಿಯಾರ ಸರಿ ಮಾಡುವವ, ಗಡಿಯಾರ ರಿಪೇರಿ ಮಾಡುವವ.

**घड़ीसाज़ी,** स्त्री. ಗಡಿಯಾರವನ್ನು ಸರಿಪಡಿಸುವಿಕೆ, ಗಡಿಯಾರದ ರಿಪೇರಿ.

**घड़ोला,** पु. ಚಿಕ್ಕ ಮಡಕೆ, ಗಡಿಗೆ.

**घड़ौंची,** स्त्री. ನೀರಿನ ಮಡಕೆ ಇಡುವ ಮುಕ್ಕಾಲು ಮಣೆ, ಗಡಂಚಿ.

**घतिया,** पु. ಘಾತಕ; ಮೋಸಗಾರ.

**घतियाना,** सक्रि. ಠಕ್ಕಿಸು, ಮೋಸಗೊಳಿಸು; ಮರಸು; ಬಚ್ಚಿಡು; ಕದಿ.

**घन,** पु. ಮೇಘ, ಮೋಡ; ಗುಂಪು, ತಂಡ; ಕರ್ಪೂರ; ಜಾಗಟೆ; ಘನತೆ, ಘನಫ; ಚಮಟಿಗೆ. वि. ಘನವಾದ; ಗಟ್ಟಿ, ದೃ ದಟ್ಟವಾದ, ಒತ್ತಾದ; ಬಹಳವಾದ

**घनगरज,** पु. ಗುಡುಗು; ಒಂದು ನಾಯಿಕೊಡೆ, ಅಳಂಬೆ; ದೊಡ್ಡ ಫಿರಂ

**घनघनाहट,** स्त्री. ಗಣಗಣ ಶಬ್ದ.

**घनघनाना,** अक्रि. ಗಣಗಣ ಅನ್ನು ಝಣಝಣ ಅನ್ನು. सक्रि. ಗಣ ಗಣ ಶಬ್ದ ಮಾಡು.

**घनघोर,** पु. ಮೋಡ; ಭಯಂಕರ ಧ್ವ ಗುಡುಗು. वि. ನಿಬಿಡ, ದಟ್ಟ; ಭೀಷಣ घनघोर घटा = ಕಾರ್ಮೋಡ, ಕಾರ್ಮುಗಿಲು.

**घनचक्कर,** पु. ಚಂಚಲ ಬುದ್ಧಿಯುವ ಮೂರ್ಖ; ತಿರುಕ.

**घनदार,** वि. ನಿಬಿಡವಾದ, ದಟ್ಟ.

**घननाद, घननाल,** पु. ದೊಡ್ಡ ಫಿರಂ

**घनबेल,** वि. ಕಸೂತಿ ಕೆಲಸ ಮಾಡಿದ, ಬೂಟಾ ಕೆಲಸ ಮಾಡಿದ (ವಸ್ತ್ರ).

**घनश्याम,** वि. ಮೇಘದಂತಹ ಕಪ್ಪು ಬಣ್ಣದವ.

**घनसार,** पु. ಕರ್ಪೂರ.

**घना,** वि. ಗಟ್ಟಿ; ನಿಬಿಡ, ದಟ್ಟ, ಒತ್ತಾದ; ಹೆಚ್ಚು.

**घनिष्ठ,** वि. ಒತ್ತಾದ, ದಟ್ಟ; ಅಡವು ಸಮೀಪದ (ಸಂಬಂಧ).

**घने, घनेरा,** वि. ಹೆಚ್ಚಾದ, ಹೇರಳ.

**घनेश,** पु. ಒಂದು ಜಾತಿ ಗರುಡ ಪಕ್ಷಿ.

**घपची,** स्त्री. ಎರಡು ಕೈಗಳಿಂದಲೂ ಗಟ್ಟಿಯಾಗಿ ಅಪ್ಪಿಕೊಳ್ಳುವಿಕೆ,

ತೆಕ್ಕೆದೀಳುವಿಕೆ.

**घपला**, पु. ತೊಡಕು, ಕಗ್ಗಂಟು; ಗಲಿಬಿಲಿ, ಅವಾಂತರ; ಅಬಂಧರೆ; ಘಪಾವಣೆ, ಮೋಸ; ಗದ್ದಲ.

**घबड़ाना, घबराना**, अक्रि. ಕಳವಳಗೊಳ್ಳು, ತಲ್ಲಣಿಸು; ದಿಗಿಲುಗೊಳ್ಳು. ಗಾಬರಿಯಾಗು; ಕಾತರಿಸು; ತಳಮಳಿಸು ವ್ಯಾಕುಲಪಡು. सक्रि. ಕಳವಳಗೊಳಿಸು, ಗಾಬರಿಮಾಡು; ಕಾತರಗೊಳಿಸು.

**घबड़ाहट, घबराहट**, स्त्री. ಕಳವಳ, ಗಲಿಬಿಲಿ; ದಿಗಿಲು, ಗಾಬರಿ; ತಲ್ಲಣ.

**घमंड**, पु. ಗರ್ವ, ಅಹಂಕಾರ; ಕೆಚ್ಚು.

**घमंडी**, वि. ಗರ್ವಿಷ್ಠ, ಅಹಂಕಾರಿ.

**घमकना**, अक्रि. ಘಮ ಘಮ ಶಬ್ದವಾಗು; ಗರ್ಜಿಸು. सक्रि. ಹೊಡೆ; ಗುದ್ದು, ಗುಮ್ಮು.

**घमघमाना**, अक्रि. ಘಮಘಮ ಶಬ್ದವಾಗು, ಮೊಳಗು सक्रि. ಹೊಡೆ, ಗುದ್ದು, ಗುಮ್ಮು.

**घमर**, पु. ನಗಾರಿಯ ನಾದ, ಮೊಳಗು.

**घमरौल**, स्त्री. ಸಂದಣಿ, ಗೊಂದಲ.

**घमस, घमसा**, स्त्री. ಉಷ್ಣ, ಸೆಕೆ; ಝಳ, ಬೇಗೆ.

**घमसान**, पु. ಘೋರಯುದ್ಧ, ಕಡುಗಾಳಗ.

**घमाका**, पु. ಗುದ್ದು, ಪೆಟ್ಟು; ಪೆಟ್ಟಿನಶಬ್ದ

**घमाघम**, स्त्री. ರಭಸ, ಸಡಗರ; ಸಂಭ್ರಮ, ದೊಂದುಳಿ. क्रिवि. ರಭಸದಿಂದ; ಕಿಕ್ಕಿರಿಯುತ್ತ.

**घमाना**, अक्रि. ಬಿಸಿಲು ಕಾಯು, ಬಿಸಿಲು ಕಾಸಿಕೊಳ್ಳು.

**घमासान**, पु. = घमसान.

**घमोय**, स्त्री. ಒಂದು ಮುಳ್ಳು ಗಿಡ.

**घमोरी**, स्त्री. ಬೆವರು ಸಾಲೆ.

**घया**, पु. ಕೆಂಡ.

**घर**, पु. ಗೃಹ, ಮನೆ, ಬೀಡು; ಮನೆತನ, ಸಂಸಾರ; ಎತ್ತರ. घर में डालना = (ಒಬ್ಬಳನ್ನು) ಇಟ್ಟುಕೊಳ್ಳು. घर सिर पर उठाना = ಮನೆತನ ನಡಿಸು; ಗದ್ದಲ ಮಾಡು. डाक घर = ಅಂಚೆಯ ಮನೆ, ಪೋಸ್ಟಾಫೀಸು.

**घरघराना**, अक्रि. ಗರ ಗರ ಶಬ್ದ ಮಾಡು; ಗುಡುಗು.

**घर-घाट**, पु. ರೀತಿ ನೀತಿ; ತರಹ; ಮನೆ ಮಠ.

**घरघाल, घरघालन**, वि. ಮನೆ ಹಾಳು ಮಾಡುವವ, ಮನೆಹಾಳ.

**घर-घुसना**, वि. ಮನೆಯಲ್ಲೇ ಕುಳಿತಿರುವವ.

**घरजाया**, पु. ಮನೆಯಲ್ಲೇ ಹುಟ್ಟಿದ ಗುಲಾಮ, ಮನೆಯಾಳು.

**घरड़**, स्त्री. ಹುಲ್ಲು, ಗೋಗ್ರಾಸ.

**घरद्वार**, पु. = घरबार.

**घरनाल**, स्त्री. ಪೂರ್ವಕಾಲದ ತುಪಾಕಿ, ಗರ್ನಾಲು.

**घरनी**, स्त्री. ಮನೆಯಾಕೆ, ಗೃಹಿಣಿ, ಹೆಂಡತಿ.

**घरफोड़ा**, वि. ಮನೆತನವನ್ನು ಒಡೆಯುವವ; ಗೃಹಕಲಹ ಹುಟ್ಟಿಸುವವ.

**घरबसा**, पु. ಉಪಪತಿ; ಗಂಡ, ಪತಿ.

**घरबसी**, स्त्री. ಉಪಪತ್ನಿ; ಹೆಂಡತಿ.

**घरबार**, पु. ಮನೆ ಮಠ, ಮನೆ ಮಾರು; ಆಸ್ತಿ ಪಾಸ್ತಿ; ಸಂಸಾರ, ಒಗತನ, ಗೃಹ ಕೃತ್ಯ; ವಂಶ, ಕುಟುಂಬ.

**घरबारी**, वि. ಸಂಸಾರಿಕ, ಗೃಹಸ್ಥ.

**घरवाला**, पु. ಮನೆಯ ಯಜಮಾನ; ಗಂಡ; ಗೃಹಸ್ಥ.

**घरवाली**, स्त्री. ಮನೆಯಾಕೆ; ಪತ್ನಿ, ಹೆಂಡತಿ; ಗರತಿ, ಕುಲ ಸ್ತ್ರೀ.

**घरवास**, पु. ವಾಸಸ್ಥಾನ, ಬಿಡದಿ.

**घराई**, पु. ಚಪ್ಪರ ಹಾಕುವವ; ಹೆಂಚು ಹೊದಿಸುವವ. स्त्री. ಕೆತ್ತನೆ ಕೆಲಸ, ರತ್ನಪಡಿ ಕೆಲಸ.

**घराऊ**, वि. ಗೃಹಕೃತ್ಯದ, ಮನೆಯ; ಸ್ವಂತ.

**घराती**, पु. ಹೆಣ್ಣಿನ ಮನೆಯವರು, ಬೀಗರು.

**घराना**, पु. ಮನೆತನ, ಕುಲ, ವಂಶ.

**घरिया**, पु. = घड़िया.

**घरी**, स्त्री. ಗಳಿಗೆ; ನಿರಿಗೆ, ಪದರ, ಮಡಿಕೆ.

**घरू**, वि. ಗೃಹಕೃತ್ಯದ, ಸಂಸಾರದ, ಮನೆಯ.

**घरेला, घरेलू**, वि. ಮನೆಯ; ಸ್ವಂತ; ಮನೆಗೆ ಸೇರಿದ; ಪಳಗಿದ, ಸಾಧು.

**घरैया**, वि. ಮನೆಗೆ ಸೇರಿದ, ಸ್ವಂತ.

**घरौंदा, घरौंधा**, पु. ಕಾಗದದ ಮನೆ, ಆಟದ ಮನೆ; ಪುಟ್ಟ ಮನೆ.

**घरौत**, स्त्री. ಚಮಟಿಗೆಯಿಂದ ಬಡಿಯುವಿಕೆ; ಬಡಿತ.

**घर्म**, पु. = घाम.

**घर्र**, पु. ಸಾಯುವಾಗ ಗಂಟಲಲ್ಲಿ ಆಗು ಗರಗರ ಶಬ್ದ; ಒಂದು ಬಗೆ ಕಾ

**घर्राटा**, पु. ಗೊರಕೆ; ಘರಘರ ಶಬ್ದ.

**घर्रामी**, पु. ಹೆಂಚು ಹೊದಿಸುವವ.

**घर्षण**, पु. ತಿಕ್ಕುವುದು, ತಿಕ್ಕಾಟ.

**घलना**, अक्रि. ಉಜ್ಜು; ಹಾ ಹಾಯು; ಲಟಾಪಟಿಯಾಗು.

**घलाघल, घलाघली**, स्त्री. ಲಟಾಪಟಿ, ಹೊಡೆದಾಟ, ಮಾರಾಮಾರಿ.

**घलुआ**, पु. ಕೊಸರು.

**घसखुदा**, पु. ಹುಲ್ಲು ಕೆತ್ತುವವ; ದಡ್ಡ, ಮಂಕ.

**घसन**, पु. ಒರೆಸುವಿಕೆ, ಉಜ್ಜುವಿಕೆ.

**घसना**, अक्रि. = घिसना.

**घसिटना**, अक्रि. ಎಳೆಯಲ್ಪಡು, ಎಳೆ ಕೊಂಡು ಹೋಗು.

**घसियारा**, पु. ಹುಲ್ಲು ಕೆತ್ತುವವ ಅಥವಾ ಮಾರುವವ.

**घसियारिन, घसियारी**, स्त्री. ಹುಲ್ಲು ಕೆತ್ತುವವಳು.

**घसीट**, स्त्री. ಎಳೆಯುವಿಕೆ, ಎಳೆತ; ಸೆಳೆತ; ಗೀಚುವಿಕೆ; ಕೊಕ್ಕರಿ ಬಿಕ್ಕರಿ ಬರಹ, ಕಾಕಲಿಪಿ, ನೋಡಿ.

**घसीटना**, सक्रि. ಎಳೆ; ಜಗ್ಗು, ಜಕ್ಕಿಸು; ಕೀಳು, ಸೆಳೆ; ಬೇಗಬೇಗ ಬರೆ, ಗೀಚು.

**घसीटा-घसीटी**, स्त्री. ಹಿಗ್ಗಾಮುಗ್ಗಾ ಎಳೆಯುವಿಕೆ, ಎಳದಾಟ.

**घसीला**, वि. ಹುಲ್ಲುಳ್ಳ; ಹುಲ್ಲು ಬೆಳೆದ.

**घहर**, स्त्री. ಗರ್ಜನೆ, ಅಬ್ಬರ.

**घहरना, घहराना**, अक्रि. ಗುಡುಗು,

1932
1938



ಗರ್ಜಿಸು, ಅಬ್ಬರಿಸು.

**घांघरा**,पु.घांघरी,स्त्री. ಲಂಗ, ಪಾವಡೆ.

**घांटी**, स्त्री. ಗಂಟಲು ಮಣಿ, ಗೋಮಾಳೆ, ವೆಟ್ರಿ; ಕಂಠ.

**घांटो**, पु. ಒಂದು ಬಗೆಯು ಹಾಡು.

**घांसी**, स्त्री. ಒಂದು ವಿಧದ ಬಟ್ಟೆ.

**घाइं**, स्त्री. ಪಕ್ಕ, ದಿಕ್ಕು, ಕಡೆ; ಸರ್ತಿ, ಬಾರಿ; ನೀರಿನ ಸುಳಿ.

**घाई**, स्त्री. ಪಂಚಕ, ಐದರ ಗುಂಪು; ಬೆರಳಸಂದು; ಕವಲೊಡೆಯುವ ಸ್ಥಳ; ಕಪಟ, ತಂತ್ರ; ದೊಣ್ಣೆಯು ಹೊಡತ; ಏಟು, ಗಾಯ.

**घाऊघप**, वि. ಹಣವನ್ನು ಸೂರೆ ಮಾಡುವವ, ದುಂದುಗಾರ; ಪರರ ದ್ರವ್ಯವನ್ನಪಹರಿಸುವವ, ಕವಡಗಂಟಕ.

**घागर**,पु.ಆನೆಯಕಾಲಿಗೆಕಟ್ಟುವ ಹಗ್ಗ.

**घाघ**, वि. ವೃದ್ಧ; ಅನುಭವವುಳ್ಳವ; ತಂತ್ರಗಾರ;ಕಪಟ;ಕದೀಮು,ದುರುಳ. पुराना घाघ = ಹಳೆಯು ಹೆಗ್ಗಣ.

**घाघरा**,पु. ಲಂಗ, ಪಾವಡೆ;ಪಾರಿವಾಳ; ಒಂದು ಮರ. स्त्री. ಸರಯೂ ನದಿ.

**घाघरी**, स्त्री. ಚಿಕ್ಕಲಂಗ, ಸಣ್ಣಪಾವಡೆ.

**घाघस**, पु. ಒಂದು ಜಾತಿ ಕೋಳಿ.

**घाट**,पु. ನದಿಯ ಘಟ್ಟ; ಕಡವು, ರೇವು; ಕಣಿವೆ, ಘಟ್ಟ; ಪರ್ವತ; ಮಾದರಿ; ವಿಧ; ಸ್ವರೂಪ; ಕತ್ತಿ ಬಾಯಿ, ಅಲಗು; ದಿಕ್ಕು; ನಷ್ಟ, ಹಾನಿ; ಕೆಡಕು; ಮೋಸ. वि. ತಗ್ಗಿದ, ಕಡಿಮೆಯಾದ. घाट घाट का पानी पीना = ಪ್ರಪಂಚದ ವ್ಯವಹಾರವನ್ನು ತಿಳಿ. सूखे घाट उतारना = ನಿರಾಶೆಪಡಿಸು.

**घाट-मांझी**, पु. ಓಡಗಾರ, ಅಂಬಿಗ.

**घाटमार**, पु. ಸುಂಕ ಕೊಡದೆ ಕದ್ದು ತಂದು ಮಾರುವವ.

**घाटर**, वि. ಸೋಮಾರಿ; ಹೆಡ್ಡ, ದಡ್ಡ.

**घाटवाला**, पु. = घाटिया.

**घाटा**, पु. ಕೊರತೆ, ಖೋತಾ; ಇಳಿಗೆ, ಇಳಿವರಿ; ನಷ್ಟ, ಹಾನಿ. घाटा भरना = ನಷ್ಟ ತುಂಬಿಸು, ಪರಿಹಾರ ದ್ರವ್ಯ ಕೊಡು, ಈಡು ಕೊಡು.

**घाटिया**, पु. ಸ್ನಾನ ಘಟ್ಟದಲ್ಲಿರುವ ಪುರೋಹಿತ.

**घाटी**, स्त्री. ಕಣಿವೆ, ಕಮರಿ; ಸಮುದ್ರದಒತ್ತು; ಸುಂಕದ ಕಟ್ಟೆಯುಅಪ್ಪಣೆ ಚೀಟಿ, ರಹದಾರಿ; ಕೊಟ್ಟಿಗೆ, ರೊಪ್ಪ.

**घात**, पु. ಹೊಡೆತ, ಪೆಟ್ಟು; ಧಕ್ಕೆ; ವಧೆ, ಸಂಹಾರ; ಕೆಡಕು, ಅಹಿತ. स्त्री. ಜಪ್ಪು, ಹೊಂಚು; ಒಳ್ಳೆಯ ಹೊತ್ತು, ಸುಸಂಧಿ; ಸಮಯಾನುಕೂಲತೆ, ಅನುವು; ಕಪಟ, ಮೋಸ; ಬೂಟಾಟಿಕೆ, ಸೋಗು; ರೀತಿ, ಬಗೆ.

**घातक**,पु. ಕೊಲೆಗಾರ,ಘಾತುಕ; ಕ್ರೂರಿ

**घाती**, वि. ನಾಶಮಾಡುವ; ಹೊಂಚು ಹಾಕಿಕೊಂಡಿರುವ; ಕಪಟಿ.

**घान**, पु. ಬೀಸುವ ಕಲ್ಲಿನಲ್ಲಿ ಅಥವಾ ಗಾಣದಲ್ಲಿ ಒಂದು ಸಾರಿ ಹಾಕುವಷ್ಟು ಪದಾರ್ಥ; ಒಂದು ಸಲದಲ್ಲಿ ಸುಟ್ಟಿದ್ದು ಅಥವಾ ಬೇಯಿಸಿದ್ದು, ಒಂದು ಪಟ್ಟು, ಒಬ್ಬೆ; ಪೆಟ್ಟು, ಹೊಡೆತ; ಕುರು.

**घाना**, सक्रि. ಕೊಲ್ಲು, ಹೊಡೆ.

**घानी**, स्त्री. ಗಾಣ. पु. ಗಾಣದ ಕೆಲಸ ಮಾಡುವವ.

**घाबरा**, वि. ಗಾಬರಿಯಾದ, ದಿಗಿಲುಗೊಂಡ.

**घाम**, पु. ಬಿಸಿಲು; ಧಗೆ, ಝಳ.

**घामड़**, वि. ಬಿಸಿಲಿನ ತಾಪದಿಂದ ಬಸವಳಿದ; ಬಡವಾದ; ಆಲಸ; ದಡ್ಡ.

**घाय**, पु. ಘಾಯ, ಹುಣ್ಣು.

**घायल**, वि. ಘಾಯಹೊಂದಿದ; ನೊಂದ.

**घाल**, स्त्री. ಕೊಸರು.

**घालक**, वि. ನಾಶಮಾಡುವವ, ವಿನಾಶಕ.

**घालना**, सक्रि. ಇಡು, ಇರಿಸು; ಎಸೆ, ಬಿಸಾಡು; ಈಡಾಡು; ಹಾಳುಮಾಡು; ಕೊಲ್ಲು.

**घालमेल**, वि. ಗಜಿಬಿಜಿ, ಮುದ್ದೆ, ಕಲಬೆರಿಕೆ, ಮಿಶ್ರಣ, ಮಿಳಿತ.

**घालू**, पु. ಕೊಸರು.

**घाव**, पु. ಗಾಯ, ಹುಣ್ಣು, ಜಖಂ. घाव भरना = ಗಾಯಆರು, ಮಾಯು.

**घावघप**, वि. = घाऊघप.

**घावपत्ता**, पु. ಒಂದು ಬಗೆ ಸೊಪ್ಪು, ಗಾಯದೊಪ್ಪಲು.

**घास**, स्त्री. ಹುಲ್ಲು, ಕರಡ, ಮೇವು.

**घासपात**, **घासफूस**, पु. ತೊಪ್ಪಲು, ಸೊಪ್ಪುಸದೆ; ಹುಲ್ಲು ಕಡ್ಡಿ.

**घिंघाना**, अक्रि. ಗಂಟಲು ಕಟ್ಟು, ಧ್ವನಿ ಒಡೆ.

**घिंघियाना**, अक्रि. ತಗ್ಗು ಸ್ವರದಲ್ಲಿ ಹಾಡು.

**घिग्घी**, स्त्री. ಬಿಕ್ಕಳಿಕೆ, ಹಿಕ್ಕೆ; ಬಿಕ್ಕಲು, ಎಕ್ಕಡು.

**घिघियाना**, अक्रि. ಭಯದಿಂದ ತ[...]ರಿಸಿ ಮಾತಾಡು, ಗದ್ಗದ ಮಾತಾಡು[...] ಬಿಕ್ಕು; ಅಂಗಲಾಚು, ಗೋಗರೆ.

**घिचपिच**, वि. ಇರುಕಾದ, ಒತ್ತಾ[...] ಕಿಕ್ಕಿರಿಯುವ; ತೊದಲುವ, ಗೊ[...]ಗು ( ಮಾತು ). स्त्री. ಇಕ್ಕಟ್ಟು[...] ನೂಕಾಟ; ಕಿಕ್ಕಿರಿಯುವಿಕೆ; ಇರುಕು[...]

**घिन**, स्त्री. ಹೇಸಿಗೆ, ಅಸಹ್ಯ, ಜುಗುಪ್ಸೆ[...] ಹೇವರಿಕೆ, ಮೊಗಚಿಟ್ಟು.

**घिनाना**, **घिनियाना**, अक्रि. ಅಸಹ್ಯ[...]ಪಡು, ಜುಗುಪ್ಸೆಪಡು, ಹೇಸು, ರೋ[...]

**घिनावना**, वि. ಅಸಹ್ಯದ, ಹೇಸಿಗೆಯ[...]

**घिनौना**, वि. ಅಸಹ್ಯಕರ, ಹೇಸಿಗೆಯ[...] ಹೊಲಸು. पु. ಬೇಸರ; ಜುಗುಪ್ಸೆ, ಚಿಟ್ಟು, ರೋಸು, ರೇಜಿಗೆ.

**घिनौरी**, स्त्री. ಒಂದು ಬಗೆ ಹುಳು.

**घिन्नी**, स्त्री. = घिरनी.

**घिया**, पु. ಒಂದು ಬಗೆ ಸೋರೆಕಾಯಿ[...] वि. ತುಪ್ಪದ; ತುಪ್ಪದಂತಹ.

**घियाकश**, पु. = कद्दूकश.

**घियातोरई**, **घियातोरी**, स्त्री. ಹೀ[...]ಕಾಯಿಯ ಒಂದು ಬಗೆ, ತುಪ್ಪಹೀ[...]

**घिरका**, पु. ಉಯ್ಯಾಲಾಟ, ತೂ[...] ಮಣೆಯಾಟ, ಊಗಲಾಟ.

**घिरना**, अक्रि. ಆವರಿಸು, ಸುತ್ತಲ್ಪಡು[...] ಒಟ್ಟುಗೂಡು, ಕವಿದುಕೊಳ್ಳು.

**घिरनी**, स्त्री. ರಾಟೆ; ಗಾಲಿ, ಚಕ್ರ[...] ತಲೆ ತಿರುಗುವುದು; ನೂಲು ಹೊ[...]ಯುವ ಅರಟೆ, ತಿಕಡಿ; ಒಂದು ಜಾ[...]

ಪಾರಿವಾಳ, ಗಿರೇಬಾಜ.

**घिरांद**, स्त्री. ಗಬ್ಬುನಾತ, ದುರ್ಗಂಧ.

**घिराई**, स्त्री. ಸುತ್ತುವಿಕೆ, ಬಳಸುವಿಕೆ; ದನ ಕಾಯುವುದು; ದನ ಮೇಯಿಸು ವುದಕ್ಕೆ ಕೊಡುವ ಕೂಲಿ.

**घिराना**, सक्रि. घेरना का प्रे. रूप.

**घिराव**, पु. ಸುತ್ತುವಿಕೆ, ಬಳಸುವಿಕೆ; ಮುತ್ತಿಗೆ, ಸುತ್ತುಗಟ್ಟು.

**घिर्राना**, सक्रि. ಎಳೆ; ಬೇಡು, ಗೋಗರೆ.

**घिवाल**, पु. ಉತ್ತಮವಾದ ಹಾಲು.

**घिसघिस**, स्त्री. ತಡ, ವಿಳಂಬ, ಕಾಲ ಹರಣ.

**घिसना**, सक्रि. ಉಜ್ಜು, ತಿಕ್ಕು; ಮಸೆ, ತೇಡು. अक्रि. ಒರೆಸಲ್ಪಡು; ಸವೆ.

**घिसनी**, क्रिवि. ತಿಕ್ಕುತ್ತಾ, ಒರಸುತ್ತಾ. घिसनी चलना = ದೇಕು, ತೆವಳು.

**घिसपिस**, स्त्री. ತಡ, ವಿಳಂಬ, ಕಾಲ ಹರಣ; ಅನ್ಯೋನ್ಯ, ಸಲಿಗೆ.

**घिसवाना**, सक्रि. ಸವೆಯಿಸು; ತಿಕ್ಕಿಸು, ಉಜ್ಜಿಸು.

**घिसाई**, स्त्री. ಒರೆಸುವಿಕೆ, ಉಜ್ಜುವಿಕೆ; ತಿಕ್ಕಾಟ; ಉಜ್ಜುವುದಕ್ಕೆ ಕೊಡುವ ಕೂಲಿ; ತರಗಡೆ, ತೇವಮಾನ.

**घिसाना**, सक्रि. घिसना का प्रे. रूप.

**घिसाव**, पु. घिसावट, स्त्री. ಉಜ್ಜು ವಿಕೆ, ತಿಕ್ಕುವಿಕೆ, ಮರ್ದನ; ಘರ್ಷಣ, ತಿಕ್ಕಾಟ; ಸವೆಯುವಿಕೆ.

**घिसिकाना**, सक्रि. ಎಳೆ, ಜಗ್ಗು; ಎಳ ಕೊಂಡು ಹೋಗು.

**घिस्टपिस्ट**, पु. ಅನುಚಿತ ಸಂಬಂಧ; ಸಲಿಗೆ.

**घिस्सा**, पु. ಉಜ್ಜುವಿಕೆ; ತಿಕ್ಕಾಟ; ಪೆಟ್ಟು, ಗುದ್ದು; ಒಂದು ಕುಸ್ತಿ ವರಸೆ.

**घी**, पु. ಘೃತ, ತುಪ್ಪ.

**घीकुंवार**, पु. ಲೋಳೆಸರ.

**घुंइयाँ**, स्त्री. ಶ್ಯಾವೆಗೆಡ್ಡೆ, ಕೆಸು.

**घुंघची**, स्त्री. ಗುಲಗಂಜಿ.

**घुंघनी**, स्त्री. ಹುರಿಗಡಲೆ, ಚಿನುಕುರುಳಿ.

**घुंघराले**, वि. ಸುಳಿಗುರುಳುಳ್ಳ, ಗುಂ ಗುರುಗೂದಲುಳ್ಳ.

**घुंघरू**, पु. ಸಣ್ಣ ಗಂಟೆ, ಗೆಜ್ಜೆ, ಗಗ್ಗರ ಗೆಜ್ಜೆ; ಗೆಜ್ಜೆ ಸರ, ನೂಪುರ; ಸಾಯು ವಾಗ ಗಂಟಲಿನ ಗರಗರ ಶಬ್ದ.

**घुंडी**, स्त्री. ಅಂಗಿಯ ಗುಂಡಿ, ಬಟನು; ಗಂಟು; ತಿರುಪು, ತಿರುಗಣೆ.

**घुंसी**, स्त्री. ಲಂಚ ತಿನ್ನುವವ, ಲಂಚ ಖೋರ.

**घुग्घी**, स्त्री. ಮಳೆ ಅಥವಾ ಬಿಸಿಲಿಗಾಗಿ ಹಳ್ಳಿಯವರು ಉಪಯೋಗಿಸುವ ಗೋಣಿ ತಾಟಿನ ಒಂದು ಬಗೆ ಮು ಸುಕು, ಗೊಂಗಡಿ, ಕೊಪ್ಪೆ, ಗೋಟೆ.

**घुग्घू**, घुघुआ, पु. ಗೂಗೆ; ಗುಗ್ಗು.

**घुघुआना**, अक्रि. ಗೂಬೆಯಂತೆ ಕೂಗು, ಗುರ್ರೆನ್ನು.

**घुटंत**, पु. ಬಾಯಿಪಾಠ, ಉರು; ಚೌಳ ಕರ್ಮ.

**घुटकना**, सक्रि. ಗುಟುಕು ಗುಟುಕಾಗಿ ಕುಡಿ, ಗುಟಕರಿಸು; ನುಂಗು.

**घुटन**, स्त्री. ಉಸಿರು ಕಟ್ಟುವಿಕೆ.

**घुटना**, अक्रि. ಉಸಿರು ಕಟ್ಟು, ಡೊಕ್ಕ

ರಿಸು; ಸಿಕ್ಕು ಬೀಳು, ಗೋಜಲಾಗು; ಬಿಗಿಯಾಗು (ಗಂಟು); ಗಂಟುಬೀಳು, ಸ್ನೇಹ ಹುಟ್ಟು; ಮಾತುಕತೆಯಾಡು; ಉಜ್ಜಲ್ಪಡು, ತೇಯು; ಸವೆ, ಮಸೆ; ನುಣ್ಣಗಾಗು, ಹಜಾಮತ್ತಾಗು. पु. ಮಂಡಿ, ಮೊಣಕಾಲು, ಮೊಣಪು. घुटने टेकना = ಮಂಡಿ ಹಾಕು, ಮೊಳಕಾಲೂರು.

**घुटन्ना**, पु. ಚಡ್ಡಿ; ಚಲ್ಲಣ, ಷರಾಯಿ.

**घुटरूँ**, पु ಮಂಡಿ, ಮೊಣಕಾಲು.

**घुटवाना**, सक्रि. ಸವೆಯಿಸು; ತಿಕ್ಕಿಸು, ಬೆಳಗಿಸು; ನುಣ್ಣಗೆ ಮಾಡು; ಹಜಾಮತ್ತು ಮಾಡು.

**घुटाई**, स्त्री. ಉಜ್ಜುವಿಕೆ, ತಿಕ್ಕುವಿಕೆ, ತೇಯುವಿಕೆ, ಕೊರಳು ಹಿಸಕುವಿಕೆ.

**घुटाना**, सक्रि. घोटना का प्रे. रूप.

**घुट्टी**, स्त्री. = घूंटी.

**घुड़कना**, सक्रि. ಗದರಿಸು, ಗುಡುಗುಡಿಸು, ದಟ್ಟಿಸು; ದಬಾಯಿಸು, ಜಬರಿಸು

**घुड़की**, स्त्री. ಗದರಿಸುವಿಕೆ, ಜಬರಿಸುವಿಕೆ, ಗದರಿಕೆ. बंदर घुड़की = ಗೊಡ್ಡು ಬೆದರಿಕೆ.

**घुड़चढ़ा**, पु. ಕುದುರೆ ಹತ್ತುವವ, ಸವಾರ, ರಾವುತ.

**घुड़चढ़ी**, स्त्री. ಕುದುರೆ ಹತ್ತುವ ಸ್ತ್ರೀ; ಕುದುರೆ ಸವಾರಿ; ವಿವಾಹದಲ್ಲಿ ವರನು ಕುದುರೆ ಸವಾರಿ ಮಾಡುತ್ತ ಹೆಣ್ಣಿನ ಮನೆಗೆ ಬರುವ ಮೆರವಣಿಗೆ; ತುಪಾಕಿ ಮನೆ, ಬತ್ತೇರಿ.

**घुड़दौड़**, स्त्री. ಕುದುರೆ ಜೂಜು; ಕುದುರೆ ಪಂತದ ಮೈದಾನ; ದೊಡ್ಡ ದೋಣಿ.

**घुड़नाल**, स्त्री. ಕುದುರೆಯ ಮೇಲೆ ಹೇರುವ ಒಂದು ಬಗೆಯ ತುಪಾಕಿ.

**घुड़बहल**, स्त्री. ನಾಲ್ಕು ಚಕ್ರದ ಬಂಡಿ, ಸಾರೋಟ್.

**घुड़मुंहा**, वि. ಕುದುರೆಯಂತಹ ಮುಖವುಳ್ಳ, ಕುದುರೆ ಮುಖದ.

**घुड़सना**, सक्रि. ಮುದುರು, ಮಡಿಸು, ಸುತ್ತು.

**घुड़सवार**, पु. ಕುದುರೆ ಸವಾರ, ರಾವುತ, ಘೋಳಾಯಿಲ.

**घुड़साल**, पु. ಕುದುರೆ ಲಾಯ, ಅಶ್ವಶಾಲೆ, ತಬೇಲಿ.

**घुड़िया**, स्त्री. = घोड़िया.

**घुन**, पु. ಒಂದು ಹುಳು, ನುಸಿ; ಕುಟ್ಟೆಹುಳು; ಕೊರಗಣೆ.

**घुनघुन**, पु. ತಗ್ಗಿದ ಧ್ವನಿ.

**घुनघुना**, पु. ಗಿಲಿಕಿ, ಗಿರಿಗಟಿ; ಆಟದ ಸಾಮಾನು.

**घुनना**, अक्रि. ನುಸಿ ಹಿಡಿ, ಹುಳಕು ಬೀಳು; ಕುಟ್ಟೆ ಹಿಡಿ; ಕ್ಷಯಿಸು; ಕೊರಗು

**घुन्ना**, वि. ರಾಗದ್ವೇಷಾದಿಗಳನ್ನು ಅಡಗಿಸಿಕೊಳ್ಳುವವ, ಮೌನಿ; ಗುಂಜು, ಗುಮ್ಮನ ಗುಸುಕ; ಗರ್ವಿಷ್ಠ.

**घुप**, वि. ಕತ್ತಲೆಯಾದ, ಕಗ್ಗತ್ತಲೆಯಾದ, ಗುಕುಂ.

**घुमक्कड़**, वि. ಬಹಳವಾಗಿ ತಿರುಗುವ, ಸುತ್ತಾಡುವ.

**घुमची**, स्त्री. ಗುಲಗಂಜಿ.

**घुमटा**, पु. ತಲೆ ತಿರುಗುವಿಕೆ, ತಲೆದಿಮ್ಮು

**घुमड़**, पु. ಮೋಡ ಮುಚ್ಚುವಿಕೆ, ಮೋಡ ಕವಿಯುವಿಕೆ.

**घुमड़ना**, अक्रि. ಮೋಡ ಕವಿ, ದಳ್ಳಿಸು, ಅಡರು; ಒಟ್ಟು ಗೂಡು. उमड़ना घुमड़ना=ಮೋಡಕವಿ, ಮೋಡಕಟ್ಟು

**घुमनी**, वि. ತಿರುಗುವವ, ತಿರುಕ.

**घुमरना, घुमराना**, अक्रि. ಮೊರೆ; ಭೋರಿಡು; ಮೋಡ ಕವಿ; ತಿರುಗಾಡು.

**घुमरी**, स्त्री. ತಲೆ ತಿರುಗುವಿಕೆ.

**घुमाना**, सक्रि. ತಿರುಗಿಸು, ಸುತ್ತಿಸು; ಅಲೆದಾಡಿಸು, ಭ್ರಾಂತಿಗೊಳಿಸು.

**घुमाव**, पु. ತಿರುಗುವಿಕೆ, ಸುತ್ತುವಿಕೆ; ಬಳಸು, ಸುತ್ತು; ತಿರುವು; ಒಂದು ಏರುಳ ಜಮೀನು.

**घुमाव-फिराव**, पु. ಸುತ್ತು, ಬಳಸು; ತಿರಿಮುರಿವು; ಮರಸುವ ಮಾತು.

**घुमावदार**, वि. ಸುತ್ತಾದ, ಬಳಸಾದ.

**घुरघुरा**, पु. ಚಿಮ್ಮಂಡಿ, ಝಿಲ್ಲಿಕೆ. ಜಿಟ್ಟೆ; ಹರಡುವ ಹುಣ್ಣು.

**घुरघुराना**, अक्रि. ಗುರಗುರ ಶಬ್ದ ವಾಗು; ಗಂಟಲು ಕೆರೆ.

**घुरनी**, स्त्री. ತಲೆತಿರುಗುವಿಕೆ, ತಲೆದಿಮ್ಮು

**घुरबिनिया**, स्त्री. ಹಕ್ಕಲಾಯುವಿಕೆ, ಹಕ್ಕಲು, ಬಾಕಲಾಯುವಿಕೆ, ಹೆಕ್ಕುವಿಕೆ

**घुलना**, अक्रि. ಕರಗು; ದ್ರವಿಸು, ಜಿನುಗು; ಮೃದುವಾಗು; ಬೆರೆ; ಕೊಳೆ; ಕ್ಷಯಿಸು, ಕ್ಷೀಣಿಸು; ಬಡವಾಗು.

**घुलमिल**, स्त्री. ಘನಿಷ್ಠ ಸ್ನೇಹ; ಮಿಳಿತ. वि. ಕರಗಿದ; ಬೆರಸಿದ, ಮಿಳಿತವಾದ, ಕಲಿತ.

**घुलवाना**, सक्रि. ಕರಗಿಸು; ಜಿನುಗಿಸು, ದ್ರವಿಸು; ಕಾಡಿಗೆ ಹಚ್ಚಿಸು.

**घुला**, वि. ಕರಗಿದ; ಪಕ್ವವಾದ, ಕಳಿತ; ಮೆತ್ತಗಾದ.

**घुला-मिला**, वि. ಘನಿಷ್ಠ; ಮಿಳಿತವಾದ.

**घुलाऊ**, वि. ಕರಗಿಸುವ.

**घुलाना**, सक्रि. ಕರಗಿಸು; ಮೆದು ಮಾಡು, ಜಿನುಗಿಸು; ಚೀಪು, ಹೀರು; ಕಾಡಿಗೆ ಹಚ್ಚು; ಹೊತ್ತು ಕಳೆ; ಬಳಲಿಸು; ಬಡವಾಗಿಸು.

**घुलाव**, पु. **घुलावट**, स्त्री. ಕರಗುವಿಕೆ, ಕರಗೋಣ; ಮೃದುತ್ವ; ಕನಿಕರ.

**घुवा**, पु. ಹತ್ತಿ; ಒಂದು ಬಗೆ ಹುಳು.

**घुसड़ना**, अक्रि. = घुसना.

**घुसड़फुसड़**, पु. ಕುಸುಕುಸು ಮಾತಾಡುವಿಕೆ; ತುರುಕುವ ವಸ್ತು.

**घुसना**, अक्रि. ಒಳ ಸೇರು; ನುಸುಳು, ನುಸಿ, ಹೊಗು, ಪ್ರವೇಶಿಸು; ತಲೆಹಾಕು.

**घुसपैठ**, स्त्री. ಹೊಗುವಿಕೆ; ಪ್ರವೇಶ; ಪ್ರವೇಶನ.

**घुसाना, घुसेड़ना**, अक्रि. ಒಳಕ್ಕೆ ಸೇರಿಸು; ಚುಚ್ಚು; ತುರುಕು, ಹೊಗಿಸು; ನುಸುಳಿಸು; ತಂದೊಡ್ಡು.

**घुस्समघुस्सा**, पु. ಮುಷ್ಟಾಮುಷ್ಟಿ, ಗುದ್ದಾಟ.

**घूंघट**, पु. ಮುಸುಕು, ಬುರುಕಿ, ಪರದೆ.

**घूंघर**, पु. ಸುರುಟುಗೂದಲು, ಗುಂಗುರುಗೂದಲು, ಕುರುಳು.

**घूंचा**, पु. ಗುದ್ದು, ಪೆಟ್ಟು.

**घूंट**, पु. ಗುಟುಕು, ಹೀರು.

**घूंटना,** सक्रि. ಹೀರು, ಕುಡಿ; ಗುಟುಕರಿಸು

**घूंटी,** स्त्री. ಎಳೆಯ ಕೂಸುಗಳಿಗೆ ಕುಡಿಸುವ ಒಂದು ಭೇದಿಯ ಔಷಧ, ಗುಟ್ಟಿ. जनम घूंटी = ಬಜೆ ಬೆಣ್ಣೆ.

**घूंसमघूंसा,** पु. ಮುಷ್ಟಾಮುಷ್ಟಿ; ಗುದ್ದಾಟ.

**घूंसा,** पु. ಮುಷ್ಟಿ, ಗುದ್ದು; ಪೆಟ್ಟು.

**घूंसेबाज़,** वि. ಮುಷ್ಟಿಯುದ್ಧ ಮಾಡುವವ, ಮಲ್ಲ, ಜೆಟ್ಟಿ.

**घूंसेबाज़ी,** स्त्री. ಮುಷ್ಟಿಯುದ್ಧ, ಮಲ್ಲಯುದ್ಧ.

**घूआ,** पु. ದರ್ಭೆಯ ಹೂ, ಸೂಲಂಗಿ; ಒಂದು ಬಗೆ ಹುಳು.

**घूघ,** पु. ಕಬ್ಬಿಣದ ಅಥವಾ ಹಿತ್ತಾಳೆಯ ಟೊಪ್ಪಿಗೆ, ಶಿರಸ್ತ್ರಾಣ.

**घूघस,** पु. ದೊಡ್ಡ ಬುರುಜು, ಗೋಪುರ.

**घूम,** पु. ತಿರುಗುವಿಕೆ, ಸುತ್ತುವಿಕೆ; ತಿರುಗಾಟ. क्रिवि. ತಿರುಗಿ, ಬಳಸುತ್ತಾ, ಸುತ್ತಿಕೊಂಡು. घूम घुमेला = ತಿರುಗುವ, ಸುತ್ತುವ.

**घूम-घुमैया,** स्त्री. ಸುತ್ತಿ ಸುತ್ತಿ ಬರುವ ಸ್ಥಳ, ಚಕ್ರಬಂಧ.

**घूमना,** अक्रि. ತಿರುಗು, ಸುತ್ತು, ಬಳಸು; ಮಂಡಲಿಸು; ಉರುಳು; ಅಲೆಯು, ಅಡ್ಡಾಡು, ಸಂಚರಿಸು; ತೊಳಲು. घूमना फिरना = ತಿರುಗಾಡು, ಅಲೆದಾಡು, ಸುತ್ತಾಡು.

**घूर,** पु. ತಿಪ್ಪೆ; ತಿಪ್ಪೆಗುಂಡಿ; ದುರುಗುಟ್ಟಿ ನೋಡುವಿಕೆ.

**घूरना,** सक्रि. ಮಿಟಕಿಸು, ಮಿಕಿಮಿಕಿ ನೋಡು, ನಿಟ್ಟಿಸು; ತಿರುಗು.

**घूरा,** पु. ತಿಪ್ಪೆ; ತಿಪ್ಪೆ ಗುಂಡಿ.

**घूरा-घारी,** स्त्री. ಕಾಮದೃಷ್ಟಿಯಿಂ[illegible] ನೋಡು; ದುರುಗುಟ್ಟಿ ನೋಡು.

**घूस,** पु. ಹೆಗ್ಗಣ; ಉತ್ಕೋಚ, ಲಂ[illegible] ರುಷುವತ್ತು. घूस पचचक = ಲಂ[illegible] ಸಂಚ, ಲಂಚ ರುಷುವತ್ತು.

**घूसख़ोर,** वि. ಲಂಚ ತಿನ್ನುವವ, ಲಂ[illegible] ವಣಿಗ, ಲಂಚಖೋರ.

**घूसा,** पु. = घूंसा.

**घृणा,** स्त्री. ತಿರಸ್ಕಾರ, ಹೇವರಿಕೆ, ಜುಗುಪ್ಸೆ.

**घेंटा,** पु. **घेंटी,** स्त्री. ಹಂದಿ.

**घेघा,** पु. ಗಂಟಲು ನಾಳ; ಗಂಟ[illegible] ವಾಳ, ಗಂಡಮಾಲೆ.

**घेटना,** सक्रि. ಕಲಸು, ನಾದು.

**घेटला,** पु. ಮೆಟ್ಟು, ಜೋಡು, [illegible]

**घेपना,** सक्रि. ಕಲಸು; ಕಲಕು, [illegible] ಯಾಡಿಸು, ಗೋಟಾಡಿಸು.

**घेर,** पु. ಸುತ್ತು, ಮಂಡಲ; ಪರಿಧಿ, ಹರವು

**घेरघार,** स्त्री. ಸುತ್ತಿಕೊಳ್ಳುವಿಕೆ ಮುತ್ತಿಗೆ; ಪರಿಧಿ; ಹರವು, ವಿಸ್ತಾ[illegible] ಮುಖಸ್ತುತಿ, ಪುಸಲಾಯಿಸುವಿಕೆ.

**घेरदार,** वि. ತುಂಬಿದ; ವಿಸ್ತೃತವಾ[illegible] ಆವರಿಸಿಕೊಳ್ಳುವ; ಸಡಿಲವಾದ.

**घेरना,** सक्रि. ಸುತ್ತುಗಟ್ಟು, ಮುತ್ತು, ಸುತ್ತುವರಿ, ಗೇರಾಯಿಸು, ಮುತ್ತಿ[illegible] ಹಾಕು; ಮೇಯಿಸು, ದನ ಕಾಯು; ಹಿಡಿದುಕೊಳ್ಳು, ಆಕ್ರಮಿಸು; ಮುಖಸ್ತುತಿ ಮಾಡು, ಪುಸಲಾಯಿಸು.

**घेरनी**, स्त्री. ರಾಟೆ, ಚರಖ; ರಾಟೆಯನ್ನು ತಿರುಗಿಸುವ ಹಿಡಿ.

**घेरा**, पु. ಆವರಣ; ಪರಿಧಿ, ಮೇರೆ, ಎಲ್ಲೆ; ಬೇಲಿ; ದೊಡ್ಡಿ; ವಟಾರ; ಮಂಡಲ, ಮುತ್ತಿಗೆ; ಹರವು, ವಿಸ್ತೀರ್ಣ.

**घेलौनी**, स्त्री. ಕೊಸರು.

**घेवर**, स्त्री. ಒಂದು ಮಿಠಾಯಿ.

**घैया**, पु. ಹಾಲಿನ ಕೆನೆಯನ್ನು ಬಗಿಯುವಿಕೆ; ಒಂದು ಹಿಂಡು ಹಾಲು. स्त्री. ಕಡೆ, ಪಕ್ಕ.

**घैर, घैरू, घैरो**, पु. ಅಪಕೀರ್ತಿ.

**घोंघा**, पु. ಕಪ್ಪೆಚಿಪ್ಪು; ಬಸವನ ಹುಳು; ಸೋಮಾರಿ; ದಡ್ಡ.

**घोंघी**, स्त्री. ಕಪ್ಪೆಚಿಪ್ಪು; ಬಸವನ ಹುಳು; ಮಳೆಗಾಗಿ ಧರಿಸುವ ಗೊಂಗಡಿ, ಕೊಪ್ಪೆ

**घोंटना**, सक्रि. ಗುಟುಕು ಗುಟುಕಾಗಿ ಕುಡಿ, ಗುಟುಕರಿಸು; ನುಂಗು; ಉಜ್ಜು, ತಿಕ್ಕು, ಬೆಳಕು; ಕುಟ್ಟು; ಹಿಸಕು. पु. ಉಜ್ಜುಗಲ್ಲು.

**घोंटा**, पु. = **घोटा**.

**घोंप**, स्त्री. ಇರಿಯುವಿಕೆ, ತಿವಿಯುವಿಕೆ, ಇರಿತ.

**घोंपना**, सक्रि. ಚುಚ್ಚು, ತುರುಕು; ಜಡಾಯಿಸು; ಯದ್ವಾತದ್ವಾ ಹೊಲಿ.

**घोंसला**, पु. ಪಕ್ಷಿಯ ಗೂಡು, ನೀಡ.

**घोकना, घोखना**, सक्रि. ಸಂತೆ ಹೇಳು, ಉರು ಹಾಕು; ಬಾಯಿಪಾಠ ಮಾಡು.

**घोघी**, स्त्री. = **घुग्घी**.

**घोट, घोटक**, पु. ಘೋಟ, ಕುದುರೆ.

**घोटना**, सक्रि. ಉಜ್ಜು, ತಿಕ್ಕು; ಬೆಳಗಿಸು; ತೇಯು; ಮಸೆ, ತೀಡು; ಹಿಸಕು; ಬಟ್ಟೆಯನ್ನು ನಯ ಮಾಡು; ಕಲಕು, ಗೋಟಾಡಿಸು; ಸಂತೆ ಹೇಳು, ಉರು ಹಾಕು. पु. ಬಟ್ಟೆಯನ್ನು ನಯ ಮಾಡುವ ಯಂತ್ರ, ಉಜ್ಜುಗಲ್ಲು.

**घोटवाना**, सक्रि. **घोटना** का प्रे. रूप.

**घोटा**, पु. ಉಜ್ಜುವ ಅಥವಾ ಬೆಳಗಿಸುವ ಉಪಕರಣ; ಉಜ್ಜುಗೊರಡು; ಬಡಿದು ನಯ ಮಾಡಿದ ಬಟ್ಟೆ; ಉಜ್ಜುವಿಕೆ; ಮಸೆಯುವಿಕೆ.

**घोटाई**, स्त्री. ಉಜ್ಜುವಿಕೆ, ಬೆಳಗಿಸುವಿಕೆ; ಉಜ್ಜುವುದರ ಅಥವಾ ಬೆಳಗುವುದರ ಕೂಲಿ.

**घोटाला**, पु. ಗಲಿಬಿಲಿ, ಗೋಟಾಳ, ತಾರುಮಾರು.

**घोटी**, स्त्री. ಛತ್ರದ ಗದ್ದೆ.

**घोड़ा**, पु. ಕುದುರೆ, ಅಶ್ವ; ತುಪಾಕಿಯ ಕುದುರೆ, ಚಾಪು; ಗೋಡೆಯಲ್ಲಿನ ಮರದ ಗೂಟ, ಬಡು. **घोड़ा बेचकर सोना** = ನಿಶ್ಚಿಂತೆಯಾಗಿ ನಿದ್ದೆಹೋಗು

**घोड़ानस**, पु. ಹಿಮ್ಮಡಿ ನರ.

**घोड़ा-सवार**, पु. ಕುದುರೆ ಸವಾರ, ರಾವುತ.

**घोड़िया**, स्त्री. ಸಣ್ಣ ಕುದುರೆ; ಗೋಡೆಯಲ್ಲಿನ ಗೂಟ, ಬಡು.

**घोड़ी**, स्त्री. ಹೆಣ್ಣು ಕುದುರೆ; ಕಾಲುಮಣೆ; ಒತ್ತೂರಳು; ಮದುವೆಯ ಹೆಣ್ಣು ಕುದುರೆಯ ಸವಾರಿ ಮಾಡುವ ಶಾಸ್ತ್ರ; ಮದುವೆಯ ಹಾಡು.

**घोपा**, पु. ಕೊಡತಿ, ಲಟ್ಟಣಿಗೆ.

**घोर,** वि. ಘೋರವಾದ, ಭಯಂಕರ. स्त्री. ಗರ್ಜನೆ, ಅಬ್ಬರ, ಬೊಬ್ಬೆ.

**घोल,** पु. ಕರಗಿಸಿ ಮಾಡಿದ್ದು; ದ್ರಾವಣ.

**घोलक,** पु. ಕರಗಿಸುವ ವಸ್ತು, ದ್ರಾವಕ, ಸ್ರಾವಕ, ವಿಲೇಪಕ.

**घोलघुमाव,** पु. ನೆಪ ಹೇಳಿ ತಪ್ಪಿಸಿ ಕೊಳ್ಳುವುದು; ನೆವನ, ತೋದೆ.

**घोलना,** सक्रि. ಕರಗಿಸು.

**घोलमेल,** पु. ಕಲಬೆರಿಕೆ, ಮಿಶ್ರ.

**घोलबा,** पु. ಭಂಗಿ ಅಥವಾ ಅಫೀಮಿನಿಂದ ಮಾಡಿದ ಒಂದು ಪಾನೀಯ

**घोला,** पु. ಸಿಕ್ಕು, ಗೋಜಲು, ಜೊಂಜಾಟ. घोले में डालना = ಸಿಕ್ಕುದೀಳಿಸು.

**घोष,** पु. ಗೊಲ್ಲ; ಗೊಲ್ಲಗೇರಿ; ದನವಿನ ಹಟ್ಟಿ, ದೊಡ್ಡಿ; ಶಬ್ದ, ಧ್ವನಿ.

**घोषणा,** स्त्री. ಘೋಷಣೆ, ಸಾರುವಿಕೆ.

**घोषित,** वि. ಘೋಷಣೆಮಾಡಿದ, ಸಾರಿದ

**घोसी,** पु. (ಮಹಮ್ಮದೀಯ) ಗೊಲ್ಲ.

**घौड़, घौद, घौर,** स्त्री. ಬಾಳೆ ಮುಂತಾದವುಗಳ ಗೊನೆ, ಜೊಂಪ.

**घ्राण,** पु. ಮೂಸಿ ನೋಡುವಿಕೆ; ಮೂಗು; ಗಂಧ.

# च

**चंक,** वि. ಸಮಸ್ತ, ಇಡೀ, ಪೂರಾ.

**चंग,** स्त्री. ಒಂದು ಬಗೆ ತಮಟೆ; ಹಿಡಿ, ಪಂಜ; ಹರಡಿದ ಕೈ; ಖ್ಯಾತಿ; ಸುದ್ದಿ; ಗಾಳಿ ಪಟ; ಗಂಜೀಫಿನ ಒಂದು ಬಣ್ಣ. चंग पर चढ़ाना = ಗೋರ್ಲ ಮಾಡು

**चंगर,** पु. ತಟ್ಟೆ, ಹರಿವಾಣ.

**चंगा,** वि. ನೀರೋಗಿ, ನಿರಾಮಯ; ಹುಷಾರು, ಸ್ವಸ್ಥ; ಒಳ್ಳೆಯ; ವಾಸಿಯಾದ. भला चंगा = ಸ್ವಸ್ಥವಾದ, ಗಟ್ಟಿಮುಟ್ಟಾದ; ಒಳ್ಳೆಯ.

**चंगुल,** पु. ಪಕ್ಷಿ ಅಥವಾ ಮೃಗಗಳ ನಖ, ಪಂಜ; ಹಿಡಿ, ಪಟ್ಟು, ಹಿಡಿತ.

**चंगेर, चंगेरी,** स्त्री. ಕುಕ್ಕೆ, ಗೂಡೆ; ಹೂವಿನ ಬುಟ್ಟಿ; ತೊಟ್ಟಿಲು; ನೀರು ತುಂಬುವ ಚರ್ಮದ ಬುದ್ದಲಿ, ಪಕಾಲಿ; ತಟ್ಟೆ; ಹೂವಿನ ಗಿಡದ ಕುಂಡ.

**चंचनाना,** अक्रि. ಚಟಚಟನೆ ಸಿಡಿ; ಹಾರು, ದುಡಿ.

**चंचल,** वि. ಸ್ಥಿರವಿಲ್ಲದ, ಚಂಚಲ; ಗಾಬರಿಯಾದ; ಕೀಟಲೆಯ.

**चंचलता,** स्त्री. ಅಸ್ಥಿರತೆ, ಚಾಂಚಲ್ಯ; ಕೀಟಲೆ.

**चंचु,** स्त्री. ಚಂಚು, ಕೊಕ್ಕು.

**चंट,** वि. ಚತುರ, ಗಟ್ಟಿಗ; ದುರುಳ.

**चंडाल,** पु. ಚಂಡಾಲ; ಪಾಪಾತ್ಮ.

**चंडालिन, चंडाली,** स्त्री. चंडाल का स्त्री. रूप.

**चंडावल,** पु. ಸೇನೆಯ ಹಿಂಭಾಗ, ಹಿಂದಳ; ಸಿಪಾಯಿ; ಕಾವಲುಗಾರ.

**चंडू,** पु. ಅಫೀಮಿನಿಂದ ತಯಾರಾಗುವ ಒಂದು ಮಾದಕ ದ್ರವ್ಯ, ರಾಮರಸ.

**चंडूख़ाना,** पु. चंडू ಮಾರುವ ಅಥವಾ ಸೇದುವ ಸ್ಥಳ.

**चंडूबाज़,** वि. चंडू ಸೇದುವವ.

**चंडूल**, पु. ಚಂಡೋಲ ಪಕ್ಷಿ.
**चंडोल**, पु. ಡೋಲಿ, ಮೇನೆ.
**चंद**, वि. ಕೆಲವು, ಕೊಂಚ, ಒಂದಿಷ್ಟು.
**चंदन**, पु. ಚಂದನ, ಗಂಧ.
**चंदना**, पु. ಚಂದ್ರಿಕೆ, ಬೆಳದಿಂಗಳು.
**चंदनौता**, पु. ಒಂದು ಬಗೆ ಲಂಗ, ಪಾವಡೆ
**चंदराना**, सक्रि. ಮರುಳುಗೊಳಿಸು, ಠಕ್ಕಿಸು.
**चंदरोज़ा**, वि. ಕೆಲವು ದಿನದ, ತಾತ್ಕಾಲಿಕ, ಹಂಗಾಮಿ.
**चंदला**, वि. ಬೋಳಾದ, ತರಟಾದ.
**चंदलाई**, स्त्री. ತರಟು, ಬೋಳು.
**चंदवा**, पु. ಚಪ್ಪರ, ವಿತಾನ, ಮೇಲ್ಕಟ್ಟು, ಉಲ್ಲಡೆ; ದುಂಡು ತೇಪೆ; ನವಿಲುಗರಿಯ ಕಣ್ಣು, ಪೀಲಿಕಣ್ಣು.
**चंदा**, पु. ಚಂದಾ, ವಂತಿಗೆ, ವರ್ಗಣಿ; ಚಂದ್ರ; ಚಂದಕ್ಕಿಮಾಮ.
**चंदिनी**, स्त्री. ಬೆಳದಿಂಗಳು.
**चंदिया**, स्त्री. ನಡುನೆತ್ತಿ, ಮಂಡೆ; ಕಪಾಲ
**चंदोआ**, पु. ಚಪ್ಪರ, ಉಲ್ಲಡೆ, ಮೇಲ್ಕಟ್ಟು, ವಿತಾನ.
**चंद्र**, पु. ಚಂದ್ರ, ನವಿಲುಗರಿಯ ಕಣ್ಣು.
**चंद्रिका**, स्त्री. ಚಂದ್ರಿಕೆ, ಬೆಳದಿಂಗಳು, ನವಿಲುಗರಿ ಕಣ್ಣು, ಒಂದು ಆಭರಣ.
**चंपई**, वि. ಸಂಪಿಗೆ ಹೂವಿನ ಬಣ್ಣದ, ಹಳದಿ.
**चंपक**, पु. ಸಂಪಿಗೆ, ಚಂಪಕ.
**चंपक-बरनी**, वि. ಸಂಪಿಗೆ ಹೂ ಬಣ್ಣದ.
**चंपत**, वि. ಕಣ್ಮರೆಯಾದ, ಮಾಯವಾದ; ಪರಾರಿ. चंपत होना = ಪರಾರಿಯಾಗು.
**चंपा**, स्त्री. ಚಂಪಕ, ಸಂಪಿಗೆ; ಪುಟ್ಟಬಾಳೆ; ರೇಷ್ಮೆ ಹುಳು.
**चंपाकली**, स्त्री. ಕಂಠಸರ, ಹಾರ.
**चंपाकेला**, पु. ಒಂದು ಬಗೆ ಬಾಳೆ.
**चंपी**, स्त्री. ಕೈಯಿಂದ ಒತ್ತುವಿಕೆ.
**चंबर**, पु. ಹುಕ್ಕದ ನಳಿಗೆಯ ಬಾಯಿ ಮುಚ್ಚಳ.
**चंबल**, पु. ಜಲಪ್ರವಾಹ, ನೆರೆ, ಪೂರ. स्त्री. ಏತ, ಏತದ ಮರ.
**चंवर**, पु. ಚಾಮರ; ಝಲ್ಲಿ, ಜಾಲರಿ, ಗೊಂಡೆ; ಕುದುರೆಯ ತಲೆಗೆ ಕಟ್ಟುವ ತುರಾಯಿ.
**चंवरढार**, पु. ಚಾಮರ ಹಾಕುವವನು, ಚಾಮರಿಕ.
**चंसुर**, पु. ಒಂದು ವನಸ್ಪತಿ.
**चक**, पु. ಚಕ್ರ; ಗಿರುಗಟಿ, ಜೀರುಬುಗುರಿ; ಜಮೀನು; ಭೂಸ್ಥಿತಿ, ಭೂಮಿಕಾಣಿ; ಸ್ವಾಧೀನ; ಹೇರಳ, ವೆಗ್ಗಳ.
**चकई**, स्त्री. ಹೆಣ್ಣು ಚಕ್ರವಾಕ; ಗಿರುಗಟಿ, ಜೀರು ಬುಗುರಿ.
**चकचका**, वि. ಹೊಳೆಯುವ, ಜಗಜಗಿಸುವ.
**चकचकाना**, अक्रि. ಒಸರು, ಸ್ರವಿಸು, ಒದ್ದೆಯಾಗು.
**चकचकी**, वि. ಹೊಳೆಯುವ, ಜಗಜಗಿಸುವ. स्त्री. ಕತ್ತಿ; ಕಠಾರಿ, ಚಾಕು.
**चकचौंध**, स्त्री. ಕಣ್ಣು ಕುಕ್ಕುವಿಕೆ, ಕೋರೈಸುವಿಕೆ.
**चकचौंधना**, अक्रि. ಕಣ್ಣು ಕುಕ್ಕು,

ಕೋರೈಸು. ಸಕ್ರಿ. ಕಣ್ಣು ಕುಕ್ಕಿಸು.
**चकछूंदी**, ಸ್ತ್ರೀ. ಚುಂಚಿಲಿ, ಇಲಿ ಸುಂಡ.
**चकडोर**, ಸ್ತ್ರೀ. ಗಿರುಗಟಿ ಅಥವಾ ಬುಗುರಿಯ ಹಗ್ಗ.
**चकती**, ಸ್ತ್ರೀ. ಬಟ್ಟೆಯ ತುಂಡು, ತೇಪೆ; ಪಟ್ಟಿ; ಬಿಲ್ಲೆ, ದುಂಡಗಿರುವ ಚೂರು.
**चकत्ता**, ಪು. **चकत्ती**, ಸ್ತ್ರೀ. ಮಚ್ಚೆ, ಕಲೆ, ಚಿಬ್ಬು; ಚರ್ಮದ ಬಾವು, ಗಾದರಿ; ಚೂರು, ಹೋಳು.
**चकनाचूर**, ವಿ. ಚೂರು ಚೂರಾದ, ಪುಡಿಪುಡಿ; ನುಚ್ಚುನೂರಾದ; ದಣಿದ, ಬಸವಳಿದ, ತೊಳಲಿದ.
**चकपकाना**, ಅಕ್ರಿ. ದಿಗಿಲು ಬೀಳು, ಬೆರಗಾಗು, ಬೆಚ್ಚು, ಕಕವಿಕ ಬೀಳು.
**चकपकाहट**, ಸ್ತ್ರೀ. ಗಾಬರಿ, ಕಕವಿಕ.
**चकफेरी**, ಸ್ತ್ರೀ. ಪ್ರದಕ್ಷಿಣೆ. ಸುಳಿದಾಟ.
**चकबंदी**, ಸ್ತ್ರೀ. ಜಮೀನನ್ನು ವಿಭಾಗಿಸಿ ಎಲ್ಲೆ ಕಟ್ಟುವಿಕೆ, ಫೋಡು ಮಾಡುವಿಕೆ.
**चकमक**, ಪು. ಚಕಮುಕಿ ಕಲ್ಲು, ಅಗ್ನಿಶಿಲೆ
**चकमकाना**, ಅಕ್ರಿ. ತಳತಳಿಸು, ಮಿಂಚು, ಹೊಳೆ.
**चकमकाहट**, ಸ್ತ್ರೀ. ಹೊಳಪು, ಮಿಂಚು.
**चकमा**, ಪು. ಒಂದು ಬಗೆ ಇಸ್ಪೀಟಾಟ; ಮೋಸ, ಠಕ್ಕು.
**चकरबा**, ಪು. ಸಂಕಟ, ಪೀಕಲಾಟ; ಗಲಾಟೆ, ಗದ್ದಲ; ಗಲಭೆ.
**चकर-मकर**, ಪು. ನೆವ, ತಸಕಲು.
**चकराना**, ಅಕ್ರಿ. ಸುತ್ತು, ತಿರುಗು; ತಲೆ ತಿರುಗು, ಭ್ರಮಿಸು; ತೊಳಸು; ಬೆರಗಾಗು. ಸಕ್ರಿ. ಆಶ್ಚರ್ಯಪಡಿಸು, ಬೆರಗಾಗಿಸು.
**चकरानी**, ಸ್ತ್ರೀ. ಸೇವಕಿ, ತೊತ್ತು, ದಾಸಿ.
**चकरी**, ಸ್ತ್ರೀ. ಬೀಸುವ ಕಲ್ಲು; ರಾಟೆ; ಒಂದು ಆಟದ ಸಾಮಾನು, ಗಿರುಗಟ್ಟಿ; ಆಟಗಾರರ ಕೂಟ, ಮೇಳ. ವಿ. ಸುತ್ತುವ, ಸುಳಿವ.
**चकला**, ಪು. ಹಪ್ಪಳ ಲಟ್ಟಿಸುವ ದುಂಡು ಹಲಗೆ, ಲಟ್ಟಣೆ ಮಣೆ; ಒಡೆಗಲ್ಲು; ಒಂದು ಬಗೆ ಬಟ್ಟೆ; ಮಾಗಣೆ, ತುಕಡಿ, ಜಿಲ್ಲೆ; ಗುಡಿಶೆಟ್ಟಿಗಳ ಮನೆ, ಹಾದರದ ಮನೆ. ವಿ. ಅಗಲವಾದ.
**चकलाई**, **चकलान**, ಸ್ತ್ರೀ. ಅಗಲ, ಅಡ್ಡಗಲ.
**चकलाना**, ಅಕ್ರಿ. ಅಗಲವಾಗು; ವಿಸ್ತರಿಸು.
**चकली**, ಸ್ತ್ರೀ. ಗಾಲಿ; ರಾಟೆ; ಲಟ್ಟಿಕೆ ಮಣೆ; ಗಂಧದ ಕಲ್ಲು.
**चकलेदार**, ಪು. ತುಕಡಿದಾರ, ಅಮಲ್ದಾರ, ತಹಸೀಲುದಾರ.
**चकल्लस**, ಸ್ತ್ರೀ. ಚಲ್ಲಾಟ.
**चकवंड**, ಪು. ಚಕ್ರಮರ್ದಗಿಡ, ಚಗಚೆ, ತರುವಸ.
**चकवा**, ಪು. ಚಕ್ರವಾಕ ಪಕ್ಷಿ.
**चका**, ಪು. ವಲಯ, ಚಕ್ರ; ಕುಲಾಲ ಚಕ್ರ, ತಿಗುರಿ.
**चकाचक**, ವಿ. ನೆನೆದ, ತೋಯ್ದ. ಕ್ರಿವಿ. ತುಂಬ, ಬಹಳವಾಗಿ, ಬಲು. ಸ್ತ್ರೀ. ಆಯುಧಗಳು ಬಡಿಯುವ ಶಬ್ದ.
**चकाचौंध**, ಸ್ತ್ರೀ. ಕಣ್ಣು ಕುಕ್ಕುವುದು, ಕೋರೈಸುವಿಕೆ.

**ಚಕಾಬೂ**, ಪು. ಚಕ್ರವ್ಯೂಹ, ಸುತ್ತು ಸುತ್ತಾದ ದುರ್ಘಟವಾದ ಪ್ರದೇಶ, ತಾರತಗಡಿಯ ಸ್ಥಾನ; ಚಕ್ರಬಂಧ.

**ಚಕಾಚೀ**, ಸ್ತ್ರೀ. ಗಜಕರ್ಣ, ದದ್ದು.

**ಚಕಿತ**, ವಿ. ವಿಸ್ಮಿತ, ಚಮಕಿತ; ಬೆರಗಾದ, ಗಾಬರಿಯಾದ.

**ಚಕೋಟನಾ**, ಸಕ್ರಿ. ಚಿವುಟು, ಚಿಗಟು, ಸುಲಿ

**ಚಕೋತರಾ**, ಪು. ಚಕ್ಕೋತಹಣ್ಣು, ಸಕ್ಕರೆ ಕಂಚಿ.

**ಚಕೋರ**, ಪು. **ಚಕೋರೀ**, ಸ್ತ್ರೀ. ಚಕೋರ ಪಕ್ಷಿ, ಜೊನ್ನವಕ್ಕಿ.

**ಚಕ್ಕರ**, ಪು. ಚಕ್ರ, ಗಾಲಿ; ವರ್ತುಲ; ಬಳಸು; ಸುತ್ತು, ಸುತ್ತುದಾರಿ; ತಿರುಗಾಟ, ತಿರುಗುವಿಕೆ; ತಲೆ ತಿರುಗುವಿಕೆ, ಸುತ್ತುವಿಕೆ; ಮೂರ್ಛೆ; ಸಿಕ್ಕು, ಜೊಂಜಾಟ, ಗೊಂದಲ; ಸುಳಿಗಾಳಿ; ನೀರಿನ ಸುಳಿ; ಕಾಲಚಕ್ರ. ಚಕ್ಕರ ಕಾಟನಾ = ಮಂಡಲಾಕಾರವಾಗಿ ಸುತ್ತು, ಸುಳಿದಾಡು. ಚಕ್ಕರ ಖಾನಾ=ಸುತ್ತು, ಗರಗರನೆ ತಿರುಗು

**ಚಕ್ಕರ**, ಪು. ಚಕ್ರ, ಗಾಲಿ; ದುಂಡಗಿರುವ ಹೋಳು, ತುಂಡು; ವೊಸರಿನ ಗರಣೆ.

**ಚಕ್ಕೀ**, ಸ್ತ್ರೀ. ಬೀಸುವ ಕಲ್ಲು, ಒಡೆಗಲ್ಲು; ಮೊಣಕಾಲು ಚಿಪ್ಪು; ಸಿಡಿಲು, ವಜ್ರಪಾತ.

**ಚಕ್ರ**, ಪು. ಚಕ್ರ, ಗಾಲಿ; ಕುಲಾಲ ಚಕ್ರ, ತಿಗುರಿ; ಬೀಸುವ ಕಲ್ಲು; ಗಾಣ; ಸುಳಿ, ಸುತ್ತು; ಸುಳಿಗಾಳಿ; ನೀರಿನ ಸುಳಿ; ಚಕ್ರಾಯುಧ.

**ಚಕ್ರವರ್ತೀ**, ಪು. ಚಕ್ರವರ್ತಿ.

**ಚಕ್ರವೃದ್ಧಿ**, ಸ್ತ್ರೀ. ಬಡ್ಡಿಗೆ ಬಡ್ಡಿ, ಚಕ್ರಬಡ್ಡಿ

**ಚಖ**, ಪು. ಕಣ್ಣು; ನೀಲಕಂಠ ಪಕ್ಷಿ.

**ಚಖ**, ಪು. ಜಗಳ, ಕಲಹ; ಗದ್ದಲ. ಚಖಚಖ = ತಕರಾರು, ಗಲಾಟೆ.

**ಚಖನಾ**, ಸಕ್ರಿ. ರುಚಿ ನೋಡು, ಸವಿ ನೋಡು; ಅನುಭವಿಸು.

**ಚಖಾಚಖೀ**, ಸ್ತ್ರೀ. ವಿರೋಧ; ಜಗಳ.

**ಚಖಾನಾ**, ಸಕ್ರಿ. ಸವಿ ನೋಡಿಸು, ರುಚಿ ತೋರಿಸು; ಅನುಭವ ಮಾಡಿಸು.

**ಚಗಡ್**, ವಿ. ಚತುರ, ಜಾಣ.

**ಚಚಾ**, ಪು. ತಂದೆಯ ಸೋದರ, ಕಕ್ಕ.

**ಚಚಿಯಾ**, ವಿ. ಚಿಕ್ಕಪ್ಪನಂತೆ ಸಂಬಂಧದ. ಚಚಿಯಾ ಸಸುರ = ಮಾವನ ಸೋದರ.

**ಚಚೀಂಡಾ**, ಪು. ಪಡವಲಕಾಯಿ, ಪಟ್ಲೆಕಾಯಿ; ಅಪಾಮಾರ್ಗ, ಉತ್ತರಣೆ.

**ಚಚೀ**, ಸ್ತ್ರೀ. ಚಚಾ ವಿನ ಪತ್ನಿ, ಕಕ್ಕಿ.

**ಚಚೇರಾ**, ವಿ. ಚಿಕ್ಕಪ್ಪನ ಅಥವಾ ದೊಡ್ಡಪ್ಪನ ಕಡೆಯ ಸಂಬಂಧದ. ಚಚೇರಾ ಭಾಈ = ತಂದೆವಾನಿ ಸೋದರ.

**ಚಚೋಡ್ನಾ, ಚಚೋರನಾ**, ಸಕ್ರಿ. ಸೀಪು, ಚೀಪು, ಚಿವುಕು.

**ಚಟ**, ಕ್ರಿವಿ. ಚಟ್ಟನೆ, ತಟ್ಟನೆ, ಬೇಗ. ಸ್ತ್ರೀ. ಒಡೆಯುವ ಅಥವಾ ಮುರಿಯುವ ಶಬ್ದ, ಲಟಿಕ್; ಗೀಚು; ಸಣ್ಣ ಗಾಯ; ಹುಣ್ಣು; ಹುಣ್ಣಿನ ಹಕ್ಕಳೆ; ಗಾಯದ ಗುರುತು, ಕಲೆ. ವಿ. ತಿಂದು ಹಾಕಿದ, ಸ್ವಾಹಾ. ಚಟ ಕರ ಜಾನಾ = ತಿಂದುಹಾಕು, ಸ್ವಾಹಾ ಮಾಡು.

**ಚಟಕ**, ಪು. ಗುಬ್ಬಿ, ಗುಬ್ಬಚ್ಚಿ. ಸ್ತ್ರೀ. ಹೊಳಪು; ಕಾಂತಿ; ಥಳುಕು; ವೇಗ, ಚಟುವಟಿಕೆ. ವಿ. ಕಾಂತಿಯುಳ್ಳ;

ಕಾರವಾದ; ರುಚಿಯುಳ್ಳ. क्रिवि. ತಟ್ಟನೆ, ಬೇಗನೆ.

**चटकदार,** वि. ಕಾಂತಿಯುಳ್ಳ, ಹೊಳೆಯುವ; ಸೊಗಸಾದ; ರುಚಿಯಾದ.

**चटकना,** अक्रि. ಒಡಿ, ಬಿರಿ; ಮುರಿ; ಸಿಡಿ; ರೇಗು, ಒಡಕು ಹುಟ್ಟು. पु. ಅಪ್ಪಳಿಕೆ, ತಪರಾಕು, ಚಪಾಟಿ.

**चटकनी,** स्त्री. ಚಿಲುಕ, ಅಗುಳಿ.

**चटक-मटक,** स्त्री. ಥಳುಕು, ವೈಯಾರ, ಬೆಡಗು.

**चटका,** पु. ಚಟುವಟಿಕೆ; ಬಾಯಾರಿಕೆ; ಕೆನ್ನೆಏಟು, ತಪರಾಕು; ರೂಢಿ; ಚಟ.

**चटकाना,** सक्रि. ಚಟಚಟ ಶಬ್ದ ಮಾಡು; ಒಡಿ, ಮುರಿ; ಸಿಡಿಸು; ವಿಂಗಡಿಸು; ಚಿಟಿಕೆ ಮುರಿ; ರೇಗಿಸು.

**चटकारना,** सक्रि. ಬಾಯಿ ಶಬ್ದದಿಂದ ದನಕರುಗಳನ್ನು ಅಟ್ಟು, ಚಪ್ಪರಿಸು.

**चटकारा,** वि. ಪ್ರಕಾಶವಾದ, ಚಂಚಲವಾದ. पु. ಲೊಟ್ಟೆ ಹಾಕುವ ಶಬ್ದ, ತುಟಿ ಚಪ್ಪರಿಸುವಿಕೆ; ಲೊಟ್ಟೆ.

**चटकीला,** वि. ಹೊಳೆಯುವ, ಥಳಥಳಿಸುವ; ಮಿಂಚುವ; ರುಚಿಕರ.

**चटखना,** अक्रि. = चटकना.

**चटचट,** स्त्री. ಒಡೆಯುವ ಅಥವಾ ಮುರಿಯುವ ಶಬ್ದ, ಚಟಚಟ ಶಬ್ದ; ಚಿಟಿಕೆ ಮುರಿಯುವ ಶಬ್ದ.

**चटचटाना,** अक्रि. ಚಟಚಟ ಮುರಿ, ಸಿಡಿ

**चटनी,** स्त्री. ಲೇಹ್ಯ; ಚಟ್ನಿ, ಹಿಂಡಿ.

**चटपट,** क्रिवि. ತಟ್ಟನೆ, ಬೇಗನೆ.

**चटपटा,** वि. ಕಾರವಾದ; ರುಚಿಯಾದ; ಚುರುಕಾದ.

**चटपटाना,** अक्रि. ಗಾಬರಿಬೀಳು; ತಲ್ಲಣಿಸು.

**चटपटाहट,** स्त्री. ಗಾಬರಿ; ತಲ್ಲಣ.

**चटपटिया,** वि. ಆತುರಗಾರ; ರುಚಿ...

**चटपटी,** स्त्री. ಆತುರ, ತ್ವರೆ; ತಲ್ಲಣ.

**चटवाना,** सक्रि. = चटना.

**चटशाला, चटसार,** स्त्री. ಕೂಲಿ ಮಠ, ಪಾಠಶಾಲೆ.

**चटाई,** स्त्री. ಚಾಪೆ, ಮಂದಲಿಗೆ; ನೆಕ್ಕುವಿಕೆ.

**चटाक,** वि. ಚುರುಕು; ಚತುರ. स्त्री. ಸಿಡಿತ.

**चटाका,** पु. ಬಡಿಯುವ ಶಬ್ದ.

**चटाना,** सक्रि. ನೆಕ್ಕಿಸು; ಉಣ್ಣಿಸು, ಊಡಿಸು; ಲಂಚ ಕೊಡು; ಸಾ... ಹಿಡಿಸು, ಮಸೆಯಿಸು.

**चटापटी,** स्त्री. ತ್ವರೆ; ಭರ.

**चटावन,** पु. ಅನ್ನಪ್ರಾಶನ.

**चटियल,** वि. ಬೆಂಗಾಡಾದ, ಅರ... ಡಾದ.

**चटिया,** पु. ಶಿಷ್ಯ; ವಿದ್ಯಾರ್ಥಿ.

**चटी,** स्त्री. ಕೂಲಿಮಠ, ಪಾಠಶಾಲೆ.

**चटुल,** वि. ಚಂಚಲ; ನಾಜೂಕಾದ; ಸೊಗಸಾದ; ಸುಂದರ, ಅಂದವಾದ

**चटेकन,** पु. ಪೆಟ್ಟು, ಚಪಾಟಿ, ಅಪ್ಪಳಿ...

**चटोखा,** पु. ಪಾರಿವಾಳ.

**चटोर, चटोरा,** पु. ಬಗೆಬಗೆಯ ಭೋಜನ ಪದಾರ್ಥಗಳನ್ನು ತಿನ್ನಲು ಇಚ್ಛೆಯುಳ್ಳವ; ಭೋಜನಪ್ರಿಯ, ಭೋಜ...

ಸುಖಿ, ಕುಕ್ಷಂಭರಿ; ಹೊಟ್ಟೆಬಾಕ, ತೀನಾಳಿ.

**चटोरपन, चटोरापन,** पु. ಬಗೆಬಗೆಯ ಭೋಜನ ಪದಾರ್ಥಗಳನ್ನು ತಿನ್ನಲು ಇಚ್ಛೆ; ಭೋಜನ ಸುಖ.

**चटोरी,** स्त्री. चटोर का स्त्री. रूप.

**चट्ट,** वि. ಚಟ್ಟಾದ, ಸಮಾಪ್ತ; ನಷ್ಟವಾದ.

**चट्टा,** पु. ತೊನ್ನು, ಕುಷ್ಠ; ಇಟ್ಟಿಗೆಯ ರಾಶಿ; ಅರಗಾಡು, ತಳಪಟ, ಬೆಂಗಾಡು; ಕೋಲು, ಕಡ್ಡಿ. चट्टों का खेल = ಕೋಲಾಟ.

**चट्टान,** पु. ಬಂಡೆ, ಬಂಡೆಕಲ್ಲು.

**चट्टाबट्टा,** पु ಮರದ ಆಟದ ಸಾಮಾನು; ಗಾರಡಿಗಾರನು ಚೀಲದಿಂದ ತೆಗೆದು ತೋರಿಸುವ ಗೋಲಿ ಮತ್ತು ಗುಂಡು.

**चट्टी,** स्त्री. ಬೀಡು, ಪಾಳೆಯ; ಮೊಕ್ಕಾಂ, ಮಜಲು; ಎಕ್ಕಡ, ಮೆಟ್ಟು; ಕಡಿಮೆ, ಕೊರತೆ, ಖೋತ. चट्टी भरना = ನಷ್ಟ ತುಂಬು.

**चटू,** वि. ಹೊಟ್ಟೆಬಾಕ, ಭೋಜನ ಸುಖಿ. पु. ಒರಳುಕಲ್ಲು.

**चड्ढा,** पु. ತೊಡೆ ಸಂದು, ಗಜ್ಜಲು; ನಕಲಿಯವ.

**चढ़त,** स्त्री. ಕಾಣಿಕೆ, ನೈವೇದ್ಯ, ನಿವೇದನ

**चढ़ती,** स्त्री. ಏರು, ವೃದ್ಧಿ; ಲಾಭ.

**चढ़ना,** अक्रि. ಏರು, ಹತ್ತು; ಅಡರು; ಎಗರು; ಮೇಲಕ್ಕೆ ಹಾರು; ಮೇಲೆ ಬೀಳು, ಮೇಲ್ಗಾಯು; ಖಾತೆಯಲ್ಲಿ ದಾಖಲೆಯಾಗು; ಬಿಗಿಯಾಗು (ನರ); ಅರ್ಪಿತವಾಗು (ಬಲಿ); (ವರ್ಷ ಅಥವಾ ಮಾಸ) ಹುಟ್ಟು; (ಹೊಳೆಯಲ್ಲಿ) ಪ್ರವಾಹ ಬರು, ಪೂರ ಬರು.

**चढ़नी,** स्त्री. ಯುದ್ಧಸನ್ನಾಹ; ಸಿದ್ಧತೆ.

**चढ़वां,** वि. ಏರುವ, ಏರು (ನೆಲ).

**चढ़वाना,** सक्रि. चढाना का प्रे. रूप.

**चढ़वैया,** वि. ಏರುವವ, ಹತ್ತುವವ.

**चढ़ाई,** स्त्री. ಏರುವಿಕೆ, ಹತ್ತುವಿಕೆ; ದಿಣ್ಣೆ ನೆಲ, ಏರುನೆಲ, ಮೇಡು; ಮೇಲ್ಬಾಯುವಿಕೆ; ದಂಡಯಾತ್ರೆ, ಧಾಳಿ.

**चढ़ा-उतरी,** स्त्री. ಪದೇ ಪದೇ ಹತ್ತಿ ಇಳಿಯುವಿಕೆ.

**चढ़ा ऊपरी, चढ़ाचढ़ी,** स्त्री. ಮೇಲಾಟ, ಪೈಪೋಟಿ, ಸ್ಪರ್ಧೆ.

**चढ़ाना,** सक्रि. ಎತ್ತು; ಹತ್ತಿಸು; ಏರಿಸು, ಅಡರಿಸು; ಸೂಡು, ತೊಡಿಸು; ಅರ್ಪಿಸು, ಬಲಿ ಕೊಡು; ಬಿಗಿಸಿಕಟ್ಟು (ಬಿಲ್ಲು); ಚಡಾಯಿಸು; ದಾಖಲೆ ಮಾಡು.

**चढ़ाव,** पु. ಏರು, ಉನ್ನತಿ; ಏರುವಿಕೆ, ಏರಾಟ; ಪೂಜಾ ಸಾಮಗ್ರಿ; ಪ್ರವಾಹ, ಪೂರ; ನದಿ ಪ್ರವಾಹಕ್ಕೆ ಎದುರುಕಡೆ.

**चढ़ावउतार,** पु. ಏರಿಳಿತ, ಉಬ್ಬರವಿಳಿತ

**चढ़ावा,** पु. ಕಾಣಿಕೆ; ಪೂಜಾಸಾಮಗ್ರಿ; ಪ್ರೋತ್ಸಾಹ, ವಿವಾಹದಲ್ಲಿ ವರನ ಪಕ್ಷದವರು ಹೆಣ್ಣಿಗೆ ತೊಡಿಸುವ ನಗನಟ್ಟು

**चढ़ैत,** वि. ಏರುವವ, ಹತ್ತುವವ.

**चतर,** पु. ಛತ್ರಿ, ಕೊಡೆ.

**चतुर,** वि. ಚತುರ, ಗಟ್ಟಿಗ; ಸಮರ್ಥ, ಜಾಣ; ಮಿಡುಕ, ಜಾಗರೂಕ; ಕುಟಿಲ

**चतुरता, चतुराई,** स्त्री. ಯುಕ್ತಿ, ತಂತ್ರ; ಚತುರತೆ, ಚಾತುರ್ಯ.

**चद्रछत**, स्त्री. ಉಲ್ಲಡೆ, ಮೇಲ್ಕಟ್ಟು, ಕಟ್ಟುವಾಸ.

**चद्दर**, पु. ಚದ್ದರ, ಹೊದಿಕೆ; ದುಪಟಿ, ಹಚ್ಚಡ; ತಗಡು; ರೇಕು, ಹಾಳೆ, ನೆರೆಹೊಳೆಯಲ್ಲಿ ಅಲುಗಾಡದಿರುವ ನೀರಿನ ಮೇಲ್ಮೈ, ನೀರಿನ ಹಾಳೆ.

**चनकना**, अक्रि. ಒಡಿ, ಸಿಡಿ; ಬಿರಿ, ಹಿಸಿ.

**चनकबाई**, स्त्री. ವಾತಶೂಲೆ.

**चनखना**, अक्रि. ರೇಗು. ಸಿಡುಗುಟ್ಟು.

**चना**, पु. ಕಡಲೆ, ಕಡಲೆಯ ಕಾಯಿ. लोहे का चना = ಕಬ್ಬಿಣದ ಕಡಲೆ, ಬಹು ಕಠಿಣವಾದ ಕೆಲಸ.

**चप**, वि. ಎಡಗಡೆಯ, ಎಡ; ಎಡಗೈ चप-ओ-रास्त = ಎಡಬಲ.

**चपकन**, स्त्री. ಒಂದು ಬಗೆಯ ಅಂಗಿ, ಅಂಗರೇಖು; ಚಿಲಕದ ಕೊಳಿಕೆ; ಹುಲ್ಲೆ ಬೀಗದ ಕೊಂಡಿ.

**चपकना**, अक्रि. ಅಂಟು, ಮೆತ್ತಿಕೊ; ಮುದುರಿ ಬೀಳು.

**चपक़लिश, चपक़ुलिश**, स्त्री. ಇಡಕು, ಇರಕು, ಇಕ್ಕಟ್ಟು; ಗದ್ದಲ; ಜಗಳ.

**चपकाना**, सक्रि. ಅಂಟಿಸು, ಚಿಗಟಾಯಿಸು; ಅದುಮು, ದಬಾಯಿಸು

**चपटा**, वि. ಸಮತಲ, ಸಪಾಟ, ಚಪ್ಪಟೆ.

**चपटाना**, सक्रि. ಸಮತಲ ಮಾಡು, ಚಪ್ಪಟೆ ಮಾಡು; ಚಿಗಟಾಯಿಸು.

**चपड़ना**, अक्रि. ಓಡಿಹೋಗು; ಬಿಟ್ಟು ಬಿಡು; ಇಲ್ಲವೆನ್ನು.

**चपड़ा**, पु. ಅರಗು, ಅರಗಿನ ಕಡ್ಡಿ; ಒಂದು ಬಗೆ ಹುಳು.

**चपत**, पु. ಬೆರಳುಗಳನ್ನು ಬಿಚ್ಚಿ- ಅಂಗೈ; ಕೆನ್ನೆ ಏಟು, ಚಪಾಟ, ತ... ರಾಕು; ಪೆಟ್ಟು; ಹಾನಿ, ನಷ್ಟ.

**चपताना**, सक्रि. ಕೆನ್ನೆಗೆ ಹೊಡೆ, ಚಪಾಟ ಹೊಡೆ.

**चपना**, अक्रि. ತಗ್ಗು, ಕುಗ್ಗು; ಅಡ...; ಬಗ್ಗು; ನಾಚಿಕೆಯಿಂದ ತಲೆ ಬಾಗಿಸು

**चपनी**, स्त्री. ಮುಚ್ಚಳ, ಚಿಬ್ಬಲು; ಶಿಖರ, ತುದಿ; ಮೊಣಕಾಲು ಚಿಪ್ಪು

**चपरगट्टू**, वि. ನಾಶಕರ, ವಿಘಾತಕ; ಕೊರೆಕೊಳ್ಳಿ; ಭಾಗ್ಯಹೀನ, ನತದೃಷ್ಟ; ಸಿಕ್ಕುಬಿದ್ದ.

**चपरा**, वि. ತಟ್ಟನೆ, ಕೂಡಲೆ, ಚಿಕ್ಕನೆ

**चपरास**, पु. ಜವಾನರ ಬಿಲ್ಲೆ.

**चपरासी**, पु ಬಿಲ್ಲೆಕಾರ, ಬಿಲ್ಲೆಯವನು, ಬಿಲ್ಲೆ ಜವಾನ.

**चपल**, वि. ಚಂಚಲ, ಅಸ್ಥಿರವಾದ; ವೇಗವಾದ; ದುರುಳ.

**चपलता**, स्त्री. ಅಸ್ಥಿರತೆ, ಚಾಂಚಲ್ಯ; ದುರುಳತನ.

**चपली**, स्त्री. ಎಕ್ಕಡ, ಕೆರ, ಚಪ್ಪಲಿ.

**चपाती**, स्त्री. ಗೋಧಿ ರೊಟ್ಟಿ, ಚಪಾತಿ.

**चपाना**, सक्रि. ನಾಚಿಕೆಪಡಿಸು; ಅ... ಗಿಸು; ಅದುಮಿಸು.

**चपेट**, पु. ಧಕ್ಕೆ; ಪೆಟ್ಟು, ಏಟು; ನಷ್ಟ.

**चपेटना**, सक्रि. ಅಟ್ಟು, ಓಡಿಸು; ಕೆಡಹು; ಗದರಿಸು; ಅಣಗಿಸು, ದಬಾಯಿಸು; ಅವುಕು.

**चपेटा**, पु. ಪೆಟ್ಟು, ಧಕ್ಕೆ; ಜಾರಜ.

**चप्पन**, पु. ಡಬರಿ; ಪರಾತ, ತಾಂಬಾಣ

चप्पल, पु. ಎಕ್ಕಡ, ಕೆರ, ಮೆಟ್ಟು.
चप्पा, पु. ನಾಲ್ಕನೆಯ ಭಾಗ, ಕಾಲು ಭಾಗ; ನಾಲ್ಕು ಬೆಟ್ಟಿನ ಅಗಲ, ಜಂಪೆ, ಚೌವಾ.
चप्पी, स्त्री. ಕೈಕಾಲುಗಳನ್ನು ಹಿಸುಕುವಿಕೆ, ಒತ್ತುವಿಕೆ, ಅಂಗಮರ್ದನ.
चप्पू, पु. ದೋಣಿ ಒತ್ತುವ ಜಲ್ಲೆ; ಹುಟ್ಟು ಗೋಲು; ಗಣೆ.
चबकना, अक्रि. ಡವಡವನೆ ಬಡಿ, ದುಡಿ.
चबना, अक्रि. ಅಗಿಯಲ್ಪಡು, ಮೆಲ್ಲಲ್ಪಡು.
चबवाना, सक्रि. चबाना का प्रे. रूप.
चबाई, स्त्री. ಅಗಿಯುವಿಕೆ, ಚರ್ವಣ.
चबाना, सक्रि. ಅಗಿ, ಮೆಲ್ಲು; ಜಿಗಿ, ಸಿಗಿ.
चबूतरा, पु. ದಿಣ್ಣೆ, ವೇದಿಕೆ; ಜಗಲಿ, ಕಟ್ಟೆ; ಠಾಣೆ, ಚೌಕಿ, ಚಾವಣಿ.
चबेना, पु. ಪುರಿ, ಹುರಿಗಾಳು, ಅರಳು.
चबेनी, स्त्री. ಮೆಲ್ಲುವ ಸಾಮಗ್ರಿ; ಉಪಾಹಾರ; ತಿನಸು.
चभाना, सक्रि. ಊಡಿಸು, ತಿನ್ನಿಸು.
चभोरना, सक्रि. ಅದ್ದು, ಮುಳುಗಿಸು.
चमक, स्त्री. ನಿಂಚು; ಹೊಳಪು; ಪ್ರಕಾಶ; ಕಾಂತಿ; ಸೊಂಟದ ನೋವು.
चमक चमक, स्त्री. ವೈಭವ, ಕಾಂತಿ, ದೆಖ್ಖಾಳ; ಒಯ್ಯಾರ, ಬಿನ್ನಾಣ.
चमकता, वि. ಪ್ರಕಾಶಿಸುವ, ಹೊಳೆವ.
चमकदार, वि. ಪ್ರಕಾಶವುಳ್ಳ; ಹೊಳೆಯುವ, ಮಿನುಗುವ.
चमकना, अक्रि. ಪ್ರಕಾಶಿಸು; ಹೊಳೆ; ಗಜಗಲಿಸು, ತಳತಳಿಸು; ಮಿಂಚು; ಕಳಕಳಿಸು; ಏಳಿಗೆಗೆ ಬರು; ವಿಸ್ಮಿತನಾಗು; ಜಾರಿಕೊಳ್ಳು; ನೋಯು, ಬೇನೆಯಾಗು; ಒಯ್ಯಾರ ಮಾಡು, ಬೆಡಗು ಮಾಡು; ರೇಗು.
चमकाना, सक्रि. ಮಿಂಚಿಸು; ಹೊಳಪಿಸು; ಪ್ರಕಾಶಗೊಳಿಸು; ಬೆಳಗಿಸು; ವೈಭವ ತೋರಿಸ.; ಆಶ್ಚರ್ಯಗೊಳಿಸು; ಎಬ್ಬಿಸು; ಪ್ರೇರೇಪಿಸು, ಹುರಿದುಂಬಿಸು; ಬೆಡಗು ತೋರು; ರೇಗಿಸು.
चमकाव, पु. ಹೊಳಪು, ಕಾಂತಿ; ಪ್ರಕಾಶ; ಒಯ್ಯಾರ.
चमकी, स्त्री. ಕಾಗೆ ಬಂಗಾರ, ಗುನ್ನಾಂಪಟ್ಟಿ; ಚಮುಕಿ, ಬೇಗಡೆ.
चमकीला, वि. ಹೊಳೆಯುವ, ತಳತಳಿಸುವ. चमकीला दमकीला — ಥಳುಕಿನ; ಠೀವಿಯ.
चमकीवल, स्त्री. ಹೊಳಪಿಸುವಿಕೆ; ಥಳುಕು, ಬೆಡಗು.
चमको, स्त्री. ಒಯ್ಯಾರಗಿತ್ತಿ, ಬಿನ್ನಾಣಗಿತ್ತಿ; ಹಾದರಗಿತ್ತಿ; ಜಗಳಗಂಟಿ.
चमगादड़, चमगीदड़, पु. ಗಬ್ಬಿಲ, ತೊಗಲು ಬಾವಲಿ, ಕಣ್ಣಕಪ್ಪಡಿ.
चमचम, स्त्री. ಒಂದು ಬಗೆ ಮಿಠಾಯಿ. क्रिवि. ಹೊಳಪಿನಿಂದ, ಮಿರುಗುತ್ತ.
चमचमाना, अक्रि. ಹೊಳೆಯು; ಬೆಳಗು; ಪ್ರಕಾಶಿಸು. सक्रि. ಬೆಳಗಿಸು, ಪ್ರಕಾಶಗೊಳಿಸು.
चमचमाहट, स्त्री. ಹೊಳಪು; ಪ್ರಕಾಶ.
चमचा, पु. ಚಮಚ, ಎಲೆ ಸೌಟು, ಉದ್ಧರಣೆ; ಇಕ್ಕಳ, ಸವಣ.

**चमची**, स्त्री. चमचा का लघु रूप.
**चमजूई**, स्त्री. ತೊಣಚಿ, ಉಣ್ಣಿ; ಜಿಗಣಿ.
**चमड़ा**, पु. ಚರ್ಮ; ತೊಗಲು, ಚಕ್ಕಳ
**चमड़ी**, स्त्री. ತೊಗಲು; ಚರ್ಮ.
**चमत्कार**, पु. ಆಶ್ಚರ್ಯ; ಚಮತ್ಕಾರ.
**चमन**, पु. ಪಾತಿ, ಮಡಿ, ಆಲವಾಲ; ಉದ್ಯಾನ, ಕೈದೋಟ.
**चमनज़ार**, पु. ಹುಲ್ಲುಗಾವಲು, ಹುಲ್ಲುಗದ್ದೆ.
**चमनबंद**, पु. ತೋಟಗಾರ
**चमनबंदी**, स्त्री. ತೋಟಗಾರಿಕೆ.
**चमर**, स्त्री. ಚಾಮರ, ಪೀಲಿ, ಬಿಜ್ಜಣಿಗೆ.
**चमरख**, स्त्री. ರಾಟೆಯ ಕದುರಿನ ಬಾರು, ಕದಿರುಚೀಲ; ಸಣಕಲು ಸ್ತ್ರೀ.
**चमरस**, पु. ಜೋಡು ಕಚ್ಚಿದ ಗಾಯ.
**चमरी**, स्त्री. ಚಮರಿಮೃಗ; ಚಾಮರ.
**चमरौधा**, पु. ಎಕ್ಕಡ, ಕೆರ.
**चमला**, पु. **चमली**, स्त्री. ಭಿಕ್ಷಾಪಾತ್ರೆ, ಬವನಾಸಿ.
**चमस**, पु. **चमसी**, स्त्री. ಚಮಚ, ಉದ್ಧರಣೆ.
**चमाचम**, वि. ಮಿಂಚುವ; ಮಿರುಗುವ.
**चमार**, पु. ಚರ್ಮದ ಕೆಲಸ ಮಾಡುವವನು, ಚರ್ಮಕಾರ, ಚಮ್ಮಾರ; ಮೋಚಿ, ಮುಚ್ಚಿಗ.
**चमारका**, पु. ಕೀಳು ಜಾತಿಯವ.
**चमारनी**, **चमारिन**, स्त्री. ಚಮ್ಮಾರಸ್ತ್ರೀ
**चमारी**, स्त्री. ಚಮ್ಮಾರ ಸ್ತ್ರೀ; ಚಮ್ಮಾರನ ಕೆಲಸ.
**चमू**, स्त्री. ಸೇನೆ, ದಳ.
**चमेली**, स्त्री. ಮಲ್ಲಿಗೆ; ಜಾಜಿ ಹೂ.
**चमोटा**, पु. ಕತ್ತಿ ಅಡಿಸುವ ತೊಗಲು, ಮಸೆತೊಗಲು.
**चमोटी**, स्त्री. ಚಾವಟಿ; ಸಣ್ಣ ಬೆತ್ತ; ಮಸೆತೊಗಲು.
**चमौवा**, पु. ಎಕ್ಕಡ, ಕೆರ.
**चम्मच**, पु. ಚಮಚ, ಎಲೆ ಸವುಟು.
**चर**, पु. ಚಾರ, ಬೇಹುಕಾರ, ದೂತ; ಮೆಕ್ಕಲು, ಒಂಡುನೆಲ, ಪುಲಿನ; ಮರಳುದಂಡೆ, ಉಸುಬು ನೆಲ.
**चरक**, पु. ಬೇಹುಕಾರ; ದೂತ; ಕ್ರಯಾಣಿಕ.
**चरकटा**, पु. ಹುಲ್ಲು ಕತ್ತರಿಸುವವ; ನೀಚ
**चरका**, पु. ಗೀಚು, ಕಚ್ಚು; ತರಿದ ಗಾಯ; ಕುಷ್ಠದ ಬಿಳಿ ಚುಕ್ಕೆ; ಬರೆ; ನಷ್ಟ; ಮೋಸ.
**चरख़**, पु. = **चर्ख़**.
**चरख़ा**, पु. = **चर्ख़ा**.
**चरख़ी**, स्त्री, = **चर्ख़ी**.
**चरग**, पु. ಗಿಡಗ, ಡೇಗೆ; ಕತ್ತೆಕಿರುಬ.
**चरचना**, सक्रि. ಗಂಧ ಹಚ್ಚು, ಗಂಧ ಸವರು; ಅನುಮಾನಿಸು.
**चरचर**, वि. ಖಾರವಾದ, ಕಟು.
**चरचराना**, अक्रि. ಬಿರಿ, ಒಡೆ; ರೇಗು; ಉರಿಯಾಗು, ನವೆಯಾಗು. सक्रि. ಚರಚರ ಎನ್ನುತ್ತ ಮುರಿ.
**चरण**, **चरन**, पु. ಪಾದ; ಹೆಜ್ಜೆ; ಮೆಟ್ಟಿಲು; ಹಾಡಿನ ಒಂದು ನುಡಿ, ಚರಣ; ಮೂಲ ಅಡಿ; ತಿರುಗುವ ಸ್ಥಳ; ನೋಯುವಿಕೆ. चरणकमल = ಅಡಿದಾವರೆ.

**चरती**, पु. ಉಪವಾಸ ವ್ರತವನ್ನು ಆಚರಿಸದಿರುವವ.

**चरना**, सक्रि. ಮೇಯು, ಹುಲ್ಲು ಮೇಯು; ಹೆಕ್ಕು. अक्रि. ತಿರುಗಾಡು. पु. ಚಡ್ಡಿ, ಚಲ್ಲಣ.

**चरनी**, स्त्री. ಮೇಯುವ ಸ್ಥಳ, ಗೋಮಾಳ; ಮೇವು, ಬೂಸ; ಮೇವು ತಿನ್ನಿಸುವ ತೊಟ್ಟಿ, ಗೋದಲಿ, ಚರಣಿಗೆ.

**चरपट**, पु. ಕೆನ್ನೆ ಏಟು, ಚಪಾಟಿ, ತಪರಾಕು; ಮೋಸಗಾರ, ಠಕ್ಕ.

**चरपट्टा**, पु. ನಸುಗಾಯ, ತರಿದಗಾಯ

**चरपरा**, वि. ಕಾರವಾದ, ಘಾಟಾದ; ಚುರುಕಾದ.

**चरपराना**, अक्रि. ಕೊಡೆಯು, ದುಡಿ; ನೋವಾಗು, ಉರಿ.

**चरपराहट**, स्त्री. ಘಾಟು, ಕಾರ; ಉರಿ, ನವೆ; ಕರುಬು, ಹೊಟ್ಟೆ ಕಿಚ್ಚು.

**चरपूज़**, वि. ಕೀಳುತರದ, ನೀಚ; ದಡ್ಡ.

**चरफरा**, वि. ಚುರುಕಾದ, ಸೂಟಿ; ಚತುರ, ದಕ್ಷ; ಜಾಗರೂಕ, ಹುಷಾರಾದ.

**चरफराना**, अक्रि. ತಳಮಳಿಸು.

**चरब**, वि. ಜಿಡ್ಡಾದ; ನುಣುಪಾದ, ನಯವಾದ; ತೀಕ್ಷ್ಣವಾದ; ಚುರುಕು.

**चरब-दस्त**, वि. ಚಟುವಟಿಕೆಯುಳ್ಳ; ಚುರುಕಾದ.

**चरबा**, पु. ನಕ್ಷೆಯ ಮೇಲಿಟ್ಟು ನಕಲು ತೆಗೆಯುವ ತೆಳು ಕಾಗದ.

**चरबाक**, वि. ಚತುರ, ಸಮರ್ಥ; ದುರುಳ, ದಿಟ್ಟ.

**चरबी**, स्त्री. ನೆಣ, ವಸೆ; ಕೊಬ್ಬು, ಮೇದಸ್ಸು, ಚರಬಿ; ಜಿಡ್ಡು.

**चरबीदार**, वि. ಕೊಬ್ಬಿದ.

**चरबीला**, वि. ಕೊಬ್ಬಿದ; ಚರಬಿಯ, ಜಿಡ್ಡಿನ.

**चरम**, वि. ಅಂತಿಮ, ಚರಮ.

**चरमर**, पु. ಚರಮರ ಶಬ್ದ.

**चरमराना**, अक्रि. ಚರಮರ ಶಬ್ದ ಮಾಡು.

**चरमराहट**, स्त्री. ಚರಮರ ಶಬ್ದ ಮಾಡುವಿಕೆ.

**चरवाई**, स्त्री. ಮೇಯಿಸುವಿಕೆ; ಮೇಯಿಸುವ ಕೆಲಸ; ಮೇಯಿಸುವುದರ ಕೂಲಿ; ಹುಲ್ಲುಗಾವಲಿನ ಸುಂಕ.

**चरवाना**, सक्रि. चराना का प्रे. रूप.

**चरवाहा**, पु. ಮೇಯಿಸುವವ, ದನಕಾಯುವವ.

**चरवाही**, स्त्री. = चरवाई.

**चरैया**, पु. ಮೇಯುವ ಪ್ರಾಣಿ; ಮೇಯಿಸುವವ.

**चरस**, पु. ಬಂಗೀ ಗಿಡದಿಂದ ಮಾಡಿದ ಒಂದು ವಿಧದ ಮಾದಕ ದ್ರವ್ಯ; ಚಕ್ಕಳದ ಬಾನೆ, ಕಪಿಲೆಯ ಬಾನೆ, ಮಟ್ಟಿ.

**चरसा**, पु. ತೊಗಲು, ಚರ್ಮ; ಚರ್ಮದ ಬಾನೆ, ಕಪಿಲೆಯ ಬಾನೆ.

**चरसी**, पु. ಚರ್ಮದ ಬಾನೆ ಅಥವಾ ಕಪಿಲೆಯಿಂದ ನೀರು ಹಾಯಿಸುವವ; ಚರಸ ಎಂಬ ಮಾದಕ ದ್ರವ್ಯವನ್ನು ಸೇದುವವ.

**चरा**, पु. ಮೇಯುವಿಕೆ.

**चराई**, स्त्री. ಮೇಯುವಿಕೆ; ಮೇಯಿ

ಸುವಿಕೆ; ಮೇಯಿಸುವುದರ ಕೂಲಿ.
**चरागाह**, स्त्री. ಮೇಯುವ ಸ್ಥಳ, ಹುಲ್ಲುಗಾವಲು.
**चरान**, पु. ಮಾಳ, ಹುಲ್ಲುಮಾಳ.
**चराना**, सक्रि. ಮೇಯಿಸು, ತಿನ್ನಿಸು; ಸವಿಮಾತಿನಿಂದ ಮರುಳುಗೊಳಿಸು.
**चरिंदा**, पु. ಭೂಮಿಯ ಮೇಲೆ ನಡೆಯುವ ಪ್ರಾಣಿ, ಭೂಚರ; ಮೃಗ, ಪಶು.
**चरित**, पु. ನಡತೆ, ನಡೆವಳಿ, ವರ್ತನೆ; ಜೀವನ ಚರಿತ್ರೆ.
**चरित्तर**, पु. ಮೋಸಗಾರಿಕೆ, ಠಕ್ಕು; ಬೆಡಗು.
**चरित्र**, पु. ಸ್ವಭಾವ, ಕೃತ್ಯ; ಶೀಲ, ವರ್ತನೆ; ಚರಿತೆ.
**चरी**, स्त्री. ಹಸೀ ಜೋಳದ ಕಡ್ಡಿಯ ಮೇವು; ಮೇಯುವ ಸ್ಥಳ, ಹುಲ್ಲುಬನ್ನಿ
**चरु**, पु. ಹವಿಸ್ಸು; ಹವಿಸ್ಸಿಡುವ ಪಾತ್ರೆ.
**चरेरा**, वि. ಕಠೋರ, ಕರ್ಕಶ
**चरैया**, पु. ಮೇಯಿಸುವವ; ಮೇಯುವ ಪ್ರಾಣಿ.
**चर्ख**, पु. ಚಕ್ರ, ಗಾಲಿ; ಕುಂಬಾರನ ತಿಗುರಿ; ರಾಟೆ, ರಾಟ್ಣ; ಕಡಚೀಲು, ಜಂತ್ರ, ಗಾಥ, ತರಣಿ; ಆಕಾಶ; ಸ್ವರ್ಗ; ಖಗೋಳ; ಕಾಲಚಕ್ರ; ಫಿರಂಗಿಗಳ ಗಾಡಿ; ಕತ್ತೆಕಿರುಬ, ನಾಯಿಹುಲಿ.
**चर्खा**, पु. ಗಾಲಿ, ಚಕ್ರ; ರಾಟೆ, ಚರಖ; ರಾಟ್ಣ, ಕಪ್ಪಿ; ನೂಲುಸುತ್ತುವ ಅರಟೆ; ಗಾಲಿಯ ಅಚ್ಚು; ಕುದುರೆಗಳನ್ನು ಪಳಗಿಸಲು ಉಪಯೋಗಿಸುವ ಗಾಡಿಯ ಚೌಕಟ್ಟು; ತೊಡಕಿನ ಕೆಲಸ; ತಟ್ಟು, ಟಾಕಣ. वि. ಸಣಕಲಾದ, ಬಡಕಲ; ನಿರ್ಬಲ; ಬಡ; ಅಸತ್ತ; ಮುದುಕಲ.
चर्खा पोनी = ನೂಲುವುದು ಮತ್ತು ಅರಳೆ ಎಕ್ಕುವುದು; ಹೆಂಗಸರ ಕೆಲಸ.
**चर्खी**, स्त्री. ಚಕ್ರ; ಚಕ್ರದಂತಹ ವಸ್ತು; ಸಣ್ಣ ರಾಟೆ; ಹತ್ತಿ ಬೀಜ ಬಿಡಿಸುವ ರಾಟೆ, ಕಿರಕು ರಾಟೆ; ನೂಲು ಸುತ್ತುವ ರಾಟೆ, ತಿಕಡಿ; ಬಾವಿಯ ರಾಟೆ, ಗಡೆ, ಕಪ್ಪಿ.
**चर्चा**, पु. (स्त्री.) ಹಿಂದಿನ ವಿದ್ಯಮಾನಗಳನ್ನು ಕುರಿತು ಮಾತಾಡುವಿಕೆ; ಹಳೆಯ ವೃತ್ತಾಂತದ ಸಂಕ್ಷಿಪ್ತ ವಿವರಣೆ; ವಿಚಾರಣೆ, ಪರ್ಯಾಲೋಚನೆ; ವಾದ; ಸಂಭಾಷಣೆ; ವದಂತಿ; ಗಮನಿಸುವಿಕೆ, ಗಮನ; ಎತ್ತಿ ಮಾತನಾಡುವಿಕೆ, ಪ್ರಸ್ತಾಪ; ಉಪಾಸನೆ, ಪೂಜೆ; ಗಂಧ ಮೊದಲಾದುವುಗಳನ್ನು ಹಚ್ಚಿ ಮೈಯನ್ನು ಪರಿಮಳಗೊಳಿಸುವಿಕೆ.
**चर्म**, पु. ಚರ್ಮ, ತೊಗಲು, ಗುರಾಣಿ
**चर्मकार**, पु. ಚರ್ಮದ ಕೆಲಸ ಮಾಡುವವ, ಚಮ್ಮಾರ.
**चर्मकील**, स्त्री. ಮೊಳೆ ರೋಗ.
**चर्या**, स्त्री. ಚರ್ಯೆ, ನಡತೆ, ವರ್ತನೆ; ಕೆಲಸ, ವೃತ್ತಿ; ಸೇವೆ.
**चर्राना**, अक्रि. ಚರಚರ ಶಬ್ದವಾಗು, ದುಡಿ; ಕೊಡೆಯು, ನೋಯು; ಉರಿಯಾಗು, ನವೆಯಾಗು, ತೀಟೆಯಾಗು.
**चर्री**, स्त्री. ಚುಚ್ಚುವ ಮಾತು, ಕೆಣಕು ಚಾಟಿ, ಸುಡು ನುಡಿ.
**चर्वण**, पु. ಅಗಿಯುವಿಕೆ, ಮೆಲ್ಲುವಿಕೆ

करौंदा, पु. ಕರವಂದಿಗೆ, ಕವಳಿಕಾಯಿ.
करौत, पु. ಗರಗಸ, ರಂಪ. स्त्री. ಇಟ್ಟು ಕೊಂಡವಳು, ಉಪಪತ್ನಿ.
करौता, पु. करौती, स्त्री. ಗರಗಸ; ಗಾಜಿನ ಪಾತ್ರೆ.
करौला, पु. ಬೇಟೆಗಾರ.
करौली, स्त्री. ಚಾಕು, ಚೂರಿ.
कर्कर, पु. ಕುರುವಿಂದ ಕಲ್ಲು. वि. ಒರಟು, ಮುರುಸು.
कर्कश, वि. ಕಠೋರ; ಉಗ್ರ, ಕ್ರೂರ; ಮುರುಸು; ಬಿರುಸಾದ.
कर्ज़, कर्ज़ा, पु. ಋಣ, ಸಾಲ, ಕಡ.
कर्ज़दार, वि. ಸಾಲ ತೆಗೆದುಕೊಂಡವ, ಸಾಲಗಾರ, ಋಣಿ.
कर्ज़दारी, स्त्री. ಋಣ, ಸಾಲಗಾರಿಕೆ.
कर्ण, पु. ಕರ್ಣ, ಕಿವಿ; ಹಡಗಿನ ಚುಕ್ಕಾಣಿ; ಕರ್ಣರೇಖೆ.
कर्णगूत, पु. ಗುಗ್ಗೆ.
कर्णधार, पु. ಹಡಗು ನಡಿಸುವವ, ಚುಕ್ಕಾಣಿಗಾರ; ಕಾರಣಕರ್ತ; ವ್ಯವಸ್ಥಾಪಕ.
कर्णफूल, पु. ಹತ್ತಕಡಕು.
कर्णलतिका, स्त्री. ಕಿವಿಯ ಆಲೆ.
कर्णाट, पु. ಕರ್ಣಾಟಕ ದೇಶ.
कर्णाटी, स्त्री. ಒಂದು ರಾಗ.
कर्त्तरी, पु. ಕತ್ತರಿ.
कर्त्तव्यमूढ़, वि. ಏನು ಮಾಡುವುದೆಂದು ತೋಚದವ; ಕಕ್ಕಾಬಿಕ್ಕಿಯಾದವ
कर्त्ता, पु. ಮಾಡುವವ; ರಚಿಸುವವ; ಸೃಷ್ಟಿಸುವವ; ಈಶ್ವರ; ಮಾಲೀಕ, ಯಜಮಾನ; ಗಂಡ.
कर्त्ता धर्त्ता, पु. ಕಾರಣಕರ್ತ; ಮನೆತನ ನಡಿಸುವವ; ಅಡಳಿತಗಾರ.
कर्त्तार, पु. ಕರ್ತೃ; ಸೃಷ್ಟಿಕರ್ತ.
कर्त्री, स्त्री. कर्त्ता का स्त्री. ರೂಪ.
कर्दम, पु. ಕೆಸರು; ಪಾಪ; ಮಾಂಸ.
कर्पास, पु. ಕಾರ್ಪಾಸ, ಅರಳೆ.
कर्बी, स्त्री. ಜೋಳದ ಕಡ್ಡಿ.
कर्म, पु. ಕರ್ಮ; ಕಾರ್ಯ; ಕರ್ತವ್ಯ; ಉದ್ಯೋಗ; ಕರ್ಮಪದ; ದ್ವಿತೀಯಾವಿಭಕ್ತಿ; ಭಾಗ್ಯ, ವಿಧಿ; ಕರ್ಮಾಂತರ.
कर्मकार, पु. ಕೆಲಸಗಾರ; ಕರ್ಮಕಾರ, ಕಮ್ಮಾರ.
कर्मकारक, पु. ದ್ವಿತೀಯಾವಿಭಕ್ತಿ.
कर्मचारी, पु. ಕೆಲಸ ಮಾಡುವವ, ಕಾರ್ಯಕರ್ತ; ಉದ್ಯೋಗಸ್ಥ, ಅಧಿಕಾರಿ.
कर्मरेखा, स्त्री. ಹಣೆಬರಹ.
कर्महीन, वि. ಭಾಗ್ಯಹೀನ, ನಿರ್ಭಾಗ್ಯ.
कर्मी, वि. ಕೆಲಸದ; ಕರ್ಮಶೀಲ; ಅದೃಷ್ಟವಂತ.
कर्रा, वि. ಮೊರಡು; ಬಿರುಸು.
कलंक, पु. ಚಿತ್ತು; ಕಲಂಕ; ದೋಷ.
क़लंदर, पु. ಮಹಮ್ಮದೀಯ ಬೈರಾಗಿ; ಗುಡಾರದ ಬಟ್ಟೆ; ಕೋತಿ ಮುಂತಾದುವುಗಳನ್ನಾಡಿಸುವವ.
क़लंदरा, पु. ರೇಷ್ಮೆ ಬಟ್ಟೆ.
कल, पु. ನಿನ್ನೆ; ನಾಳೆ. स्त्री. ಪಾರ್ಶ್ವ, ಪಕ್ಕ, ಮಗ್ಗುಲು; ಯಂತ್ರ, ಕೀಲು,

ಚಾಪು; ತಂಪಾಕಿಯ ಕುದುರೆ, ಬೋನು; ಸೌಖ್ಯ, ನೆಮ್ಮದಿ, ಶಾಂತಿ. कल कारख़ाना = ಗಿರಣಿ, ಕಾರಖಾನೆ.

**क़लई**, स्त्री. ಕಲಾಯಿ; ಮುಲಾಮು, ಗಿಲಾವು, ಗಿಲೀಟು; ಥಳುಕು; ಸುಣ್ಣ ಬಳಿಯುವುದು. क़लई खुलना = ಗುಟ್ಟು ಬಟ್ಟ ಬಯಲಾಗು.

**क़लईगर**, पु. ಕಲಾಯಿ ಮಾಡುವವ.

**क़लईगरी**, स्त्री. ಕಲಾಯಿ ಮಾಡುವ ಕೆಲಸ.

**क़लईदार**, वि. ಮುಲಾಮು ಅಥವಾ ಗಿಲೀಟು ಹಚ್ಚಿದ.

**क़लक़**, पु. ವ್ಯಾಕುಲ, ವಿಷಾದ; ದಿಗಿಲು.

**कलकल**, स्त्री. ಜಗಳ, ವಾಗ್ವಾದ, ರಗಳೆ. पु. ನೀರು ಹರಿಯುವ ಶಬ್ದ; ಕೋಲಾಹಲ.

**कलगट**, पु. ಗುದ್ದಲಿ, ಪಿಕಾಸಿ.

**कलगा**, पु. ಕಲ್ಲಿಗೆ ಹೂ.

**कलग़ी**, स्त्री. ಹಕ್ಕಿಗಳ ಶಿಖೆ, ಜುಟ್ಟು; ತುರಾಯಿ; ಪಕ್ಷಿ ರೆಕ್ಕೆಯಿಂದ ಮಾಡಿದ ತಲೆಕುಚ್ಚು, ಕೊಂಡೆ, ಕಟ್ಟಡಗಳ ಶಿಖರ; ಕಲಶ; ಒಂದು ತರದ ಲಾವಣಿ.

**कलग़ीबाज़**, पु. ಲಾವಣಿಗಾರ.

**कलछा**, पु. ದೊಡ್ಡ ಸೌಟು, ಸಟ್ಟುಗ.

**कलछी**, **कलछुल**, स्त्री. ಸೌಟು.

**कलजिब्भा**, **कलजीभा**, **कलजीहा**, वि. ಕೆಟ್ಟನಾಲಗೆಯುವ, ಹೊಲ್ಲ ನಾಲಗೆಯುವ; ಅಮಂಗಲವಾದ ಮಾತುಗಳನ್ನಾಡಿದರೆ ಫಲಿಸುವಂಥ ಗುಣವುಳ್ಳ ನಾಲಗೆಯುವ, ದುರ್ನಾಲಗೆಯುವ, ಮಚ್ಚೆನಾಲಗೆಯುವ.

**कलजुग**, पु. ಕಲಿಯುಗ.

**कलझंवा**, वि. ಕಪ್ಪಾದ, ಶ್ಯಾಮಲ.

**कलटना**, सक्रि. ಆಶೆ ತೋರಿಸಿ ನಿರಾಶೆಪಡಿಸು, ಹಿಂಸಿಸು, ಸತಾಯಿಸು.

**कलदार**, वि. ಯಂತ್ರದಿಂದ ಕೂಡಿದ. पु. ಸರಕಾರಿ ರೂಪಾಯಿ.

**कलप**, पु. ಗಂಜಿ, ಅಂಬಲಿ; ನರೆಗೂದಲನ್ನು ಕಪ್ಪಾಗಿಸುವ ಔಷಧ, ಕೇಶಕಲ್ಪ, ತಳಪ.

**कलपना**, अक्रि. ವೇದನೆಯಿಂದಕೂಗು, ನರಳು, ಪ್ರಲಾಪಿಸು, ಗೋಳಿಡು.

**कलपाना**, सक्रि. ದುಃಖಗೊಳಿಸು, ಸತಾಯಿಸು, ಗೋಳಾಡಿಸು.

**कलफ़**, पु. ಬಟ್ಟೆಗೆ ಹಾಕುವ ಗಂಜಿ; ಕಲೆ; ಮಡಿಬಕ್ಕೆ, ಮಡಿಮೆ, ಮುದ್ದಣ.

**कलबल**, पु. ಯುಕ್ತಿ, ತಂತ್ರ; ಗದ್ದಲ, ಗುಲ್ಲು. वि. ಗೊಜಗು (ಮಾತು).

**कलबूत**, पु. = कालबुद.

**क़लम**, पु. (स्त्री.) ಲೇಖಣಿ, ಪೇನಾ, ಲೆಕ್ಕಣಿಕೆ; ಕೂರ್ಚ, ತೂಲಿಕೆ; ಕಸಿ ಮಾಡಲು ಕೊಯ್ದ ಮರದ ಶಾಖೆ; ಒಂದು ತರಹದ ಬಾಣಬಿರುಸು; ನಕಾಸಿ ಮಾಡುವ ಉಳಿ; ಕ್ಷೌರಮಾಡದೆ ಬಿಟ್ಟಿರುವ ಕೆಣ್ಣಲೆಯ ಕೂದಲು; ಸ್ಫಟಿಕ, ಹಳಕು. क़लम करना = ಕುಡಿ ಕತ್ತರಿಸು; ಕಸಿ ಮಾಡು. क़लम तोड़ना = ರಸವತ್ತಾಗಿ ಬರೆ, ಬಲು ಸ್ವಾರಸ್ಯವಾಗಿ ಬರೆ.

**कल-मकल**, स्त्री. ಸಂಕಟ, ಕಷ್ಟ, ತಾ

ಪತ್ರಯು.

क़लमकार, पु. ಕೆತ್ತುವವ, ಚಿತ್ರಗಾರ.

क़लमकारी, स्त्री. ಕೆತ್ತನೆಯ ಕೆಲಸ, ನಕಾಸಿ ಕೆಲಸ; ಚಿತ್ರಕಲೆ.

कलमज़द, वि. (ಬರೆದದ್ದನ್ನು) ಹೊಡೆದು ಹಾಕಿದ, ವಜಾಮಾಡಿದ; ರದ್ದಾದ.

क़लमतराश, पु. ಚಾಕು.

क़लमदान, पु. ಮಸಿಕುಡಿಕೆ ಮತ್ತು ಲೇಖಣಿಯನ್ನಿಡುವ ಪೆಟ್ಟಿಗೆ, ಕಲಮುದಾನಿ.

क़लमना, सक्रि. ಕತ್ತರಿಸು, ತುಂಡರಿಸು.

क़लमबंद, वि. ಬರೆಯಲ್ಪಟ್ಟ, ಲಿಪಿಬದ್ಧ, ಲಿಖಿತ.

क़लमल, पु. ಗಾಬರಿ, ಒದ್ದಾಟ.

कलमलाना, अक्रि. ಒದ್ದಾಡು, ಪೇಚಾಡು.

क़लमा, पु. ವಾಕ್ಯ; ವೇದವಾಕ್ಯ, ಕುರಾನಿನ ವಾಕ್ಯ; ಮುಹಮ್ಮದೀಯ ಮತದ ಮೂಲಮಂತ್ರ ಅಥವಾ ವಿಶ್ವಾಸ ಪ್ರಮಾಣ, (ಅಂದರೆ ला इलाह इल्लिलाह, मुहमद उर रसूल अल्लाह = ಅಲ್ಲಾ ವಿನಹ ಮತ್ತಾರೂ ಇಲ್ಲ; ಮುಹಮ್ಮದನೇ ಅತನ ದೂತ.) क़लमा पढ़ना = क़लमा ಮಂತ್ರವನ್ನು ಪಠಿಸು, ಮುಸಲ್ಮಾನನಾಗು.

कलमी, स्त्री. ಒಂದು ತರಕಾರಿ, ಕಲಂಬಿ.

क़लमी, वि. ಬರೆದ, ಬರವಣಿಗೆಯಲ್ಲಿರುವ; ಕಸಿ ಮಾಡಿದ.

कलमुंहा, वि. ಕಪ್ಪು ಮೋರೆಯುಳ್ಳ; ಕಳಂಕಿತ; ನತದೃಷ್ಟ.

कलरव, पु. ಕಲಕಲ ಧ್ವನಿ, ಝೇಂಕಾರ; ಪಾರಿವಾಳ.

कलवरिया, पु. ಸೇಂದಿ ಅಂಗಡಿ, ಪಡಖಾನೆ.

कलवार, पु. ಹೆಂಡ ಇಳಿಸುವವ, ಈಡಿಗ; ಸಾರಾಯಿ ಮಾರುವವ, ಕಲಾಲ, ಶೌಂಡಿಕ.

कलश, कलस, कलसा, पु. ಕೊಡಪಾನೆ, ಬಿಂದಿಗೆ; ದೇವಸ್ಥಾನದ ಶಿಖರ, ಕಲಶ.

कलशी, कलसी, स्त्री. ಸಣ್ಣ ಬಿಂದಿಗೆ; ಸಣ್ಣ ಕಲಶ.

कलसिरा, स्त्री. ಕರಿಯ ತಲೆಯ; ಖೋಡಿ, ಕೂಳ.

कलह, स्त्री. ಕಲಹ, ಜಗಳ.

कलहारा, वि. ಜಗಳಗಂಟ.

कलहारी, स्त्री. ಜಗಳಗಂಟಿ, ತಾಟಕಿ.

कलही, स्त्री. ಜಗಳಗಂಟಿ; ಗಯ್ಯಾಳಿ.

कलां, वि. ದೊಡ್ಡ, ಹಿರಿಯ.

कला, स्त्री. ಕಲೆ; ಭಾಗ; ತಂತ್ರ, ಚಮತ್ಕಾರ; ವಿದ್ಯೆ; ಯಂತ್ರ; ಮುಗ್ಗರಿಸುವಿಕೆ; ಪೈಟ, ಪಲ್ಟಿ, ಲಾಗ, ಕರಣ. कला खाना = ಮುಗ್ಗರಿಸು, ಲಾಗ ಹೊಡೆ.

कलाई, स्त्री. ಕೈ ಹರಡು, ಮಣಿಕಟ್ಟು; ಒಂದು ತರದ ದ್ವಿದಳ ಧಾನ್ಯ; ದಾರದ ಉಂಡೆ, ಕಂಡಿಕೆ; ಆನೆಯ ಕೊರಳಿನ ಮಿಳಿ, ಹೊರಜೆ. कलाई की घड़ी = ಕೈ ಗಡಿಯಾರ.

कलाकंद, पु. ಕಲ್ಲುಸಕ್ಕರೆಯ ಬರ್ಫಿ.

कलाकार, पु. ಕಲಾವಿದ.

**कलाजंग**, पु. ಕುಸ್ತಿ ವರಸೆ, ಪಟ್ಟು.

**कलादा**, पु. ಆನೆಯ ಮೇಲೆ ಮಾವಟಿಗನು ಕೂಡುವ ಸ್ಥಳ.

**कलाना**, सक्रि. ಕಾಳು ಹುರಿ; ಕಲಸು; ಕಲಕು, ಕದಡು.

**कलाप**, पु. ಗುಂಪು, ಸಮೂಹ; ನವಿಲಗರಿ.

**कलाबत्तू**, **कलाबत्तून**, पु. ಸರಿಗೆ, ಜರಿ, ಜರತಾರಿ, ಕಲಾಬತ್ತು.

**कलाबत्तूनी**, वि. ಕಲಾಬತ್ತಿನ, ಜರತಾರಿಯ.

**कलाबा**, पु. ದಾರದ ಉಂಡೆ, ಕಂಡಿಕೆ.

**कलाबाज़**, वि. ಲಾಗ ಹೊಡೆಯುವವ, ಕೊಲ್ಲಟಿಗ.

**कलाबाज़ी**, स्त्री. ಲಾಗ ಹೊಡೆಯುವುದು;ಪಂಟಿಲಾಗ, ಪೈಟ, ಕೊಲ್ಲಣಿಗೆ.

**कलाम**, पु. ಮಾತು, ವಚನ; ವಾಣಿ; ಸಂಭಾಷಣೆ; ಪ್ರತಿಜ್ಞೆ; ಆಕ್ಷೇಪಣೆ.

**कलाम अल्लाह**, पु. ದೇವವಾಣಿ; ಕುರಾನು.

**कलार**, **कलाल**, पु. ಹೆಂಡ ಮಾರುವವ, ಕಲಾಲ, ಶೌಂಡಿಕ, ಈಡಿಗ.

**कलारिन**, **कलाली**, स्त्री. ಹೆಂಡ ಮಾರುವವಳು, ಈಡಿಗಿತ್ತಿ.

**कलालख़ाना**, पु. ಹೆಂಡದ ಅಂಗಡಿ, ಪಡಖಾನೆ.

**कलावंत**, पु. ಸಂಗೀತಗಾರ; ಗಾಯಕ; ನಟ.

**कलावा**, पु. ನೂಲಿನುಂಡೆ, ಕಂಡಿಕೆ; ರಕ್ಷಾಬಂಧನ; ಆನೆಯ ಕೊರಳಿನ ಮಿಳಿ.

**कलिंदा**, पु. ಕಲ್ಲಂಗಡಿ ಹಣ್ಣು, ತರಬೂಜು.

**कलिका**, स्त्री. ಮೊಗ್ಗು, ಮುಗುಳು, ಅರುಂಬು.

**कलिया**, पु. ಅಟ್ಟ ಮಾಂಸ.

**कलियान**, पु. ಹೊಗೆಸೊಪ್ಪಿನ ಸಣ್ಣ ಚಿಲುಮೆ.

**कलियाना**, अक्रि. ಮೊಗ್ಗೆ ಬಿಡು, ಮುಗುಳಾಗು; ಕೊನರು, ಚಿಗುರು.

**कलियारी**, स्त्री. ಅಗ್ನಿಶಿಖೆ ಎಂಬ ಗಿಡ, ಲಾಂಗಲಿಕ.

**कली**, स्त्री. ಮೊಗ್ಗು, ಅರುಂಬು, ಮುಗುಳು; ಹೊಸದಾಗಿ ಹೊರಡುವ ಪಕ್ಷಿಗಳ ರೆಕ್ಕೆ; ಚಿಪ್ಪಿನ ಸುಣ್ಣ;ಬಿಸಿ ಸುಣ್ಣ.

**कलीद**, स्त्री. ಬೀಗದಕೈ, ಕೀಲಿಕೈ.

**कलीदार**, पु. ಒಂದು ಬಗೆ ಇಜಾರು.

**कलीम**, पु. ಮಾತಾಡುವವ, ಸಂಭಾಷಿಸುವವ. कलीम अल्लाह=ದೇವರೊಡನೆ ಮಾತಾಡುವವ.

**कलीरा**, पु. ಖರ್ಜೂರದ ಮಾಲೆ.

**क़लील**, वि. ಸ್ವಲ್ಪ, ಕೊಂಚ; ವಿರಳ.

**कलीसा**, पु. ಕ್ರೈಸ್ತ ದೇವಾಲಯ.

**कलीसिया**, पु. ಕ್ರೈಸ್ತರ ಮಂಡಲಿ.

**कलूख़**, पु. ಮಣ್ಣಿನ ಹೆಂಟೆ.

**कलूटा**, वि. ಕಪ್ಪು ಬಣ್ಣದ, ಕರಿಯ.

**कलेऊ**, पु. ಬೆಳಗಿನ ಊಟ, ನೇರಿ.

**कलेजा**, पु. ಯಕೃತ್ತು, ಕಾಳಜ, ಬುಕ್ಕೆ; ಹೃದಯ, ಗುಂಡಿಗೆ, ಎದೆ; ಸಾಹಸ, ಧೈರ್ಯ; ಔದಾರ್ಯ. कलेजा

धक धक होना = ಎದೆ ಒಡೆದು ಹೋಗು, ಗುಂಡಿಗೆ ಬಿರಿ. कलेजा धड़कना = ಗುಂಡಿಗೆ ಬಡಿ, ಎದೆ ಹಾರು. कलेजे पर सांप लोटना = ಹೊಟ್ಟೆ ಕಿಚ್ಚು ಪಡು, ಅಸೂಯೆ ಪಡು; ಪ್ರೀತಿಸು, ಮೋಹಗೊಳ್ಳು. कलेजे से लगाना = ಆಲಿಂಗಿಸು, ಅಪ್ಪಿಕೊಳ್ಳು, ತಬ್ಬಿಕೊಳ್ಳು.

**कलेजी**, स्त्री. ಪ್ರಾಣಿಗಳ ಬುಕ್ಕೆ, ಹೀರಿ.

**कलेवर**, स्त्री. ದೇಹ, ಶರೀರ, ಒಡಲು; ಆಕಾರ, ರೂಪ.

**कलेवा**, पु. ಬೆಳಗಿನ ಊಟ, ಪ್ರಾತರ್ಭೋಜನ, ನೇರೆ; ಬುತ್ತಿ; ವಿವಾಹದಲ್ಲಿ ವರನಿಗೆ ಹುಗ್ಗಿ ಬಡಿಸುವ ಒಂದು ಸಂಪ್ರದಾಯ, ಹುಗ್ಗಿಶಾಸ್ತ್ರ.

**कलैया**, स्त्री. ಲಾಗ, ಪಂಟಿಲಾಗ, ಪಲ್ಟಿ, ಕೊಲ್ಲಣಿಗೆ.

**कलोर**, स्त्री. ಕಡಸು, ಮಣಕ.

**कलोल**, स्त्री. ಕುಣಿದಾಟ; ಉಲ್ಲಾಸ; ವಿಲಾಸ, ಕೇಲಿ.

**कलौंजी**, स्त्री. ಒಂದು ಬಗೆ ಜೀರಿಗೆ.

**कलौंस**, वि. ಕಪ್ಪಾದ, ಕರಿಯ; ಕಪ್ಪುಮಿಶ್ರಿತ (ಬಣ್ಣ).

**कल्क**, पु. ಗಸಿ, ಮಡ್ಡಿ, ರಾಡಿ, ಮುಷ್ಟು; ಮಲ, ಗುಗ್ಗೆ; ಪಾಪ; ಮೋಸ.

**कल्पना**, स्त्री. ಕಲ್ಪನೆ; ಯುಕ್ತಿ, ಪಂಚಿಕೆ; ಸೃಷ್ಟನೆ.

**कल्पित**, वि. ಕಲ್ಪಿಸಿದ, ಕಲ್ಪಿಸಲ್ಪಟ್ಟ; ಸೃಷ್ಟನೆಯ, ಖೋಟಾ, ಖೊಟ್ಟಿ.

**क़ल्ब**, पु. ಮನಸ್ಸು, ಹೃದಯ; ತಿರುಳು; ಮಜ್ಜೆ, ನೆಣ; ಸೇನೆಯ ಮಧ್ಯಭಾಗ. वि. ತಲೆಕೆಳಗಾದ; ಹೊಲಸು; ಖೋಟಾ, ಖೊಟ್ಟಿ; ಕಳವಿ, ಕಳಪೆ.

**क़ल्बसाज़**, पु. ಕಳಪೆ ನಾಣ್ಯ ಮಾಡುವವ, ಖೋಟಾ ನಾಣ್ಯ ಮಾಡುವವ.

**क़ल्बसाज़ी**, स्त्री. ಕಳಪೆ ನಾಣ್ಯ ತಯಾರಿಸುವಿಕೆ, ಖೊಟ್ಟಿ ನಾಣ್ಯದ ತಯಾರಿಕೆ.

**क़ल्बी**, वि. ಹಾರ್ದಿಕ, ಮನಃಪೂರ್ವಕವಾದ; ಸೃಷ್ಟನೆ, ಕಳವಿ, ಖೋಟಾ.

**कल्य**, पु. ಅರುಣೋದಯ.

**कल्याण**, पु. ಮಂಗಳ, ಕಲ್ಯಾಣ; ಸುಖ.

**कल्लर**, वि. ಗೊಡ್ಡು, ಬರಡು, ಬಂಜರು. पु. ಬಂಜರು ಜಮೀನು; ಬೆಂಗಾಡು; ಉಪ್ಪುನೆಲ.

**कल्लांच**, वि. ನೀಚ, ಹೀನ, ದರಿದ್ರ.

**कल्ला**, पु. ಮೊಳಕೆ; ಚಿಗುರು; ತಲೆ; ದವಡೆ, ಕದಪು, ಕೆನ್ನೆ; ಮೀನುಗಳ ಶ್ವಾಸಕೋಶ, ಕಿವಿರು. कल्लातोड़ = ಮುಖ ಮುರಿಯುವ (ಮಾತು).

**कल्लादराज़**, वि. ಕೂಗಾಡುವವ, ಗದ್ದಲ ಮಾಡುವವ.

**कल्लादराज़ी**, स्त्री. ಕೂಗಾಟ, ಕಿರಿಚಾಟ.

**कल्लाना**, अक्रि. ಉರಿ, ನವೆಯಾಗು.

**कल्लापरवर**, पु. ಒಂದು ಮಿಠಾಯಿ.

**कल्लोल**, पु. ಆಟ, ಆನಂದ; ನೀರಿನ ಅಲೆ, ಕಲ್ಲೋಲ.

**कल्हारना**, सक्रि. ಬೆಂಕಿಯಲ್ಲಿ ಹುರಿ; ಎಣ್ಣೆಯಲ್ಲಿ ಕರಿ. अक्रि. ಕೂಗಾಡು, ನರಳು.

**कवक**, पु. ಅಣಬೆ, ನಾಯಿಕೊಡೆ.
**कवच**, पु. ಕವಚ, ತನುತ್ರಾಣ; ರಕ್ಷೆ, ತಾಯಿತಿ; ರಣಭೇರಿ.
**कवयी**, स्त्री. ಒಂದು ಜಾತಿ ಮೀನು.
**कवर**, पु. ಕವಳ, ತುತ್ತು;ಜುಟ್ಟು;ಜಡೆ
**कवरी**, स्त्री. ಕೂದಲು; ಜುಟ್ಟು.
**कवल**, पु. ಕವಳ, ತುತ್ತು, ಗುಕ್ಕು; ಒಂದು ಜಾತಿ ಮೀನು; ಬಾಯಿ ಮುಕ್ಕಳಿಸುವ ಔಷಧ; ಬಾಯಿ ತುಂಬ ಸುರಿದುಕೊಳ್ಳುವಷ್ಟು ನೀರು, ಮುಕ್ಕುಳು; ಒಂದು ಪಕ್ಷಿ; ಒಂದು ಜಾತಿ ಕುದುರೆ; ಹುಗ್ಗಿಯ ಹಬ್ಬಕ್ಕಾಗಿ ಮೊಟ್ಟ ಮೊದಲು ಕೊಯ್ದ ಭತ್ತ ದರಿ.
**क़वास**, पु. ಸಕ್ಕರೆ ಪಾಕ, "ಕ್ಷೀರಾ".
**क़वायद**, पु. (क़ायदा का व. रूप.) ನಿಯಮಾವಳಿ, ನಿಬಂಧನೆಗಳು; ಕಟ್ಟಳೆ, ವಿಧಿ; ವ್ಯಾಕರಣ ಸೂತ್ರ, ವ್ಯಾಕರಣ; ಕವಾತು. ಯೋಗ್ಯೆ.
**कविता, कविताई**, स्त्री. ಕವನ; ಕವಿತೆ
**कविराज**, पु. ದೊಡ್ಡ ಕವಿ; ಆಯುರ್ವೇದ ವೈದ್ಯ, ಪಂಡಿತ.
**कवेलू**, पु. ಹೆಂಚು.
**कसेला**, पु. ಕಾಗೆ ಮರಿ.
**कश**, पु. ಕಶೆ, ಕೊರಡೆ, ಚಬುಕು; ಎಳೆದಾಟ; ಎಳತ; ಸೇದುವಿಕೆ. कश-म-कश = ಎಳದಾಟ; ಧಕ್ಕಾಮುಕ್ಕಿ, ನೂಕು ನುಗ್ಗು; ಹಿಂಜರಿಯುವಿಕೆ.
**कशा**, स्त्री. ಕಶೆ, ಚಾವುಟಿ.
**कशाकश**, पु. ಎಳೆಯುವಿಕೆ; ಎಳತ, ಆಕರ್ಷಣೆ; ನಚ್ಚುಮೆಚ್ಚು; ಹೋರಾಟ, ಎಳದಾಟ; ಒದ್ದಾಟ, ಪೇಚಾಟ.
**कशिश**, स्त्री. ಆಕರ್ಷಣೆ, ಎಳತ.
**कशीदगी**, स्त्री. ಎಳೆಯುವಿಕೆ; ವೈಮನಸ್ಯ.
**कशीदह, कशीदा**, वि. ಎಳೆಯಲ್ಪಟ್ಟ; ಕಸೂತಿ ಕೆಲಸ ಮಾಡಿದ. पु. ಕಸೂತಿ ಕೆಲಸ, ಹೂಗೆಲಸ.
**कश्ती**, स्त्री. ದೋಣಿ, ನಾವೆ; ತಾಂಬಾಣ, ತಟ್ಟೆ, ಹರಿವಾಣ; ಚದುರಂಗದ ಆನೆ.
**कश्फ़**, पु. ತೆರೆಯುವಿಕೆ, ಸ್ಪಷ್ಟೀಕರಣ; ಪ್ರವಚನ.
**कष्ट**, पु. ಕಷ್ಟ, ತೊಂದರೆ. कष्ट उठाना = ಪ್ರಯಾಸಪಡು, ಪಾಡುಪಡು.
**कस**, पु. ಪರೀಕ್ಷೆ; ಬಲ; ವಶ, ಆಧೀನ; ಅಡಚಣೆ; ಕಷಾಯ, ರಸ, ಸ್ವಾರ; ಕತ್ತಿಯ ಬಾಗು; ಮನುಷ್ಯ, ವ್ಯಕ್ತಿ.
**कसक**, पु, ವೇದನೆ, ನೋವು; ಹಗೆ, ದ್ವೇಷ; ಬಯಕೆ, ಅಭಿಲಾಷೆ, ಹಂಬಲ; ಸಹಾನುಭೂತಿ.
**कसकना**, अक्रि. ನೋಯು, ದುಃಖ; ವೇದನೆಯಾಗು.
**कसकसा**, वि. ಮರಳು ಮರಳಾದ, ತರಿ.
**कसकसाना**, अक्रि. ಮರಳು ಮರಳಾಗಿರು.
**कसकुट, कसकूत**, पु. ಕಂಚು.
**कसगर**, पु. ಕುಂಬಾರ; ಲೆಪ್ಪಗಾರ.
**कसन**, स्त्री. ಬಿಗಿಯುವಿಕೆ, ಬಿಗಿತ; ಬಿಗಿಯುವ ಹಗ್ಗ, ಕಪಿಲೆ ಬಾನೆಯ ತೊಗಲಿನ ಬಾರು; ಚಿತ್ರವಧೆ, ಹಿಂಸೆ; ಕಿಸಿಗೋಳ.

तप, पु. ತಪಸ್ಸು; ತಾಪ; ಜ್ವರ.
तपकना, अक्रि. ಸ್ಪಂದನವಾಗು, ಸಿಡಿ; ಮಿಡಿ, ಅದುರು.
तपन, पु. ಉರಿ; ಕಾವು, ಸೆಕೆ; ಬಿಸಿಲು; ಬೇಸಿಗೆ. स्त्री. ತಾಪ, ಉಷ್ಣ
तपना, अक्रि. ಬಿಸಿಯಾಗು; ತಪಿಸು; ಮರುಗು; ಸಂತಾಪಗೊಳ್ಳು; ತಪಸ್ಸು ಮಾಡು; ಉರಿ; ಜ್ವಲಿಸು.
तपस्या, स्त्री. ತಪಸ್ಸು.
तपाक, पु. ಮುತುವರ್ಜಿ, ಉತ್ಸಾಹ; ಅಕ್ಕರೆ, ಆಸ್ಥೆ; ತೋರಿಕೆ.
तपाना, सक्रि. ಕಾವು ಕೊಡು, ಕಾಯಿಸು; ಸಂತಾಪಗೊಳಿಸು.
तपिंचा, पु. = तमंचा.
तपिश, स्त्री. ಉಷ್ಣ; ಕಾವು; ವ್ಯಥೆ.
तपीदा, वि. ಬಿಸಿಯಾದ, ಕಾದ; ಬಿಸಿಲಿನಿಂದ ಆಸವಳಿದ.
तपेदिक़, पु. ಕ್ಷಯರೋಗ.
तपौनी, स्त्री. ಕಪಟ.
तफ़ज़ील, स्त्री. ಮಾನ್ಯತೆ; ಶ್ರೇಷ್ಠತೆ.
तफ़ज़्ज़ुल, पु. ಆಧಿಕ್ಯ, ದಯೆ.
तफ़ाक़्क़ा, पु. ವ್ಯತ್ಯಾಸ; ಭೇದಭಾವ, ವೈಮನಸ್ಯ.
तफ़रीक़, स्त्री. ಭೇದ, ವ್ಯತ್ಯಾಸ, ಅಂತರ
तफ़रीह, स्त्री. ಖುಷಿ, ಉಲ್ಲಾಸ, ಹರ್ಷ; ಪರಿಹಾಸ, ಹಾಸ್ಯ; ಮನೋರಂಜನೆ, ವಿನೋದ; ಕಾಲಾಟ, ವಿಹಾರ; ನವೀನತೆ
तफ़रीहन्, क्रिवि. ತಮಾಷೆಗಾಗಿ, ಹಾಸ್ಯಕ್ಕಾಗಿ.
तफ़सीर, स्त्री. ಟೀಕೆ, ವ್ಯಾಖ್ಯಾನ.
तफ़सील, स्त्री. ಬೇರೆ ಮಾಡುವಿಕೆ, ಪೃಥಕ್ಕರಣ; ವ್ಯಾಖ್ಯಾನ; ತಪಶೀಲು, ವಿವರ, ಮಾಹಿತಿ; ಷರಾ, ಟೀಕು.
तफ़सीलवार, क्रिवि. ವಿವರವಾಗಿ.
तफ़ावत, पु. ದೂರ; ಅಂತರ; ವ್ಯತ್ಯಾಸ; ಭೇದಭಾವ, ಒಡಕು.
तफ़्त, वि. ಉಷ್ಣ, ಬಿಸಿ.
तब, स्त्री. ತಾಪ, ಕಾವು. क्रिवि. ಆಗ, ಆವಾಗ. तब से=ಆವೊದಲುಗೊಂಡು
तबई, वि. ಸ್ವಾಭಾವಿಕವಾದ; ನೈಜ.
तबक़, पु. ಲೋಕ; ಪದರ, ಮಡಿಕೆ; ಲೋಹಗಳ ರೇಕು, ವರಕು; ತಟ್ಟೆ, ತಬಕು, ತಳಿಗೆ.
तबक़गर, पु. ಚಿನ್ನಬೆಳ್ಳಿಯ ರೇಕು ಮಾಡುವವ.
तबक़चा, पु. ಸಣ್ಣ ತಟ್ಟೆ.
तबक़ा, पु. ಖಂಡ, ಭಾಗ; ಪದರ; ಲೋಕ; ಜನಾಂಗ.
तबक़िया, पु. = तबक़गर.
तबदील, स्त्री. ಪರಿವರ್ತನೆ; ಬದಲಾವಣೆ; ಮಾರ್ಪಾಟು.
तबदीली, स्त्री. ಬದಲಾವಣೆ; ವರ್ಗಾವರ್ಗಿ, ವರ್ಗಾಯಿಸುವಿಕೆ.
तबर, पु. ಕೊಡಲಿ, ಪರಶು.
तबरज़द, पु. ಕಲ್ಲುಸಕ್ಕರೆ.
तबरज़न, पु. ಕೊಡ್ಲಿಯುವ; ಕಟ್ಟಿಗೆ ಕಡಿಯುವವ.
तबर्रुक, पु. ಆಶೀರ್ವಾದ; ಅನುಗ್ರಹ; ಪ್ರಸಾದ; ಅಭಿನಂದನೆ.
तबल, पु. ಡೋಲು, ನಗಾರಿ.

तबलक़, पु. ಕಾಗದದ ಕಟ್ಟು.

तबलची, तबलिया, पु. ತಬಲಾ ಬಾರಿಸುವವ, ಮದ್ದಲೆಗಾರ.

तबला, पु. ಮೃದಂಗದಂತಹ ಒಂದು ವಾದ್ಯ, ತಬಲಾ, ಮದ್ದಲೆ; ಸಣ್ಣ ಪೆಟ್ಟಿಗೆ.

तबाक़, पु. ತಟ್ಟೆ, ತಬಕು.

तबादला, पु. ಬದಲಾವಣೆ; ಸ್ಥಾನ ಪರಿವರ್ತನ, ಸ್ಥಾನ ಪಲ್ಲಟ; ವರ್ಗ.

तबाबत, स्त्री. ಚಿಕಿತ್ಸೆ, ಔಷಧ.

तबाशीर, पु. ತವಕ್ಷೀರ, ಬಿದಿರುಪ್ಪು.

तबाह, वि. ಹಾಳಾದ, ನಾಶವಾದ; ಕೆಟ್ಟ.

तबाही, स्त्री. ನಾಶ, ಹಾಳು; ದೌರ್ಭಾಗ್ಯ.

तबीअत, तबीयत, स्त्री. ಚಿತ್ತ, ಮನೋಭಾವ; ದೇಹಸ್ಥಿತಿ; ಪ್ರಕೃತಿ; ಸ್ವಭಾವ.

तबीअतदार, वि. ಭಾವಜ್ಞ, ರಸಜ್ಞ.

तबीअतदारी, स्त्री. ರಸಜ್ಞತೆ.

तबीब, पु. ವೈದ್ಯ, ಚಿಕಿತ್ಸಕ.

तबीबी, स्त्री. ವೈದ್ಯನ ಕೆಲಸ; ವೈದ್ಯವೃತ್ತಿ.

तबेला, पु. ತಬೇಲಿ, ಕುದುರೆ ಲಾಯ.

तभी, क्रिवि. ಆಗಲೇ, ಆವಾಗಲೇ.

तमंचा, पु. ಸಣ್ಣ ತುಪಾಕಿ, ಕೋವಿ; ಬಾಗಿಲಿನ ಕಲ್ಲು.

तमक, पु. ಉದ್ವೇಗ, ಆವೇಶ; ಹುರುಪು; ರೋಷ.

तमकनत, पु. ಗಾಂಭೀರ್ಯ, ಘನತೆ.

तमकना, अक्रि. ಮಿಣುಕು; ರೇಗು, ಸಿಡುಗುಟ್ಟು, ಸಿಂಡರಿಸು.

तमकीन, वि. ಗಂಭೀರ, ಘನವಾದ.

तमगा, पु. ಪದಕ, "ಮೆಡಲು".

तमतमाना, अक्रि. ಮಿಣುಕು; ಮುಖ ಕೆಂಪಾಗು; ಸಿಂಡರಿಸು, ಸಿಡುಗುಟ್ಟು.

तमन्ना, स्त्री. ಬಯಕೆ, ಇಚ್ಛೆ; ಭರವಸೆ.

तमसील, पु. ಉದಾಹರಣೆ, ದೃಷ್ಟಾಂತ.

तमस्सुक, पु. ಕರಾರುಪತ್ರ, 'ಬಾಂಡು'.

तमहीद, स्त्री. ಸರಿಪಡಿಸುವಿಕೆ; ಕ್ರಮಪಡಿಸುವಿಕೆ; ಏರ್ಪಾಡು, ವ್ಯವಸ್ಥೆ; ಭೂಮಿಕೆ, ಪೀಠಿಕೆ.

तमा, पु. ರಾತ್ರಿ; ಆಶೆ; ಲೋಭ.

तमाकू, तमाखू, पु. ಹೊಗೆಸೊಪ್ಪು; ಹುಕ್ಕಾ ಸೇದಲು ಉಪಯೋಗಿಸುವ ಹೊಗೆಸೊಪ್ಪಿನ ಉಂಡೆ, ಗುಡಾಕು.

तमाचा, पु. ಕೆನ್ನೆ ಏಟು, ತಪರಾಕು.

तमादी, स्त्री. ವಾಯಿದೆಯ ಪೂರ್ತಿ, ಕಾಲಾವಧಿ.

तमान, पु. ಒಂದು ಬಗೆ ಷರಾಯಿ.

तमानियत, स्त्री. ಶಾಂತಿ, ನೆಮ್ಮದಿ.

तमाम, वि. ಎಲ್ಲಾ, ಸಮಸ್ತ; ಪೂರ್ತಿ, ಪೂರ್ಣ; ಸಮಾಪ್ತ.

तमामा, पु. ಸಂಪೂರ್ಣತೆ, ನೆರಕೆ; ಕೊನೆ, ಸಮಾಪ್ತಿ; ಕಲಾಬತ್ತಿನಪಟ್ಟಿ.

तमामी, स्त्री. ರೇಷ್ಮೆ ಬಟ್ಟೆ; ಸಮಾಪ್ತಿ; ಪೂರ್ತಿ.

तमाशबीन, वि. ಲಂಪಟ, ವಿಲಾಸಿ.

तमाशबीनी, स्त्री. ಲಂಪಟತೆ, ವಿಲಾಸ.

तमाशा, पु. ವಿಹಾರ; ಹುಡುಗಾಟಿಕೆ; ತಮಾಷೆ, ವಿನೋದ; ಪ್ರದರ್ಶನ; ಅದ್ಭುತ ಕೆಲಸ ಅಥವಾ ವಸ್ತು.

तमाशाई, पु. ತಮಾಷೆ ನೋಡುವವ,

ಪ್ರೇಕ್ಷಕ, ನೋಟಕ.

तमीज़, ಸ್ತ್ರೀ. ವಿವೇಚನೆ, ವಿವೇಕ; ಅರಿವು, ಜ್ಞಾನ; ಶಿಷ್ಟಾಚಾರ.

तमोली, पु. = तंबोली.

तय, वि. ಗೊತ್ತುಮಾಡಿದ, ನಿಶ್ಚಯಿಸಿದ; ಮುಗಿಸಿದ; ಪಾರಾದ, ದಾಟಿದ. तय करना = ಗೊತ್ತುಮಾಡು; ನಿಗದಿಮಾಡು, ನಿಶ್ಚಯಿಸು; ದಾಟು.

तय्यार, वि. = तैयार.

तर, वि. ತೋಯ್ದ, ಒದ್ದೆಯಾದ, ನೆನೆದ, ತಣ್ಣಗಾದ, ಹಸಿ; ಹಣವಂತ. तर-वतर = ಚೆನ್ನಾಗಿ ತೋಯ್ದ, ನೆನೆದ.

तरई, ಸ್ತ್ರೀ. ದೂಲ.

तरक, पु. ತರ್ಕ; ಊಹಾಪೋಹ; ಕಥನ. ಸ್ತ್ರೀ. ಒಂದು ಪುಟ ಬರೆದು ಮುಗಿಯುತ್ತಲೆ ಕೆಳಗಡೆ ಅಂಚಿನಲ್ಲಿ ಬರೆಯುವ ಮುಂದಿನ ಪುಟದ ಪ್ರಾರಂಭದ ಶಬ್ದ.

तरकना, अक्रि. ಪರ್ಯಾಲೋಚಿಸು; ಕುಣಿ, ನೆಗೆದಾಡು.

तरकश, तरकस, पु. ಬತ್ತಳಿಕೆ, ತೂಣೀರ, ಮೂಡಿಗೆ.

तरकसी, ಸ್ತ್ರೀ. ಚಿಕ್ಕ ಬತ್ತಳಿಕೆ.

तरका, पु. ಪಿತ್ರಾರ್ಜಿತ; ವಾರಸುದಾರನಿಗೆ ದೊರೆಯುವ ಆಸ್ತಿ.

तरकारी, ಸ್ತ್ರೀ. ತರಕಾರಿ; ಕಾಯಿಪಲ್ಯ; ಪಲ್ಯ, ತಾಳದ; ಬೇಯಿಸಿದ ಮಾಂಸ.

तरकी, ಸ್ತ್ರೀ. ಕಿವಿಯ ಓಲೆ, ಕರ್ಣಿಕೆ.

तरकीब, ಸ್ತ್ರೀ. ಮಿಶ್ರ; ಹೋಲಿಕೆ, ತುಲನೆ; ಜೋಡಣೆ; ಹೊಂದಿಕೆ; ರಚನೆ, ಡೌಲು; ಪ್ರಕಾರ, ರೀತಿ; ಯುಕ್ತಿ, ಉಪಾಯ.

तरकुली, ಸ್ತ್ರೀ. ಕಿವಿಯ ಓಲೆ.

तरक्की, ಸ್ತ್ರೀ. ಏಳಿಗೆ, ಪ್ರಗತಿ; ಉನ್ನತಿ; ಮೇಲ್ಪಾಡು; ವೃದ್ಧಿ, ಇಜಾಫೆ.

तरखा, पु. ನೀರಿನ ಸೆಳೆತ, ಹೊಯಿಲು.

तरखान, पु. ಬಡಗಿ, ಸುತಾರ.

तरग़ीब, पु. ಪ್ರೇರಣೆ, ಪ್ರಚೋದನೆ; ಪ್ರಲೋಭನೆ.

तरजना, अक्रि. ಗದರಿಸು, ಹಂಗಿಸು.

तरणि, पु. ಸೂರ್ಯ.

तरणी, ಸ್ತ್ರೀ. ದೋಣಿ, ಓಡ.

तरतरा, पु. ಒಂದು ವ್ಯಂಜನ.

तरतराना, अक्रि. ಬಡಬಡಿಸು; ಜಂಭ ಕೊಚ್ಚು.

तरतराहट, ಸ್ತ್ರೀ. ಜಂಭ ಕೊಚ್ಚುವಿಕೆ.

तरतीब, ಸ್ತ್ರೀ. ಕ್ರಮ, ವ್ಯವಸ್ಥೆ; ಪರಿಪಾಠಿ; ರೀತಿ.

तरतीबवार, क्रिवि. ಕ್ರಮವಾಗಿ, ಕ್ರಮಶಃ; ಕ್ರಮಾನುಸಾರವಾಗಿ.

तरदीद, ಸ್ತ್ರೀ. ಖಂಡನೆ; ರದ್ದುಮಾಡುವಿಕೆ; ಮುರಿಯುವಿಕೆ.

तरद्दुद, पु. ಹಿಂದುಮುಂದು ನೋಡುವಿಕೆ; ಯೋಚನೆ; ಗಲಿಬಿಲಿ, ಕಳವಳ; ಪ್ರಯತ್ನ; ಅಭಿವೃದ್ಧಿ; ಹಂಚಿಕೆ, ಉಪಾಯ.

तरना, अक्रि. ದಾಟು, ಪಾರಾಗು.

तरनी, ಸ್ತ್ರೀ. ದೋಣಿ, ನಾವೆ; ಮಿಠಾಯಿಯ ತಟ್ಟೆಯಿಡುವ ಅಡ್ಡಣಿಗೆ, ಅಡ್ಡಿಗೆ.

तरन्नुम, पु. ಹಾಡುವಿಕೆ; ರಾಗ ಎಳೆಯುವಿಕೆ; ಹಾಡು, ಗೀತ.

तरपत, पु. ಅನುಕೂಲ್ಯ, ಸೌಖ್ಯ.

**तरपना**, अक्रि. = तड़पना.
**तरपर**, क्रिवि. ಒಂದರವೇಲೊಂದಾಗಿ.
**तरफ़**, स्त्री. (उपसर्ग). ದಿಕ್ಕು, ಪಕ್ಕ; ಕಡೆ, ಪಕ್ಷ, ಪರ; ತುದಿ, ಎಲ್ಲೆ.
**तरफ़दार**, वि. ಒಂದು ಪಕ್ಷಕ್ಕೆ ಸೇರಿದವ; ಸಹಾಯಕ; ಪಕ್ಷಪಾತ ಮಾಡುವವ; ಅನುಚರ.
**तरफ़दारी**, स्त्री. ಪಕ್ಷಪಾತ; ಒತ್ತಾಸೆ.
**तरफ़ैन**, पु. ಉಭಯಪಕ್ಷ
**तरफराना**, अक्रि = तड़पना.
**तरब**, स्त्री. ಹರ್ಷ, ಸಂತೋಷ, ಮಜಾ.
**तरबगाह**, स्त्री. ಸಂತೋಷದ ಸ್ಥಳ, ಮಜಾ ಮಾಡುವ ಸ್ಥಳ.
**तरबियत**, स्त्री. ಸಂರಕ್ಷಣೆ, ಸಾಕಣೆ; ಶಿಕ್ಷಣ, ತರಬೇತು; ತಿದ್ದುವಿಕೆ.
**तरबूज़**, पु. ಕಲ್ಲಂಗಡಿ ಹಣ್ಣು.
**तरमीम**, स्त्री. ತಿದ್ದುಪಡಿ; ಸುಧಾರಣೆ; ಬದಲಾವಣೆ.
**तरवन**, पु. ಕಿವಿಯ ಓಲೆ.
**तरवा**, पु. = तलवा.
**तरवार**, स्त्री. = तलवार.
**तरशना**, अक्रि. ಕಡಿಯಲ್ಪಡು; ಕೆತ್ತಲ್ಪಡು.
**तरशवाना**, सक्रि. तराशना का प्रे.रूप
**तरस**, पु. ಕಾರುಣ್ಯ, ಕನಿಕರ, ಮರುಕ. तरस खाना = ಕನಿಕರ ಪಡು.
**तरसना**, अक्रि. ಬಯಸು; ಹಂಬಲಿಸು, ಹಾತೊರೆ; ಬೇಡು; ಕನಿಕರ ಪಡು.
**तरसमंद**, वि. ದಯಾಳು, ಕರುಣಾಳು.
**तरसा**, पु. ಕಪಿಲೆಯ ಬಾನೆ.
**तरसाना**, सक्रि. ಆಶೆ ತೋರಿಸು.
**तरसील**, स्त्री. ಕಳುಹಿಸುವಿಕೆ.
**तरसों**, पु. ಆಚೇನಾಡಿದ್ದು, ಆಚೇನೊನ್ನೆ.
**तरह**, स्त्री. ಪಾಯ ಹಾಕುವಿಕೆ; ವಿಧ, ರೀತಿ, ತರಹ; ಮೈಕಟ್ಟು, ರೂಪ; ಯುಕ್ತಿ; ಉಪಾಯ; ಸ್ಥಿತಿ. तरह देना = ಲಕ್ಷ್ಯ ಕೊಡದಿರು, ಕಂಡೂ ಕಾಣದಿರು.
**तरहटी**, स्त्री. ತಗ್ಗುನೆಲ, ಬಯಲು.
**तरहदार**, वि. ರೂಪವಂತ, ಚೆಲುವ.
**तरहदारी**, स्त्री. ಅಂದ, ಚೆಲುವು; ಶೈಲಿ.
**तराई**, स्त्री. ಘಟ್ಟದ ಪ್ರದೇಶ, ಕಣಿವೆ; ಬಯಲುಸೀಮೆ, ಮೈದಾನ; ತಗ್ಗುನೆಲ
**तराज़ू**, स्त्री. ತಕ್ಕಡಿ, ತ್ರಾಸು.
**तराना**, पु. ಧ್ವನಿ; ರಾಗ; ಒಂದು ಬಗೆ ಹಾಡು. सक्रि. ಪಾರಾಗಿಸು, ದಡ ಹಾಯಿಸು.
**तराबोर**, वि. ಚೆನ್ನಾಗಿ ನೆನೆದ, ತೋಯ್ದ.
**तरामीरा**, पु. ಒಂದು ಮರ.
**तरारा**, पु. ಹಾರಾಟ; ನೀರಿನ ಧಾರೆ.
**तरावट**, स्त्री. ಹೊಸದು; ನವೀನತೆ; ಹಸುರು; ಒದ್ದೆ, ತೇವ, ಶೀತ; ಸಾಧಾರಣ ಊಟ.
**तरावत**, स्त्री. ಹಸಿ; ಪೈರುಪಚ್ಚೆ.
**तराश**, स्त्री. ಕಡಿಯುವಿಕೆ, ಕತ್ತರಿಸುವಿಕೆ; ಕೆತ್ತುವಿಕೆ, ರೂಪಿಸುವಿಕೆ; ನಿರ್ಮಾಣ; ರೂಪ, ರೀತಿ.
**तराशना**, सक्रि. ಕಡಿ; ಸವರು, ಕತ್ತರಿಸು; ಕೆತ್ತು; ದಾಡಿಯನ್ನು ಕತ್ತರಿಸು.

तराशा, पु. ಕತ್ತರಿಸಿದ ತುಂಡು, ಚಕ್ಕೆ.

तरियाना, सक्रि. ಕೆಳಕ್ಕೆ ತಳ್ಳು; ಮು ಚ್ಚು. अक्रि. ಕೆಳಕ್ಕಿಳಿ, ಕುಸಿ.

तरी, स्त्री. ನಾವೆ, ನೌಕೆ; ಹೊಸದು; ಒದ್ದೆ, ತೇವ, ಶೀತ; ನೀರು; ಜವುಗು ನೆಲ, ಹುದಿಲು; ತಗ್ಗು ನೆಲ.

तरीक़, स्त्री. ದಾರಿ, ಹಾದಿ; ರೀತಿ.

तरीक़त, स्त्री. ದಾರಿ, ಹಾದಿ; ನಿಯಮ; ವಿಧ, ರೀತಿ; ಧಾರ್ಮಿಕ ಪಥ, ಮತ.

तरीक़ा, पु. ವಿಧ, ರೀತಿ; ಚಾಳಿ; ರೂಢಿ, ಪದ್ಧತಿ; ಉಪಾಯ.

तरुआ, पु. ಕುದುಪಲಕ್ಕಿ.

तरेंदा, पु. ಬೆಂಡು; ಈಜುಗಾಯಿ; ತೆಪ್ಪ

तरे, क्रिवि. = तले.

तरेटी, स्त्री. = तरहटी.

तरेर, स्त्री. ದುರದುರನೆ ನೋಡುವಿಕೆ.

तरेरना, सक्रि. ಹುಬ್ಬುಗಂಟಿಕ್ಕು; ದುರ ದುರನೆ ನೋಡು, ದಿಟ್ಟಿಸಿ ನೋಡು.

तरोई, स्त्री. = तुरई.

तरौना, पु. ಕಿವಿಯ ಓಲೆ, ಕರ್ಣಿಕೆ.

तर्क, पु. ತರ್ಕ; ವಿವೇಚನೆ; ವ್ಯಂಗ್ಯ; ಪರಿತ್ಯಾಗ, ತೊರೆಯುವಿಕೆ.

तर्कना, सक्रि. ತ್ಯಜಿಸು, ತೊರೆ, ಬಿಡು.

तर्ज़, पु. ವಿಧ, ತರಹ; ರೀತಿ; ರೂಪ; ಮಾದರಿ.

तर्जन, पु. ಗದರಿಸುವಿಕೆ, ಮೂದಲೆ. तर्जन गर्जन = ಜಂಕಣೆ, ಗದರಿಕೆ.

तर्जना, सक्रि. ಗದರಿಸು, ಹಂಗಿಸು.

तर्जीह, स्त्री. ಉತ್ಕೃಷ್ಟತೆ; ಉತ್ತಮ.

तर्जुमा, पु. ಭಾಷಾಂತರ, ಅನುವಾದ.

तर्जुमा-नवीस, पु. ಭಾಷಾಂತರಕಾರ.

तर्रार, पु. ಗಂಟುಗೊಯ್ಕ, ಕತ್ತರಿಗಳ್ಳ; ಮೋಸಗಾರ; ವಾಚಾಲ.

तर्रारा, पु. ವೇಗ, ತ್ವರೆ; ತೀಕ್ಷ್ಣ; ಚು ರುಕು.

तर्स, पु. ಹೆದರಿಕೆ; ಭಯ, ಭೀತಿ; ಕರುಣೆ, ಕನಿಕರ.

तर्सनाक, तर्सां, वि. ಭಯಂಕರ; ಭೀರು, ಪುಕ್ಕಲು.

तल, पु. ಕೆಳಭಾಗ, ಬುಡ; ತಳ, ಅಡಿ; ಅಂಗಾಲು; ಅಂಗೈ; ಹೊರವೈ, ಮೇಲ್ಮೈ; ಮೇಲ್ಛಾವಣಿ, ಮಾಳಿಗೆ.

तलक, क्रिवि. ತನಕ, ವರೆಗೆ, ಗಂಟ.

तलघर, पु. ನೆಲಮನೆ, ನೆಲಮಾಳಿಗೆ.

तलछट, स्त्री. ಗಸಿ, ಚರಟ; ಒಂಡು, ರಾಡಿ, ಮಡ್ಡಿ; ಎಂಜಲು, ಉಚ್ಛಿಷ್ಟ.

तलना, सक्रि. ಕರಿ, ಹುರಿ, ಗಾರಿಸು. अक्रि. ಹುರಿಯಲ್ಪಡು; ಕರಿಯಲ್ಪಡು

तलपट, वि. ನಷ್ಟವಾದ, ಹಾಳಾದ; ತಲೆಕೆಳಗಾದ.

तलफ़, स्त्री. ನಾಶ, ಹಾಳು; ಖರ್ಚು, ವ್ಯಯ.

तलफना, अक्रि. = तड़पना.

तलफ़ी, स्त्री. ನಾಶ, ನಷ್ಟ.

तलफ़्फ़ुज़, पु. ಕಥನ; ಉಚ್ಚಾರಣೆ.

तलब, स्त्री. ಹುಡುಕುವಿಕೆ, ಅನ್ವೇಷಣೆ; ಇಚ್ಛೆ, ಅಪೇಕ್ಷೆ; ಅಗತ್ಯ; ಯಾಚನೆ, ಬೇಡಿಕೆ; ಕರೆ, ಬುಲಾವಾ; ಸಂಬಳ, ತಲಬು.

तलबगार, वि. ಬೇಡುವವ, ಅಪೇಕ್ಷಕ.

**तलबाना**, पु. ಸಾಕ್ಷಿಪಡಿ, ಭತ್ಯ; ಸಮ್ಮನು ಜಾರಿಮಾಡುವುದಕ್ಕೆ ಕೊಡುವ ರುಸುಂ.

**तलबी**, स्त्री. ಕರೆ, ಆಹ್ವಾನ, ಬುಲಾವಾ, " ಸಮ್ಮನು ".

**तलबीस**, स्त्री. ಮುಚ್ಚಳ; ಮೋಸ.

**तलबेली**, स्त्री. ಕಳವಳ, ಕಾತರತೆ.

**तलमलाना**, अक्रि. ತಳಮಳಿಸು, ತಲ್ಲಣಿಸು, ಹಳವಳಿಸು; ಕಾತರಗೊಳ್ಳು.

**तलमली**, स्त्री. ತಳಮಳ, ಹಳವಂಡ.

**तलवरिया**, पु. ಕತ್ತಿಸಾಧಕ, ಕತ್ತಿಗಾರ. स्त्री. ಕತ್ತಿ.

**तलवा**, पु. ಪಾದತಲ, ಅಡಿ; ಹಿಮ್ಮಡಿ.

**तलवार**, स्त्री. ಕತ್ತಿ, ಬಾಳು, ಪಟ್ಟಾಕತ್ತಿ, ಕರವಾಲ.

**तलहटी**, स्त्री. ಕೆಳಭಾಗ; ತಗ್ಗುನೆಲ; ಬಯಲು ಸೀಮೆ.

**तला**, पु. ಅಡಿ, ಬುಡ; ಎಕ್ಕಡದ ಕೆಳಗಿನ ಚರ್ಮ, ಅಟ್ಟೆ.

**तलाई**, स्त्री. ಸಣ್ಣ ಕೆರೆ.

**तलाक़**, पु. ಪತ್ನೀ ಪರಿತ್ಯಾಗ, ವಿವಾಹ ವಿಚ್ಛೇದ, ಫಟಸ್ಫೋಟ, ಸೋಡ.

**तलाक़त**, स्त्री. ವಾಕ್ಪಟುತ್ವ, ವಾಚಾಲತೆ

**तलाक़ी**, वि. ಪರಿತ್ಯಕ್ತ, ತ್ಯಜಿಸಿದ; ವಿವಾಹವಿಚ್ಛೇದ ಹೊಂದಿದ.

**तलातुफ़**, पु. ದಯೆ; ದಾಕ್ಷಿಣ್ಯ.

**तलातुम**, पु. ಹೊಡೆತ, ಬಡಿದಾಟ.

**तलाना**, सक्रि. ಹುರಿಸು, ಕರಿಸು.

**तलाफ़ी**, स्त्री. ಪ್ರಾಯಶ್ಚಿತ್ತ; ಈಡು.

**तलाया**, पु. ರಾತ್ರಿಯ ಕಾವಲು, ಲೋಂದು, ಶಬಗಸ್ತಿ.

**तलाव**, पु. ಕೆರೆ, ಸರೋವರ.

**तलावत**, स्त्री. ಚೆಲುವು, ಅಂದ; ಸೊಗಸು.

**तलाश**, स्त्री. ಹುಡುಕುವಿಕೆ, ತಲಾಷಿ; ಅಪೇಕ್ಷೆ, ಇಚ್ಛೆ.

**तलाशना**, सक्रि. ಹುಡುಕು, ಅರಸು.

**तलाशी**, स्त्री. ತಲಾಷಿ, ಶೋಧನೆ, ಝುಡ್ತಿ.

**तली**, स्त्री. ತಳ, ಬುಡ; ಅಂಗ್ಯೆ; ಅಂಗಾಲು; ಗಸಿ, ರಾಡಿ; ಒಂಡು, ಚರಟ.

**तलुआ**, पु. = तलवा.

**तले**, क्रिवि. ಕೆಳಗೆ, ಬುಡದಲ್ಲಿ. तले ऊपर = ಒಂದರ ಮೇಲೊಂದಾಗಿ; ಬುಡಮೇಲಾಗಿ; ತಲೆಕೆಳಗಾಗಿ.

**तलेटी**, स्त्री. ಬುಡ, ತಳ; ತಗ್ಗುನೆಲ; ಬಯಲು ಸೀಮೆ.

**तलैया**, स्त्री. ಕೆರೆ, ಕೊಳ.

**तलौंछ**, स्त्री. ಗಸಿ, ರಾಡಿ, ಚರಟ.

**तल्ख़**, वि. ಕಹಿಯಾದ, ಕಟು; ಖಿನ್ನ.

**तल्ख़ी**, स्त्री. ಕಟುತ್ವ, ಕಹಿ; ಕಾರ.

**तल्ला**, पु. ಕೆಳಗಿನ ಪದರ; ಒಳಮಡಿಕೆ, ಅಸ್ತರು; ಸಾಮೀಪ್ಯ.

**तवंगर**, वि. ಶಕ್ತಿವಂತ; ಹಣವಂತ.

**तवक्कुल**, पु. ಭರವಸೆ; ನಂಬಿಕೆ; ದೇವರಲ್ಲಿ ನಂಬಿಕೆ; ಆಸ್ತಿಕತೆ.

**तवज्जुह**, स्त्री. ಗಮನ, ನಿಗಾ; ದಯಾದೃಷ್ಟಿ, ಕಟಾಕ್ಷ.

**तवना**, अक्रि. ಕಾಯು, ಕುದಿ, ರೇಗು.

**तवल्ला**, पु. ಪ್ರೇಮ, ಪ್ರೀತಿ.

**तवा**, पु. ತವೆ, ಕಾವಲಿ; ಹುಕ್ಕಾವಿನ ನಳಿಗೆಯ ಬಾಯನ್ನು ಮುಚ್ಚುವ ಬೋಕಿ ಹೆಂಚು, ಹಲ್ಲೆ.

**तवाज़ा, तवाज़ु**, स्त्री. ಸತ್ಕಾರ, ಆತಿಥ್ಯ, ಔತಣ; ದಾನ; ವಿನಯ.

**तवाना**, वि. ಬಲಿಷ್ಠ; ಶಕ್ತ.

**तवाबी**, पु. ಅನುಗಾಮಿ, ಅನುಚರ.

**तवायफ़**, स्त्री. ಗುಂಪು, ದಳ; ಸೂಳೆ, ನಾಯಕಸಾನಿ; ಸೂಳೆಯರ ಗೋಷ್ಠಿ.

**तवारा**, पु. ಉರಿ, ತಾಪ.

**तवारीख़**, स्त्री. ಚರಿತ್ರೆ, ಇತಿಹಾಸ.

**तवालत**, स्त्री. ಲಂಬಿಸುವಿಕೆ; ವಿಳಂಬ; ನಿಡಿದು, ಲಾಂಬಿ, ಉದ್ದ; ತಂಟೆ, ತಕರಾರು.

**तवील**, वि. ಉದ್ದ, ಲಂಬ; ದೊಡ್ಡ.

**तवेला**, पु. = तबेला.

**तशख़ीस**, स्त्री. ನಿಷ್ಕರ್ಷೆ; ಗುರುತು ಹಿಡಿಯುವಿಕೆ; ರೋಗಲಕ್ಷಣ, ರೋಗ ನಿದಾನ.

**तशदीद**, स्त्री. ಬಲಪಡಿಸುವಿಕೆ; ಅತ್ಯಾಚಾರ; ದ್ವಿತ್ವ.

**तशन्नुज**, पु. ಸಂಧಿವಾತ, ಸೆಟೆಬೇನೆ.

**तशफ़्फ़ी**, स्त्री. ಉಪಶಮನ; ಸಾಂತ್ವನ.

**तशबीह**, स्त्री. ಉಪಮೆ, ಹೋಲಿಕೆ.

**तशरीफ़**, स्त्री. ಮಹತ್ವ; ಮಾನ, ಗೌರವ; ಬಿರುದಿನ ಉಡುಪುಗಳನ್ನು ದಯಪಾಲಿಸುವಿಕೆ; ಗೌರವಾರ್ಥವಾಗಿ ಕೊಟ್ಟ ಉಡುಪು. तशरीफ़ रखना = ಕುಳಿತುಕೊಳ್ಳು, ಮೂರ್ತಮಾಡು. तशरीफ़ लाना = ದಯಮಾಡಿಸು, ಬಿಜಯಂಗೈಯು.

**तशरीह**, स्त्री. ಭಾಷ್ಯ, ವ್ಯಾಖ್ಯಾನ; ಶರೀರಶಾಸ್ತ್ರ.

**तशवीश**, स्त्री. ಗಾಬರಿ; ಗಲಿಬಿಲಿ; ಭಯ, ಆಶಂಕೆ; ದುಃಖ, ವ್ಯಥೆ.

**तशहीर**, स्त्री. ಪ್ರಸಿದ್ಧಪಡಿಸುವಿಕೆ; ಪ್ರಕಟಿಸುವಿಕೆ; ಪ್ರಸಿದ್ಧಿ; ಘೋಷಣೆ.

**तशाबुह**, पु. ಸಾಮ್ಯ, ಹೋಲಿಕೆ.

**तशारीफ़**, स्त्री. ಮಾನ್ಯತೆ, ಗೌರವ, ಘನತೆ.

**तश्त**, पु. ದೊಡ್ಡ ಡಬರಿ; ಬಟ್ಟಲು.

**तश्तरी**, स्त्री. ಸಣ್ಣ ಬಟ್ಟಲು; ತಟ್ಟೆ, ತಾಂಬಾಣ.

**तस**, वि. ಹಾಗಿನ. क्रिवि. ಹಾಗೆ.

**तसकीन**, स्त्री. ನೆಮ್ಮದಿ, ಶಾಂತಿ; ಸಮಾಧಾನ, ಸಂತೃಪ್ತಿ; ಆಶ್ವಾಸನ.

**तसख़ीर**, स्त्री. ಅಡಗಿಸುವಿಕೆ, ನಿಗ್ರಹ; ಸೆರೆಯಲ್ಲಿಡುವಿಕೆ; ಬಂಧನ; ಮಾಟ ಮಂತ್ರ.

**तसग़ीर**, स्त्री. ಕಡಮೆ ಮಾಡುವಿಕೆ; (ವ್ಯಾಕರಣದಲ್ಲಿ) ಅಲ್ಪಾರ್ಥಕ ಅಥವಾ ಲಘುರೂಪ.

**तसतीर**, स्त्री. ಬರೆಯುವಿಕೆ, ಗೀರು ಹಾಕುವಿಕೆ.

**तसदीक़**, स्त्री. ಸತ್ಯತೆ; ಸತ್ಯ ಪರೀಕ್ಷೆ; ಪ್ರತಿಪಾದನೆ, ಸಮರ್ಥನೆ; ರುಜುವಾತು; ಸಾಕ್ಷ್ಯ, ಪುರಾವೆ.

**तसनीफ़**, स्त्री. ಲೇಖನ, ಪ್ರಬಂಧ; ರಚನೆ, ಕೃತಿ.

**तसफ़िया**, पु. ಶುದ್ಧೀಕರಣ; ಫೈಸಲು,

ನಿರ್ಣಯು.
तसबीर, स्त्री. = तसवीर.
तसबीह, स्त्री. ಜಪಮಾಲೆ.
तसमा, पु. ತೊಗಲಿನ ಬಾರು, ವಿಣಿ.
तसमिया, पु. ನಾಮಕರಣ; ಭಗವಂತನ ನಾಮವನ್ನು ಜಪಿಸುವಿಕೆ.
तसरीफ़, स्त्री. ಬದಲಾವಣೆ; ಪರಿವರ್ತನೆ
तसरीह, स्त्री. = तशरीह.
तसला, पु. तसली, स्त्री. ಕೊಳಗ ದಪ್ಪಲೆ, ಕವಳಿಗೆ.
तसलीब, स्त्री. ಶಿಲುಬೆಗೆ ಜಡಿಯುವಿಕೆ; ಶೂಲಕ್ಕೇರಿಸುವಿಕೆ.
तसलीम, स्त्री. ಸಲಾಂ; ನಮಸ್ಕಾರ, ವಂದನೆ; ಅಂಗೀಕಾರ, ಒಪ್ಪಿಗೆ, ಸ್ವೀಕಾರ; ಆರೋಗ್ಯ. तसलीमात = ನಮಸ್ಕಾರಗಳು.
तसल्ली, स्त्री. ಆಶ್ವಾಸನ, ಸಾಂತ್ವನ; ಆರಾಮು; ನೆಮ್ಮದಿ, ಶಾಂತಿ; ತೃಪ್ತಿ.
तसवीद, स्त्री. ಕಾಗದದ ಕರಡು ಪ್ರತಿ; ಕಪ್ಪುಮಾಡುವಿಕೆ.
तसवीर, स्त्री. ಚಿತ್ರ; ಭಾವಚಿತ್ರ, ಪಟ; ಪ್ರತಿಮೆ. वि. ಚಿತ್ರದಂಥ, ಸುಂದರ.
तसहीह, स्त्री. ತಿದ್ದುವಿಕೆ; ಶುದ್ಧಿ; ಸಹಿಮಾಡುವಿಕೆ.
तसू, तस्सू, पु. ಒಂದು ಅಂಗುಲ.
तह, स्त्री. ಪದರ, ಪರೆ, ಹೊರಿಕೆ, ಮಡಿಕೆ; ಹೊರಮೈ, ಮೇಲ್ಮೈ; ಮೇಲಣ ಭಾಗ, ತಲ; ಬುಡ, ತಳ; ಅಸ್ತಿಭಾರ, ಪಾಯ; ಗೂಢಾರ್ಥ. तह करना = ಮಡಿಸು, ಗುಂಡಾಳಿಸು, ಮುದುರು.

तहक़ीक़, तहक़ीक़ात, स्त्री. ಶೋಧನೆ, ಅನ್ವೇಷಣೆ, ಅನುಸಂಧಾನ, ತನಿಖೆ.
तहक़ीर, स्त्री. ತಿರಸ್ಕಾರ, ಅನಾದರ; ಅಲಕ್ಷ್ಯ.
तहख़ाना, पु. ನೆಲಮನೆ, ನೆಲಮಾಳಿಗೆ.
तहज़ीब, स्त्री. ಅಲಂಕಾರ; ತಿದ್ದುವಿಕೆ; ನಾಗರಿಕತೆ, ಸಭ್ಯತೆ.
तहज्जी, स्त्री. ಸಿಂದಿಸುವಿಕೆ; ಅಕ್ಷರ ಕೂಡಿಸುವಿಕೆ; ಅಕ್ಷರಮಾಲೆ, ಕಾಗುಣಿತ.
तहत, क्रिवि. ಅಧೀನವಾಗಿ, ಒಳಪಟ್ಟು.
तहदार, वि. ಬುಡವುಳ್ಳ; ಆಳವಾದ.
तहदीद, स्त्री. ಭಯ, ಭೀತಿ.
तहनियत, स्त्री. ಅಭಿನಂದನೆ.
तहपेच, पु. ತಲೆಯ ಪಾಗು ಅಥವಾ ಮುಂಡಾಸಿನ ಒಳಭಾಗದ ಬಟ್ಟೆ.
तहपोशी, स्त्री. ಸೀರೆಯು ಮಾಸದಂತೆ ಒಳಗೆ ಹಾಕುವ ಷರಾಯಿ, ಹೆಂಗಸರ ಒಳ ಉಡುಪು, ಲಂಗ.
तहबंद, पु. ಲುಂಗಿ, ದಟ್ಟಿ.
तहबाज़ारी, स्त्री. ಅಂಗಡಿಯ ಮೇಲಿನ ದಿನವಹಿ ಸುಂಕ, ಅಡಿಕಾಸು.
तहमत, तहमद, स्त्री. ಲುಂಗಿ, ದಟ್ಟಿ.
तहम्मुल, पु. ಸಹನೆ, ತಾಳ್ಮೆ.
तहय्युर, पु. ಆಶ್ಚರ್ಯ, ವಿಸ್ಮಯ.
तहरी, तहिरी, स्त्री. ಒಂದು ತರಹದ ಹುಗ್ಗಿ, ಬಟಾಣಿಭಾತ್.
तहरीक, स्त्री. ಆಂದೋಳನ, ಚಳುವಳಿ; ದುರ್ಬೋಧನೆ, ಚಿತಾವಣೆ.
तहरीर, स्त्री. ಲೇಖ, ಬರಹ, ಲೇಖನ; ಲೇಖನ ಸರಣಿ, ಶೈಲಿ; ಬರೆಯಃವುದರ

ಕೂಲಿ; ಬಿಡುಗಡೆ ಮಾಡುವಿಕೆ.

तहरीरी, वि. ಬರೆದ, ಲಿಖಿತ.

तहलका, पु. ಸಾವು, ಮೃತಿ; ನಾಶ; ಕಳವಳ, ತಲ್ಲಣ.

तहलील, स्त्री. ಜೀರ್ಣ.

तहवील, स्त्री. ಹವಾಲೆ, ವಶ; ಅಮಾನತ್ತು, ಠೇವಣಿ; ಖಜಾನೆ, ಬೊಕ್ಕಸ; ಸಂಕ್ರಮಣ, ಸಂಕ್ರಾಂತಿ.

तहवीलदार, पु. ಬೊಕ್ಕಸದವ, ಖಜಾನ್ಚಿ

तहवीलदारी, स्त्री. ಖಜಾನ್ಚಿ ಕೆಲಸ.

तहव्वर, पु. ಪೌರುಷ, ಶೌರ್ಯ.

तहस-नहस, वि. ಚಲ್ಲಾಪಿಲ್ಲಿಯಾದ; ಗಲಿಬಿಲಿಯಾದ; ಧ್ವಂಸವಾದ.

तहसील, स्त्री. ಹೊಂದುವಿಕೆ, ಪಡೆಯುವಿಕೆ; ತೆರಿಗೆ ಎತ್ತುವಿಕೆ, ತೀರ್ವೆಯ ವಸೂಲಿ; ವಸೂಲಾತಿ; ವಸೂಲಿ ಹಣ; ತಾಸೀಲ್ದಾರ(ಅಮುಲ್ದಾರ)ರ ಕಚೇರಿ. तहसील करना = ಹೊಂದು, ಪಡೆಕೊಳ್ಳು; ತೆರಿಗೆ ಎತ್ತು; ವಸೂಲು ಮಾಡು.

तहसीलदार, पु. ತೀರ್ವೆ ವಸೂಲು ಮಾಡುವವ; ತಾಸೀಲ್ದಾರ, ಅಮುಲ್ದಾರ

तहसीलदारी, स्त्री. ತಾಸೀಲ್ದಾರರ ಕಚೇರಿ ಅಥವಾ ಉದ್ಯೋಗ; ಅಮುಲ್ದಾರಿಕೆ.

तहसीलना, सक्रि. ವಸೂಲು ಮಾಡು, ತೆರಿಗೆ ಎತ್ತು; ಪೀಡಿಸು, ತಿಪ್ಪಲಿಡು.

तहां, क्रिवि. ಅಲ್ಲಿ; ಆಗ.

तहाना, तहियाना, सक्रि. ಮಡಿಸು; ಸುತ್ತು.

तहासा, पु. ಭಯ; ಚಿಂತೆ.

तहीं, क्रिवि. ಅಲ್ಲೇ.

तहेदस्त, वि. ಬರಿ ಕೈಯಿನವ, ದರಿದ್ರ.

तहोबाला, वि. ತಲೆಕೆಳಗಾಗಿ, ಬುಡಮೇಲಾಗಿ.

ता, सर्व. ಅವನು, ಅವಳು, ಅದು. अव्य. ತನಕ, ವರೆಗೆ, ಆದಕಾರಣ; ಅದುದರಿಂದ. ता कि = ಏಕೆಂದರೆ; ಈ ಉದ್ದೇಶದಿಂದ; ಆಗುವಂತೆ. ता हाल = ಈಗಿನವರೆಗೆ, ತಹಲ್‌ವರೆಗೆ.

तांगा, पु. = टांगा.

तांडव, पु. ತಾಂಡವ; ಕುಣಿತ.

तांत, स्त्री. ಮುಗ್ಗ, ನೂಲು; ತಂತು, ಎಳೆ; ಹೆದೆ; ತಂತಿ, ನರ; ಮೃಗಗಳ ಕರುಳಿನಿಂದ ಮಾಡಿದ ತಂತಿ, ಬೀವು.

तांता, पु. ಶ್ರೇಣಿ, ಸಾಲು, ವರಿಸೆ. तांता लगना = ಸಾಲಿಡು.

तांती, स्त्री. ವರಿಸೆ; ಪರಂಪರೆ; ವಂಶ. पु. ನೆಯಿಗೆಯುವ, ಜಾಡ, ಸಾಲೆಯುವ.

तांबा, पु. ತಾಮ್ರ.

तांबिया, तांबी, स्त्री. ತಾಮ್ರದ ಪಂಚಪಾತ್ರೆ; ಕೊಳಗ.

ताँवर, स्त्री. ಮೂರ್ಛೆ, ಹಮ್ಮುದ.

तांसना, सक्रि. ಗದರಿಸು, ಸತಾಯಿಸು.

ताअत, स्त्री. ಪೂಜೆ; ಸೇವೆ; ಶುಶ್ರೂಷೆ.

ताइदात, स्त्री. ಆಶ್ರಯ, ಸಹಾಯ; ಮೇಲಾರೈಕೆ.

ताइन, पु. ನೇಮಕ, ನಿಯುಕ್ತಿ.

ताइनात, पु. ನೇಮಕ, ನಿಯುಕ್ತಿ, ನೇಮಣೂಕಿ.

ताईं, अव्य. ತನಕ, ಹತ್ತರ; ಪ್ರತಿ;

ಓಸ್ಕರ, ಒಡನೆ.

**ताई**, स्त्री. ದೊಡ್ಡಪ್ಪನ ಹೆಂಡತಿ; ತವೆ; ಬಾಣಲಿ.

**ताईद**, स्त्री. ಸಹಾಯ; ಪಕ್ಷಪಾತ; ಅನುಮೋದನ.

**ताउम्र**, क्रिवि. ಆಯುಷ್ಯವೆಲ್ಲ.

**ताऊ**, पु. ತಂದೆಯ ಅಣ್ಣ, ದೊಡ್ಡಪ್ಪ. बछिया के ताऊ=ಹೆಡ್ಡ, ದಡ್ಡ.

**ताऊन**, पु. ಅಂಟುರೋಗ, ಮಾರಿ, ಮಾರಿಕಾ, ಪಿಡುಗು, "ಪ್ಲೇಗು".

**ताऊस**, पु. ಮಯೂರ, ನವಿಲು; ಸಾರಂಗಿಯಂತಹ ಒಂದು ವಾದ್ಯ.

**ताऊसी**, वि. ನವಿಲಿನಂತಹ.

**ताक**, स्त्री. ನೋಟ; ಗುರಿ; ದುರುಗುಟ್ಟಿ ನೋಡುವಿಕೆ; ಕಾಯುವಿಕೆ, ಜಪ್ಪು, ಹೊಂಚು; ಪ್ರತೀಕ್ಷೆ; ಹುಡುಕುವಿಕೆ; ಲತೆ, ಬಳ್ಳಿ; ದ್ರಾಕ್ಷಿಯ ಬಳ್ಳಿ.

**ताक़**, पु. ಗೋಡೆಯಲ್ಲಿನ ಗೂಡು, ಮಾಡ; ಕಮಾನು; ಕಮಾನು ಕಟ್ಟಡ; ಕಿಟಕಿ. वि. ವಿಷಮ (ಸಂಖ್ಯೆ), ಬೆಸ, ಓಜ; ಈಡಿಲ್ಲದ, ಸಾಟಿಯಿಲ್ಲದ. ताक़ जुफ़्त =ಸರಿಬೆಸದ ಆಟ.

**ताक-झांक**, स्त्री. ಇಣಿಕಿ ನೋಡುವಿಕೆ, ಹೊಂಚಿ ನೋಡುವಿಕೆ.

**ताक़त**, स्त्री. ಬಲ, ಕಸುವು, ಬಲುಮೆ; ತ್ರಾಣ, ಶಕ್ತಿ; ಸಾಮರ್ಥ್ಯ; ಸೈರಣೆ.

**ताक़तवर**, वि. ಬಲಿಷ್ಠ, ಶಕ್ತ.

**ताकना**, सक्रि. ನೋಡು; ದಿಟ್ಟಿಸಿ ನೋಡು, ಸಿಟ್ಟಿಸು; ಇದಿರುನೋಡು, ಕಾಯು; ಜಪ್ಪುಹಾಕು.

**ताक़ी**, वि. ಕಮಾನುಗಳುಳ್ಳ ಕಟ್ಟಡ; ಬೇರೆ ಕಣ್ಣಿನ. पु. ಒಂದು ಬಗೆ ಟೋಪಿ.

**ताकीद**, स्त्री. ಎಚ್ಚರಿಕೆ; ಆಜ್ಞೆ, ಆಣತಿ; ಆದೇಶ; ಕಟ್ಟಪ್ಪಣೆ; ಬಲವಂತ; ಒತ್ತಾಯ.

**ताकीदन्**, क्रिवि. ಎಚ್ಚರಿಕೆ ಕೊಡುವ ರೀತಿಯಲ್ಲಿ; ಕಡಾಖಂಡಿತವಾಗಿ.

**ताकीदी**, वि. ಅತ್ಯಾವಶ್ಯಕವಾದ, ಜರೂರಾದ.

**ताख**, पु. = ताक़.

**ताख़**, पु. ಮುಸುಕು, ಬುರುಕಿ; ಕತ್ತಲೆ.

**ताख़ीर**, स्त्री. ತಡ, ವಿಲಂಬ; ಕಾಲದಬ್ಬುವಿಕೆ, ಕಾಲಹರಣ; ಅಡಚಣೆ, ತಡೆ.

**तागड़ी**, स्त्री. ಉಡುದಾರ, ಕಟಿಸೂತ್ರ.

**तागना**, सक्रि. ಎಳೆ ಹಾಕು, ಟಾಕ ಹಾಕು; ಹೊಲಿ.

**तागपाट**, पु. ಒಂದು ಆಭರಣ.

**तागा**, पु. ನೂಲು, ದಾರ; ತಲೆತೆರಿಗೆ, ತಲೆಗಂದಾಯ.

**ताज**, पु. ಮುಕುಟ, ಕಿರೀಟ; ಪಕ್ಷಿಗಳ ಜುಟ್ಟು, ಹೆಡೆ; ಪೇಟಾ ಅಥವಾ ಮುಂಡಾಸಿನಲ್ಲಿ ಅಲಂಕಾರಕ್ಕಾಗಿ ಸಿಕ್ಕಿಸಿದ ತುಪ್ಪಳ, ತುರಾಯಿ; ಗೋಡೆ ಕುಂಬೆ, ಕಂಕಣ, ಕಂಗೋರೆ, "ಕಾರ್ನಿಸ್"; ಕಟ್ಟಡಗಳ ಶಿಖರ, ಕಲಶ, ಕಳಸ; ಗಂಜೀಫಿನ ಒಂದು ಬಣ್ಣ; ಆಗ್ರಾ ಪಟ್ಟಣದ 'ತಾಜಮಹಲ್' ಕಟ್ಟಡ.

**ताजक**, पु. ಈರಾನಿಯರ ಒಂದು ಜಾತಿ.

**ताज़गी**, स्त्री. ಹಸಿ, ಪಸಿಮೆ; ನವೀನತೆ; ಗೆಲುವು, ಉಲ್ಲಾಸ; ಎಳೆತನ, ಎಳಸು;

ಪಪ್ಪು.

ताजदार, पु. ಕಿರೀಟಧಾರಿ; ರಾಜ.

ताजन, पु. ಚಾವಟಿ, ಕಶೆ, ಚಬುಕು.

ताजपोशी, स्त्री. ಪಟ್ಟಾಭಿಷೇಕ.

ताज़ा, वि. ಹಸಿ; ಹೊಚ್ಚಹೊಸ, ತಾಜಾ; ದಣುವಾರಿದ, ಶಮಿತ; ಗೆಲುವಿನ, ಕುಶಾಲಿನ; ಪುಷ್ಟ. मोटा ताज़ा = ಪುಷ್ಟಪುಷ್ಟ, ಕೊಬ್ಬಿದ.

ताज़ियत, स्त्री. ಒಬ್ಬರ ನಿಧನಕ್ಕಾಗಿ ಸಂತಾಪವನ್ನು ಸೂಚಿಸುವಿಕೆ; ದುಃಖ ಪಡುವವರಿಗೆ ಉಪಚಾರ ಹೇಳುವಿಕೆ, ಅನುತಾಪ.

ताज़िया, पु. ಮೊಹರಂ ಹಬ್ಬದಲ್ಲಿ ಮೆರವಣಿಗೆ ಬರುವ ಸಿದಿಗೆ, ಬಾಬ ಯ್ಯನ ಹಬ್ಬದ ತಾಬೂತು.

ताज़ियाना, पु. ಚಾವಟಿ, ಚಬುಕು.

ताजिर, पु. ವರ್ತಕ, ವ್ಯಾಪಾರಿ.

ताज़ी, वि. ಅರಬ್ಬಿದೇಶದ. पु. ಅರಬ್ಬಿ ಕುದುರೆ; ವೇಗದ ಕುದುರೆ; ಬೇಟೆ ನಾಯಿ, ಜಾಯಿಲ.

ताज़ीम, स्त्री. ಮರ್ಯಾದೆ; ಆದರಣೆ; ವಿನಯೋಪಚಾರ.

ताज़ीर, स्त्री. ಸಜಾ, ದಂಡನೆ.

ताज़ीरात, स्त्री. ದಂಡನೆಯ ಕಾನೂ ನುಗಳು; ದಂಡನೀತಿ, ದಂಡವಿಧಾನ.

ताजिराना, वि. ವರ್ತಕರಂತಹ.

ताजील, स्त्री. ಶೀಘ್ರ, ತ್ವರೆ; ವೇಗ.

ताज्जुब, पु. = तअज्जुब.

ताड़, पु. ತಾಳೆ ಮರ; ತಾಡನೆ; ಶಬ್ದ; ಕಂತೆ, ಕಟ್ಟು, ಪಿಂಡಿ; ಕೈಬಳೆ, ಕಡಗ.

ताड़न, पु. ಹೊಡೆತ, ಜಂಕಣೆ, ಶಾಸನ.

ताड़ना, स्त्री. ಹೊಡೆತ, ಜಂಕಣೆ; ಶಾಸನ, ದಂಡನೆ; ಉಪಟಳ. सक्रि. ಹೊಡೆ; ಗದರಿಸು; ಅಟ್ಟು, ತರುಬು; ತಿಳಿದು ಕೊಳ್ಳು, ಗ್ರಹಿಸು; ಇಂಗಿತವನ್ನರಿ.

ताड़पीन, पु. = तारपीन.

ताड़ी, स्त्री. ತಾಳೆ ಹೆಂಡ, ಸೇಂದಿ, ಕಳ್ಳು; ಕತ್ತಿಯ ಹಿಡಿಕೆ, ಮೋಹಳ.

तात, पु. ತಂದೆ, ಅಪ್ಪ. वि. ಬಿಸಿ.

ताता, वि. ಉಷ್ಣವಾದ, ಬಿಸಿ.

ताताथेई, स्त्री. ಕುಣಿತದ ಶಬ್ದ; ತಕತೈ.

तातील, स्त्री. ರಜಾದಿನ, ಸೂಟಿ; ಬಿಡು ವಿಕೆ, ಬಿಡುವು.

तात्पर्य, पु. ಅಭಿಪ್ರಾಯ; ತಾತ್ಪರ್ಯ.

तादाद, स्त्री. ಸಂಖ್ಯೆ, ಎಣಿಕೆ.

तादीब, स्त्री. ತಿದ್ದುವಿಕೆ; ಶಿಕ್ಷಣ; ಶಿಕ್ಷೆ.

तान, स्त्री. ಎಳೆಯುವಿಕೆ, ವಿಸ್ತರಿಸು ವಿಕೆ, ಎಳೆತ; ರಾಗಾಲಾಪನೆ.

तानना, सक्रि. ನಿಗುರಿಸು, ಹಿಗ್ಗಿಸು; ಎಳೆ, ಎಳೆದು ಕಟ್ಟು; ಗುಡಾರ ಹಾಕು; ಕೈಯೆತ್ತು; ಅನರ್ಥ ತಂದೊಡ್ಡು, ಕಾರಾಗೃಹಕ್ಕೆ ಕಳುಹಿಸು.

तानपूरा, पु. ತಂಬೂರಿ.

ताना, पु. ನೆಯ್ಗೆಯ ಹಾಸು, ಊಕೆ, ಉಂಕಿ; ಮಗ್ಗ; ಉಪಹಾಸ, ಎಗತಾಳೆ, ಗೇಲಿ; ಕೊರಚಾಟ. सक्रि. ಕಾವು ಕೊಡು, ಕಾಯಿಸು; ಕರಗಿಸು; ಪರೀಕ್ಷಿಸು; ಪಾತ್ರೆಯ ಬಾಯನ್ನು ಮಣ್ಣಿನಿಂದ ಮುಚ್ಚು. ताना देना या मारना = ಹೀಯಾಳಿಸು, ಜರೆ.

**तानाज़नी,** स्त्री. ಹೀಯಾಳಿಸುವಿಕೆ, ಜರೆಯುವಿಕೆ, ಕೊರಚಾಟ.

**ताना-बाना,** पु. ಹಾಸು ಹೊಕ್ಕು, ಓತಪ್ರೋತ.

**तानाशाह,** पु. ಕೋಮಲ ಸ್ವಭಾವದವ, ಸುಕುಮಾರ.

**ताना-रीरी,** स्त्री. ಸಾಮಾನ್ಯವಾದ ಸಂಗೀತ.

**तानी,** स्त्री. ಹಾಸು ನೂಲು, ಉಂಕಿ.

**तानीस,** स्त्री. ಸ್ತ್ರೀಲಿಂಗ.

**ताप,** पु. ಉಷ್ಣ, ತಾಪ; ಜ್ವರ; ಸಂತಾಪ; ನೋವು; ಕೋಲು, ದೊಣ್ಣೆ.

**तापक,** पु. ಉರಿ; ಜ್ವರ.

**तापतिल्ली,** स्त्री. ಪ್ಲೀಹ, ಜ್ವರಗೆಡ್ಡೆ; ಗುಲ್ಮವ್ಯಾಧಿ.

**तापना,** अक्रि. ಬೆಂಕಿ ಕಾಯು. सक्रि. ಬೆಂಕಿಹತ್ತಿಸು, ಊದು; ನಾಶಮಾಡು.

**तापस,** पु. ತಪಸ್ವಿ.

**तापा,** पु. ಕೋಳಿಗಳನ್ನು ಮುಚ್ಚಿಡುವ ಗೂಡೆ, ಉಂಚ, ಹಂಜರ.

**ताफ़्ता,** पु. ಒಂದು ಬಗೆ ರೇಷ್ಮೆ ಬಟ್ಟೆ. वि. ಉಷ್ಣವಾದ, ಬಿಸಿಯಾದ, ಕಾದ.

**ताबंदगी,** स्त्री. ಕಾಂತಿ, ಶೋಭೆ.

**ताबंदा,** वि. ಪ್ರಕಾಶಿಸುವ, ಕಾಂತಿಯುತ.

**ताब,** पु. ತಾಪ, ಉಷ್ಣ; ಕಾಂತಿ; ಶಕ್ತಿ; ಸಹನೆ, ತಾಳ್ಮೆ; ಶ್ರಮ; ಕೋಪ; ವಕ್ರತೆ; ಬಾಗು.

**ताबड़-तोड़,** क्रिवि. ಬೇಗಬೇಗನೆ, ಎಡೆಬಿಡದೆ; ಪರಂಪರಾಗತವಾಗಿ, ವರಸೆಯಾಗಿ.

**ताबा,** वि. ಸ್ವಾಮಿಭಕ್ತ; ಅವಲಂಬಿತ, ಆಶ್ರಿತ, ದಾಸ, ಗುಲಾಮು; ಅಧೀನ, ವಶಪಟ್ಟ.

**ताबिश,** स्त्री. ಉರಿ; ತಾಪ; ದುಃಖ.

**ताबीन,** पु. ಜೊತೆಗಾರ, ಗೆಳೆಯ.

**ताबीर,** स्त्री. ವಾಕ್ಯಾರ್ಥ; ವ್ಯಾಖ್ಯಾನ; ಸ್ವಪ್ನ ಫಲ, ಫಲಿತಾರ್ಥ.

**ताबीर-गो,** वि. ಸ್ವಪ್ನಫಲ ಹೇಳುವವ.

**ताबूत,** पु. ಶವದ ಪೆಟ್ಟಿಗೆ; ಮೊಹರಂ ಹಬ್ಬದಲ್ಲಿ ಮೆರವಣಿಗೆ ಬರುವ (ಹುಸೇನಿನ) ಶವದ ಪೆಟ್ಟಿಗೆ; ತಾಬೂತು.

**ताबूतगर,** पु. ಶವದಪೆಟ್ಟಿಗೆಮಾಡುವವ.

**ताबे,** वि. ಅಧೀನ, ವಶಪಟ್ಟ.

**ताबेदार,** वि. ಅಧೀನಸ್ಥ, ವಶವರ್ತಿ.

**ताबेदारी,** स्त्री. ಆಜ್ಞಾಪಾಲನೆ; ಸೇವಾವೃತ್ತಿ, ಸೇವೆ.

**ताम,** पु. ತಾಮ್ರ.

**ताम-चीनी,** स्त्री. ಮಿನಾಯಿ (ಎನಾಮೈಲ್) ಹಾಕಿದ ತಾಮ್ರದ ಪಾತ್ರೆ; ಪಿಂಗಾಣಿ, ಬಿಲಾವರ.

**तामजान, तामझान,** पु. ತೆರೆದ ಸಣ್ಣ ಪಲ್ಲಕ್ಕಿ, ತಾಂಜಾನು.

**तामड़ा,** वि. ತಾಮ್ರದ ಬಣ್ಣದ. पु. ತಾಮ್ರದ ಬಣ್ಣದ ಒಂದು ಬಗೆ ರತ್ನ.

**तामलेट,** पु. "ಟಂಬ್ಲರ್", ಲೋಟಾ.

**तामीर,** स्त्री. ಕಟ್ಟಡದ ಕೆಲಸ; ಶಿಲ್ಪ, ವಾಸ್ತು ಶಿಲ್ಪ; ಕಾಮಗಾರಿ; ಒಕ್ಕಲು ಇರಿಸುವಿಕೆ, ಬಸ್ತಿ, ವಸಾಹತು.

**तामील,** स्त्री. ಆಜ್ಞಾಪಾಲನೆ; ಪೂರ್ತಿ

ಮಾಡುವಿಕೆ, ಪರಿಪಾಲನೆ.

तायदाद, स्त्री = तादाद.

तायफ़ा, स्त्री. ವೇಶ್ಯೆ, ನಾಯಕಸಾನಿ; ವೇಶ್ಯೆಯರ ಮೇಳ, ತಾಫೆ; ಒಂದೇ ಕಸಬಿನವರ ಮಂಡಲಿ.

तायर, पु. ಹಾರುವವ; ಪಕ್ಷಿ, ಹಕ್ಕಿ.

ताया, पु. ತಂದೆಯ ಅಣ್ಣ, ದೊಡ್ಡಪ್ಪ.

तार, पु. ಕಂಬಿ, ತಂತಿ; ತಂತೀವಾರ್ತೆ, ತಾರು; ದಾರ, ಎಳೆ; ಪಂಕ್ತಿ; ಅವಿಚ್ಛಿನ್ನತೆ, ಪರಂಪರೆ; ಸೋಯಿ, ಅನುಕೂಲ; ಕಿವಿಯ ಓಲೆ; ಕತ್ತಲೆ; ತುದಿ, ಶಿಖರ. वि. ನಿರ್ಮಲ, ಸ್ವಚ್ಛ; ಕತ್ತಲೆ ಕೂಡ. तार तार=ತುಂಡುತುಂಡಾಗಿ

तारक, पु. ಬೆಟ್ಟ; ತುದಿ, ಶಿಖರ; ತಲೆಯ ತುದಿ, ನೆತ್ತಿ; ಉದ್ಧಾರ ಮಾಡುವವ; ಸಣ್ಣ ನಕ್ಷತ್ರ, ಕಿರುತಾರೆ; ಕಣ್ಣುಗೊಂಬೆ, ಕಣ್ಣು ಪಾಪ.

तारकश, पु. ಕಂಬಿ ಎಳೆಯುವವ.

तारघर, पु. ತಂತಿ ಆಫೀಸು.

तारघाट, पु. ಯುಕ್ತಿ, ಹಂಚಿಕೆ.

तारन, पु. ತಾರಣ, ಉದ್ಧಾರ.

तारना, सक्रि. ದಾಟಿಸು; ಉದ್ಧಾರ ಮಾಡು.

तारपीन, पु. ಕರ್ಪೂರತೈಲ; ಸಾಂಬ್ರಾಣಿ ತೈಲ.

तारबर्क़ी, स्त्री. ತಂತಿ, ಟೆಲಿಗ್ರಾಫ್.

तारा, पु. ನಕ್ಷತ್ರ, ಚಿಕ್ಕೆ; ದೆಶೆ, ಭಾಗ್ಯ; ಕಣ್ಣುಗೊಂಬೆ, ತಾರಕೆ; ಬೊಂಬೆ.

ताराज, पु. ಲೂಟಿ, ಸೂರೆ, ಸುಲಿಗೆ; ಧ್ವಂಸ, ನಾಶ.

तारी, वि. ಸಂಭವಿಸುವ, ಒದಗುವ.

तारीक, वि. ಕತ್ತಲೆಯ, ಮಸಕು; ಕಪ್ಪು.

तारीकी, स्त्री. ಕತ್ತಲೆ; ಕಪ್ಪು.

तारीख़, स्त्री. ತೇದಿ, ತಾರೀಕು, ತಿಥಿ; ಶ್ರಾದ್ಧ ದಿನ, ತದ್ದಿನ; ಶಕ; ಚರಿತ್ರೆ, ಇತಿಹಾಸ.

तारीफ़, स्त्री. ಪರಿಭಾಷೆ; ವರ್ಣನೆ; ಲಕ್ಷಣೆ; ಪರಿಚಯ; ಗುಣಕಥನ; ಶ್ಲಾಘನೆ; ಹೊಗಳಿಕೆ, ಕೈವಾರ; ಗುಣ. तारीफ़ करना = ಪರಿಚಯಮಾಡಿಸು; ಗುಣಕಥನ ಮಾಡು, ಮೆಚ್ಚು; ಹೊಗಳು.

तारीफ़ी, वि. ಶ್ಲಾಘ್ಯ; ಶ್ಲಾಘನೀಯ.

ताल, पु. ಅಂಗೈ; ಚಪ್ಪಾಳೆ; ತಾಳ; ಕರತಾಳ, ಝಲ್ಲರಿ; ತಾಳೆಮರ; ಹರಿತಾಳ; ಬೀಗ; ಕತ್ತಿಯ ಹಿಡಿ; ಕೆರೆ, ಕೊಳ; ಸುಲೋಚನ. ताल ठोंकना = ಕುಸ್ತಿಗಾಗಿ ಭುಜ ಅಪ್ಪಳಿಸು.

ताल-मखाना, पु. ಒಂದು ಮೂಲಿಕೆ.

तालमूली, स्त्री. ನೆಲದಾಳೆ.

तालमेल, पु. ಏಕತಾಳ, ಸ್ವರಸಂಗ; ಹೊಂದಿಕೆ; ಮೇಪು; ಯೋಗ.

ताला, पु. ಭಾಗ್ಯ, ಅದೃಷ್ಟ; ಬೀಗ, ಕೀಲಿ. तालाकुंजी = ಮಕ್ಕಳ ಒಂದು ಆಟ.

तालाब, पु. ಕೆರೆ, ಸರೋವರ.

तालामंद, तालावर, वि. ಭಾಗ್ಯವಂತ; ಶ್ರೀಮಂತ.

तालिका, स्त्री. ಬೀಗದ ಕೈ; ಕಾಗದಗಳನ್ನು ಕಟ್ಟುವ ದಾರ; ಸೂಚಿ, ಪಟ್ಟಿ.

तालिब, वि. ಕೇಳುವವ, ಬೇಡುವವ;

ಅರಸುವವ, ಅರ್ಥಿ. तालिबे इल्म = ವಿದ್ಯಾರ್ಥಿ, ವಿದ್ಯಾಪೇಕ್ಷಿ.

**ताली**, स्त्री. ಬೀಗದಕೈ, ಚಾವಿ, ಕೀಲಿ ಕೈ; ತಾಳೆ ಮರ; ಹೆಂಡ; ಕಮಾನಿನ ಮಧ್ಯದ ಕಲ್ಲು, ಆಣಿಕಲ್ಲು; ಚಪ್ಪಾಳೆ, ಕರತಾಡನ; ಕೊಳ, ಹೊಂಡ.

**तालीक़ा**, पु. ಪಕ್ಕ ಟಿಪ್ಪಣಿ; ಪಟ್ಟಿ; ಸೂಚಿ.

**तालीफ़**, स्त्री. ಸೇರಿಸುವಿಕೆ; ಒಟ್ಟು ಗೂಡಿಸುವಿಕೆ; ಸಂಗ್ರಹ; ಗ್ರಂಥದ ಸಂಪಾದನೆ.

**तालीम**, स्त्री. ಶಿಕ್ಷಣ, ಪಾಠನ; ತರ ಬೇತು, ಕಸರತ್ತು. तालीम याफ़्त = ಶಿಕ್ಷಣ ಪಡೆದ, ಶಿಕ್ಷಿತ.

**तालीम-ख़ाना**, पु. ಗರಡಿ ಮನೆ.

**तालू**, पु. ಬಾಯಿಯ ಅಂಗಳ, ತಾಳಿಗೆ, ತಾಳು.

**तालेवर**, वि. ಭಾಗ್ಯವಂತ.

**ताल्लुक़**, पु. = तअल्लुक़.

**ताल्लुक़ा**, पु. = तअल्लुक़ा.

**ताव**, पु. ಶಾಕ, ಕಾವು; ಆವೇಶ; ಆತುರ; ಜಂಭ; ಪರೀಕ್ಷೆ; ಕಾಗದದ ಹಾಳೆ, ತಾವು; ಹೊಸೆಯುವಿಕೆ, ನುಲಿಕೆ. मूँछों पर ताव देना = ಮೀಸೆ ಹೊಸೆ, ಮೀಸೆ ತಿರುವು.

**तावना**, सक्रि. ಕಾವು ಕೊಡು, ಕಾಸು; ಪರೀಕ್ಷಿಸು.

**ताव-भाव**, पु. ಸಮಯ, ಸಂದರ್ಭ.

**तावर**, **तावरी**, स्त्री. ತಾಪ; ಬಿಸಿಲು; ಜ್ವರ; ಮೂರ್ಛೆ.

**तावान**, पु. ಶಿಕ್ಷೆ, ದಂಡ; ಪರಿಹಾರದ್ರವ್ಯ, ನಷ್ಟಕ್ಕೆ ಈಡು, ಲಗ್ಗ; ಜುಲ್ಮಾನೆ.

**तावीज़**, पु. ತಾಯಿತಿ, ರಕ್ಷೆ; ಕಾಪು; ಸಮಾಧಿಯ ಮೇಲಿನ ಕಲ್ಲು.

**तावील**, स्त्री. ವ್ಯಾಖ್ಯಾನ; ವ್ಯಾಪ್ತಿ, ಟಿಪ್ಪಣಿ, ಟೀಕು.

**ताश**, पु. ಕಲಾಬತ್ತಿನ ಕೆಲಸ ಮಾಡಿದ ರೇಷ್ಮೆ ಬಟ್ಟೆ, ಕಿನಕಾಬು; ಇಸ್ಪೀಟಿನ ಚೀಟು; ಇಸ್ಪೀಟಾಟ; ದಾರದ ಪಟ್ಟಿ; 'ಟಿಕೆಟ್' ದಾರದ ರಟ್ಟು; ಬಟ್ಟಲು; ಹೂಜಿ

**ताशा**, पु. ನಗಾರಿ, ಭೇರಿ, ತಾಸೆ.

**तासीर**, पु. ಪ್ರಭಾವ, ಗುಣ.

**तासू**, **तासों**, सर्व. ಅದರಿಂದ, ಅವನಿಂದ.

**ताहम**, अव्य. ಆದರೂ, ಆದಾಗ್ಯೂ.

**ताहि**, सर्व. ಅವನಿಗೆ

**ताहिर**, वि. ಶುದ್ಧ, ಶುಚಿ; ಪವಿತ್ರ.

**ताहिरी**, स्त्री. ಹೆಸರುಬೇಳೆ ಹುಗ್ಗಿ.

**तिआ**, स्त्री. = तिया.

**तिआह**, पु. ಮೂರನೆಯ ವಿವಾಹ ಮಾಡಿಕೊಳ್ಳುವವ.

**तिउरी**, स्त्री. = त्योरी.

**तिकड़ी**, स्त्री. ಮೂರೆಳೆಗಳುಳ್ಳದ್ದು; ಮೂರೆಳೆಯ ಹೆಣಿಗೆ; ಮೂರು ಪಟ್ಟಿಯ ಹಗ್ಗ.

**तिकोन**, **तिकोना**, **तिकोनिया**, वि. ಮೂರು ಮೂಲೆಗಳುಳ್ಳ, ಮುಮ್ಮೂಲೆಯ. पु. ಮುಮ್ಮೂಲೆಯಾಗಿರುವ ಒಂದು ಮಿಠಾಯಿ.

तिक्का, पु. ಮಾಂಸಖಂಡ; ಷರಾಯಿಯ ಲಾಡಿ, ನವಾರ, ಕಸೆ.
तिक्की, स्त्री. ಇಸ್ಪೀಟಿನ ಮೂರನೆಯ ಬಂದು, ತಿಗ, ಕುಕ್ಕ.
तिखाई, स्त्री. ತೀಕ್ಷ್ಣತೆ, ಖಾರ.
तिखारना, अक्रि. ಮೂರಾವರ್ತಿ ಪ್ರಶ್ನಿಸು; ಊರ್ಜಿತಪಡಿಸು; ಮೂರು ಸಲ ಉಳು.
तिखूंट, तिखूंटा, वि. ಮುಮ್ಮೂಲೆಯ.
तिगडंबाज़ी, स्त्री. ತಟವಟ, ಠಾರ ತಕ್ಕಡಿ.
तिगुना, वि. ಮೂರರಷ್ಟು, ಮುಮ್ಮಡಿ, ತಿಪ್ಪಟ್ಟು.
तिगोड़िया, स्त्री. ಮುಕ್ಕಾಲು ಮಣೆ.
तिग्गी, स्त्री. ಮಕ್ಕಳ ಒಂದು ಆಟ.
तिजरा, पु. = तिजारी.
तिजारत, स्त्री. ವ್ಯಾಪಾರ, ವಾಣಿಜ್ಯ.
तिजारतगाह, स्त्री. ವ್ಯಾಪಾರಸ್ಥಳ.
तिजारती, वि. ವ್ಯಾಪಾರದ, ವಾಣಿಜ್ಯದ.
तिजारी, स्त्री. ಮೂರು ದಿವಸಕ್ಕೊಂದಾವರ್ತಿ ಬರುವ ಪೊರೆ ಜ್ವರ.
तिजोरी, स्त्री. ಹಾಂಡವಾಳದ ಪೆಟ್ಟಿಗೆ, "ಖಜಾನೆ" ಪೆಟ್ಟಿಗೆ, ತಿಜೋರಿ.
तिड्डी, स्त्री. = तिक्की.
तिड्डीबिड्डी, स्त्री. ಗಲಿಬಿಲಿ, ಗೊಂದಲ.
तित, क्रिवि. ಅಲ್ಲಿ, ಅತ್ತ.
तितग्गी, स्त्री. ಮೂರೆಳೆಯ ದಾರ.
तितना, वि. ಅಷ್ಟು.
तितरबितर, वि. ಚೆಲ್ಲಾಪಿಲ್ಲಿಯಾದ, ದಿಕ್ಕಾಪಾಲಾದ, ಛಿನ್ನಭಿನ್ನವಾದ.
तितरी, तितली, स्त्री. ಚಿಟ್ಟೆ ಹುಳು, ಪಾತರಗಿತ್ತಿ, ಚಿತ್ರಪತಂಗ.
तितलौकी, स्त्री. ಕಹಿ ಸೋರೆ.
तितारा, वि. ಮೂರು ತಂತಿಗಳುಳ್ಳ (ವಾದ್ಯ). पु. ಮೂರೆಳೆಯ ದಾರ.
तितिंबा, पु. ಮೋಸ, ಠಕ್ಕು; ಅಡಚಣೆ, ತೊಡಕು.
तितिम्मा, पु. ಅವಶೇಷ, ಪರಿಶಿಷ್ಟ, ಪುರವಣಿ.
तिथि, स्त्री. ತಿಥಿ; ತಾರೀಖು.
तिदरी, स्त्री. ಮೂರು ಬಾಗಿಲುಗಳುಳ್ಳ ಕೊಠಡಿ.
तिधर, क्रिवि. ಆ ಕಡೆ, ಅತ್ತ.
तिधारा, पु. ಮೂರು ಅಂಚುಗಳುಳ್ಳ; ಮೂರು ಧಾರೆಗಳುಳ್ಳ; ಮೂರು ನದಿಗಳ ಸಂಗಮ, ತ್ರಿವೇಣಿ; ಮೂರು ಏಣಿನ ಕಳ್ಳಿ ಗಿಡ.
तिन, सर्व. तिस का ब. रूप. पु. ತೃಣ, ಹುಲ್ಲು.
तिनकना, अक्रि. ರೇಗು, ಕೆರಳು.
तिनका, पु. ಹುಲ್ಲುಕಡ್ಡಿ. तिनका लेना = ಹುಲ್ಲು ಕಡ್ಡಿ ಕಚ್ಚು; ದಮ್ಮಯ್ಯಗುಡ್ಡೆಯಿಕ್ಕು.
तिनगना, अक्रि. ರೇಗು, ಮುಳಿ.
तिनगरी, स्त्री. ಒಂದು ಪಕ್ವಾನ್ನ.
तिनपहला, वि. ಮೂರು ಪಾರ್ಶ್ವಗಳುಳ್ಳ.
तिन्नी, स्त्री. ಒಂದು ತೆರದ ಅಕ್ಕಿ; ಲಂಗ ಅಥವಾ ಸೀರೆಯನ್ನು ಬಿಗಿದು ಕಟ್ಟುವ ದಾರ, ಕಸೆ, ಲಾಡಿ; ಕಚ್ಚೆಯ ಗಂಟು,

ನೀವಿ.

**तिपदा**, पु. ತ್ರಿಪದಿ (ವೃತ್ತ).

**तिपल्ला**, वि. ಮೂರು ಮಡಿಕೆಯ; ಮೂರು ಎಳೆಗಳುಳ್ಳ.

**तिपाई**, स्त्री. ತ್ರಿಪದಿಕೆ, ತಿವಟಿಗೆ, ಮುಕ್ಕಾಲು ಮಣೆ.

**तिपाड़**, वि. ಮೂರು ಹಲಗೆಗಳುಳ್ಳ.

**तिफ़्ल**, पु. ಮಗು; ಶಿಶು, ಕೂಸು, ಹಸುಳೆ.

**तिफ़्लाना**, वि. ಹುಡುಗರಂತಹ; ಶಿಶು ಭಾವದ.

**तिफ़्ली**, स्त्री. ಬಾಲ್ಯ, ಚಿಕ್ಕಂದು.

**तिबाबत**, स्त्री. ವೈದ್ಯ ಚಿಕಿತ್ಸೆ, ವೈದ್ಯ ಪ್ರಯೋಗ; ವೈದ್ಯನ ಕೆಲಸ.

**तिबारा**, वि. ಮೂರನೆಯ ಸಾರಿ; ತೃತೀಯಾವೃತ್ತಿ; ಮುಮ್ಮಡಿ. पु. ಮೂರಾವರ್ತಿ ಭಟ್ಟಿ ಇಳಿಸಿದ ಸಾರಾಯಿ; ಮೂರು ಬಾಗಿಲುಗಳುಳ್ಳ ಮನೆ.

**तिबासी**, वि. ಮೂರು ದಿವಸದ ತಂಗುಳು.

**तिब्ब**, स्त्री. ವೈದ್ಯಶಾಸ್ತ್ರ.

**तिब्बी**, वि. ವೈದ್ಯಸಂಬಂಧವಾದ.

**तिमंज़िला**, वि. ಮೂರು ಮಹಡಿಗಳುಳ್ಳ.

**तिमाही**, वि. ಮೂರು ತಿಂಗಳ, ತ್ರೈಮಾಸಿಕ.

**तिमिंगल**, पु. ತಿಮಿಂಗಿಲ.

**तिमुहानी**, स्त्री. ಮೂರು ರಸ್ತೆಗಳು ಕೂಡುವ ಸ್ಥಳ, ಮೂರು ದಾರಿ.

**तिय**, स्त्री. ಸ್ತ್ರೀ, ಹೆಂಗಸು; ಪತ್ನಿ.

**तियला**, पु. ಸ್ತ್ರೀಯರ ತೊಡಿಗೆ.

**तिया**, स्त्री. ಸ್ತ್ರೀ; ಪತ್ನಿ. वि. ಮೂರರ; ಮೂರನೆಯ. पु. ಮೂರನೇ ಬಂದು, ತಿಗ, ಕುಕ್ಕ. तिया पांचा = ಇತ್ಯರ್ಥ, ತೀರ್ಮಾನ; ಒಪ್ಪಂದ, ಕೌಲು.

**तिरकुटा**, पु. ಶುಂಠಿ, ಮೆಣಸು, ಹಿಪ್ಪಲಿ ಇವುಗಳಿಂದ ಮಾಡಿದ ಔಷಧ, ತ್ರಿಕಟುಕ.

**तिरखा**, पु. ಬಾಯಾರಿಕೆ; ಬಯಕೆ, ಗೀಳು.

**तिरखूंटी**, स्त्री. ಮುಕ್ಕಾಲು ಮಣೆ.

**तिरछई**, स्त्री. ವಕ್ರತೆ, ಡೊಂಕು.

**तिरछा**, वि. ಡೊಂಕಾದ, ವಕ್ರ; ಓರೆ; ಕೋಸಾದ; ಒಂದು ಬಗೆಯ ರೇಷ್ಮೆ ಬಟ್ಟೆ. बांका तिरछा = ಸೊಗಸಾದ, ಷೋಕಿನ, ಮೋಜಿನ.

**तिरछाई**, स्त्री. ವಕ್ರತೆ, ಓರೆ.

**तिरछाना**, अक्रि. ಓರೆಯಾಗು, ಡೊಂಕಾಗು. सक्रि. ಓರೆಮಾಡು.

**तिरछापन**, पु. ಓರೆ, ವಕ್ರತೆ.

**तिरछोहैं**, क्रिवि. ವಾಲುತ್ತಾ, ವಕ್ರವಾಗಿ, ಡೊಂಕಾಗಿ.

**तिरता**, वि. ಮೂರರಷ್ಟು, ಮುಮ್ಮಡಿ.

**तिरतिराना**, अक्रि. ಸೋರು; ಜಿನಿ, ಜಿನುಗು, ಬಸಿ.

**तिरना**, अक्रि. ತೇಲು, ಈಜು; ಪಾರಾಗು, ದಾಟು. पु. ತೆಪ್ಪ.

**तिरनी**, स्त्री. ಸೀರೆಯ ಗಂಟು, ನೀವಿ; ಸೀರೆಯ ನಿರಿ.

**तिरपट**, वि. ವಕ್ರ; ಕಠಿಣ.

**तिरपद**, पु. ಮುಕ್ಕಾಲು ಮಣೆ.

**तिरपन**, वि. ಐವತ್ತಮೂರು.
**तिरपाई**, स्त्री. ಮುಕ್ಕಾಲು ಮಣೆ
**तिरपाल**, पु. ಮನೆ ಹೊಚ್ಚುವ ಹುಲ್ಲು; ಕಿತ್ತಾನಾರಿನ ದಪ್ಪವಾದ ಬಟ್ಟೆ, ಸೀರ ಪಾಟು, ಪಡಮ.
**तिरपौलिया**, पु. ಮೂರು ಬಾಗಿಲು ನಳಿರುವ ಸ್ಥಳ.
**तिरमिरा**, पु. ಕಣ್ಣು ಕುಕ್ಕುವಿಕೆ; ದೃಷ್ಟಿಮಾಂದ್ಯ.
**तिरमिराना**, अक्रि. ಕಣ್ಣು ಕುಕ್ಕು, ಕೋರೈಸು; ದೃಷ್ಟಿ ಮಂದವಾಗು; ಕಣ್ಣು ಕತ್ತಲೆ ಹಿಡಿ.
**तिरमिराहट**, स्त्री. ಕಣ್ಣು ಕುಕ್ಕುವಿಕೆ.
**तिरमुहानी**, स्त्री. = **तिमुहानी**.
**तिरलीक**, पु. ಕುಪ್ಪಸ, ರವಿಕೆ.
**तिरसठ**, वि. ಅರವತ್ತುಮೂರು.
**तिरस्कार**, पु. ಅನಾದರ, ತಿರಸ್ಕಾರ, ಅವಹೇಳನೆ.
**तिराज़**, पु. ಕಸೂತಿ ಕೆಲಸ.
**तिरानबे**, वि. ತೊಂಭತ್ತಮೂರು.
**तिराना**, सक्रि. ಈಜಗೊಳಿಸು, ತೇಲಿಸು; ಪಾರಾಗಿಸು, ಕಡೆಹಾಯಿಸು; ಉದ್ಧಾರಮಾಡು.
**तिरानी**, स्त्री. ಲಂಚ, ರುಷುವತ್ತು.
**तिराव**, पु. ಈಜಾಟ, ಈಜುವಿಕೆ.
**तिरास**, स्त्री. ಬಾಯಾರಿಕೆ.
**तिरासी**, वि. ಎಂಭತ್ತಮೂರು.
**तिराहा**, पु. ಮೂರು ರಸ್ತೆಗಳು ಸೇರುವ ಸ್ಥಳ, ಮೂರು ದಾರಿ.
**तिरिया**, स्त्री. ನಾರಿ, ಸ್ತ್ರೀ.
**तिरेंद**, **तिरेंदा**, पु. ತೇಲುವ ಬೆಂಡು; ಸಮುದ್ರದಲ್ಲಿ ಬಂಡೆ ಮುಂತಾದುವುಗಳನ್ನು ತೋರಿಸಲು ಮಾಡಿದ ತೇಲು ಗುರುತು, ಬೋಯುಕಟ್ಟೆ, ತರಂಡ; ಈಜುಗಾಯಿ, ಈಜುಬುರುಡೆ; ಗಾಳಕ್ಕೆ ಕಟ್ಟಿರುವ ಬೆಂಡು.
**तिरौंछा**, वि. ವಕ್ರ, ಓರೆ.
**तिलंगा**, पु. ಸಿಪಾಯಿ; ಗಾಳಿಪಟ.
**तिलंगाना**, पु. ತೆಲುಗುದೇಶ, ಆಂಧ್ರ ದೇಶ.
**तिलंगी**, स्त्री. ಗಾಳಿಪಟ.
**तिल**, पु. ಎಳ್ಳು; ಮಚ್ಚೆ; ಹಚ್ಚೆ, ತಿಲಕ, ಹಚ್ಚೆಬೊಟ್ಟು; ಕಣ್ಣುಗೊಂಬೆಯ ಮಧ್ಯಭಾಗ.
**तिलक**, पु. ತಿಲಕ, ಬೊಟ್ಟು; ಪಟ್ಟಾಭಿಷೇಕ; ವಿವಾಹದಲ್ಲಿ ತಿಲಕ ಹಚ್ಚಿಸುವ ಒಂದು ಶಾಸ್ತ್ರ; ಹೆಂಗಸರು ಹಣೆಯಲ್ಲಿ ಧರಿಸುವ ಒಂದು ಆಭರಣ, ಪಟ್ಟಿ; ಶಿರೋಮಣಿ; ಪ್ಲೀಹ, ಗುಲ್ಮ; ಟಿಪ್ಪಣಿ, ವ್ಯಾಖ್ಯಾನ; ಕುಪ್ಪಸ; ಕವಚ.
**तिलकना**, अक्रि. ಬಿರುಕು ಬಿಡು, ಆಣೆ ಬಿಡು, ಬಿರಿ; ಜಾರು, ನುಣುಚು.
**तिलक्का**, पु. ಸಭೆ; ಕೂಟ; ಸಂದರ್ಶನ.
**तिलकुट**, पु. ಚಿಗಳಿ.
**तिलचटा**, **तिलचट्टा**, पु. ಜಿರಲೆ, ಅತೆ ಹುಳು, ಜೊಂಡಿಗ, ತೊಂಡಂಗಿ.
**तिलचांवली**, **तिलचावरी**, स्त्री. ಎಳ್ಳು ಮತ್ತು ಅಕ್ಕಿಯ ಬೆರಕೆ.
**तिलछना**, सक्रि. ತಳಮಳಿಸು, ತಲ್ಲಣಿಸು
**तिलड़ा**, वि. ಮೂರು ಎಳೆಗಳುಳ್ಳ.

**तिलड़ी**, स्त्री. ಮೂರು ಎಳೆಗಳ ಕಂಠಮಾಲೆ.

**तिलदानी**, स्त्री. ಸೂಜಿ ದಾರ ಮುಂತಾದುವುಗಳ ಚೀಲ; ದರ್ಜಿಯವರ ಕರಡಿಗೆ, ಸಂಚಿ.

**तिलपट्टी, तिलपपड़ी**, स्त्री. ಎಳ್ಳು ಮಿಠಾಯಿ, ಎಳ್ಳು ರೇವಡಿ.

**तिलमिल**, स्त्री. ಕಣ್ಣು ಕುಕ್ಕುವಿಕೆ.

**तिलमिलाना**, अक्रि. ಕಣ್ಣು ಕುಕ್ಕು, ಕೋರೈಸು.

**तिलमिलाहट, तिलमिली**, स्त्री. ಕಣ್ಣು ಕುಕ್ಕುವಿಕೆ, ಕೋರೈಸುವಿಕೆ.

**तिलमीज़**, पु. ಶಿಷ್ಯ, ಚೇಲ.

**तिलवा**, पु. ಎಳ್ಳುಂಡೆ.

**तिल-शकरी**, स्त्री. ಎಳ್ಳುಮಿಠಾಯಿ.

**तिलस्म**, पु. = तिलिस्म.

**तिलहन**, पु. ಎಣ್ಣೆಬೀಜ, ಎಣ್ಣೆ ಕಾಳು.

**तिलहर**, पु. ಒಂದು ಬಗೆ ವ್ಯೆನ.

**तिलहा**, वि. ಎಣ್ಣೆಯಾದ, ಜಿಡ್ಡಾದ. स्त्री. ಜಿಡ್ಡು.

**तिला**, पु. ಮುಲಾಮು, ಲೇಪ.

**तिलाई**, स्त्री. ಸಣ್ಣ ಬಾಣಲಿ.

**तिलाक़**, पु. = तलाक़.

**तिलाया**, पु. ರಾತ್ರಿ ಕಾವಲುಗಾರ; ಲೊಂಬುಗಾರ.

**तिलियर**, पु. ಒಂದು ಸಣ್ಣ ಪಕ್ಷಿ.

**तिलिया**, पु. ಗಾಣಿಗ.

**तिलिस्म**, पु. ಇಂದ್ರಜಾಲ, ಮಾಟ; ಮಂತ್ರವಿದ್ಯೆ.

**तिलिस्माती, तिलिस्मी**, वि. ಜಾಲದ, ಐಂದ್ರಜಾಲಿಕ; ಮಾಯಾವಿ.

**तिली**, स्त्री. ತಿಲ, ಎಳ್ಳು; ಪ್ಲೀಹ, ಗುಲ್ಮ.

**तिलेदानी**, स्त्री. = तिलदानी.

**तिलोरी**, स्त्री. ಗೊರವಂಕ, ಮೈನ; ಎಳ್ಳು ವಡೆ.

**तिलौंछना**, सक्रि. ಎಣ್ಣೆ ತೆಗೆ; ಎಣ್ಣೆ ಸವರು, ಬಳಿ.

**तिलौंछा**, वि. ಎಣ್ಣೆಯಂಥ.

**तिलौरी**, स्त्री. ಎಳ್ಳು ವಡೆ.

**तिल्ला**, पु. ಕಲಾಬತ್ತಿನ ಕೆಲಸ; ಜರಿ ಭಾರಿ ಅಂಚು.

**तिल्लाना**, पु. ಒಂದು ಥಾಟ, ತಿಲ್ಲಾನ.

**तिल्ली**, स्त्री. ಪ್ಲೀಹ, ಗುಲ್ಮ, ತೊರಳೆ, ಸಿಪ್ಪಿ

**तिवराइन**, स्त्री. तिवारी का स्त्री. रूप.

**तिवारी**, पु. ತ್ರಿವೇದಿ, ಬ್ರಾಹ್ಮಣರ ಒಂದು ಬಿರುದು.

**तिशनगी**, स्त्री. ನೀರಡಿಕೆ, ತೃಷ್ಣೆ; ಗೀಳು.

**तिशना**, स्त्री. ನೀರಡಿಕೆ, ಬಾಯಾರಿಕೆ. पु. ವ್ಯಂಗ್ಯ, ವಕ್ರೋಕ್ತಿ, ಕೊರಚಾಟಿ

**तिस**, सर्व. ता ಶಬ್ದಕ್ಕೆ ವಿಭಕ್ತಿ ಸೇರುವಾಗ ಆಗುವ ರೂಪ. तिस पर= ಇದರ ಮೇಲೆ, ಅದಲ್ಲದೆ, ಮತ್ತೂ.

**तिसरायत**, पु. ಮೂರನೆಯವ, ಹೊರಗಿನವ.

**तिसरैत**, पु. ಮೂರನೆಯವ, ಮಧ್ಯಸ್ಥ.

**तिसाला**, वि. ಮೂರು ವರ್ಷದ.

**तिहत्तर**, वि. ಎಪ್ಪತ್ತಮೂರು.

**तिहरा**, वि. ಮೂರರಷ್ಟು, ಮುಮ್ಮಡಿ.

**तिहराना**, सक्रि. ಮೂರಾವರ್ತಿ ಮಾಡು, ಮುಮ್ಮಡಿಸು.

**तिहवार**, पु. = त्योहार.

**तिहाई**, स्त्री. ಮೂರನೆಯ ಒಂದು ಭಾಗ, ತೃತೀಯಾಂಶ; ಫಸಲು, ಬೆಳೆ. दो तिहाई = ಮೂರನೇ ಎರಡು ಭಾಗ.

**तिहायत**, पु. ಮೂರನೆಯವ; ಮಧ್ಯಸ್ಥಗಾರ.

**तिहाल**, स्त्री. ಪ್ಲೀಹ, ಗುಲ್ಮ.

**तिहि**, सर्व. ಅವನನ್ನು, ಅದನ್ನು.

**तिही**, वि. ಖಾಲಿ, ಶೂನ್ಯ.

**तिहूं**, वि. ಮೂರೂ.

**तिहैया**, पु. ತೃತೀಯಾಂಶ; ತ್ರಿಪುಟ ತಾಳ.

**ती**, स्त्री. ಸ್ತ್ರೀ, ಹೆಂಗಸು; ಪತ್ನಿ.

**तीक्ष्ण**, वि ಚೂಪಾದ, ಕೂರಾದ, ತೀಕ್ಷ್ಣ; ಚುರುಕಾದ, ತೀವ್ರ; ಕಟು, ಕಡದು.

**तीक्ष्णता**, स्त्री. ತೀಕ್ಷ್ಣತೆ, ಉಗ್ರ; ಚುರುಕು.

**तीखा**, वि. ತೀಕ್ಷ್ಣ; ಚೂಪಾದ, ಕೂರಾದ; ಉಗ್ರ; ಖಾರ; ಕಡದು; ಉತ್ತಮವಾದ; ಚೊಕ್ಕ.

**तीखुर**, पु. ಕೂವೆಗೆಡ್ಡೆ, ಕೂವೆಹಿಟ್ಟು.

**तीज**, स्त्री. ತೃತೀಯೆ, ತದಿಗೆ; ಗೌರಿ ಹಬ್ಬ.

**तीजा**, वि. ಮೂರನೆಯ, ತೃತೀಯ. पु. ಮೃತಿಹೊಂದಿದ ಮೂರನೆಯ ದಿವಸದ ಸಂಸ್ಕಾರ.

**तीतर**, पु. तीतरी, स्त्री. ಕೌಜುಹಕ್ಕಿ, ಕೌಜುಗ, ತಿತ್ತಿರಿ.

**तीता**, वि. ಕಾರವಾದ; ಕಟು, ಕಹಿ.

**तीन**, पु. ಮಣ್ಣು. वि. ಮೂರು. तीन पांच = ಅಕ್ಕಡಿ ತಕ್ಕಡಿ, ತಿರುಗಂಚಿ ಮುರುಗಂಚಿ; ಜಗಳ. तीन तेरह होना = ದಿಕ್ಕಾಪಾಲಾಗು, ಅರುಮೂರಾಗು, ಮೂರಾಬಟ್ಟೆಯಾಗು.

**तीनी**, वि. ಮಣ್ಣಿನ.

**तीनों**, वि. ಮೂರೂ ಸಹ.

**तीमार**, पु. ಜೋಪಾನ, ಭದ್ರತೆ; ರೋಗಿಯ ಸೇವೆ ಶುಶ್ರೂಷೆ.

**तीमारदार**, पु. ರೋಗಿಯ ಸೇವೆ ಶುಶ್ರೂಷೆ ಮಾಡುವವ.

**तीमारदारी**, स्त्री. ರೋಗಿಯ ಶುಶ್ರೂಷೆ, ಶೈತ್ಯೋಪಚಾರ.

**तीय**, स्त्री. ಸ್ತ್ರೀ; ಮಡದಿ.

**तीया**, पु. ಮೂರನೆಯ ಒಂದು, ತಿಗ. स्त्री. ಸ್ತ್ರೀ; ಪತ್ನಿ.

**तीरंदाज़**, पु. ಅಂಬುಗಾರ, ಧನುರ್ವೇತ್ತ, ಬಿಲ್ಲಾಳು.

**तीरंदाज़ी**, स्त्री. ಧನುರ್ವಿದ್ಯೆ, ಬಿಲ್ಲಾಳ್ತನ.

**तीर**, पु. ತೀರ, ದಡ, ಬದಿ; ಬಾಣ, ಕಣೆ, ಅಂಬು.

**तीरकश**, पु. ಬತ್ತಳಿಕೆ, ಮೂಡಿಗೆ, ತೂಣೀರ; ತೂತು.

**तीरगर**, पु. ಬಾಣ ಅಂಬು ಮಾಡುವವ.

**तीरगी**, स्त्री. ಕತ್ತಲೆ, ಕಪ್ಪು.

**तीर-बाराँ**, पु. ಅಂಬುಗಳ ಮಳೆ; ಬಾಣವೃಷ್ಟಿ.

**तीरमार**, पु. ಹಾವಿನ ಹಲ್ಲು.

**तीली**, स्त्री. ಕಡ್ಡಿ, ಸಲಾಕಿ, ಸರಳು; ಕಣೆಕಾಲು, ಮೀನಕಂಡ.

तीवन, पु. ಚಟ್ನಿ.
तीवर, पु. ಕಡಲು; ಬೆಸ್ತ.
तीस, वि. ಮೂವತ್ತು. तीस मार खां = ದೊಡ್ಡ ಶೂರ; ಪಿಂಡಿ ಶೂರ.
तीसरा, वि. ಮೂರನೆಯ, ತೃತೀಯ.
तीसरे, क्रिवि. ಮೂರನೆಯದಾಗಿ.
तीसी, स्त्री. ಅಗಸೇಗಿಡ; ಅಗಸೇನಾರು; ಬೆಳೆ, ಫಸಲು; ಮೂವತ್ತು ಪಂಚಿಗಳು ಅಂದರೆ ೧೫೦ (ಹಣ್ಣುಗಳು).
तीहा, पु. ಮೂರನೆಯ ಒಂದು ಭಾಗ. आधा तीहा = ಅರ್ಧಮರ್ಧ.
तुंड, पु. ಮುಖ, ಮೂತಿ; ಮುಸುಡಿ; ಕತ್ತಿಯ ಮೊನೆ.
तुंद, पु. ಹೊಟ್ಟೆ. वि. ಉಗ್ರ, ಕಡು; ಘೋರ. तुंद मिज़ाज = ಕಠಿಣ ಸ್ವಭಾವದ; ಕ್ರೂರ.
तुंदिल, तुंदैला, वि. ಬೊಜ್ಜು.
तुंबड़ी, स्त्री. = तूमड़ी.
तुंबा, पु. = तूंबा.
तुक, स्त्री. ಹಾಡಿನ ಒಂದು ಚರಣ, ಪದ, ತುಕಡ; ಪ್ರಾಸ; ಒಂದು ಕ್ಷಣ.
तुकड़ी, स्त्री. ಪಕ್ಷಿಗಳ ಹಿಂಡು, ಜಂಗುಳಿ.
तुकबंदी, स्त्री. ಹುರುಳಿಲ್ಲದೆ ಬರಿ ಪ್ರಾಸ ಬರುವಂತೆ ಕವನ ಮಾಡುವಿಕೆ, ನೀರಸವಾದ ಕವನ, ಅಳಿಗಬ್ಬ; ಕಗ್ಗ.
तुकमा, पु. ಬಿರಡೆ; ಗುಬ್ಬಿ, ಗುಬುಟು; ಗುಂಡಿ, ಬಟನು; ಗುಂಡಿ ತಗುಲಿಸುವ ರಂಧ್ರ, ಕಾಜ.
तुकांत, पु. ಅಂತ್ಯಾನುಪ್ರಾಸ.
तुकार, स्त्री. ತಿರಸ್ಕಾರ, ಧಿಕ್ಕಾರ.
तुकारना, सक्रि. ತಿರಸ್ಕರಿಸು, ಧಿಕ್ಕರಿಸು.
तुक्कल, स्त्री. ಒಂದು ಬಗೆ ಗಾಳಿಪಟ.
तुक्का, पु. ಅಭ್ಯಾಸಕ್ಕಾಗಿ ಎಸೆಯು[illegible] ಮುಸಗೆಟ್ಟ ಅಂಬು, ಮೊಂಡ ಬಾಣ, ಬೋರೆ, ಮರಡಿ, ಮೇಡು.
तुख, पु. ಹೊಟ್ಟು, ಸಿಪ್ಪೆ; ಮೊಟ್ಟೆ[illegible] ಚಿಪ್ಪು.
तुख़मा, पु. ಅಜೀರ್ಣ.
तुख़्म, पु. ಬೀಜ, ಬಿತ್ತ; ತತ್ತಿ; ವೀ[illegible]
तुख़्मपाशी, तुख़्मरेज़ी, स्त्री. ಬಿತ್ತುವಿಕೆ, ಬಿತ್ತನೆ.
तुग़यान, पु. ಅವಿಧೇಯತೆ; ಅಧಿ[illegible] ಪ್ರಸಂಗ; ದಂಗೆ, ಬಂಡಾಯ.
तुग़यानी, स्त्री. ಆಧಿಕ್ಯ, ದಂಡಿ; ಪ್ರ[illegible] ನೆರೆ, ಪ್ರವಾಹ.
तुग़लक़, पु. ಮುಖಂಡ, ನಾಯಕ, ಪುಢಾರಿ.
तुच्छ, वि. ತುಚ್ಛವಾದ, ನಿಕೃಷ್ಟ, ಹೀ[illegible]
तुज़ुक़, पु. ಪ್ರಭೆ, ವೈಭವ; ರಾಜ ಸನ್ನಿಧಾನ, "ಸವಾರಿ"; ರಾಜಲಕ್ಷಣಗಳು; ಕಟ್ಟು ಕಟ್ಟಳೆ, ನಿಯಮ; ಮಹಾಪುರುಷರ ಆತ್ಮಚರಿತ್ರೆ.
तुझ, सर्व. तू ಶಬ್ದಕ್ಕೆ ವಿಭಕ್ತಿ ಸೇ[illegible] ವಾಗ ಆಗುವ ರೂಪ.
तुझे, सर्व. ನಿನ್ನನ್ನು, ನಿನಗೆ.
तुट, वि. ತುಸ, ಲೇಶ.
तुड़ना, अक्रि. ಮುರಿ, ತುಂಡಿಸು.
तुड़वाना, सक्रि. = तुड़ाना.
तुड़वाई, तुड़ाई, स्त्री. ಬಿಡಿಸುವಿಕೆ; ತುಂಡಿಸುವಿಕೆ; ಮುರಿಸುವಿಕೆ; ನಾ[illegible]

ಗಳನ್ನು ಮುರಿಸುವುದಕ್ಕೆ ಕೊಡುವ ವಟ್ಟಿ; ಕಾಯಿ ಬಿಡಿಸುವುದಕ್ಕೆ ಕೂಲಿ.

ड़ाना, सक्रि. ಬಿಡಿಸು; ಮುರಿಸು; ಚಿಲ್ಲರೆ ಮಾಡಿಸು, ವಟಾಯಿಸು.

तई, स्त्री. ಗಿಂಡಿ.

तराना, तुतलाना, अक्रि. ತಿಕ್ಕಲು ತಿಕ್ಕಲಾಗಿ ಮಾತಾಡು, ತೊದಲಿಸು, ಉಗ್ಗು, ಗೊಜಗು.

तला, पु. तुतलाहट, तुतली, स्त्री. ತೊದಲುವಿಕೆ, ತೊದಲು, ಉಗ್ಗು; ತಿಕ್ಕಲು ಮಾತು.

तुनतुनाना, अक्रि. ಗೊಣಗುಟ್ಟು.

तुनतुनाहट, स्त्री. ಗಣಗಣ ಶಬ್ದ.

तुनतुनी, स्त्री. ಒಂದು ಬಗೆ ವೀಣೆ.

तुनुक, वि. ಶಕ್ತಿಯಿಲ್ಲದ, ಬಲವಿಲ್ಲದ; ದಳವಾರ; ನಾಜೋಕಾದ; ಅನರ್ಹ.

तुनुक-मिज़ाज, वि. ಧೈರ್ಯವಿಲ್ಲದವ; ಅಳ್ಳೆದೆಯವ; ಸಿಡುಕಲ.

तुनुक-मिज़ाजी, स्त्री. ಅಧೈರ್ಯ; ಸಿಡುಕು; ಸಿಡುಕುತನ.

तुपक, स्त्री. ಸಣ್ಣ ತುಪಾಕಿ, ಕೋವಿ.

तुपाना, सक्रि. ಮುಚ್ಚಿಸು, ಹೊಚ್ಚಿಸು.

तुफ़ंग, स्त्री. ಕೋವಿ, ಪೆಟ್ಲುಕೊಳವಿ.

तुफ़ंगची, पु. ತುಪಾಕಿ ಹಾರಿಸುವವ.

तुफ़, अव्य. ಧಿಕ್ಕಾರ, ಥೀನೋರೆ. पु. ಎಂಜಲು, ಉಗುಳು; ಸಮುದ್ರದನೊರೆ.

तुफ़ूलियत, स्त्री. ಬಾಲ್ಯ, ಚಿಕ್ಕಂದು.

तुफ़ैल, पु. ಜೊತೆಗಾರ; ಹೊಟ್ಟೆಬಾಕ; [illegible]; ಮುಖಾಂತರ; ಸಾಧನ; ಶಿಫಾರಸು.

तुफ़ैलिया, पु. ಪರಾನ್ನಪುಷ್ಟ.

तुभना, अक्रि. ಬೆರಗಾಗು, ಬೆಚ್ಚು.

तुम, सर्व. ನೀವು.

तुमड़ी, स्त्री. ಸೋರೆ ಬುರುಡೆ; ಪುಂಗಿ ವಾದ್ಯ.

तुमन, पु. ಗುಂಪು; ದಳ; ಜಾತಿ.

तुमनदार, पु. ದಳಪತಿ.

तुमरा, सर्व. ನಿಮ್ಮ.

तुमतड़ाक, तुमतराक, स्त्री. ಆಡಂಬರ, ಪಟಾಟೋಪ; ಆದ್ದೂರಿ; ಶೀವಿ, ದೆಬ್ಬಾಳ.

तुमतराक़ी, वि. ಆಡಂಬರದ, ಶೀವಿಯು.

तुमाई, स्त्री. ಅರಳೆ ಎಕ್ಕುವುದರ ಕೂಲಿ.

तुमाना, सक्रि. ಎಕ್ಕಿಸು, ಹಿಂಜಿಸು.

तुम्हारा, सर्व. ನಿಮ್ಮ, ನಿಮ್ಮದು.

तुम्हें, सर्व. ನಿಮಗೆ, ನಿಮ್ಮನ್ನು.

तुरंग, पु. ಕುದುರೆ; ಕಾಡುಕೋಳಿ.

तुरंगक, पु. ಹೀರೆಕಾಯಿ.

तुरंज, पु. ಚಕ್ಕೋತ, ತೋರಂಜಿ; ಹೆರಳೆ, ನಿಂಬೆ ಮೊದಲಾದುವು; ಶಾಲು ಸಕಲಾತಿಗಳ ಬುಟ್ಟಾ ಕೆಲಸ.

तुरंजबीन, पु. ಚಕ್ಕೋತ ಹಣ್ಣಿನ ಪಾನಕ, ನಿಂಬೆಹಣ್ಣಿನ ಪಾನಕ; ಒಂದು ತರಹದ ಸಕ್ಕರೆ.

तुरंत, क्रिवि. ತಕ್ಷಣ, ಕೂಡಲೆ.

तुरई, स्त्री. ಹೀರೆಕಾಯಿ.

तुरग, पु. ಕುದುರೆ, ತುರಗ.

तुरगी, पु. ಕುದುರೆ ಸವಾರ, ರಾವುತ. स्त्री. ಹೆಣ್ಣು ಕುದುರೆ.

तुरपन, पु. ತಿಬ್ಬಿ ಹೊಲಿಗೆ.

**तुरपना**, सक्रि. ಹೊಲಿ, ತಿಬ್ಬಿ ಹೊಲಿ.

**तुरफ़ा**, वि. ನವೀನ; ಅಪರೂಪದ; ವಿಚಿತ್ರ.

**तुरम**, **तुरही**, स्त्री. ತುತ್ತೂರಿ, ಕಹಳೆ, ಕೊಂಬು.

**तुर्क**, पु. ತುರುಷ್ಕ, ತುರುಕ, ಮುಸಲ್ಮಾನ; ಅನಾಗರಿಕ, ಒರಟ; ಲೂಟಿಗಾರ.

**तुर्कटा**, पु. ತುರುಕ, ಮುಸಲ್ಮಾನ, ಸಾಬ (ಹೀಯಾಳಿಸುವ ಮಾತು).

**तुर्काना**, वि. ತುರುಕರಂಥ. पु. ತುರುಕರ ದೇಶ.

**तुर्कन**, **तुर्किन**, स्त्री. ತುರುಷ್ಕ ಜಾತಿಯ ಸ್ತ್ರೀ; ಮುಸಲ್ಮಾನ ಸ್ತ್ರೀ.

**तुर्की**, स्त्री. ತುರುಷ್ಕ ಭಾಷೆ. वि. ತುರುಷ್ಕದೇಶದ, ಟರ್ಕಿ ದೇಶದ.

**तुर्त**, **तुर्तफुर्त**, **तुर्तीफुर्ती**, क्रिवि. ತಟಕ್ಕನೆ, ಥಟ್ಟನೆ, ಬೇಗನೆ, ಲಗೆಬಗೆ.

**तुर्तरा**, वि. ಚುರುಕು, ಸೂಟಿಯಾದ.

**तुर्ब**, पु. ಮೂಲಂಗಿ.

**तुर्बत**, स्त्री. ಗೋರಿ, ಸಮಾಧಿ.

**तुर्रा**, पु. ಗುಂಗುರು ಗೂದಲು; ಮುಂಗುರುಳು, ಅಲಕ; ಪಕ್ಷಿಯ ಜುಟ್ಟು, ಶಿಖೆ; ಪೇಟಾದಲ್ಲಿ ಅಲಂಕಾರಕ್ಕಾಗಿ ಸಿಕ್ಕಿಸಿದ ಪಕ್ಷಿಯ ಗರಿ; ಟೋಪಿಯ ಮೇಲಿನ ಕುಂಚ, ಕುಚ್ಚು, ಚುಂಗು; ತುರಾಯಿ, ತುಪ್ಪಳ; ಚಬುಕು, ಕಶೆ, ಚಾವಟಿ. वि. ಅದ್ಭುತ, ವಿಚಿತ್ರ.

**तुर्रादार**, वि. ಶಿಖೆಯುಳ್ಳ; ಜುಟ್ಟುಳ್ಳ.

**तुर्श**, वि. ಹುಳಿಯಾದ; ಕಟು; ಸಿಡುಕಲ.

**तुर्श-रू**, वि. ಸಿಡುಮೋರೆಯ; ಕುರೂಪಿ.

**तुर्शी**, स्त्री. ಹುಳಿ; ಸಿಡುಕು; ಕೋಪ.

**तुलतुलाना**, अक्रि. ತೇವದಿಂದ ಮೆತ್ತಗಾಗು; ಗಿಜಿಗಿಜಿಯಾಗು (ಹಣ್ಣು).

**तुलतुली**, स्त्री. ಪಾತ್ರೆಯ ಮೂಗು.

**तुलना**, अक्रि. ತೂಕವಾಗು, ತೂಗಲ್ಪಡು; ಹೋಲು, ಸರಿಗಟ್ಟು; ಸಮತೂಕವಾಗಿರು; ನೆಲಸು, ನಾಟು; ಎರೆಯೆಣ್ಣೆ ಸವರಲ್ಪಡು; ಪ್ರವರ್ತಿಸು; ಸನ್ನದ್ಧನಾಗು. स्त्री. ಹೋಲಿಕೆ; ಸಾಮ್ಯ, ಪಾಸಟಿ, ತುಲನೆ. तुलना करना= ಹೋಲಿಸು; ಸರಿದೂಗು, ಸರಿಹಚ್ಚು.

**तुलवाई**, स्त्री. ತೂಕಮಾಡಲು ಅಥವಾ ಗಾಡಿಯ ಚಕ್ರಗಳಿಗೆ ಎರೆಯೆಣ್ಣೆ ಸವರಲು ಕೊಡುವ ಕೂಲಿ

**तुलवाना**, सक्रि. ತೂಕಮಾಡಿಸು; ಗಾಡಿಯ ಚಕ್ರಕ್ಕೆ ಎರೆಯೆಣ್ಣೆ ಹಾಕಿಸು, ಹೆರೆ ಹಚ್ಚಿಸು.

**तुलवैया**, पु. ತೂಕಮಾಡುವವ.

**तुला**, स्त्री. ತಕ್ಕಡಿ, ತ್ರಾಸು; ತುಲಾರಾಶಿ. वि. ತೂಕಮಾಡಿದ; ಸರಿಗಟ್ಟಿದ

**तुलाई**, स्त्री. ಒಳಗೆ ಹತ್ತಿಯಿಟ್ಟು ಹೊಲಿದ ಹೊದಿಕೆ, ಬೊಂತೆ, ರಜಾಯಿ; ತೂಕ ಮಾಡುವಿಕೆ; ತೂಕ ಮಾಡುವುದಕ್ಕೆ ಕೊಡುವ ಕೂಲಿ.

**तुलाना**, सक्रि. ಎರೆಯೆಣ್ಣೆ ಸವರು, ಹೆರೆ ಹಚ್ಚು; ಹತ್ತಿರ ಬರು; ಕೂಡಿಬರು, ಸರಿ ಬರು.

**तुलावा**, पु. ಅಚ್ಚು ಮರದ ಮೇಲೆ ಕೂಡುವ ಗಾಡಿಯ ಭಾಗ, ಪಾರಿ.

**तुली**, स्त्री. ಹತ್ತಿ; ದೀಪದ ಬತ್ತಿ;

ಕೋಲು; ತೂಗು ಗೋಲು, ದಂಡಿ.
तुल्य, वि. ಸಮವಾದ, ಈಡಾದ.
तुवर, पु. ಒಗರು, ತಿಕ್ತ; ತೊಗರಿ
तुषार, तुसार, पु. ಮಂಜು, ಇಬ್ಬನಿ.
तुष्ट, वि. ತೃಪ್ತಿಹೊಂದಿದ; ಸಂತುಷ್ಟ.
तुष्टि, स्त्री. ತೃಪ್ತಿ, ಸಂತುಷ್ಟಿ.
तुसी, स्त्री. ಉಬ್ಬಲು, ಹೊಟ್ಟು, ಕೊಬ್ಬಟ್ಟು, ಗೊಳಲಿ.
तुहफ़ा, पु. = तोहफ़ा.
तुहमत, स्त्री. = तोहमत.
तुहिं, सर्व. ನಿನಗೆ, ನಿನ್ನನ್ನು.
तुहिन, पु. ಮಂಜು, ಹಿಮ, ಇಬ್ಬನಿ; ಶೈತ್ಯ; ಬೆಳದಿಂಗಳು.
तुंबा, पु. ಕಹಿಸೋರೆ; ಸೋರೆ ಬುರುಡೆ; ಕಮಂಡಲ.
तू, सर्व. ನೀನು. तू तू मैं मैं = ಜಗಳ; ವಾಗ್ವಾದ.
तूअर, पु. ತೊಗರಿ.
तूआरना, सक्रि. ಧಿಕ್ಕರಿಸು, ಹೀಯಾಳಿಸು.
तूण, पु. ಹುಲ್ಲುಕಡ್ಡಿ.
तूणाश, पु. ವಿವಶತೆ.
तूणीर, पु. ಬತ್ತಳಿಕೆ, ಮೂಡಿಗೆ, ಡೊಣೆ.
तूत, पु. ಹಿಪ್ಪಲಿ ನೇರಳೆ, ಕೋರಿ ಹಣ್ಣು.
तूतिया, पु. ತುತ್ತ, ಮೈಲುತುತ್ತ.
तूती, स्त्री. ಅರಗಿಣಿ, ಪುರುಳಿ; ಇಂಪಾಗಿ ಹಾಡುವ ಒಂದು ಪಕ್ಷಿ, ಕೀಚುಗುಬ್ಬಿ; ಚೆನ್ನಾಗಿ ಮಾತನಾಡುವವ, ಸುಭಾಷಿ; ಸಿಳ್ಳುಹಾಕುವ ಕೊಳವಿ, ಸಿಳ್ಳು, ಪೀಪಿ. तूती बोलना = ವಿಖ್ಯಾತಿ ಪಡೆ; ಪ್ರಾಬಲ್ಯಕ್ಕೆ ಬರು.
तूदा, पु. ರಾಶಿ, ಕುಪ್ಪೆ; ಮೆದೆ, ಬಣವೆ; ಗಡಿ, ಹದ್ದು; ಬಾಂದು ಕಲ್ಲು, ಗುರಿ ಕಲ್ಲು; ಗುರಿ ಹಲಗೆ, ವೇಧ್ಯ.
तूना, अक्रि. ಸೋರು; ಜನಿ, ಬಸಿ, ಇಳಿ; ಗರ್ಭಸ್ರಾವವಾಗು, ಹಲಿವಿಳಿ.
तूनीर, पु. = तूणीर.
तूफ़ान, पु. ಗಾಳಿ ಮಳೆ; ಸುಂಟರಗಾಳಿ, ತುಫಾನು, ಬಿರುಗಾಳಿ; ಪ್ರಳಯ; ಅನರ್ಥ, ಹಾವಳಿ; ಹಲ್ಲ, ಗದ್ದಲ; ದೂರು, ಹಳಿಯುವಿಕೆ, ಕಳಂಕ.
तूफ़ानी, वि. ಪ್ರಚಂಡ; ಸುಂಟರಗಾಳಿಯ; ಗಲಾಟೆಯ; ಗಲಾಟೆಖೋರ; ದೂರುವವ.
तूमड़ी, स्त्री. ಕಹಿಸೋರೆ; ಸೋರೆ ಬುರುಡೆ; ಮೊಸಳೆಯ ಮುಸುಡು; ಕುಡಿಕೆ ಬಾಣ, ಕುಡಿಕೆ ಬಿರುಸು; ಪುಂಗಿವಾದ್ಯ.
तूमतड़ाक, स्त्री. = तुमतराक.
तूमना, सक्रि. ಅರಳೆ ಬಿಡಿಸು, ಎಕ್ಕು, ಸಸಿ, ಹಿಂಜು; ತುಂಡುತುಂಡಾಗಿ ಹರಿ; ಮೈದಡವು, ನೀವು.
तूमार, पु. ರಾಶಿ, ಕುಪ್ಪೆ; ಕಾಗದದ ಕಟ್ಟು; ಪುಸ್ತಕ; ಪುಸ್ತಕದ ಸಂಪುಟ, ವಾಲ್ಯೂಮ್; ಮಾತಿನ ವಿಸ್ತರಣ, ಆಕಾಶ ಪುರಾಣ.
तूर, पु. ನಗಾರಿ, ತುತ್ತೂರಿ, ಕಹಳೆ.
तूरना, सक्रि. = तोड़ना.
तूल, पु. ಹತ್ತಿಯ ತೊಳೆ; ಕೆಂಪು ವಸ್ತ್ರ; ಕೆಂಪು ಬಣ್ಣ. पु. ಉದ್ದ; ವಿಸ್ತಾರ; ಹರವು. वि. ಉದ್ದವಾದ, ವಿಸ್ತಾರ

ವಾದ, ನೀಳ, ಲಂಬಿತ. तूल पकडना = ಉದ್ದವಾಗು, ಎಳೆಯಲ್ಪಡು. तूल तवील = ಬಹಳ ಉದ್ದವಾದ.

**तूलना**, सक्रि. ಗಾಡಿಯ ಚಕ್ರಕ್ಕೆ ಎರೆ ಯೆಣ್ಣೆ ಹಚ್ಚು.

**तूला**, स्त्री. ಅರಳೆ, ಹತ್ತಿ.

**तूलिका, तूली**, स्त्री. ತೂಕದ ಕೋಲು; ಹಾಸು ನೂಲನ್ನು ಒರೆಸುವ ಕುಂಚ, ಕುಂಚಿಗೆ, ತೂಲಿಕೆ, ಕೂರ್ಚ.

**तूवर**, पु. ಒಂದು ಕೊಂಬುಳ್ಳ ಎತ್ತು; ದಾಡಿಯಿಲ್ಲದವ; ನಪುಂಸಕ.

**तूस**, पु. ಉಬ್ಬಲು, ಗೊಳಲಿ, ಹೊಟ್ಟು; ನಯವಾದ ಒಂದು ಒಗೆ ಉಣ್ಣೆಯ ಬಟ್ಟೆ; ಸಿಡಿಮದ್ದಿನ ತೋಟೆ.

**तूसदान**, पु. ಮದ್ದಿನ ತೋಟೆ; ತು ಪಾಕಿಯ ದಸ್ತು.

**तूसना**, सक्रि. तृप्ति पडिसु. अक्रि. तृप्ति ಹೊಂದು; ಬಾಡು, ಕಂದು, ಮಾಸು.

**तृप्ति**, स्त्री. तृप्ति; ತಣಿವು.

**तें**, उप. ಇಂದ, ಒಂದಿಗೆ.

**तेंतालीस**, वि. ನಲವತ್ತಮೂರು.

**तेंतीस**, वि. ಮೂವತ್ತಮೂರು.

**तेंदुआ**, पु. ಚಿರತೆ, ಸಿವಂಗಿ.

**तेंदू**, पु. ಒಂದು ಹಣ್ಣು.

**ते**, सर्व. ಅವರು, ಅವು.

**तेईस**, वि. ಇಪ್ಪತ್ತಮೂರು.

**तेग़**, स्त्री. ಖಡ್ಗ, ಬಾಳು, ಬಾಕು.

**तेग़ज़न**, पु. ಕತ್ತಿ ಸಾಧಕ, ಕತ್ತಿಗಾರ.

**तेग़ा**, स्त्री. ಖಡ್ಗ, ಕಠಾರಿ; ಒಂದು ಕುಸ್ತಿ ವರಸೆ; ಬಾಗಿಲನ್ನು ಇಟ್ಟಿಗೆ ಮಣ್ಣುಗಳಿಂದ ಮುಚ್ಚುವಿಕೆ.

**तेज**, पु. ತೇಜಸ್ಸು; ಪರಾಕ್ರಮ, ಶಕ್ತಿ, ಪ್ರತಾಪ; ಚುರುಕು.

**तेज़**, वि. ತೀಕ್ಷ್ಣ; ಕೂರಾದ, ಹರಿತ ವಾದ, ಚೂಪು; ಉಗ್ರ, ತೀವ್ರ; ಕಾರ ವಾದ; ಚಟುವಟಿಕೆಯುಳ್ಳ, ಸೂಟಿ, ಚುರುಕಾದ; ಬಿಸಿಯಾದ; ಬೆಲೆಯೇ ರಿದ, ತುಟ್ಟಿ.

**तेज़-दस्त**, वि. ಕೈಚಳಕವುಳ್ಳ; ಹಸ್ತ ಕುಶಲ.

**तेजपत्ता, तेजपात**, पु. ಲವಂಗ ಪತ್ರೆ.

**तेज़-फ़हम**, वि. ಚುರುಕುಬುದ್ಧಿ, ಕುಶಾಗ್ರಬುದ್ಧಿ.

**तेज़ाब**, पु. ದ್ರಾವಕ, ಆಮ್ಲ.

**तेज़ाबी**, वि. ದ್ರಾವಕದ.

**तेज़ी**, स्त्री. ತೀಕ್ಷ್ಣತೆ; ಕೂರ್ಪು, ಹರಿತ; ಚುರುಕು, ಚಟುವಟಿಕೆ; ವೇಗ; ತ್ವರೆ; ರಭಸ, ಭರ; ಕಾರ; ತಟ್ಟು, ತಗ್ಗು; ಉಷ್ಣ, ಕಾವು; ಒತ್ತರ; ಕೋಪ.

**तेता**, वि. ಅಷ್ಟು.

**तेपची**, स्त्री. ಹೋಲಿಗೆ, ತಿಬ್ಬಿ, ಟಾಕ.

**तेरस**, स्त्री. ತ್ರಯೋದಶಿ.

**तेरह**, वि. ಹದಿಮೂರು.

**तेरहवीं, तेरहीं**, स्त्री. ಮೃತಿಹೊಂದಿದ ಹದಿಮೂರನೇ ದಿವಸ ಮಾಡುವ ಗೃಹ ಶಾಂತಿ, ವೈಕುಂಠಸಮಾರಾಧನೆ.

**तेरा**, सर्व. ನಿನ್ನ. तेरा मेरा करना = ಯಾವುದಾದರೂ ಒಂದು ವಸ್ತುವಿ ಗಾಗಿ ಜಗಳವಾಡು.

**तेरे**, अव्य. ಅಂಥ, ಆಗಿ. बहुतेरे =

ಕೆಡಿಸು.

**नटनी, नटिन,** स्त्री. ನರ್ತಕಿ, ನಟಿ.

**नटया,** पु. ನಾಟ್ಯಕಲೆ, ನಾಟ್ಯ.

**नटवा,** पु. ನಾಟ್ಯಗಾರ.

**नटसाल,** स्त्री. ಮೈಯಲ್ಲಿ ಚುಚ್ಚಿಕೊಂಡು ಮುರಿದ ಮುಳ್ಳು ಅಥವಾ ಬಾಣದ ತುದಿ; ನೋವು, ವೇದನೆ.

**नटी,** स्त्री. ನಾಟ್ಯಗಾತಿ, ನರ್ತಕಿ; ಅಭಿನಯ ಮಾಡುವವಳು, ಅಭಿನೇತ್ರಿ; ಮೆಣಸಿಲೆ.

**नटुआ,** पु. ನಟ್ಟುವ, ನಟ.

**नटेरना,** सक्रि. ಸಾಯುವಾಗ ಕಣ್ಣು ಮುಚ್ಚು.

**नठिया,** पु. ಪೋಲಿ, ಉಂಡಾಡಿ.

**नढ़ना,** सक्रि. ಪೋಣಿಸು, ಕಟ್ಟು.

**नतिनी,** स्त्री. ಮಗಳ ಮಗಳು, ಮೊಮ್ಮಗಳು.

**नतीजा,** पु. ಮಕ್ಕಳು ಮರಿ; ಹುಟ್ಟು; ಜನ್ಮ; ಫಲ, ಫಲಿತಾಂಶ; ಪರಿಣಾಮ; ಸಾರಾಂಶ; ಪ್ರತಿಫಲ.

**नतु,** क्रिवि. ಇಲ್ಲವಾದರೆ.

**नतैत,** पु. ನೆಂಟ, ಬಂಧು, ಬಳಗ.

**नतली, नत्तल,** वि. ಬಗ್ಗಿದ; ವಕ್ರ, ಡೊಂಕಾದ. स्त्री. ಬಸವನ ಹುಳು.

**नत्थी,** स्त्री. ಕಾಗದಪತ್ರಗಳ ಕಟ್ಟು, "ಫೈಲು"; ಕಾಗದಗಳನ್ನು ಪೋಣಿಸುವ ದಾರ, ತಬಲಕು. वि. ಲಗತ್ತಿಸಿದ, ಜಂಟಿಸಿದ. **नत्थी करना** = ಲಗತ್ತು ಮಾಡು, ಜಂಟಿಸು.

**नथ,** स्त्री. ಮೂಗುದಾರ; ಮೂಗುತಿ, ನತ್ತು.

**नथना,** पु. ಮೂಗಿನ ತುದಿ, ಹೊಳ್ಳೆ; ಮೂಗಿನ ರಂಧ್ರ. अक्रि. ರಂಧ್ರ ಹಾಕಲ್ಪಡು, ಲಗತ್ತಿಸಲ್ಪಡು.

**नथनी, नथिया,** स्त्री. ಸಣ್ಣ ನತ್ತು, ಬುಲಾಕು.

**नदामत,** स्त्री. ನಾಚಿಕೆ, ಲಜ್ಜೆ; ಪಶ್ಚಾತ್ತಾಪ, ಖೇದ.

**नदारद,** वि. ಅದೃಶ್ಯ, ಮಾಯವಾದ, ಪರಾರಿ.

**नदिया, नदी, नद्दी,** स्त्री. ತೊರೆ, ನದಿ, ಹೊಳೆ.

**नदीम,** पु. ಜೊತೆಗಾರ; ಗೆಳೆಯ; ಆಪ್ತ; ಸಭಾಸದ; ಸಚಿವ.

**नदोला,** पु. ಮಣ್ಣಿನ ತಟ್ಟೆ, ಶ್ರಾವೆ.

**नद्दाफ़,** पु. ಅರಳೆ ಎಕ್ಕುವವ, ಪಿಂಜಾರ.

**नद्दाफ़ी,** स्त्री. ಅರಳೆ ಎಕ್ಕುವಿಕೆ; ಪಿಂಜಾರನ ಕೆಲಸ ಅಥವಾ ಕಸಬು.

**नधना,** अक्रि. ನೊಗಕ್ಕೆ ಅಥವಾ ಗಾಡಿಗೆ ಕಟ್ಟಲ್ಪಡು, ಹೂಡಲ್ಪಡು; ಕೆಲಸ ಪ್ರಾರಂಭವಾಗು.

**ननंद, ननद, ननदी,** स्त्री. ಗಂಡನ ಸೋದರಿ, ನಾದಿನಿ.

**ननका,** पु. ಮಗು, ಹುಡುಗ.

**ननदोई,** पु. ನಾದಿನಿಯ ಗಂಡ.

**ननसार,** स्त्री. = **ननिहाल.**

**ननिया,** वि. ತಾಯಿಯ ತಂದೆಗೆ ಸಂಬಂಧಪಟ್ಟ, ಮಾತಾಮಹರ. **ननिया ससुर** = ಹೆಂಡತಿ ಅಥವಾ ಗಂಡನ ಮಾತಾಮಹ, ಅತ್ತೆಯ ತಂದೆ.

निइाल, पु. (स्त्री.) ತಾಯಿಯ ತವ
ುಮನೆ, ಮಾತಾಮಹರ ಮನೆ; ತಾ
ಯಿಯ ಸಂಬಂಧದವರು.

नु-नच, पु. = नाह-नूह.

न्हा, वि. ಚಿಕ್ಕ, ಪುಟ್ಟ, ಕಿರಿಯ.

न्हाई, स्त्री. ಚಿಕ್ಕತನ, ಕಿರಿಯತನ.

न्ही, स्त्री. ಚಿಕ್ಕ ಹುಡುಗಿ.

न्हू, पु. ಚಿಕ್ಕ ಹುಡುಗ; ಪುಟ್ಟಾರಿ.

रत, स्त्री. ಅಳೆಯುವಿಕೆ; ಅಳತೆ.

रना, अक्रि. ಅಳೆಯಲ್ಪಡು; ಅಳತೆ
ಮಾಗು; ಜಗಳವಾಡು. पु. ಒಂದು
ಅಳತೆ.

राई, स्त्री. ಅಳೆಯುವಿಕೆ; ಅಳೆಯು
ವುದಕ್ಕೆ ಕೊಡುವ ಕೂಲಿ.

पुंसक, पु. ಪೌರುಷವಿಲ್ಲದವ, ನಪುಂ
ಸಕ; ಹೇಡಿ; ಅಶಕ್ತ.

पुंसकता, स्त्री. ನಪುಂಸಕತನ.

नफ़र, पु. ಸೇವಕ, ಆಳು; ಕಾಸದಾರ;
ಒಬ್ಬಮನುಷ್ಯ, ವ್ಯಕ್ತಿ, ಇಸಂ, ನಫರ.

नफ़राई, स्त्री. ಸೇವೆ, ಶುಶ್ರೂಷೆ.

नफ़रत, स्त्री. ಪಲಾಯನ; ಭಯ; ಜು
ಗುಪ್ಸೆ, ಅಸಹ್ಯ, ಹೇಸಿಕೆ; ತಿರಸ್ಕಾರ.

नफ़रानी, स्त्री. ಸೇವಕಿ, ತೊತ್ತು.

नफ़री, स्त्री. ಒಬ್ಬ ಕೂಲಿಯಾಳಿನ
ಒಂದು ದಿವಸದ ಕೆಲಸ, ಆಳುಗೆಲಸ;
ಒಂದು ದಿವಸದ ಕೂಲಿ, ದಿನಗೂಲಿ.

नफ़रीन, स्त्री. ಹೇಸಿಕೆ, ಅಸಹ್ಯ; ನಿಂದೆ;
ಶಾಪ; ಅಪಹಾಸ್ಯ; ಭಯ.

नफ़ल, पु. ಸೂರೆ; ಲೂಟಿ.

नफ़स, पु. ಶ್ವಾಸ, ಉಸಿರು.

नफ़ा, पु. ಲಾಭ, ನಫೆ; ಆದಾಯ; ಬಡ್ಡಿ.

नफ़ासत, स्त्री. ಉತ್ಕೃಷ್ಟತೆ, ಮೇಲ್ಮೆ.

नफ़ीर, नफ़ीरी, स्त्री. ಕೊಳಲು; ಸನೌರಿ,
ಸನಾದಿ; ತತ್ತೂರಿ, ಕಹಳೆ.

नफ़ीस, वि. ಉತ್ಕೃಷ್ಟ; ಮೇಲು;
ಸ್ವಚ್ಛ; ಸುಂದರ.

नफ़्स, पु. ಜೀವ; ಆತ್ಮ; ಅಸ್ತಿತ್ವ,
ಸತ್ತಾ; ಸಾರ; ಒಬ್ಬ ವ್ಯಕ್ತಿ; ಕಾಮ,
ಇಚ್ಛೆ; ವಿಲಾಸ; ವೀರ್ಯ, ಇಂದ್ರಿಯ.
नफ़्सकश, नफ़्सकुश = ಇಂದ್ರಿಯ
ನಿಗ್ರಹ ಮಾಡಿದವ.

नफ़्सानियत, स्त्री. ಇಂದ್ರಿಯಸುಖ,
ಭೋಗ; ವಿಲಾಸ; ಆಡಂಬರ; ಜಂಭ,
ಗರ್ವ; ಅಹಂಕಾರ.

नफ़्सानी, वि. ಇಂದ್ರಿಯ ಸಂಬಂಧ
ವಾದ, ವಿಷಯ ವಿಲಾಸದ.

नफ़्सी, वि. ಆತ್ಮಕ್ಕೆ ಸಂಬಂಧಿಸಿದ;
ವಿಲಾಸದ.

नबर्द, स्त्री. ಯುದ್ಧ, ಕದನ.

नबर्दगाह, स्त्री. ಯುದ್ಧಸ್ಥಳ, ರಣಕ್ಷೇತ್ರ

नबात, स्त्री. ಪೈರುಪಚ್ಚೆ; ಹಸುರು
ವಾಣಿ; ತರಕಾರಿ, ಕಾಯಿಪಲ್ಯ; ಗಿಡ;
ಹುಲ್ಲು; ಕಲ್ಲುಸಕ್ಕರೆ; ಸಕ್ಕರೆ; ಸಿಹಿ
ತಿಂಡಿ, ಮಿಠಾಯಿ.

नबी, पु. ಈಶ್ವರನ ದೂತ, ಪೈಗಂಬರು,
ನಬೀ; ಭವಿಷ್ಯವಾದಿ.

नबीरा, पु. ಮೊಮ್ಮಗ.

नबीरी, स्त्री. ಮೊಮ್ಮಗಳು.

नबेड़ना, सक्रि. ಫೈಸಲು ಮಾಡು,
ಬಗೆಹರಿಸು, ತೀರಿಸು; ಬಿಡಿಸು, ವಿಂಗ

ಡಿಸು; ಆಯು.

**नबेड़ा**, पु. ಫೈಸಲು, ಇತ್ಯರ್ಥ, ತೀರ್ಮಾನ

**नब्ज़**, स्त्री. ನಾಡಿಯ ಚಲನೆ; ನಾಡಿ.

**नब्बाज़**, पु. ನಾಡಿ ಪರೀಕ್ಷೆ ಮಾಡುವವ; ವೈದ್ಯ, ಹಕೀಮ.

**नब्बे**, वि. ತೊಂಭತ್ತು.

**नभ**, पु. ಆಕಾಶ, ಅಂತರಿಕ್ಷ.

**नम**, वि. ತೋಯ್ದ, ಒದ್ದೆ, ತೇವವಾದ, ನೆನೆದ.

**नमक**, पु. ಉಪ್ಪು, ಲವಣ; ರುಚಿ, ಸವಿ; ಲಾವಣ್ಯ, ಸೊಬಗು. नमक मिर्च लगाना = ಉಪ್ಪು ಕಾರ ಹಚ್ಚಿ ವರ್ಣಿಸು.

**नमकख़्वार**, वि. ಉಪ್ಪುಣ್ಣುವವ, ಪೋಷಿತ. पु. ಸೇವಕ, ಆಳು.

**नमकदान**, पु. ಉಪ್ಪಿನ ಪಾತ್ರೆ.

**नमकसार**, पु. ಉಪ್ಪಿನ ಕಟ್ಟೆ, ಉಪ್ಪು ಮಡಿ, ಆಗರ.

**नमकहराम**, पु. ಉಂಡಮನೆಗೆ ಎರಡು ಬಗೆಯುವವ, ದ್ರೋಹಿ; ಕೃತಘ್ನ.

**नमकहरामी**, स्त्री. ದ್ರೋಹ; ಕೃತಘ್ನತೆ.

**नमकहलाल**, पु. ಕೃತಜ್ಞ; ಸ್ವಾಮಿನಿಷ್ಠ; ಸ್ವಾಮಿಭಕ್ತ; ವಿಧೇಯ.

**नमकहलाली**, स्त्री. ಕೃತಜ್ಞತೆ; ಸ್ವಾಮಿನಿಷ್ಠೆ.

**नमकीन**, वि. ಉಪ್ಪು ಹಚ್ಚಿದ, ಉಪ್ಪಿನ; ಉಪ್ಪಾದ, ಚವುಳು; ಲಾವಣ್ಯವುಳ್ಳ, ಅಂದವಾದ, ಸೊಗಸಾದ; ಶ್ಯಾಮಲವರ್ಣದ. पु. ಉಪ್ಪುಕಾರ ಹಾಕಿದ ತಿಂಡಿ, 'ಖಾರ'.

**नमकीनी**, स्त्री. ಉಪ್ಪು, ಖಾರ; ಸವಿ, ರುಚಿ; ಶ್ಯಾಮಲವರ್ಣ.

**नमगीरा**, पु. ವಿತಾನ, ಉಲ್ಲಡೆ, ಮೇಲ್ಕಟ್ಟು, ಅಸಮಾನಗಿರಿ.

**नमद, नमदा**, पु. ಒತ್ತಿಕ್ಕಿ ಗಟ್ಟಿಸಿದ ಉಣ್ಣೆಬಟ್ಟೆ, ಉಜ್ಜುಗಂಬಳಿ.

**नमदीदा**, वि. ನೀರು ತುಂಬಿದ ಕಣ್ಣುಗಳುಳ್ಳ.

**नमन**, पु. ಎರಗುವಿಕೆ, ಬಾಗುವಿಕೆ, ನಮಸ್ಕಾರ. वि. ಬಗ್ಗಿದ, ಬಾಗಿದ.

**नमना**, अक्रि. ಎರಗು, ಬಾಗು; ನಮಿಸು, ನಮಸ್ಕರಿಸು.

**नमनाक**, वि. ನೆನೆದ, ಒದ್ದೆಯಾದ; ಇಬ್ಬನಿಯಲ್ಲಿ ನೆನೆದ.

**नमस्कार, नमस्ते**, पु. ನಮಸ್ಕಾರ.

**नमाज़**, स्त्री. ಮುಸಲ್ಮಾನರ ದೇವತಾ ಪ್ರಾರ್ಥನೆ, ನಮಾಜು; ಪೂಜೆ. नमाज़ पढ़ना = ದೇವತಾಪ್ರಾರ್ಥನೆ ಮಾಡು.

**नमाज़गाह**, स्त्री. ಮಸೀದಿಯಲ್ಲಿ ಪ್ರಾರ್ಥನೆ ಸಲ್ಲಿಸುವ ಸ್ಥಳ.

**नमाज़बंद**, पु. ಕುಸ್ತಿಯ ಒಂದು ವರಸೆ.

**नमाज़ी**, पु. ದೇವತಾಪ್ರಾರ್ಥನೆ ಮಾಡುವವ; ಭಕ್ತ; ನಮಾಜು ಮಾಡುವಾಗ ನೆಲದ ಮೇಲೆ ಹಾಸಿಕೊಳ್ಳುವ ವಸ್ತ್ರ.

**नमिल**, वि. ಚುರುಕಾದ, ಚಟುವಟಿಕೆಯುಳ್ಳ.

**नमिश**, स्त्री. ಹಾಲುಬೋವಾ, ಪನೀರು.

**नमी**, स्त्री. ಒದ್ದೆ; ತೇವ, ವಸ್ತಿ; ಥಂಡಿ.

**नमूद**, स्त्री. ಮೂಡುವಿಕೆ, ಪ್ರಕಟವಾಗುವಿಕೆ; ಪ್ರಸಿದ್ಧಿ; ಗುರುತು, ಚಿಹ್ನೆ;

ಜಂಭ, ಆಡಂಬರ.

मूदार, वि. ಮೂಡಿದ, ಪ್ರಕಟವಾದ; ಹೆಸರುವಾಸಿಯಾದ, ವಿಖ್ಯಾತ; ಆಡಂಬರದ, ಡಂಬದ. पु. ನಮೂನೆ, ಮಾದರಿ; ಚಿಹ್ನೆ; ರುಜುವಾತು, ಪ್ರಮಾಣ; ಪ್ರತಿರೂಪ, ಪ್ರತಿಕೃತಿ.

मूदारी, स्त्री. ಪ್ರಸಿದ್ಧಿ; ತೋರಿಕೆ, ಡಂಬ.

नमूना, पु. ಮಾದರಿ, ನಮೂನೆ; ಮಾನೆ, ಪಡಿಕಟ್ಟು; ರೀತಿ, ತರಹ; ಮಾದರಿಗಾಗಿ ಇಟ್ಟುಕೊಂಡಿರುವ ಚಿನ್ನದ ತುಂಡು, ಮಚ್ಚು.

नम्र, वि. ಬಗ್ಗಿದ; ವಿನಯವುಳ್ಳ, ನಮ್ರ; ಮೃದು.

नम्रता, स्त्री. ನಮ್ರತೆ; ವಿನಯ; ನಯ.

नय, पु. ನೀತಿ; ವಿನಯ, ನಯ.

नयन, नयना, पु. ಕಣ್ಣು, ನಯನ.

नयनी, स्त्री. ಕಣ್ಣುಗೊಂಬೆ, ಪಾಪೆ.

नयर, पु. ನಗರ, ಪಟ್ಟಣ.

नया, वि. ನವೀನ, ಹೊಸ, ನೂತನ.

नयापन, पु. ನವೀನತೆ, ಹೊಸತು.

नयाम, पु. ಖಡ್ಗಕೋಶ, ಒರೆ.

नर, पु. ಪುರುಷ, ಗಂಡಸು; ಗಂಡು; ಛಾಯಾ ಯಂತ್ರದ ಶಂಕು; ನೀರಿನ ಕೊಳಾಯಿ, ನಲ್ಲಿ. वि. ಗಂಡು.

नरक, पु. ನರಕ.

नरकट, नरकल, पु. ಲಾಳದ ಕಡ್ಡಿ, ಗಲಗು.

नरकस, पु. ಕಂಠನಾಳ, ಗಂಟಲು.

नरखड़ा, पु. नरखड़ी, स्त्री. ಕಂಠ.

नरगा, पु. ಗುಂಪು, ತಂಡ; ಆಪತ್ತಿನ ಸ್ಥಳ.

नरगिस, स्त्री. ಕುಮುದ, ನೈದಿಲೆ.

नरगिसी, वि. ನೈದಿಲೆಯಂತಹ; ನೈದಿಲೆಯ. स्त्री. ಒಂದು ಬಗೆ ಬಟ್ಟೆ; ಒಂದು ಬಗೆಯ ಊಟ.

नरदन, स्त्री. ಗರ್ಜನೆ, ಗಡಾವಣೆ.

नरदारा, पु. ನಪುಂಸಕ; ಹೇಡಿ, ಪುಕ್ಕ.

नरबदा, स्त्री. ನರ್ಮದಾ ನದಿ.

नरम, स्त्री. ಮೃದು, ಮೆದು; ನಿಧಾನ, ಮಂದ; ಮೆತ್ತನೆ; ನವುರು; ಕೋಮಲ; ನಯ.

नरमक, वि. ಮೃದುವಾದ; ಕೋಮಲ; ನಾಜೂಕಾದ.

नरम-गरम, वि. ಉಗುರುಬೆಚ್ಚಗಾದ; ಹೊಸ ಮತ್ತು ಹಳೆಯ; ಒಳ್ಳೆಯ ಕೆಟ್ಟ.

नरम-चारा, पु. ಎಳೆಯ ಹುಲ್ಲು.

नरम-दिल, वि. ಕೋಮಲ ಹೃದಯದ

नरमा, पु. ಎಲವ, ಬೂರುಗ, ದೂದಿ ಹತ್ತಿ; ಕಿವಿಯ ಆಲೆ, ತಮ್ಮೆ; ಒಂದು ಬಗೆ ನಯವಾದ ಬಟ್ಟೆ.

नरमाई, स्त्री. ಮೃದುತ್ವ; ಕೋಮಲತೆ.

नर-मादगी, स्त्री. नर-मादा, पु. ಗಂಡುಹೆಣ್ಣು; ಒಂದು ಜತೆ ಕೀಲು.

नरमाना, सक्रि. ಮೃದುಮಾಡು, ಶಾಂತಪಡಿಸು. अक्रि. ಮೆತ್ತಗಾಗು; ಸಡಿಲವಾಗು; ಶಾಂತವಾಗು; ತಣ್ಣಗಾಗು.

नरमी, स्त्री. ಮೃದುತ್ವ, ಸೌಮ್ಯತ್ವ, ಕೋಮಲತೆ, ನುಣುಪು, ನಯ.

नरमियत, स्त्री. ಮೃದುತ್ವ.

नरमेध, पु. ನರಬಲಿ ಕೊಡುವ ಯಾಗ.

नरमेश, पु. ಮೇಷ, ಟಗರು.

**नरसल**, पु. = नरकट.

**नरसिंघ, नरसिंह**, पु. ನರಸಿಂಹ; ಶೂರವೀರ.

**नरसिंघा, नरसिंहा**, पु. ಕಹಳೆ, ಕೊಂಬು ಕಾಳೆ, ಸಿಂಗನಾದ.

**नरसिंघिया, नरसिंह्यिा**, पु. ಕಹಳೆ ಕಾರ, ಕಹಳೆಯುವ.

**नरसों**, क्रिवि. ಬರುವ ಅಥವಾ ಕಳೆದು ಹೋದ ನಾಲ್ಕನೆಯು ದಿವಸ.

**नरहर**, पु. ಮೊಣಕಂಡ, ಕಣಕಾಲು.

**नरहरी**, पु. ಒಂದು ಛಂದಸ್ಸು.

**नरहाई**, स्त्री. ಎತ್ತುಗಳ ಮಂದೆ.

**नराच**, पु. ಬಾಣ, ಅಂಬು.

**नरिया**, पु. ಬಿಲ್ಲೆಹೆಂಚು, ದೋಣಿಹೆಂಚು.

**नरी**, स्त्री. ಹದಮಾಡಿದ ತೊಗಲು, ಕುರಿಯು ಚಕ್ಕಳ; ನೇಯಿಕಾರನ ಲಾಳಿ, ಅಟ್ಟೆ, ನಳಿಗೆ; ಪುರುಷೇಂದ್ರಿಯ; ಒಂದು ಬಗೆ ಬಾಣ ಬಿರುಸು.

**नरेंद्र**, पु. ಅರಸ, ರಾಜ; ವಿಷವೈದ್ಯ

**नरेट, नरेटा**, पु. **नरेटी**, स्त्री. ಕುತ್ತಿಗೆ, ಕೊರಳು; ಗಂಟಲು.

**नरेश**, पु. ಅರಸ, ರಾಜ, ಧೊರೆ.

**नर्त्तक**, पु. ನರ್ತಕ; ಹಾಸ್ಯಗಾರ.

**नर्त्तकी**, स्त्री. ನರ್ತಕಿ; ಪಾತರದವಳು.

**नर्त्तन**, पु. ನರ್ತನ, ನೃತ್ಯ, ಕುಣಿತ.

**नर्द**, स्त्री. ಪಗಡೇಕಾಯಿ, ಆಟಗಾಯಿ; ಕಾಯಿ ನಡೆಸುವ ಆಟ.

**नर्दबाज़ी**, स्त्री. ಪಗಡೆಯಾಟ.

**नर्दवान**, पु. ಏಣಿ, ನಿಚ್ಚಣಿಕೆ.

**नर्म**, वि. = नरम. पु. ಹಾಸ್ಯ, ಪರಿಹಾಸ.

**नर्मद**, पु. ಹಾಸ್ಯಗಾರ, ವಿದೂಷಕ.

**नल**, पु. ಕೊಳವೆ, ನಳಿಗೆ, ನಾಳ; ಕೊಳಾಯಿ, ನಲ್ಲಿ; ಜಲದಾರಿ, ಬಚ್ಚಲು ಚರಂಡಿ; ಮೂತ್ರವಾಹಿನಿ, ಮೂತ್ರನಾಳ

**नलवा**, पु. ಕೊಳವೆ; ಬಿದಿರಿನ ಅಂಡೆ.

**नला**, पु. ಮೂತ್ರನಾಳ, ಮೂತ್ರ ವಾಹಿನಿ; ಕೈ ಕಾಲುಗಳ ಎಲುಬಿನ ದಂಟು; ಎಲುಬು, ಅಸ್ಥಿ; ದೊಡ್ಡ ನಳಿಗೆ

**नलाई**, स्त्री. ಕಳೆ ಕೀಳುವಿಕೆ; ಕಳೆ ಕೀಳುವುದಕ್ಕೆ ಕೊಡುವ ಕೂಲಿ.

**नलिका**, स्त्री. ನಾಳ, ಕೊಳವೆ; ಒಂದು ಬಗೆ ಪರಿಮಳ ದ್ರವ್ಯ; ಬತ್ತಳಿಕೆ.

**नलिया**, पु. ಹಕ್ಕಿ ಬೇಟೆಗಾರ.

**नली**, स्त्री. ಚಿಕ್ಕ ಕೊಳವೆ; ಕಾಲಿನ ಎಲುಬು; ಮೊಣಕಾಲಿನ ಕೆಳಭಾಗ, ಮೊಣಕಂಡ, ಕಣಕಾಲು; ನೇಯ್ಗೆಯವನ ಲಾಳಿ, ಅಟ್ಟೆ; ತುಪಾಕಿಯ ಕೊಳವಿ.

**नलुवा** पु. = नलवा.

**नव**, वि. ಒಂಭತ್ತು; ನವ, ನವೀನ, ಹೊಸ; ತರುಣ.

**नवक**, पु. ಒಂಭತ್ತರ ಸಮೂಹ, ನವಕ.

**नवजात**, वि. ಈಗ ಹುಟ್ಟಿದ, ಹೊಸ ದಾಗಿ ಹುಟ್ಟಿದ.

**नवद**, वि. ತೊಂಭತ್ತು.

**नवनी**, स्त्री. ಬೆಣ್ಣೆ.

**नवना**, अक्रि. ಬಾಗು, ಮಣಿ; ಎರಗು.

**नवम**, वि. ಒಂಭತ್ತನೆಯ.

**नवयुवक**, पु. ತರುಣ, ಯುವಕ.

**नवयौवना**, स्त्री. ತರುಣಿ, ಯುವತಿ.

**नवरंग**, वि. ಸುಂದರ, ಚೆಲುವಾದ;

ನವೀನ, ಹೊಸ.

**नवल,** वि. ನವ, ಹೊಸ; ಚಲೋ ವಾದ; ಸುಂದರ; ಯುವಕ, ತರುಣ; ಉಜ್ಜ್ವಲ; ಅಪರೂಪವಾದ.

**नवल-किशोर,** पु. ನವಯುವಕ, ನವ ತರುಣ; ಶ್ರೀಕೃಷ್ಣ.

**नवला,** स्त्री. ಯುವತಿ, ತರುಣಿ; ಸುಂದರಿ.

**नवली,** स्त्री. ಹೊಸದು, ನವೀನತೆ; ತಾ ರುಣ್ಯ, ಯೌವನ; ಶುಭ್ರತೆ; ಬೆಳಗು.

**नवशिक्षित,** वि. ಹೊಸದಾಗಿ ಕಲಿತವ; ಆಧುನಿಕ ಶಿಕ್ಷಣ ಹೊಂದಿದವ.

**नवसर,** पु. ಒಂಭತ್ತು ಲಡಿಗಳ ಹಾರ.

**नवसिखुआ,** वि. = नौसिखुआ.

**नवां,** वि. ಒಂಭತ್ತನೆಯ.

**नवाई,** स्त्री. ಬಾಗುವಿಕೆ, ಎರಗುವಿಕೆ; ವಂದನೆ.

**नवाज़,** वि. ಮಾಡುವವ.

**नवाज़िश,** स्त्री. ದಯೆ, ಕೃಪೆ; ಅಭಿ ವಂದನೆ.

**नवाड़ा,** पु. ದೋಣಿ, ಓಡ.

**नवाना,** सक्रि. ಬಾಗು, ಬಗ್ಗಿಸು, ಮಣಿಸು.

**नवान्न,** पु. ಹೊಸ ಧಾನ್ಯ; ಸುಗ್ಗಿಯ ಹಬ್ಬ.

**नवाब,** पु. ಮೊಗಲಾಯಿ ಕಾಲದ ರಾಜಪ್ರತಿನಿಧಿ, ಪ್ರಾಂತೀಯ ಶಾಸಕ, ನವಾಬ; ರಾಜಕುಮಾರ; (ಮುಸಲ್ಮಾನ) ಧೊರೆ; ಪ್ರಭು. वि. ಧೊರೆಯಂಥ ಬಹಳ ವೈಭವದಿಂದಿರುವ, ದೌಲತ್ತಿನಿಂದಿರುವ; ಶ್ರೀಮಂತ. नवाबज़ादा = ನವಾಬನ ಮಗ. नवाबज़ादी = ನವಾಬನ ಮಗಳು.

**नवाबी,** स्त्री. ನವಾಬರ ಕೆಲಸ ಅಥವಾ ಪದವಿ, ನವಾಬಗಿರಿ; ನವಾಬರ ಆಳಿಕೆ, "ನವಾಬಿ ದರ್ಬಾರು"; ದೌಲತ್ತು, ಶ್ರೀಮಂತಿಕೆ.

**नवारना,** अक्रि. ತಿರುಗಾಡು, ಸುತ್ತು, ಸಂಚರಿಸು.

**नवाला,** पु. ಕವಳ, ತುತ್ತು.

**नवासा,** पु. ಮಗಳ ಮಗ, ದೌಹಿತ್ರ, ಮೊಮ್ಮಗ.

**नवासी,** स्त्री. ಮಗಳ ಮಗಳು, ಮೊಮ್ಮಗಳು. वि. ಎಂಭತ್ತೊಂಭತ್ತು.

**नवाह,** पु. ಒಂಭತ್ತು ದಿವಸ; ಒಂಭತ್ತು ದಿನಗಳಲ್ಲಿ ಭಾರತ ಮೊದಲಾದುವುಗಳ ಪಠನ. स्त्री. ಕಡೆ, ಪಕ್ಕ; ಅಕ್ಕಪಕ್ಕ.

**नविश्त,** स्त्री. ಬರವಣಿಗೆ; ಪತ್ರ, ಕಾಗದ.

**नविश्ता,** वि. ಬರೆದ; ಬರೆದಿರುವ, ಲಿಖಿತ. पु. ಕಾಗದ, ಪತ್ರ.

**नवी,** स्त्री. ಹಾಲು ಕರೆಯುವಾಗ ಹಸುವಿನ ಹಿಂಗಾಲುಗಳನ್ನು ಕಟ್ಟುವ ಹಗ್ಗ, ದಳೆ, ಸರಹಗ್ಗ.

**नवीन,** वि. ನವ, ಹೊಸ; ನೂತನ; ತರುಣ

**नवीनता,** स्त्री. ಹೊಸದು, ನವೀನತೆ.

**नवीस,** पु. ಲೇಖಕ, ಬರೆಹಗಾರ.

**नवीसी,** स्त्री. ಬರೆಯುವಿಕೆ, ಲೇಖನ, ಬರಹ.

**नवेद,** पु. ಶುಭವಾರ್ತೆ; ಆಹ್ವಾನಪತ್ರ.

**नवेला,** वि. ನವ, ಹೊಸ; ಪ್ರಾಯದ, ತರುಣ; ಅಪರೂಪವಾದ. पु. ಸುಂ

ದರ ಯುವಕ, ಚೆಲುವ.

**नवेली,** स्त्री. ಚೆಲುವೆ, ಸುಂದರಿ.

**नशस्त,** स्त्री. ಕುಳಿತುಕೊಳ್ಳುವಿಕೆ.

**नशस्तगाह,** स्त्री. ಕುಳಿತುಕೊಳ್ಳುವ ಕೋಣೆ.

**नशा,** पु. ಮತ್ತು, ಅಮಲು; ಮೈಕ, ಸುಂದು; ಮಾದಕ, ಮದ್ಯ; ಮದ, ಸೊಕ್ಕು.

**नशाख़ोर,** वि. ಮದ್ಯಪಾನ ಮಾಡುವವ, ಕುಡುಕ, ಅಮಲುಖೋರ.

**नशात,** स्त्री. ದೃಷ್ಟಿ. पु. ಆನಂದ, ಖುಷಿ.

**नशादार,** वि. ಮದ ಅಥವಾ ಮತ್ತನ್ನುಂಟುಮಾಡುವ, ಮಾದಕ.

**नशापानी,** पु. ಮಾದಕಪದಾರ್ಥ, ಸುರೆ.

**नशास्ता,** पु. ಪಿಷ್ಟಪದಾರ್ಥ.

**नशीन,** वि. ಇರುವ, ಆರೂಢನಾದ (ಯೌಗಿಕದಲ್ಲಿ). ಉದಾ:- तख़्त नशीन = ಸಿಂಹಾಸನಾರೂಢ.

**नशीमन,** पु. ನಿವಾಸ, ಬಿಡದಿ, ಬಿಡಾರ.

**नशीला,** वि. ಮಾದಕ; ಮದಹಿಡಿದ, ಮತ್ತೇರಿದ, ಸೊಕ್ಕಿದ.

**नशेब,** वि. ಕೆಳಗಿನ; ತಗ್ಗಿನ. पु. ಹಳ್ಳ.

**नशेबाज़,** वि. = नशाख़ोर.

**नश्तर,** पु. ಹುಣ್ಣುಗಳನ್ನು ಸೀಳಿ ರಕ್ತ ತೆಗೆಯುವ ಚಿಕ್ಕ ಶಸ್ತ್ರ, ವೇಧನಿ.

**नश्व,** पु. ಉದ್ಭವ, ವೃದ್ಧಿ. नश्व-ओ-नमा = ಅಭಿವೃದ್ಧಿ, ಅಭ್ಯುದಯ, ಏಳಿಗೆ.

**नश्वर,** वि. ನಾಶವಾಗುವ, ನಶಿಸುವ.

**नश्वा,** पु. ಮತ್ತು, ಅಮಲು.

**नष्ट,** वि. ನಷ್ಟವಾದ; ನಾಶವಾದ, ಹಾಳಾದ; ಕಳೆದುಹೋದ.

**नष्ट-भ्रष्ट,** वि. ತೀರ ಕೆಟ್ಟುಹೋದ, ಪೂರ್ಣವಾಗಿ ಹಾಳಾದ.

**नस,** स्त्री. ಸ್ನಾಯು, ಸಿರೆ, ನರ; ರಕ್ತವಾಹಿನಿ, ಧಮನಿ; ಎಲೆಗಳ ತಂತು, ನಾರು. नस नस में = ಮೈಯೆಲ್ಲಾ; ಸಂಪೂರ್ಣವಾಗಿ.

**नसक़,** पु. ಅನುಪೂರ್ವಿ; ಕ್ರಮ; ರೀತಿ, ತರಹ.

**नसक़ची,** पु. ಕ್ರಮಪಡಿಸುವವ; ಆರಮನೆ ಬಕ್ಷಿ.

**नसतरंग,** पु. ಒಂದು ಬಗೆ ತುತ್ತೂರಿ.

**नसतालीक़,** पु. ಮೋಡಿ ಅಲ್ಲದ ಬರಹ, ಮುದ್ದು ಬರವಣಿಗೆ; ಅಚ್ಚುಕಟ್ಟಾದವ.

**नसब,** पु. ವಂಶ, ಕುಲ.

**नसबनामा,** पु. ವಂಶಾವಳಿ, ಪ್ರವರ.

**नसबी,** वि. ಸಂಬಂಧಿಕ, ಬಂಧು, ಬಳಗ.

**नसर,** स्त्री. ಗದ್ಯ, ವಚನ; ಸಹಾಯ.

**नसरानियत,** स्त्री. ಕ್ರೈಸ್ತಮತ.

**नसरानी,** वि. ಕ್ರೈಸ್ತಮತದ, ಕ್ರೈಸ್ತರ. पु. ಕ್ರೈಸ್ತಮತಸ್ಥ.

**नसरीन,** पु. ಒಂದು ಬಗೆ ಹೂವು.

**नसवार,** स्त्री. ಹೊಗೆಸೊಪ್ಪಿನ ಪುಡಿ, ನಸ್ಯ.

**नसाना,** सक्रि. ನಾಶಮಾಡು, ಹಾಳುಮಾಡು.

**नसारा,** पु. ಕ್ರೈಸ್ತ ಮತಸ್ಥ.

**नसावन,** स्त्री. ನಾಶ, ಅಳಿವು.

**नसी,** स्त्री. ನೇಗಿಲಿನ ಮೊಳೆ, ಗುಳ.

**नसीठ,** वि. ಅಪಶಕುನವಾದ.

नसीब, पु. ಭಾಗ್ಯ, ಅದೃಷ್ಟ, ಲಭ್ಯ; ಪಾಲು, ಹಿಸ್ಸೆ. नसीब होना = ಲಭ್ಯವಾಗು, ಲಭಿಸು.

नसीबवर, वि. ಭಾಗ್ಯವಂತ, ಅದೃಷ್ಟಶಾಲಿ.

नसीबा, पु. ಅದೃಷ್ಟ, ಭಾಗ್ಯ.

नसीबी, वि. ವಿಧಿಯು.

नसीम, स्त्री. ನಸುಗಾಳಿ, ಮಂದಮಾರುತ.

नसीर, वि. ಸಹಾಯಕ; ರಕ್ಷಕ; ಮಿತ್ರ.

नसीला, वि. ಉತ್ತಮ ಕುಲದ, ಒಳ್ಳೆಯ ತಳಿಯ; ಬಲಿಷ್ಠ.

नसीहत, स्त्री. ಉಪದೇಶ, ಬುದ್ಧಿವಾದ; ಒಪ್ಪಿಕೆ, ಮೆಚ್ಚುಗೆ; ಶಿಕ್ಷೆ, ದಂಡನೆ.

नसेनी, स्त्री. ಏಣಿ, ನಿಚ್ಚಣಿಕೆ.

नस्ता, पु. ಮೂಗು ಚುಚ್ಚಿದ ರಂಧ್ರ.

नस्य, पु. ನಾಸಿಕಾಚೂರ್ಣ, ನಸ್ಯ; ಮೂಗಿನೊಳಗೆಹಚ್ಚುವಔಷಧದಪುಡಿ.

नस्ल, स्त्री. ವಂಶ, ವಂಶ ಪರಂಪರೆ; ಸಂತತಿ, ತಳಿ.

नस्लदार, वि. ಸತ್ಕುಲದ, ಕುಲೀನ.

नस्लन्, क्रिवि. ವಂಶಪರಂಪರೆಯಾಗಿ.

नस्ली, वि. ವಂಶದ, ಕುಲದ.

नस्साज, पु. ನೆಯ್ಗೆಯುವ; ಜಾಡ.

नस्सार, पु. ಗದ್ಯಲೇಖಕ.

नह, पु. ನಖ, ಉಗುರು.

नहक, वि. ಸಣಕಲು.

नहछू, पु. ಮದುವೆ ಗಂಡಿನ ಕೈಬೆರಳುಗಳಿಗೆ ಮದರಂಗಿ ಹಚ್ಚುವ ಒಂದು ಸಂಪ್ರದಾಯ, ಮದರಂಗಿ ಶಾಸ್ತ್ರ.

नहज़त, स्त्री. ಏಳುವಿಕೆ, ಉತ್ಥಾನ; ಹೊರಡುವಿಕೆ.

नहटा, पु. ನಖಕ್ಷತ, ಪರಚುವಿಕೆ.

नहन, पु. ಕಪಿಲೆ ಎಳೆಯುವ ಹಗ್ಗ.

नहना, सक्रि. ಉಳು, ಹೂಡು; ಕೆಲಸ ಹಚ್ಚಿಸು.

नहन्ना, पु. नहन्नी, स्त्री. = नहरनी.

नहर, स्त्री. ಕಾಲುವೆ, ನಾಲೆ, ತೋಡು.

नहरनी, स्त्री. ಉಗುರು ತೆಗೆಯುವ ಹಜಾಮರ ಸಲಕರಣೆ, ಉಗುರುಕಡ್ಡಿ.

नहरुआ, पु. ಹುಳುಗಳು ಏಳುವ ಒಂದು ಚರ್ಮರೋಗ, ನಾರು ಹುಣ್ಣು.

नहलवाना, क्रिवि. ಸ್ನಾನಮಾಡಿಸು, ಮೈತೊಳೆಸು; ಅಭಿಷೇಕಮಾಡಿಸು.

नहला, पु. ಇಸ್ಪೀಟಾಟದಲ್ಲಿ ಒಂಭತ್ತನೆಯ ಒಂದು, "ನೈಲಾ".

नहलाई, स्त्री. ಸ್ನಾನ ಮಾಡಿಸುವಿಕೆ; ಸ್ನಾನ ಮಾಡಿಸುವುದಕ್ಕೆ ಕೊಡುವ ಕೂಲಿ, ಸ್ನಾನದ ಖರ್ಚು; ಅಭಿಷೇಕದ ಖರ್ಚು.

नहलाना, सक्रि. ಸ್ನಾನ ಮಾಡಿಸು, ಮೀಯಿಸು; ಅಭಿಷೇಕ ಮಾಡು. नहलाना धुलाना = ಸ್ನಾನಮಾಡಿಸು, ಮೈತೊಳೆಸು.

नहस, वि. ಅಶುಭ, ಅಮಂಗಳ; ನಿರ್ಭಾಗ್ಯ.

नहसुत, पु. ಉಗುರಿನ ಗೀರು ಅಥವಾ ಗುರುತು.

नहान, पु. ಸ್ನಾನ, ಮೀಯುವಿಕೆ, ಜಳಕ.

नहाना, अक्रि. ಸ್ನಾನ ಮಾಡು, ಮೀ

ಯು; ಅಭಿಷೇಕ ಮಾಡಿಕೊಳ್ಳು.

**नहाफ़त,** स्त्री. ಸಣಕಲು, ಬಡಕಲು.

**नहार,** पु. ದಿವಸ, ದಿನ.

**नहार-मुंह,** वि. ಬೆಳಗ್ಗಿನಿಂದ ಆಹಾರ ವಿಲ್ಲದಿರುವ, ಉಪವಾಸವಿರುವ.

**नहारी,** स्त्री. ಉಪಾಹಾರ, ನಾಶ್ತ; ಲಗಾಮು.

**नहिं,** क्रिवि. ಇಲ್ಲ.

**नहियर,** पु. = नैहर.

**नहीं,** क्रिवि. ಇಲ್ಲ, ಅಲ್ಲ. नहीं तो = ಇಲ್ಲವಾದರೆ, ಅನ್ಯಥಾ.

**नही,** क्रिवि. ಇಲ್ಲ, ಅಲ್ಲ. स्त्री. ನಿಷೇಧ, ತಡೆ, ನಿರೋಧ.

**नहीफ़,** वि. ಸಣಕಲಾದ, ಬಡಕಲ; ನಿರ್ಬಲ.

**नहूसत,** स्त्री. ವ್ಯಸನ, ವಿಷಾದ; ದುಶ್ಶಕುನ, ಅಶುಭ.

**नांघना,** सक्रि. ದಾಟು, ಲಂಘಿಸು; ಉಲ್ಲಂಘಿಸು.

**नांद,** स्त्री. ದನಗಳಿಗೆ ನೀರು ಕುಡಿಸುವ ತೊಟ್ಟಿ, ಬಕೀಟು, ಚರಣಿಗೆ.

**नांदना,** सक्रि. ಸದ್ದು ಮಾಡು; ಸೀನು; ಆನಂದಿಸು, ನಲಿದಾಡು; ಧಗಧಗನೆ ಉರಿ.

**नांदिया,** पु. ನಂದಿ, ನಂದಿಕೇಶ್ವರ.

**नांदी,** स्त्री. ಆನಂದ; ಸಂತೋಷ; ಮಂಗಳ; ಸ್ತೋತ್ರ, ಸ್ತುತಿ.

**नांदीमुख,** पु. ಶುಭ ಸಂದರ್ಭಗಳಲ್ಲಿ ಮಾಡುವ ಪಿತೃಶ್ರಾದ್ಧ, ನಾಂದೀಶ್ರಾದ್ಧ

**नांधना,** सक्रि. ಪ್ರಾರಂಭಿಸು, ಹೂಡು.

**ना,** क्रिवि. ಇಲ್ಲ, ಅಲ್ಲ. उप. ಅಭಾವ ಸೂಚಕ ಉಪಸರ್ಗ. ಉದಾ: नालायक़ = ಅಯೋಗ್ಯ, ಅನರ್ಹ.

**नाइत्तिफ़ाक़ी,** स्त्री. ಒಪ್ಪದಿರುವಿಕೆ, ಮತಭೇದ, ಭಿನ್ನಾಭಿಪ್ರಾಯ.

**नाइन,** स्त्री. ಹಜಾಮುರವಳು, ನಾ[illegible]ತನ ಸ್ತ್ರೀ, ನಾಪಿತಿ.

**नाइन्साफ़,** वि. ಅನ್ಯಾಯಿ.

**नाइन्साफ़ी,** स्त्री. ಅನ್ಯಾಯ.

**नाई,** स्त्री. ಸಮಾನತೆ. क्रिवि. ಸಮಾನವಾಗಿ.

**नाई,** पु. ಕ್ಷೌರಕ, ನಾಪಿತ, ಹಜಾಮು.

**नाउड़ा,** पु. ಹಜಾಮುರ ಹುಡುಗ; ಹಜಾಮು, ಕ್ಷೌರಕ.

**नाउम्मेद,** वि. ನಿರಾಶೆಯಾದ, ಹತಾಶ, ಭಗ್ನಾಶ.

**नाउम्मेदी,** स्त्री. ನಿರಾಶೆ, ಆಶಾಭಂಗ.

**नाऊ,** पु. ನಾಯಿಂದ, ನಾಪಿತ.

**नांकद,** वि. ಪಳಗಿಸದ (ಎತ್ತು); ಬರಡು.

**नाक,** पु. ಮೊಸಳೆ; ಸ್ವರ್ಗ. स्त्री. ಮೂಗು, ನಾಸಿಕೆ; ಸಿಂಬಳ, ಗೊಣ್ಣೆ; ಮಾನ, ಮರ್ಯಾದೆ; ಪ್ರಸಿದ್ಧ ಪುರುಷ; ಅಂದ; ಸೊಬಗು. नाक कटना = ಮಾನ ಹೋಗು. नाक में दम करना = ಸತಾಯಿಸು, ಗೋಳಾಡಿಸು. नाक रगड़ना = ಅಂಗಲಾಚಿ ಬೇಡು, ಗೋಗರೆ.

**नाकड़ा, नाकरा,** पु. ಮೂಗಿನ ಬಾವು.

**नाक़दर,** वि. ಆದರವಿಲ್ಲದ, ಗೌರವವಿಲ್ಲದ

**नाक़द्री,** स्त्री. ಅನಾದರ, ಅಗೌರವ.

नाक़स, वि. ಯೋಗ್ಯವಲ್ಲದ, ಅನರ್ಹ; ನೀಚ, ಹಲ್ಕ; ಅಪರಿಚಿತ; ಅನಾಮಧೇಯ.

नाक़सी, स्त्री. ನಿಕೃಷ್ಟತೆ; ನೀಚತನ; ಅಲ್ಪತನ.

नाका, पु. ರಸ್ತೆಯ ತುದಿ; ದಾರಿ, ಬಾಗಿಲು; ನಾಲ್ಕು ರಸ್ತೆಗಳು ಕೂಡುವ ಸ್ಥಳ, ಚೌಕ; ಎಲ್ಲೆ, ಮೇರೆ; ಠಾಣೆ, ಚಾವಡಿ; ದ್ವಾರ; ಸೂಜಿಯ ಕಣ್ಣು; ಮೊಸಳೆ.

नाक़ा, स्त्री. ಹೆಣ್ಣು ಒಂಟೆ.

नाकाबंदी, स्त्री. ರಸ್ತೆ ಕಟ್ಟುವಿಕೆ, ದಾರಿ ಕಟ್ಟುವಿಕೆ.

नाक़ाबिल, वि. ಯೋಗ್ಯತೆಯಿಲ್ಲದ, ಅನರ್ಹ; ನಿರರ್ಥಕ.

नाक़ाबिलियत, स्त्री. ಅಯೋಗ್ಯತೆ, ಅನರ್ಹತೆ.

नाकाम, वि. ನಿರರ್ಥಕ, ಅಪ್ರಯೋಜಕ; ಅಸಫಲ; ನಿರಾಶನಾದ, ಭಗ್ನಾಶ.

नाकामयाब, वि. ಅಸಫಲ, ವಿಫಲ.

नाकामी, स्त्री. ನೈರಾಶ್ಯ, ನಿರಾಶೆ.

नाकारा, वि. ಕೆಲಸಕ್ಕೆ ಬಾರದ, ನಿಷ್ಪ್ರಯೋಜಕ.

नाक़िद, पु. ರತ್ನಪರೀಕ್ಷಕ.

नाक़िल, पु. ಹೇಳುವವ, ವರ್ಣಿಸುವವ; ನಕಲು ಬರೆಯುವವ; ಚಿತ್ರ ಬರೆಯುವವ.

नाक़िस, वि. ದೋಷವುಳ್ಳ, ಕುಂದುಳ್ಳ; ಕೆಟ್ಟ.

नाक़ूस, पु. ಶಂಖ.

नाकेदार, पु. ಬಾಗಲಲ್ಲಿರುವವ; ಠಾಣೆ ಅಥವಾ ಚಾವಡಿಯಲ್ಲಿ ಇರುವ ಉದ್ಯೋಗಸ್ಥ; ಸುಂಕದ ಕಟ್ಟೆಯ ಅಧಿಕಾರಿ. वि. ದ್ವಾರ ಅಥವಾ ತೂತುಳ್ಳ.

नाख़ुदा, पु. ನಾಸ್ತಿಕ; ಅಧರ್ಮಿ; ಜಹಜಿನ ಯಜಮಾನ; ಮಾಲೀಮ; ನಾವಿಕ; ಹಡಗಿನಲ್ಲಿ ಹೇರುವ ಸರಕುಗಳ ಮೇಲ್ವಿಚಾರಕ.

नाख़ुना, नाख़ूना, पु. ಕಣ್ಣಿನ ಪರೆ, ಕಣ್ಣು ಕುಡಿಕೆ; ಪಿಟೀಲು ಬಾರಿಸುವ ಕೋಲು, ಕಮಾನು.

नाख़ुश, वि. ಅತೃಪ್ತ, ಅಸಂತುಷ್ಟ; ಅಸ್ವಸ್ಥ; ವ್ಯಥಿತ.

नाख़ुशी, स्त्री. ಅಸಂತೋಷ, ಅತೃಪ್ತಿ.

नाख़ुन, नाख़ून, पु. ನಖ, ಉಗುರು.

नाख़ूनगीर, नाख़ून-तराश, पु. ಉಗುರುಕಡ್ಡಿ.

नाख़्वांदा, वि. ಅಶಿಕ್ಷಿತ, ಅನಕ್ಷರಸ್ಥ.

नाख़्वाह, वि. ಇಷ್ಟವಿಲ್ಲದ; ಇಷ್ಟ ವಿರುದ್ಧವಾದ; ನಿರ್ಬಂಧದ.

नाग, पु. ಸರ್ಪ, ನಾಗರಹಾವು; ಆನೆ; ಸೀಸ.

नाग-केसर, पु. ನಾಗಕೇಸರ ಗಿಡ, ಬಕುಳ.

नाग-दांत, पु. ಆನೆ ದಂತ.

नाग-दौना, पु. ದವನ.

नागफनी, स्त्री. ಪಾಪಾಸ್ ಕಳ್ಳಿ, ಡಬ್ಬಗಳ್ಳಿ; ಕಿವಿಯ ಕುಂಡಲ.

नाग-फांस, पु. ಶತ್ರುಗಳನ್ನು ಬಿಗಿದು ಕಟ್ಟುವ ಒಂದು ಬಗೆಗಂಟು; ನಾಗಪಾಶ.

**नाग-बला**, पु. ನಾಗವಲೆ, ಗಾಂಗೇರುಕಿ, ಬಟ್ಟಿಗರುಕೆ, ತುರುಬೆ ಗಿಡ.
**नागबेल**, स्त्री. ನಾಗವಲ್ಲಿ, ವೀಳ್ಯದೆಲೆ.
**नागरंग**, पु. ಕಿತ್ತಲೆಹಣ್ಣು.
**नागर**, वि. ನಗರದ. ಪಟ್ಟಣದ. पु. ನಗರವಾಸಿ, ನಾಗರಿಕ; ಚತುರ, ಜಾಣ; ಗುಜರಾತಿ ಬ್ರಾಹ್ಮಣದ ಒಂದು ಜಾತಿ.
**नागरता**, स्त्री. ನಾಗರೀಕತೆ, ಚತುರತೆ.
**नागर-पान, नागर-बेल**, पु. ಒಂದು ಬಗೆ ವೀಳ್ಯದೆಲೆ.
**नागरमस्ता, नागरमोथा**, पु. ನಾಗಮುಸ್ತಕ, ಕೈವರ್ತ.
**नागरा**, वि. ಜಾಣ, ಚತುರ.
**नागरिक**, वि. ನಗರದ; ನಾಗರಿಕ, ಪಟ್ಟಣಿಗ; ಚತುರ, ಜಾಣ; ಗಟ್ಟಿಗ.
**नागरिकता**, स्त्री. ನಗರವಾಸಿಯ ಹಕ್ಕು ಬಾಧ್ಯತೆ; ನಾಗರಿಕತನ, ಪಟ್ಟಣವಾಸ.
**नागरी**, स्त्री. ನಗರವಾಸಿ ಸ್ತ್ರೀ; ಚತುರ ಸ್ತ್ರೀ; ದೇವನಾಗರಿ ಅಕ್ಷರ.
**नागल**, पु. ನೇಗಿಲು.
**नागवार**, वि. ಜೀರ್ಣವಾಗದ; ಅಪ್ರಿಯ; ಅಸಹ್ಯ, ಹೇಯ; ದುಃಖದಾಯಿ.
**नागहां**, क्रिवि. ದುಡುಮ್ಮನೆ, ತಟಕ್ಕನೆ, ಗಕ್ಕನೆ; ಅಕಸ್ಮಾತ್ತಾಗಿ.
**नागहानी**, वि. ಅಕಸ್ಮಾತ್ತಾದ, ಆಕಸ್ಮಿಕ. स्त्री. ಯದೃಚ್ಛೆ.
**नागा**, पु. ದಿಗಂಬರ ಸನ್ಯಾಸಿ.
**नाग़ा**, वि. ಬರಿಯ, ಖಾಲಿ; ಶೂನ್ಯ; ಅನುಪಸ್ಥಿತ. पु. ಅವಕಾಶ, ಬಿಡುವು; ರಜ, ಸೂಟಿ; ಕಾಲಾಂತರ, ಕಾಲಾತೀತ; ಮುಂದಕ್ಕೆ ಹಾಕುವಿಕೆ.
**नागिन**, स्त्री. ಹೆಣ್ಣು ಸರ್ಪ; ಬೆನ್ನ ಮೇಲಿನ ಸುಳಿ.
**नागोद**, पु. ಎದೆಯ ಕವಚ.
**नाच**, पु. ನಾಟ್ಯ, ತಾಂಡವ; ನೃತ್ಯ, ನರ್ತನ; ಕುಣಿತ, ನಾಚು; ಗಂತು, ಆಟ. नाच नचाना = ಆಟವಾಡಿಸು, ಕುಣಿಸು; ಗೋಳಾಡಿಸು.
**नाचकूद**, स्त्री. ನಾಟ್ಯ, ಕುಣಿದಾಟ, ತಾಂಡವ; ಹಾರಾಟ, ಪ್ರಯತ್ನ; ಆಡಂಬರ, ಕೋಪಾವೇಶ.
**नाचगीत**, पु. ಆಟಪಾಟ; ನೃತ್ಯ, ಮೇಳವಣಿ, ಲಾಸ್ಯ.
**नाचघर, नाचमहल**, पु. ನಾಟ್ಯದ ಸ್ಥಳ, ನೃತ್ಯಶಾಲೆ, ನಾಟ್ಯಶಾಲೆ
**नाचना**, अक्रि. ನಾಟ್ಯವಾಡು, ನರ್ತಿಸು, ಕುಣಿ; ತಾಂಟು, ಗಂತುಹಾಕು; ಕುಣಿದಾಡು, ಹಾರಾಡು, ಜಿರಿದಾಡು
**नाच-रंग**, पु. ಕೇಲಿ, ವಿಲಾಸ; ಉಲ್ಲಾಸ, ಗಮ್ಮತ್ತು; ಆನಂದೋತ್ಸವ.
**नाचाक़**, वि. ವಿರಸವಾದ, ಸಪ್ಪೆ.
**नाचाक़ी**, स्त्री. ವೈಮನಸ್ಯ, ವಿರಸ.
**नाचार**, वि. = लाचार.
**नाचारी**, स्त्री. = लाचारी.
**नाचीज़**, वि. ತುಚ್ಛ; ನಿಕೃಷ್ಟ; ನೀಚ; ಅಲ್ಪವಸ್ತು.
**नाज**, पु. ದವಸ, ಧಾನ್ಯ.
**नाज़**, पु. ಬೆಡಗು, ಕುಲುಕು, ಒಲಪು, ಒಯ್ಯಾರ; ಬಿಂಕ, ಬಿಗುಮಾನ; ಗರ್ವ. नाज़ नख़रा = ಒಲಪು ಒಯ್ಯಾರ,

ಬೆಡಗು ಬಿನ್ನಾಣ; ಹಾವಭಾವ.

**ನಾಜ಼ನೀ**, ವಿ. ಕೋಮಲವಾದ; ಮನೋಹರವಾದ, ಚೆಲುವಿನ; ಪ್ರಿಯ. ಸ್ತ್ರೀ. ಕೋಮಲಾಂಗಿ; ಚೆಲುವಿ, ಸುಂದರಿ; ಪ್ರೇಮಿಕೆ.

**ನಾಜ಼ಬರದಾರ**, ಪು. ಮುಖಸ್ತುತಿ ಮಾಡುವವ.

**ನಾಜ಼ಬರದಾರೀ**, ಸ್ತ್ರೀ. ಮುಖಸ್ತುತಿ.

**ನಾಜ಼ರತ**, ಸ್ತ್ರೀ. ನಾಜರನ ಕೆಲಸ ಅಥವಾ ಪದವಿ.

**ನಾಜ಼ಾಂ**, ವಿ. ಒಯ್ಯಾರದ; ವಿಲಾಸಿ; ಬಿಗುಮಾನದ; ಗರ್ವಿಷ್ಠ.

**ನಾಜ಼-ಬಾಲಿಶ**, ಪು. ಚಿಕ್ಕ ದಿಂಬು.

**ನಾಜಾಯಜ಼**, ವಿ. ಯೋಗ್ಯವಲ್ಲದ; ಅನುಚಿತ, ಅನುಪಯುಕ್ತ; ನಿಯಮ ವಿರುದ್ಧ; ನೀಚ.

**ನಾಜ಼ಿಮ**, ಪು. ಏರ್ಪಾಟು ಮಾಡುವವ, ವ್ಯವಸ್ಥಾಪಕ; ಚಾಲಕ, ಆಡಳಿತಗಾರ; ಶಾಸಕ; ಹಾಡು ಕಟ್ಟುವವ, ಕವಿ.

**ನಾಜ಼ಿರ**, ಪು. ನಿರೀಕ್ಷಕ, ಮಣೇಗಾರ; ಮೇಲ್ವಿಚಾರಣೆ ಮಾಡುವವ, ಪಾರುಪತ್ಯಗಾರ; ಕೋರ್ಟಿನ ನಾಜಿರು; ಅಂತಃಪುರದ ಸೇವಕ; ನಪುಂಸಕ, ಕೊಜ್ಜೆ; ನರ್ತಕಿಯರ ಮಧ್ಯಸ್ಥಗಾರ, ನಟ್ಟುವ, "ಡಾಫರು".

**ನಾಜ಼ಿರಾತ**, ಸ್ತ್ರೀ. ಡಾಫರನಿಗೆ ನರ್ತಕಿಯರಿಂದ ದೊರಕುವ ದಲ್ಲಾಳಿ ಅಥವಾ ತರಗು, ವಟ್ಟ.

**ನಾಜ಼ಿರಾ, ನಾಜ಼ಿರೀನ**, ಪು. ನೋಡುವವರು, ಪ್ರೇಕ್ಷಕರು.

**ನಾಜ಼ಿರೀ**, ಸ್ತ್ರೀ. ಮೇಲ್ವಿಚಾರಣೆ, ಉಸ್ತುವಾರಿ; ನಾಜಿರನ ಕೆಲಸ ಅಥವಾ ಉದ್ಯೋಗ.

**ನಾಜ಼ಿಲ**, ವಿ. ಇಳಿಯುವ; ಧುಮುಕುವ.

**ನಾಜ಼ಿಲಾ**, ಪು. ಆಪತ್ತು, ವಿಪತ್ತು.

**ನಾಜ಼ಿಶ**, ಸ್ತ್ರೀ. ಬಿಗುಮಾನ, ಗರ್ವ.

**ನಾಜ಼ೀ**, ವಿ. ಬಿಡುಗಡೆಯಾದ, ವಿಮುಕ್ತ; ಕ್ಷಮಿಸಿದ, ಮಾಫಿ ಮಾಡಿದ.

**ನಾಜ಼ುಕ**, ವಿ. ಕೋಮಲ, ಸುಕುಮಾರ; ನಳನಳಿಸುವ; ಸೂಕ್ಷ್ಮ; ನುಣುಪಾದ; ಸ್ವಲ್ಪ ತಗುಲಿದರೂ ಮುರಿದುಹೋಗುವ ಅಥವಾ ಕೆಟ್ಟುಹೋಗುವ, ನಾಜೂಕಾದ; ಶಂಕಾಸ್ಪದವಾದ; ದಯಾಳು. ನಾಜ಼ುಕ ದಿಲ = ಕೋಮಲ ಮನಸ್ಸಿನ; ಎಳೆ ಮನಸ್ಸಿನ; ಸಿಡುಕ.

**ನಾಜ಼ುಕೀ**, ಸ್ತ್ರೀ. ಸೂಕ್ಷ್ಮತೆ, ನುಣುಪು; ನಾಜೂಕುತನ; ಮೇಲ್ಪು, ಕೋಮಲತೆ.

**ನಾಜ಼ೇಬ, ನಾಜ಼ೇಬಾ**, ವಿ. ಸಾಧಾರಣ, ಸಾದಾ; ಕುರೂಪಿ; ಅವಲಕ್ಷಣವಾದ, ಅಂದಗೆಟ್ಟ.

**ನಾಜ಼ೇಬಾಇಶ, ನಾಜ಼ೇಬಾಈ**, ಸ್ತ್ರೀ. ಅವಲಕ್ಷಣ; ಸರಳತೆ; ಸಾದಾತನ.

**ನಾಜೋ**, ಸ್ತ್ರೀ. ಸುಕುಮಾರಿ, ಕೋಮಲಾಂಗಿ; ಮುದ್ದುಹುಡುಗಿ.

**ನಾಜ಼ೋರ**, ವಿ. ಬಲಹೀನ, ನಿರ್ಬಲ.

**ನಾಜ಼ೋರೀ**, ಸ್ತ್ರೀ. ಬಲಹೀನತೆ.

**ನಾಟ**, ಪು. ನಾಟ್ಯ, ಸೋಗು; ಕಂಬ.

**ನಾಟಕ**, ಪು. ನಾಟಕ, ಅಭಿನಯ; ನಟ.

**ನಾಟಕಶಾಲಾ**, ಪು. ನಾಟಕಶಾಲೆ, ರಂಗಭೂಮಿ.

**नाटकिया**, पु. ಅಭಿನಯುಕಾರ.

**नाटकी, नाटिका**, स्त्री. ಅಭಿನಯು ಗಾರ್ತಿ, ನಟಿ.

**नाटकीय**, वि. ನಾಟಕಸಂಬಂಧವಾದ.

**नाटना**, अक्रि. ಮಾತು ತಪ್ಪು. सक्रि. ಮಾತು ಹೊರಳಿಸು, ನಿರಾಕರಿಸು.

**नाटा**, वि. ಕುಳ್ಳ, ಗಿಡ್ಡ, ಗುಜ್ಜಾರಿ. पु. ಹೋರಿ.

**नाठ**, पु. ನಷ್ಟ; ನಾಶ; ಅಭಾವ.

**नाठना**, अक्रि. ನಾಶವಾಗು; ತೊಲಗು; ಓಡಿಹೋಗು.

**नाठा**, पु. ವಾರಸು ಇಲ್ಲದವ; ಸಂತಾನ ವಿಲ್ಲದವ.

**नाठिया**, वि. ಪೋಲಿ, ತೊಂಡ.

**नाड़**, स्त्री. ಕಂಠ, ಕೊರಳು; ನಾಡಿ

**नाड़ा**, पु. ನಾಡೆ, ಲಾಡಿ, ನವಾರ.

**नाड़ी**, स्त्री. ರಕ್ತನಾಳ, ಧಮನಿ; ನಾಡಿ; ವ್ರಣದ ರಂಧ್ರ; ತುಪಾಕಿಯ ಕೋವಿ; ಒಂದು ಘಳಿಗೆ; ದಂಟು; ಕರುಳು.

**नाड़ीमंडल**, पु. ವಿಷುವದ್ರೇಖೆ, ಭೂ ಮಧ್ಯರೇಖೆ, ನಿರಕ್ಷವೃತ್ತ.

**नात**, पु. ಜ್ಞಾತಿ; ನೆಂಟ, ಬಂಧು.

**ना-तज़रिबा, ना-तज़रिबाकार**, वि. ಅನುಭವವಿಲ್ಲದವ, ಅನನುಭವಸ್ಥ.

**नातमाम**, वि. ಅಪೂರ್ಣ; ಅರ್ಧಂ ಬರ್ಧ; ಕಡಮೆಯಾದ.

**नातमामी**, स्त्री. ಅಪೂರ್ಣತೆ; ಕೊರತೆ.

**नातरबियत, नातराश**, वि. ಅಶಿಕ್ಷಿತ; ಅಸಭ್ಯ.

**नातवां**, वि. ದುರ್ಬಲ, ಅಶಕ್ತ; ನಿರ್ವೀರ್ಯ.

**नातवानी**, स्त्री. ಅಶಕ್ತತೆ, ಬಲಹೀನತೆ; ಅನಾರೋಗ್ಯ, ಜಾಡ್ಯ.

**नाता**, पु. ಬಂಧುತ್ವ, ಬಾಂಧವ್ಯ, ಸಂಬಂಧ. नाता रिश्ता = ಬಂಧು ಬಳಗ, ಬೀಗರು ಬಿಜ್ಜರು; ವಾವಿವರಸೆ.

**नाताक़त**, वि. ಬಲಹೀನ, ನಿರ್ಬಲ.

**नाताक़ती**, स्त्री. ಬಲಹೀನತೆ, ದೌರ್ಬಲ್ಯ

**नातिक़**, वि. ಮಾತನಾಡುವ; ವಿವೇಕ ಯುತ, ಯುಕ್ತಿಯುತ; ನಿಶ್ಚಯ ವಾದ, ಖಂಡಿತ.

**नातिक़न्**, क्रिवि. ಖಡಾಖಂಡಿತವಾಗಿ, ಜರೂರಾಗಿ.

**नातिक़ा**, वि. ಮಾತನಾಡುವವ. पु. ಮಾತನಾಡುವಿಕೆ, ಮಾತನಾಡುವ ಶಕ್ತಿ, ಭಾಷಣ ಶಕ್ತಿ.

**नातिन, नातिनी**, स्त्री. ಮೊಮ್ಮಗಳು.

**नाती**, पु. ಮೊಮ್ಮಗ, ದೌಹಿತ್ರ.

**नाते**, क्रिवि. ನಿಮಿತ್ತ, ಸಲುವಾಗಿ, ಓಸ್ಕರ.

**नातेदार**, पु. ನೆಂಟ, ಬಂಧು, ಬಳಗ.

**नातेदारी**, स्त्री. ಬಂಧುತ್ವ, ಬಾಂಧವ್ಯ; ನೆಂಟಸ್ತಿಕೆ.

**नाथ**, पु. ಪತಿ; ಸ್ವಾಮಿ, ಯಜಮಾನ; ಮೂಗುದಾರ. स्त्री. ಮೂಗುದಾರ ಹಾಕುವಿಕೆ.

**नाथना**, सक्रि. ಮೂಗುದಾರ ಹಾಕು; ವಶಪಡಿಸು; ಪೋಣಿಸು, ಲಗತ್ತಿಸು, ಸೂತ್ರಿಸು.

**नाद**, पु. ಶಬ್ದ, ಧ್ವನಿ, ನಾದ; ಬಾನೆ, ದೋಣಿ.

**नादना**, अक्रि. ಶಬ್ದಮಾಡು, ಕೂಗಾಡು; ಚಿಗುರು, ಕೊನರು, ಕಳಕಳಿಸು.

**नादली**, स्त्री. ರೋಗದ ಬಾಧೆಯನ್ನು ನಿವಾರಿಸಲು ರಕ್ಷೆಯಾಗಿ ಧರಿಸುವ ಸಂಗಯಶಬ ಎಂಬ ಪಚ್ಚೆಕಲ್ಲಿನ ಬಿಲ್ಲೆ.

**नादान**, वि. ತಿಳಿವಳಿಕೆಯಿಲ್ಲದವ, ಅರಿಯದವ; ಅಜ್ಞಾನಿ, ದಡ್ಡ, ಪೆದ್ದ.

**नादानिस्ता**, वि. ತಿಳಿಯದೆ, ಅರಿಯದೆ.

**नादानी**, स्त्री. ಅಜ್ಞಾನ; ದಡ್ಡತನ.

**नादार**, वि. ನಿರಾಧಾರಿ, ನಾದಾರಿ, ನಿರ್ಧನ.

**नादारी**, स्त्री. ದಿವಾಳಿಖೋರತನ; ಬಡತನ, ದಾರಿದ್ರ್ಯ.

**नादिम**, वि. ಲಜ್ಜಿತ, ನಾಚಿಕೆಪಡುವ; ಪಶ್ಚಾತ್ತಾಪಪಡುವ.

**नादिया**, पु. ನಂದಿ, ಬಸವ; ಕಪಿಲೆ ಬಸವ, ಕವಲೆತ್ತು, ಕೋಲೆ ಬಸವ.

**नादिर**, वि. ಅದ್ಭುತ; ವಿಲಕ್ಷಣ; ಅಪರೂಪ; ಬಹುಮೂಲ್ಯವಾದ; ಆರಿಸಿದ, ಉತ್ಕೃಷ್ಟ. पु. ಕಾಣಿಕೆ, ಮುಯ್ಯಿ, ಬಹುಮಾನ.

**नादिरगर्दी**, स्त्री. ಕೆಟ್ಟ ಆಡಳಿತ, ಕೆಟ್ಟ ಆಳ್ವಿಕೆ.

**नादिरशाही**, स्त्री. ಗೊತ್ತುಗುರಿಯಿಲ್ಲದ ಆಡಳಿತ; ಅತ್ಯಾಚಾರ; ಜುಲುಂ. वि. ಕಡುದಾದ, ಉಗ್ರ.

**नादिरा**, पु. ಅಪರೂಪದ ವಸ್ತು; ಅನ್ಯಾದೃಶವಾದ ವಸ್ತು ಅಥವಾ ಮನುಷ್ಯ.

**नादिरी**, स्त्री. ಅಪರೂಪ; ಉತ್ತಮ, ಉತ್ಕರ್ಷ; ಒಂದು ಬಗೆ ಜುಬ್ಬ.

**नादिहंद**, वि. ಕೊಡದಿರುವವ; ಬಾಕಿದಾರ; ಲೋಭಿ.

**नादिहंदी**, स्त्री. ಕೊಡದಿರುವಿಕೆ.

**नादीदनी**, वि. ನೋಡಲಾರದ, ನೋಡಲಾಗದ.

**नादुरुस्त**, वि. ಅಶುದ್ಧವಾದ, ಸರಿಯಿಲ್ಲದ; ಅಯುಕ್ತ; ವಕ್ರ.

**नादुरुस्ती**, स्त्री. ಅಶುದ್ಧ, ತಪ್ಪು; ವಕ್ರತೆ; ಅಕ್ರಮ.

**नाधना**, सक्रि. ನೊಗಕ್ಕೆ ಕಟ್ಟು, ಜೋಡಿಸು, ಹೂಡು; ತೊಡಗು, ಉಪಕ್ರಮಿಸು, ಪ್ರಾರಂಭಿಸು.

**नां**, क्रिवि. ಇಲ್ಲ, ಅಲ್ಲ.

**नान**, स्त्री. ಗೋಧಿರೊಟ್ಟಿ, ಚಪಾತಿ.

**नानक-पंथ**, पु. ಸಿಕ್ಖರ ಮತ.

**नानकपंथी**, **नानकशाही**, पु. ಗುರು ನಾನಕ್ ಇವರ ಅನುಯಾಯಿಗಳು, ಸಿಕ್ಖರು.

**नानकार**, पु. ಕಂಬಳ, ಆಯ; ಮಾನ್ಯ, ಉಂಬಳಿ; ಜೀವನಾಂಶ.

**नान-खताई**, स्त्री. ಬೆಣ್ಣೆ ಬಿಸ್ಕೀಟು.

**नान-पज़**, **नानबा**, **नानबाई**, पु. ರೊಟ್ಟಿ ಬಿಸ್ಕೀಟು ಮಾಡುವವ.

**नानस**, स्त्री. ಅತ್ತೆಯ ತಾಯಿ.

**नानसा**, पु. ಅತ್ತೆಯ ತಂದೆ.

**नाना**, वि. ಬಹು ವಿಧವಾದ, ವಿವಿಧ. पु. ತಾಯಿಯ ತಂದೆ, ಮಾತಾಮಹ, ಅಜ್ಜ; ಪುದಿನಾ ಸೊಪ್ಪು. सक्रि. ಬಾಗಿಸು, ಬಗ್ಗಿಸು; ಇಡು; ತುರುಕು; ಮುಡಿಸು.

**नानिगर**, पु. ನೇಗಿಲು.

**नानिहाल**, पु. = ननिहाल.

**नानी**, स्त्री. ತಾಯಿಯ ತಾಯಿ, ಮಾತಾಮಹಿ. नानी मर जाना = ಫಜೀತಿಯಾಗು, ಪೇಚಾಟವಾಗು.

**ना-नुकर**, पु. ಒಲ್ಲೆ. ಊಹೂ; ನಿರಾಕರಣೆ

**नानू**, पु. ಜೋಗುಳ, ಲಾಲಿ.

**नान्ह**, वि. ಚಿಕ್ಕ, ಸಣ್ಣ; ಕಿರಿಯ.

**नाप**, स्त्री. ಅಳತೆ; ಪರಿಮಾಣ, ಅಳೆತ; ವಿಸ್ತೀರ್ಣ; ಅಳೆಯುವಿಕೆ; ಅಳತೆಯ ಮಾನ; ಅಳೆಯುವ ಸಾಧನ; ಅಳೆಯುವ ಕೋಲು. नाप-जोख, नाप-तौल = ಅಳತೆ ತೂಕ, ಪರಿಮಾಣ.

**नापना**, सक्रि. ಅಳೆ, ಅಳತೆ ಮಾಡು

**नापसंद**, **नापसंदीदा**, वि. ಪಸಂದಿಲ್ಲದ, ಇಷ್ಟವಿಲ್ಲದ; ಅಪ್ರಿಯ, ಮನಸ್ಸಿಗೆ ಒಪ್ಪದ.

**नापसंदगी**, **नापसंदी**, स्त्री. ಅರುಚಿ, ಅಪ್ರಿಯತೆ, ಮನಸ್ಸಿಗೆ ಒಪ್ಪದಿರುವಿಕೆ.

**नापाक**, वि. ಅಪವಿತ್ರ, ಅಶುದ್ಧ; ಕೊಳಕಾದ, ಮಲಿನ; ಲಂಪಟ.

**नापाकी**, स्त्री. ಅಪವಿತ್ರತೆ, ಅಶುದ್ಧತೆ; ಕೊಳಕು, ಮೈಲಿಗೆ; ಮಲ, ಗ್ರಾಮಸಾರ; ಪಟಿಂಗತನ.

**नापायदार**, वि. ಆಧಾರವಿಲ್ಲದ, ಬುಡವಿಲ್ಲದ; ಅಸ್ಥಿರ, ಚಂಚಲ.

**नापायदारी**, स्त्री. ಬುಡವಿಲ್ಲದಿರುವಿಕೆ; ಅಸ್ಥಿರತೆ, ಚಾಂಚಲ್ಯ.

**नापास**, वि. ತೇರ್ಗಡೆ ಹೊಂದದ, ಉತ್ತೀರ್ಣನಾಗದ, "ಪ್ಯಾಸ್" ಆಗದ, ನಪಾಸು.

**नापित**, पु. ನಾಪಿತ, ಕ್ಷೌರಕ, ಕೆಲಸಿಗ.

**नापिती**, स्त्री. ನಾಪಿತನ ಹೆಂಡತಿ.

**नाफ़**, स्त्री. ನಾಭಿ, ಹೊಕ್ಕಳು; ಮಧ್ಯ.

**नाफ़रमां**, वि. ಅವಿಧೇಯ; ಚಂಡಿ, ಹಠವಾದಿ; ಊದಾಬಣ್ಣದ ಹೂ.

**नाफ़रमानी**, स्त्री. ಅವಿಧೇಯತೆ; ಕಾನೂನುಭಂಗ; ಊದಾ ಬಣ್ಣ.

**नाफ़हम**, वि. ಅರಿಯದವ, ಅಜ್ಞಾನಿ; ತಿಳಿಯಲಾಗದ.

**नाफ़हमी**, स्त्री. ಅಜ್ಞಾನ, ಅವಿವೇಕ.

**नाफ़ा**, पु. ಕಸ್ತೂರಿ ಮೃಗದ ಹೊಕ್ಕುಳಿನ ಚೀಲ, ಮೃಗ ನಾಭಿ; ಕಸ್ತೂರಿ.

**नाफ़िस**, वि. ಒಳಹೊಗುವ; ಭೇದಿಸುವ; ಮುಟ್ಟುವ, ತಗಲುವ; ಪ್ರಭಾವವುಳ್ಳ.

**नाफ़ी**, वि. ಉಪಯೋಗಕರ, ಪ್ರಯೋಜನವುಳ್ಳ; ಲಾಭಕರ, ಹಿತಕರ.

**नाब**, पु. ಸಂದುಗೆರೆ, ಪರಿಖೆ; ತೂಬು, ನಾಳ; ಕಾಲುವೆ. वि. ಶುದ್ಧ; ಅಸ್ಪಷ್ಟ, ಅಚ್ಚ.

**नाबकार**, वि. ಕೆಲಸಕ್ಕೆ ಬಾರದ, ನಿರರ್ಥಕ; ತುಚ್ಛ, ನೀಚ; ದುಷ್ಟ, ಕೆಟ್ಟ; ನಿಷ್ಪ್ರಯೋಜಕ ವಸ್ತು ಅಥವಾ ಮನುಷ್ಯ.

**नाबकारी**, स्त्री. ನಿಷ್ಪ್ರಯೋಜಕತೆ; ನಿಕೃಷ್ಟತನ; ದುಷ್ಟತನ.

**नाबलद**, वि. ಪರದೇಶದವ, ವಿದೇಶಿ.

**नाबदान**, पु. ಚರಂಡಿ, ಮೋರಿ, ಜಲದಾರಿ, ಬಚ್ಚಲುಹರಿ.

**नाबालिग़**, वि. ಎಳೆಯ ವಯಸ್ಸಿನವ,

ಪ್ರೋಗಂಡ; ಅಪ್ರಾಪ್ತವಯಸ್ಕ; ಮೈನರ್; ಕಚ್ಚಾ.

नाबालिग़ी, स्त्री. ಚಿಕ್ಕ ವಯಸ್ಸು.

नाबीना, वि. ಕಣ್ಣಿಲ್ಲದವ, ಕುರುಡ.

नाबीनाई, स्त्री. ಕುರುಡು, ಕುರುಡತನ.

नाबूद, वि. ನಿರ್ಮೂಲವಾದ, ನಾಶವಾದ; ಅಳಿದ; ಅದೃಶ್ಯವಾದ.

नाबूदी, स्त्री. ನಿರ್ನಾಮವಾಗುವಿಕೆ; ನಾಶ, ಅಳಿವು.

नाभक, पु. ಅಳಲೆಕಾಯಿ.

नाभि, स्त्री. ನಾಭಿ, ಹೊಕ್ಕಳು; ಚಕ್ರದ ಕುಂಭ, ಕೂಲುದುಂಬು; ಮಧ್ಯ, ಕೇಂದ್ರ; ಮುಖ್ಯಸ್ಥ; ಕಸ್ತೂರಿ.

नामंजूर, वि. ಒಪ್ಪಿಕೆಯಾಗದ, ಮಂಜೂರಾಗದ; ನಿರಾಕರಿಸಿದ; ಅಸ್ವೀಕೃತ.

नामंजूरी, स्त्री. ಅಸ್ವೀಕಾರ; ನಿರಾಕರಣೆ.

नाम, पु. ನಾಮ, ನಾಮಧೇಯ, ಹೆಸರು; ಹೆಸರುವಾಸಿ, ಪ್ರಸಿದ್ಧಿ, ಯಶಸ್ಸು; ಮಾನ. क्रिवि. ಒಬ್ಬನ ಹೆಸರಿನಲ್ಲಿ; ಒಬ್ಬನಪರವಾಗಿ. नाम-ओ-निशान = ತಪಶೀಲು; ಗುರುತು; ಪತ್ತೆ, ತುಬ್ಬು. नाम लेना=ಹೆಸರೆತ್ತು, ಪ್ರಸ್ತಾಪವೆತ್ತು; ಜಪಿಸು. नाम लेवा = ಹೆಸರೆತ್ತಿಹೇಳುವವ, ಸ್ಮರಿಸುವವ; ವಂಶಸ್ಥ, ವಂಶಜ; ಉತ್ತರಾಧಿಕಾರಿ, ವಾರಸುದಾರ.

नामक, वि. ಹೆಸರುಳ್ಳ, ಹೆಸರಿನ.

नामकरण, पु. ಹೆಸರಿಡುವಿಕೆ, ನಾಮಕರಣ.

नामज़द, वि. ಹೆಸರು ಹೇಳಿದ, ಹೆಸರುಕೊಟ್ಟ; ವಾಚಾದತ್ತ ಮಾಡಿದ; ಚುನಾವಣೆಗೆ-ಹೆಸರು ಸೂಚಿಸಿದ; ಸದಸ್ಯನಾಗಿ 'ನಾಮಕರಣ' ಮಾಡಲ್ಪಟ್ಟ; ನೇಮಕವಾದ, ನಿಯೋಜಿತ; ಪ್ರಸಿದ್ಧ, ವಿಖ್ಯಾತ.

नाम-ठाम, पु. ಹೆಸರು ಮತ್ತು ವಿಳಾಸ; ತಪಶೀಲು, ವಿವರ.

नामदार, वि. ಹೆಸರುವಾಸಿಯಾದ.

नामदारी, स्त्री. ಹೆಸರುವಾಸಿ; ಖ್ಯಾತಿ.

नामधराई, स्त्री. ನಾಮಕರಣ; ಅಪಕೀರ್ತಿ, ಅಪಯಶಸ್ಸು, ಅಪಖ್ಯಾತಿ.

नामधाम, पु. ಹೆಸರು ಮತ್ತು ಸ್ಥಳ; ಪತ್ತೆ, ವಿಳಾಸ.

नामधारी, वि. ಹೆಸರುಳ್ಳ, ಹೆಸರಿನ.

नाम-निहाद, वि. ಹೆಸರಿಟ್ಟ; ಹೆಸರು ಹೇಳಿದ; ಮುಡುಪಿಟ್ಟ, ಮೀಸಲಾಗಿಟ್ಟ.

नामर्द, वि. ಹೇಡಿ, ಪುಕ್ಕ, ನಪುಂಸಕ; ನಾಮರ್ದ.

नामर्दमी, नामर्दी, स्त्री. ನಪುಂಸಕತನ, ಸೂಗ; ಪುಕ್ಕತನ, ಹೇಡಿತನ.

नामवर, नामावर, वि. ಹೆಸರುವಾಸಿಯಾದ, ವಿಖ್ಯಾತ.

नामवरी, नामावरी, स्त्री. ಹೆಸರುವಾಸಿ, ವಿಖ್ಯಾತಿ.

नामशेष, वि. ಹೆಸರು ಮಾತ್ರ ಉಳಿದಿರುವ; ಗತಿಸಿದ.

नामहदूद, वि. ಮೇರೆಯಿಲ್ಲದ, ಅಪರಿಮಿತ.

नामा, पु. ಪತ್ರ, ಓಲೆ, ಕಾಗದ; ನಿರೂಪ; ಪುಸ್ತಕ, ಗ್ರಂಥ; ವೃತ್ತಾಂತ, ಜೀವನಚರಿತ್ರೆ.

**नामाकूल**, वि. ಅನರ್ಹ, ಅನುಚಿತ; ಅನುಪಯುಕ್ತ; ಅಪ್ರಾಸಂಗಿಕ.

**नामाबर**, पु. ಪತ್ರವಾಹಕ, ಹರಿಕಾರ.

**नामालूम**, वि. ತಿಳಿಯದ, ಅರಿಯದ; ಅಪರಿಚಿತ; ಅನಿಶ್ಚಿತ.

**नामावली**, स्त्री. ಅಂಚಿನಲ್ಲಿ ದೇವರ ನಾಮ ಅಂಕಿತವಾದ ವಸ್ತ್ರ, ರಾಮ ನಾಮದ ವಸ್ತ್ರ.

**नामिया**, पु. ಬೆಳವಣಿಗೆ; ಪೈರುಪಚ್ಚೆ; ಪ್ರಾಣಿ; ದಂಟು, ಕಾಂಡ.

**नामी**, वि. ಹೆಸರಿನ; ಹೆಸರುವಾಸಿಯಾದ, ವಿಖ್ಯಾತ. नामी गरामी = ಸುಪ್ರಸಿದ್ಧ.

**नामुनासिब**, वि. ಸರಿಯಲ್ಲದ, ಅನುಚಿತ; ಅಯುಕ್ತ; ಅವಲಕ್ಷಣವಾದ; ಅಸಂಗತ.

**नामुनासिबत**, स्त्री. ಅನುಚಿತ; ಅಸಂಗತ.

**नामुबारक**, वि. ಅಶುಭ; ಅಮಂಗಲ.

**नामुमकिन**, वि. ಅಸಂಭಾವ್ಯ, ಆಗದ.

**नामुयस्सर**, स्त्री. ಬಡತನ; ಕಷ್ಟ.

**नामुराद**, वि. ನಿಷ್ಫಲ, ವ್ಯರ್ಥ; ಅತೃಪ್ತ; ಅದೃಷ್ಟಹೀನ; ದುರದೃಷ್ಟ.

**नामुरादी**, स्त्री. ಅಸಫಲತೆ; ನೈರಾಶ್ಯ.

**नामुवाफ़िक़**, वि. ವಿರುದ್ಧ, ಪ್ರತಿಕೂಲ; ಅನರ್ಹ; ಅಯುಕ್ತ.

**नामुवाफ़िक़त**, स्त्री. ವಿರೋಧ, ವೈಪರೀತ್ಯ; ಅನರ್ಹತೆ; ಅನುಪಯುಕ್ತತೆ.

**नामूस**, स्त्री. ಖ್ಯಾತಿ; ಗೌರವ, ಮಾನ; ಸತೀತ್ವ, ಪಾತಿವ್ರತ್ಯ; ಅವಮಾನ.

**नामूसी**, स्त्री. ಅಪಯಶಸ್ಸು; ಅವಮಾನ

**नामोनिशान**, पु. ಗುರುತು, ಪತ್ತೆ, ಜಾಡು. नामो निशान न रहना = ನಿರ್ನಾಮವಾಗು, ನಿರ್ಮೂಲವಾಗು.

**नायक**, पु. ಮಾರ್ಗದರ್ಶಕ; ಮುಖಂಡ, ಮುಂದಾಳು; ಅಧಿಪತಿ, ನಾಯಕ; ಕುಣಿತ ಕಲಿಸುವವ, ನಟ್ಟುವಗಾರ; ಸಂಗೀತಗಾರ, ಕಲಾವಂತ, ಸಂಗೀತಜ್ಞ; ಸೈನ್ಯದಲ್ಲಿ ಕೆಳಗಿನ ದರ್ಜೆಯ ಒಬ್ಬ ಉದ್ಯೋಗಸ್ಥ, ನಾಯಕ್.

**नायब**, पु. ಒಬ್ಬನ ಪ್ರತಿಯಾಗಿ ಕೆಲಸ ಮಾಡುವವ, ಪ್ರತಿಹಸ್ತಕ; ಬದಲಿ; ಸಹಾಯಕ, ನಾಯಬ.

**नायाब**, वि. ದೊರಕದ, ಅಪ್ರಾಪ್ಯ.

**नायिबी**, स्त्री. नायब ನ ಸ್ಥಾನ ಅಥವಾ ಕೆಲಸ.

**नायिका**, स्त्री. ಮುಖಂಡಳು; ಸುಂದರಿ ಸ್ತ್ರೀ; ಕಥಾನಾಯಕಿ; ನಾಯಕನ ಹೆಂಡತಿ; ಪತ್ನಿ, ಹೆಂಡತಿ; ಮಹಿಳೆ, ಸ್ತ್ರೀ; ಕುಂಟಣಗಿತ್ತಿ, ತಲೆಹಿಡಿಕಿ; ಸಂಗೀತಗಾತಿ.

**नारंगी**, **नारंज**, स्त्री. ಕಿತ್ತಿಳೆಹಣ್ಣು, ನಾರಂಗ; ಕಿತ್ತಿಳೆ ಬಣ್ಣ. वि. ಕಿತ್ತಿಳೆ ಬಣ್ಣದ.

**नार**, स्त्री. ಕಂಠ, ಕೊರಳು; ನೇಯಿಕಾರನ ಲಾಳಿ, ಅಟ್ಟೆ. पु. ನಾಡೆ, ಲಾಡಿ, ನವಾರ; ಹಗ್ಗ, ಮಿಳಿ; ನೊಗಪಟ್ಟಿ, ಜೊತ್ತಿಗೆ; ನಾಳ; ಹೊಕ್ಕಳು ಕುಡಿ; ಬೆಂಕಿ; ನರಕದ ಉರಿ; ನರಕ.

**नारकी**, वि. ನರಕಕ್ಕೆ ಯೋಗ್ಯ; ಪಾಪಿ.

**नारज़ामंद**, वि. ಅಸಂತುಷ್ಟ; ಇಷ್ಟ

ವಿಲ್ಲದ.

**नारजीन**, पु. ತೆಂಗು, ತೆಂಗಿನ ಮರ.

**नारद**, पु. ನಾರದ ಮುನಿ; ಕಲಹ ಹುಟ್ಟಿಸುವವ; ನಾಯಿ ತೊಣಚಿ; ಕೃಪಣ, ಲೋಭಿ.

**नारना**, सक्रि. ಆಳ ನೋಡು.

**नार-बिवार**, पु. ಗರ್ಭವೇಷ್ಟನ, ಮಾವಿ ಚೀಲ, ಮಾಸು.

**ना-रवा**, वि. ಅನುಚಿತ; ಅಯುಕ್ತ; ಚಾಲ್ತಿಯಲ್ಲಿಲ್ಲದ; ಬಿಕರಿಯಾಗದ.

**नारवान**, पु. ದಾಳಿಂಬೆ ಮರ.

**ना-रसा**, वि. ಅನರ್ಹ; ಅಸಮರ್ಥ; ಶೀಲವಿಲ್ಲದ.

**ना-रसाई**, स्त्री. ಅನರ್ಹತೆ; ಅಸಮರ್ಥತೆ; ಕೆಟ್ಟಶೀಲ.

**नारा**, पु. ನಾಡೆ, ಲಾಡಿ; ಹೊಕ್ಕಳು ಬಳ್ಳಿ; ಗೆಜ್ಜೆ ವಸ್ತ್ರ; ನೊಗಪಟ್ಟಿ, ಮಿಳಿ, ಜೊತ್ತಿಗೆ; ಕೂಗು, ಅಬ್ಬರ, ಘೋಷ.

**नाराच**, पु. ಉಕ್ಕಿನ ಬಾಣ, ಅಂಬು.

**नाराज़**, वि. ಅಪ್ರಸನ್ನ; ಸಿಟ್ಟಾದ, ರೇಗಿದ. नाराज होना = ಸಿಟ್ಟಾಗು. ರೇಗು, ಕನಲು.

**नाराज़गी, नाराज़ी**, स्त्री. ಅಸಮಾಧಾನ; ಸಿಟ್ಟು, ಕೋಪ.

**नारियल**, पु. ತೆಂಗು; ತೆಂಗಿನ ಕಾಯಿ; ತೆಂಗಿನ ಕರಟದ ಹುಕ್ಕಾ; ಒಂದು ಬಗೆ ಬಾಣಬಿರುಸು.

**नारियली**, स्त्री. ತೆಂಗಿನ ಕರಟದ ಸವುಟು, ಅಗಪೆ; ತೆಂಗಿನ ಗಿಟಕು, ಕೊಬ್ಬರಿ; ತೆಂಗಿನ ಕರಟದ ಹುಕ್ಕಾ.

**नारी**, स्त्री. ಹೆಂಗಸು, ಸ್ತ್ರೀ, ನಾರಿ; ಪತ್ನಿ. वि. ಬೆಂಕಿಯು, ಅಗ್ನಿಯು; ಬೆಂಕಿ ತುಂಬಿದ; ನರಕದ.

**नारू**, पु. ಹೇಸು; ನಾರು ಹುಣ್ಣು.

**नाल**, पु. ದಂಟು, ತೊಟ್ಟು; ನಾಳ, ಕೊಳವಿ; ಊದುಗೊಳವಿ, ಕೋವಿ; ನೇಯಿಕಾರನ ಲಾಳಿ, ಅಟ್ಟೆ; ಹೊಕ್ಕಳು ಬಳ್ಳಿ; ನಾಭಿ; ನಾಲ; ಮೋರಿ, ಜಲದಾರಿ; ಗೊರಸು; ಲಾಳ; ಹಲ್ಲೆ; ಕತ್ತಿಯ ಒರೆಯ ತುದಿಯಲ್ಲಿರುವ ಅಣಸು ಅಥವಾ ಬಳೆ; ವ್ಯಾಯಾಮಕ್ಕಾಗಿ ಹಿಡಿ ಹಾಕಿರುವ ವರ್ತುಲಾಕಾರದ ಕಲ್ಲು, ಸಾಂಗ್ರಾಣಿ; ಭಾವಿಯ ತಳದಲ್ಲಿರಿಸುವ ಚೌಕಟ್ಟು, ಭಾವಿಯ ಚಕ್ರ; ಜೂಜುಗಾರರು ಜೂಜಿನ ಮನೆಗೆ ಕೊಡುವ ಬಾಡಿಗೆ ಹಣ.

**नालकटाई**, स्त्री. ಹುಟ್ಟಿದ ಕೂಸಿನ ಹೊಕ್ಕಳು ಬಳ್ಳಿ ಕೊಯ್ಯುವಿಕೆ.

**नालकी**, स्त्री. ಎರಡು ಪಕ್ಕಗಳಲ್ಲೂ ತೆರೆದಿರುವ ಪಲ್ಲಕ್ಕಿ.

**नालना**, अक्रि. ಅಳು, ಹಲುಬು.

**नालबंद**, पु. ಲಾಳ ಕಟ್ಟುವವ, ನಾಲಬಂದಿ.

**नालबंदी**, स्त्री. ಲಾಳ ಕಟ್ಟುವಿಕೆ; ನಾಲಬಂದಿಯ ಕೆಲಸ.

**नाला**, पु. ಚರಂಡಿ, ಮೋರಿ; ನಾಲ, ಕಾಲುವೆ; ಜಲ ಪ್ರವಾಹ, ಹೊಳೆ; ಆರ್ತಧ್ವನಿ, ಅಳು; ದೂರು, ಫಿರ್ಯಾದು

**नालायक़**, वि. ಅಯೋಗ್ಯ, ಅನರ್ಹ; ಅನುಪಯುಕ್ತ; ಅನುಚಿತ.

**नालायकी**, स्त्री. ಅನರ್ಹತೆ, ಅಯೋಗ್ಯತೆ.

**नालिका**, स्त्री. ದಂಟು, ತೊಟ್ಟು; ಚಿಕ್ಕ ನಾಲ, ನಳಿಗೆ.

**नालिश**, स्त्री. ಮೊರೆ, ದೂರು, ಫಿರ್ಯಾದು; ಮೊಕದ್ದಮೆ, ಕಟ್ಲೆ.

**नालिशी**, पु. ಮೊರೆಯಿಡುವವ; ಫಿರ್ಯಾದಿದಾರ, ವಾದಿ.

**नाली**, स्त्री. ನಾಲ; ಮೋರಿ, ಚರಂಡಿ; ಕುದುರೆಯ ಬೆನ್ನಿನ ಗುಣಿ; ನಳಿಗೆ, ಗೊಟ್ಟ; ರಕ್ತನಾಳ, ಧಮನಿ

**नाव**, स्त्री. ನಾವೆ, ದೋಣಿ, ನೌಕ.

**नावक**, पु. ತೀಕ್ಷ್ಣವಾದ ಚಿಕ್ಕ ಬಾಣ; ಜೇನು ಹುಳುವಿನ ಕೊಂಡಿ, ಮುಳ್ಳು; ನಳಿಗೆ, ನಾವಿಕ, ಓಡಗಾರ.

**नावना**, सक्रि ಬಗ್ಗಿಸು; ಇಳಿಸು, ಅರಿಸು, ಇಡು.

**नावर**, स्त्री. ದೋಣಿ, ತೆಪ್ಪ; ತೆಪ್ಪೋತ್ಸವ

**नवाक़िफ़**, वि. ಅನಭಿಜ್ಞ, ಅಪರಿಚಿತ.

**नावाजिब**, वि. ಸರಿಯಲ್ಲದ; ಅನುಚಿತ.

**नवारिस**, वि. ವಾರಸಿಲ್ಲದ, ಬೇವಾರಿಸಿ.

**नाविक**, पु. ನಾವಿಕ, ನಾವಾಡಿಗ, ಓಡಗಾರ, ಚುಕ್ಕಾಣಿಗಾರ.

**नाश**, पु. ನಾಶ; ಕೇಡು; ಅಳಿವು.

**नाशक**, वि. ನಾಶಮಾಡುವ; ವಿನಾಶಕ.

**नाशपाती**, स्त्री. ಮರಸೇಬು, ಬೇರಿಕಾಯಿ.

**नाशाद**, वि. ಅಪ್ರಸನ್ನ; ದುಃಖಿತ.

**नाशाइस्तगी**, स्त्री. ಅಸಭ್ಯತೆ, ಅಶಿಷ್ಟತೆ

**नाशाइस्ता**, वि. ಅಶಿಷ್ಟ; ಅಸಭ್ಯ.

**नाशुक्री**, वि. ಕೃತಘ್ನ.

**नाश्ता**, पु. ನಾಷ್ಟಾ, ನಾಶ್ತ, ನ್ಯಾರಿ, ಫಲಾಹಾರ, ಫರಾಳ, ಉಪಾಹಾರ.

**नास**, स्त्री. ನಾಸಿಕಾ ಚೂರ್ಣ, ನಸ್ಯ, ನಶ್ಯ; ನಾಶ.

**नासदान**, पु. **नासदानी**, स्त्री. ನಸ್ಯದ ಡಬ್ಬಿ, ಹುಡಿಬುರುಡೆ.

**नासबूरी**, **नासब्र**, वि. ತಾಳ್ಮೆಯಿಲ್ಲದ, ಅಸಹಿಷ್ಣು.

**नासमझ**, वि. ಬುದ್ಧಿಯಿಲ್ಲದವ, ದಡ್ಡ.

**नासमझी**, स्त्री. ಅವಿವೇಕ, ದಡ್ಡತನ.

**नासा**, पु. ನಾಸಿಕೆ, ಮೂಗು; ಮೂಗಿನ ರಂಧ್ರ, ಹೊಳ್ಳೆ; ಮೂಗಿನ ಬಾವು.

**नासाज़**, वि. ಅಸ್ವಸ್ಥ, ಜಡ್ಡುಗೊಂಡ, ಹುಷಾರಿಲ್ಲದ; ವಿರುದ್ಧವಾದ; ಒರಟು.

**नासापुट**, पु. ಮೂಗಿನ ಹೊಳ್ಳೆ.

**नासिका**, स्त्री. ಮೂಗಿನ ಹೊಳ್ಳೆ; ಸೊಂಡಿಲು.

**नासिख़**, पु. ನಕಲು ಬರೆಯುವವ; ಹೊಡೆದುಹಾಕುವವ, ರದ್ದುಗೊಳಿಸುವವ.

**नासिज़**, पु. ನೆಯಿಗೆಯವ, ಜಾಡ; ಕವನ ಮಾಡುವವ.

**नासिया**, पु. ಹಣೆ, ಲಲಾಟ.

**नासिर**, पु. ಕಾಪಾಡುವವ, ರಕ್ಷಕ; ಸಹಾಯಕ; ಜೊತೆಗಾರ; ಗದ್ಯ ಲೇಖಕ

**नासूत**, स्त्री. ಮನುಷ್ಯತನ; ಮನುಷ್ಯ, ಮಾನವ.

**नासूर**, पु. ಸೋರುವ ಹುಣ್ಣು, ನಾಡೀವ್ರಣ, ಭಂಗದರ.

नासिह, नासेह, पु. ಉಪದೇಶ, ಬೋಧನೆ; ಉಪದೇಶಕ, ಬೋಧಕ.
नास्तिक, पु. ದೇವರಲ್ಲಿ ನಂಬಿಕೆಯಿಲ್ಲದವ, ನಾಸ್ತಿಕ.
नास्तिकवाद, पु. ನಾಸ್ತಿಕರ ಮತ.
नाहंजार, वि. ಅಸಮ; ಹೆಚ್ಚು ಕಡಮೆಯಾದ; ಒರಟಾದ; ದುಷ್ಟ, ದುರುಳ; ದುರ್ಮಾರ್ಗಿ; ಭಾಗ್ಯಹೀನ.
नाहंजारी, स्त्री. ದುರ್ಮಾರ್ಗ; ದುರುಳತನ; ಒರಟುತನ; ಅಶಿಷ್ಟತೆ, ಅಸಭ್ಯತೆ.
नाह, पु. ನಾಥ, ಯಜಮಾನ; ಪತಿ; ಗಾಡಿ ಚಕ್ರದ ಗುಮ್ಮ, ಗಾಡಿ ಚಕ್ರದ ತುಮುರು. क्रिवि. ಅಲ್ಲ; ಇಲ್ಲ, ಊಹೂ.
नाहक़, वि. ನ್ಯಾಯವಲ್ಲದ; ಕ್ರಮವಲ್ಲದ; ಅನಧಿಕೃತ; ಅನ್ಯಾಯವಾದ. क्रिवि. ಅನ್ಯಾಯವಾಗಿ; ಅಕ್ರಮವಾಗಿ; ವ್ಯರ್ಥವಾಗಿ. पु. ಅನ್ಯಾಯ; ಅಪದ್ಧ, ಸುಳ್ಳು.
नाह-नूह, स्त्री. ಒಲ್ಲೆ ಅನ್ನುವಿಕೆ, ಊಹೂ. नाह नूह करना = ಒಲ್ಲೆ ಅನ್ನು, ಊಹೂ ಅನ್ನು, ನಿರಾಕರಿಸು.
नाहर, पु. ಸಿಂಹ, ಹುಲಿ.
नाहरू, पु. ನಾರುಹುಣ್ಣು.
नाहीं, क्रिवि. ಇಲ್ಲ, ಅಲ್ಲ.
निंगलना, सक्रि. = निगलना.
निंगलाना, सक्रि. = निगलाना.
निंदक, वि. ನಿಂದೆಮಾಡುವವ, ನಿಂದಕ
निंदन, पु. ನಿಂದಿಸುವಿಕೆ, ನಿಂದೆ.
निंदना, सक्रि. ನಿಂದಿಸು.
निंदा, स्त्री. ನಿಂದೆ, ಅಪವಾದ.
निंद्रास, स्त्री. ತೂಕಡಿಕೆ, ಜೊಂಪು.
निंद्रासा, वि. ತೂಕಡಿಸುವ.
निंद्रिया, स्त्री. ನಿದ್ರೆ.
निंबू, पु. ನಿಂಬೆಹಣ್ಣು.
निःशंक, वि. ನಿರ್ಭಯವಾದ; ಸಂಕೋಚವಿಲ್ಲದ.
निःसंदेह, वि. ಸಂದೇಹವಿಲ್ಲದ, ಸಂಶಯವಿಲ್ಲದ. क्रिवि. ನಿಸ್ಸಂದೇಹವಾಗಿ, ಖಂಡಿತ.
निःस्वार्थ, वि. ಸ್ವಾರ್ಥವಲ್ಲದ.
निअराना, अक्रि. = नियराना.
निआन, पु. ಅಂತ, ಕೊನೆ. अव्य. ಕೊನೆಗೆ, ಕಡೆಗೆ.
निकंटक, वि. ಅಭ್ಯಂತರವಿಲ್ಲದ, ನಿರ್ವಿಘ್ನ.
निकट, वि. ಹತ್ತಿರದ, ಸಮೀಪದ; ಸೇರಿದ, ನೆರೆಯ. क्रिवि. ಹತ್ತಿರ, ಬಳಿ, ಸಮೀಪದಲ್ಲಿ.
निकटता, स्त्री. ಸಾಮೀಪ್ಯ; ಹತ್ತಿರ, ನೆರೆ
निकटवर्त्ती, वि. ಹತ್ತಿರದಲ್ಲಿರುವ.
निकती, स्त्री. ಸಣ್ಣ ತಕ್ಕಡಿ; ಒಂದು ಮಿಠಾಯಿ.
निकम्मा, वि. ಕೆಲಸವಿಲ್ಲದ; ಕೆಲಸಕ್ಕೆ ಬಾರದ, ನಿರರ್ಥಕ; ನಿಷ್ಪ್ರಯೋಜಕ; ನೀಚ; ದರಿದ್ರ, ಬಡ.
निकर, पु. ಸಮೂಹ, ಸಮುದಾಯ; ರಾಶಿ, ಕುಪ್ಪೆ; ನಿಧಿ; ಸಾರ.
निकर्मा, वि. ಸೋಮಾರಿ, ಮೈಗಳ್ಳ.
निकल, पु. ಹೊರಡುವಿಕೆ, ಹೊರ

ಬೀಳುವಿಕೆ.

**निकलना**, अक्रि. ಹೊರಡು; ಹೊರ ಪಡು; ಉಗು; ಏಳು, ಹುಟ್ಟು; ಮೂಡು; ಪರಿಣಮಿಸು; ಸಿದ್ಧವಾಗು, ಸಲ್ಲು; ಪಾರಾಗು, ತೇರ್ಗಡೆಹೊಂದು; ಒಗ್ಗು, ಪಳಗು.

**निकलवाना**, सक्रि. निकालना का प्रे. रूप.

**निकसना**, अक्रि. =निकलना.

**निकाई**, स्त्री. ಸೌಂದರ್ಯ, ಚೆಲುವು, ಚಂದ; ಒಳ್ಳೆಯತನ, ನಲ್ಮೆ; ಕಳೆ ಕೀಳುವಿಕೆ; ಕಳೆ ಕೀಳುವುದಕೆ ಕೂಲಿ.

**निकाज**, वि. ಕೆಲಸವಿಲ್ಲದವ.

**निकाना**, सक्रि. ಕಳೆ ತೆಗೆ, ಕಳೆ ಕೀಳು.

**निकाम**, वि. ಕೆಲಸವಿಲ್ಲದ; ಕೆಲಸಕ್ಕೆ ಬಾರದ, ವ್ಯರ್ಥ; ನಿರರ್ಥಕ. क्रिवि. ವ್ಯರ್ಥವಾಗಿ, ಸುಮ್ಮನೆ.

**निकाल**, पु. ಹೊರಡಿಸುವಿಕೆ, ಬಹಿಷ್ಕರಣ; ಸಾಗಿಸುವಿಕೆ; ಉಪಾಯ; ದಾರಿ.

**निकालना**, स्त्री. ತೆಗೆಯುವಿಕೆ, ಹೊರ ಗೆಡವುವಿಕೆ.

**निकालना**, सक्रि. ಹೊರಡಿಸ ; ಹೊರ ಪಡಿಸು; ಪ್ರಕಟಿಸು; ತೆಗೆ, ತೆಗೆದು ಹಾಕು; ಆಯು; ಬಿಡಿಸು; ಗೊತ್ತು ಮಾಡು, ನಿರ್ಧಾರಮಾಡು; ಕಲ್ಪಿಸು, ಹುಟ್ಟಿಸು; ಒದಗಿಸು; ಕುದುರೆಯನ್ನು ಪಳಗಿಸು; ಕಸೂತಿಹಾಕು; ಮೊಟ್ಟೆಗೆ ಕಾವು ಕೊಡು. जवाव निकालना= ಉತ್ತರ ಕಂಡುಹಿಡಿ, ಗೊತ್ತುಮಾಡು. हिसाव निकालना= ಲೆಕ್ಕ ನೋಡಿ ನಿಲುವು ಬಾಕಿ ಗೊತ್ತುಮಾಡು.

**निकाला**, पु. ಹೊರಡಿಸುವಿಕೆ, ಬಹಿಷ್ಕರಣ; ಗಡೀಪಾರು, ದೇಶಭ್ರಷ್ಟತೆ.

**निकास**, पु. ಹೊರಡುವಿಕೆ; ಉತ್ಪತ್ತಿ, ಹುಟ್ಟುವಳಿ; ಹುಟ್ಟು, ಉತ್ಪತ್ತಿ ಸ್ಥಾನ; ಮೂಲಸ್ಥಾನ; ಪ್ರವೇಶ, ದ್ವಾರ; ತೂಬು, ಕೋಡಿ; ಮೇರೆ, ಸರಹದ್ದು, ಗಡಿ; ಬಯಲು; ಬಿಕರಿ; ಮಹಸೂಲು.

**निकासना**, सक्रि. =निकालना.

**निकासी**, स्त्री. ಹೊರಡುವಿಕೆ, ನಿರ್ಗಮನ; ಹುಟ್ಟುವಳಿ, ವರಮಾನ; ಮಾರಾಟ; ಸರಕು ಕಳುಹಿಸುವಿಕೆ, ರಫ್ತು; ಸರಕಿನ ಮೇಲಿನ ಸುಂಕ; ಸುಂಕದ ಚೀಟಿ, ರಹದಾರಿ ಚೀಟಿ; ಜಾಬಿತ.

**निकास्ता**, पु. ಕಂಬ, ಊರೆ, ಊತು, ಆಧಾರ.

**निकाह**, पु. ಮಹಮ್ಮದೀಯರ ವಿವಾಹ, ಮದುವೆ.

**निकाही**, वि. ಮದುವೆಯಾದ (ಸ್ತ್ರೀ).

**निकियाई**, स्त्री. ಸೀಳುವಿಕೆ, ಸೀಳುವುದರ ಕೂಲಿ.

**निकियाना**, सक्रि. ಹರಿ, ಸೀಳು; ಕಿತ್ತು ಹಾಕು, ಸಿಗಿ.

**निकी**, स्त्री. ಸಣ್ಣ ತಕ್ಕಡಿ.

**निकुंज**, पु. ಲತಾಮಂಟಪ, ನಿಕುಂಜ.

**निकृष्ट**, वि. ನೀಚ, ನಿಕೃಷ್ಟವಾದ.

**निकृष्टता**, स्त्री. ನೀಚತನ, ಹೀನತನ.

**निको**, वि. ಸುಂದರವಾದ, ಒಳ್ಳೆಯ.

**निकोई**, स्त्री. ಒಳ್ಳೆಯತನ; ಸೌಂದರ್ಯ; ಆರೋಗ್ಯ.

निकोनाम, वि. ಒಳ್ಳೆಯ ಹೆಸರು ಪಡೆದ; ವಿಖ್ಯಾತ.

निकोसना, सक्रि. ಹಲ್ಲು ಕಿಸಿ, ಹಲ್ಲು ಕಿರಿ.

निकौड़िया, वि. ಕಾಸಿಲ್ಲದವ; ದರಿದ್ರ, ಬಡವ, ಗರೀಬ.

निक्का, वि. ಚಿಕ್ಕ, ಸಣ್ಣ; ಪುಟ್ಟ.

निक्षेप, पु. ಎಸೆಯುವಿಕೆ; ತ್ಯಜಿಸುವಿಕೆ; ಇಡುವಿಕೆ, ಠೇವಣಾತಿ; ನಿಧಿ.

निखंग, पु. ನಿಷಂಗ, ಬತ್ತಳಿಕೆ, ಮೂಡಿಗೆ.

निखंड, वि. ಸರಿಮಧ್ಯ, ನಡು.

निखट्टू, वि. ಕೆಲಸವಿಲ್ಲದವ; ಕೆಲಸಕ್ಕೆ ಬಾರದವ; ಉಂಡಾಡಿ; ಸೋಮಾರಿ; ದುಂಡುಗಾರ.

निखद, वि. ಅನಿಷ್ಟ, ಅಶುಭ; ಕೆಟ್ಟ.

निखरना, अक्रि. ನಿರ್ಮಲವಾಗು; ತಿಳಿ ಗಟ್ಟು, ತಿಳಿ; ಹೊಳೆಯು; ಕುದುರು.

निखरवाना, निखराना, सक्रि. ತಿಳಿ ಗಟ್ಟಿಸು; ಕುದುರಿಸು, ಶುಭ್ರಮಾಡು.

निखरा, वि. ಶುದ್ಧವಾದ, ಶುಭ್ರ.

निखरी, स्त्री. ತುಪ್ಪದಲ್ಲಿ ಮಾಡಿದ ಅಡಿಗೆ, ಘೃತಪಕ್ವ.

निखार, पु. ನಿರ್ಮಲತೆ; ತಿಳಿ; ಸ್ವಚ್ಛತೆ; ಪರಿಷ್ಕಾರ.

निखारना, सक्रि. ತೊಳೆ; ನಿರ್ಮಲ ಮಾಡು, ಶುದ್ಧಿಮಾಡು; ಪರಿಷ್ಕರಿಸು; ಸುಲಿ.

निखालिस, वि. ಅಪ್ಪಟ, ಅಚ್ಚ.

निखिल, वि. ಸಮಸ್ತ, ಸರ್ವ.

निखेद, वि. ದುಃಖರಹಿತ. पु. ನಿಷೇಧ, ನಿರೋಧ, ತಡೆ.

निखोट, वि. ದೋಷ ಅಥವಾ ಕಲಂಕ ವಿಲ್ಲದ; ಶುದ್ಧ, ನಿರ್ಮಲ; ಪವಿತ್ರ; ನಿಷ್ಕಪಟ, ಸರಳ. क्रिवि. ನಿಷ್ಕಪಟ ವಾಗಿ, ನಿರಾತಂಕವಾಗಿ.

निखोरना, सक्रि. ಸುಲಿ, ಸಿಪ್ಪೆ ತೆಗಿ.

निखोरा, वि. ದಯಾರಹಿತ.

निगंदना, सक्रि. ಸುಪ್ಪತ್ತಿಗೆಗೆ ಟಾಕ ಹಾಕು, ತಡೀ ಹೊಲಿ.

निगंदा, पु. निगंदाई, स्त्री. ರಜಾಯಿ ಅಥವಾ ತಡೀ ಹೊಲಿಯುವಿಕೆ.

निगड़, स्त्री. ಸರಪಣಿ, ಸಂಕೋಲೆ, ಬೇಡಿ

निगर, वि. ಗಟ್ಟಿ, ದೃಢ. पु. ನುಂಗುವಿಕೆ.

निगराँ, पु. ರಕ್ಷಕ; ಸಂರಕ್ಷಕ, ಪಾಲಕ; ಮೇಲ್ವಿಚಾರಕ.

निगरानी, स्त्री. ಕಣ್ಗೋಟ, ಕಣ್ಗಾವಲು; ಮೇಲ್ವಿಚಾರಣೆ, ಪಾರುಪತ್ಯ; ಪರಾಂಬರಿಕೆ, ಉಸ್ತುವಾರಿ.

निगरू, वि. ಹಗುರ, ಲಘು.

निगलना, सक्रि. ನುಂಗು, ನೊಣೆ, ಕಬಳಿಸು.

निगह, स्त्री. =निगाह.

निगहबान, पु. ಕಾಯುವವ, ಕಾಪಾಡುವವ; ಸಂರಕ್ಷಕ, ಪಾಲಕ.

निगहबानी, स्त्री. ಮೇಗಾವಲು, ಸಂರಕ್ಷಣೆ, ಪರಾಂಬರಿಕೆ.

निगार, स्त्री. ಚಿತ್ರ; ಹೂವಿನ ಕೆಲಸ, ಕಸೂತಿ; ನಕಾಸಿ; ಗೋರಂಟಿ, ಮದರಂಗಿ; ಸಿಂಗಾರ; ಚೆಲುವಿ; ಪ್ರಿಯೆ,

ಪ್ರೇಮಿಕೆ.

**निगारी**, स्त्री. ಚಿತ್ರ; ಅಲಂಕಾರ, ಸಿಂಗಾರ.

**निगारीन**, वि. ಅಲಂಕೃತ, ಸಿಂಗರಿಸಿದ

**निगाली**, स्त्री. ಹುಕ್ಕಾವಿನ ಕೊಳವೆ.

**निगाह**, स्त्री. ದೃಷ್ಟಿ, ನೋಟ; ನೋಡುವಿಕೆ, ವೀಕ್ಷಣ; ಕೃಪಾದೃಷ್ಟಿ; ಪರಾಂಬರಿಕೆ; ಗಮನ, ನಿಗಾ.

**निगाही**, वि. ದೃಷ್ಟಿಯ, ನೋಟದ.

**निगूड़**, वि. ಗೂಢ, ಗುಪ್ತ, ರಹಸ್ಯ.

**निगून**, वि. ಬಾಗಿದ, ಬಗ್ಗಿದ; ತಲೆ ಕೆಳಕಾದ, ಬುಡಮೇಲಾದ.

**निगोड़ा**, वि. ಕುಂಟ, ಹೆಳವ; ಅಶಕ್ತ; ದಿಕ್ಕಿಲ್ಲದವ. निगोड़ा नाठा = ಅನಾಥ, ದಿಕ್ಕಿಲ್ಲದವ; ಒಬ್ಬಂಟಿಗ, ಅಣ್ಣಾ ಒಂಟಿಗಾರ; ನಿರ್ಭಾಗ್ಯ; ಪೋಕರಿ, ದುರುಳ.

**निग्रह**, पु. ತಡೆ; ಅಡಗಿಸುವಿಕೆ, ದಮನ, ನಿಸ್ಪ್ರಹ; ದಂಡನೆ.

**निघंटु**, पु. ಶಬ್ದಕೋಶ, ನಿಘಂಟು.

**निघटना**, अक्रि. ಕಡಮೆಯಾಗು, ಇಳಿ, ಕುಗ್ಗು.

**निघर-घट**, वि. ಮನೆಮಠವಿಲ್ಲದ, ದಿಕ್ಕಿಲ್ಲದ; ನಿರ್ಲಜ್ಜ, ನಾಚಿಕೆಗೇಡಿ.

**निघरा**, **निघरू**, वि. ದಿಕ್ಕು ದಿವಾಳ ವಿಲ್ಲದ, ಬೇವಾರಸಿ; ಉಂಡಾಡಿ.

**निघाति**, स्त्री. ಕಬ್ಬಿಣದ ಗದೆ.

**निचय**, पु. ನಿಶ್ಚಯ; ಸಮೂಹ, ಗುಂಪು

**निचला**, वि. ಕೆಳಗಿನ, ಕೆಳಗಣ.

**निचाई**, स्त्री. ತಗ್ಗು; ಆಳ; ಕೆಳಗಾಗುವಿಕೆ; ಕೀಳುತನ, ನೀಚತನ.

**निचाट**, वि. ಬೆಂಗಾಡಾದ, ಅರಣ್ಯದ.

**निचान**, स्त्री. ತಗ್ಗು; ಹಳ್ಳ; ಇಳಕಲು, ಇಳಿಜಾರು.

**निचिंत**, वि. ನಿಶ್ಚಿಂತೆಯಾದ.

**निचडना**, **निचुडना**, अक्रि. ಒಸರು, ಸೋರು, ಜಿನಿ; ನಿಸ್ಸಾರವಾಗು, ಬತ್ತಿ ಹೋಗು, ಸೊರಗು.

**निचड़वाना**, **निचुड़वाना**, सक्रि. निचड़ना का प्रे. रूप.

**निचोड़**, पु. ಹಿಂಡಿದ್ದು; ರಸ, ಸತ್ವ; ತಿರುಳು, ಸಾರ, ಸಾರಾಂಶ; ಮುಕ್ತಾಯ

**निचोड़ना**, सक्रि. ಹಿಂಡು, ಕಿವುಚು; ಹಿಂಡಿತೆಗೆ, ಸಾರತೆಗೆ; ದೋಚಿಕೊಳ್ಳು

**निचोड़वा**, **निचोडू**, वि. ಹಿಂಡುವವ; ಅಪಹರಿಸುವವ; ದೋಚಿಕೊಳ್ಳುವವ; ಲೋಭಿ.

**निचोल**, पु. ಹೆಂಗಸರ ವಸ್ತ್ರ, ಅಸ್ತ್ರ ಸೆರಗು; ಮುಸುಕು; ಹೊದಿಕೆ.

**निचोवना**, सक्रि. = निचोड़ना.

**निचौहां**, वि. ಬಗ್ಗಿದ, ಬಾಗಿದ.

**निचौहें**, क्रिवि. ಕೆಳಗಡೆ.

**निछक्का**, वि. ದೋಷರಹಿತ; ಶುದ್ಧವಾದ, ಅಪ್ಪಟ; ಪ್ರತ್ಯೇಕವಾದ, ಏಕಾಂತ.

**निछत्र**, वि. ಛತ್ರಿ ಅಥವಾ ರಾಜಚಿಹ್ನೆಗಳಿಲ್ಲದ.

**निछनियां**, क्रिवि. ಸಂಪೂರ್ಣವಾಗಿ; ಒಂದೇ ಸಾರಿ.

**निछल**, वि. ನಿಷ್ಕಪಟ, ಯಥಾರ್ಥ;

ಶುದ್ಧ, ಅಪ್ಪಟ.

**निछान**, वि. ಶುದ್ಧ, ಅಚ್ಚ. क्रिवि. ಪೂರ್ತಿಯಾಗಿ, ಒಟ್ಟಿಗೆ.

**निछावर**, स्त्री. ದೃಷ್ಟಿ ಇಳಿಸುವಿಕೆ, ಇಳಿ ತೆಗೆಯುವಿಕೆ, ನಿವಾಳಿ; ಕರಿ ಹರಿಯು ವಿಕೆ; ನಿವಾಳಿಗೆ ಉಪಯೋಗಿಸಿದ ವಸ್ತು; ನಿವಾಳಿ ತೆಗೆದ ವಸ್ತುವನ್ನು ದಾನ ಕೊಡುವಿಕೆ, ವಿನಿಯೋಗ; ಆಹುತಿ, ಬಲಿ. निछावर होना = ಆಹುತಿಯಾಗು, ಬಲಿಯಾಗು.

**निछोह, निछोही**, वि. ಪ್ರೀತಿಯಿಲ್ಲದ; ನಿರ್ದಯ.

**निज**, वि. ತನ್ನ, ಸ್ವಂತ; ಸ್ವಕೀಯ; ವೈಯಕ್ತಿಕ; ನಿಜ, ಯಥಾರ್ಥ; ನಿಶ್ಚಯ; ಮುಖ್ಯವಾದ.

**निजतिज**, पु. ಔಚಿತ್ಯ; ಸುಧಾರಣೆ, ತಿದ್ದುಪಾಟು.

**निजा**, स्त्री. ಧರ್ಮಪತ್ನಿ; ಸತಿ.

**निज़ाम**, पु. ಮುತ್ತಿನ ಸರ; ರೂಢಿ, ವಾಡಿಕೆ; ಆಸ್ತಿವಾದ; ಕ್ರಮ, ಕಟ್ಟು ಪಾಡು; ವ್ಯವಸ್ಥೆ, ಏರ್ಪಾಟು; ಕವನ ಕಟ್ಟುವಿಕೆ; ಶಾಸಕ, ಮಾಂಡಲಿಕ; ಹೈದರಾಬಾದಿನ ನವಾಬರ ಬಿರುದು.

**निज़ामता**, स्त्री. ವ್ಯವಸ್ಥೆ; ಆಡಳಿತ; ವ್ಯವಸ್ಥಾಪಕರ ಉದ್ಯೋಗ ಅಥವಾ ಕಛೇರಿ.

**निज़ार**, वि. ಸಣಕಲ, ಬಡಕಲ.

**निज़ारी**, स्त्री. ಸಣಕಲ, ಬಡಕಲು.

**निज़ी, निजू**, वि. ತನ್ನ, ಸ್ವಂತ; ಸ್ವಕೀಯ; ಆತ್ಮೀಯ.

**निज्झर**, पु. ಜಲಪಾತ, ಜೋಗು; ಸಣ್ಣಹೊಳೆ, ಝರಿ.

**निझतिझ**, पु. ಹೊಂದಿಕೆ, ಔಚಿತ್ಯ; ಸುಧಾರಣೆ, ತಿದ್ದುಪಾಟು.

**निझरना**, अक्रि. ಉದುರಿಹೋಗು, ತೊಳ್ಳೆಯಾಗು; ನಿಸ್ಸಾರವಾಗು; ಒಣಗಿಹೋಗು; ದೋಷಮುಕ್ತನಾಗು.

**निझाना**, सक्रि. ನೋಡು; ಹೊಂಚು ನೋಡು.

**निझोटना**, सक्रि. ಹರಿ, ಕೀಳು, ಸೆಳೆ.

**निझोल**, वि. ಸಿಧಾನವಾಗಿ ಹೋಗುವ.

**निटारा**, पु. = निबटेरा.

**निटोल**, पु. ಪಟ್ಟಣದ ಒಂದು ಭಾಗ, ಮೊಹಲ್ಲ.

**निठल्ला, निठल्लू**, वि. ಕೆಲಸವಿಲ್ಲದವ; ನಿರುದ್ಯೋಗಿ; ವ್ಯರ್ಥವಾದ.

**निठाला**, पु. ತೆರಪು; ಬಿಡುವು, ಪುರಸತ್ತು; ವರಮಾನವಿಲ್ಲದ ಕಾಲ ಅಥವಾ ಸ್ಥಿತಿ, ಮಂದ.

**निठुर**, वि. ನಿಷ್ಠುರ; ಕ್ರೂರ; ಕಠಿಣ.

**निठुरता, निठुराई**, स्त्री. ಕ್ರೂರತನ, ಕ್ರೌರ್ಯ; ಕಲ್ಲೆದೆ.

**निठौर**, पु. ಕೆಟ್ಟ ಸ್ಥಾನ; ದುರ್ದೆಶೆ.

**निडर**, वि. ಹೆದರದ; ನಿರ್ಭೀತ; ಸಾಹಸಿ, ಎದೆಗಾರ, ದಿಟ್ಟ.

**निडरता, निडरताई, निडरी**, स्त्री. **निडरपन**, पु. ನಿರ್ಭಯತೆ; ಸಾಹಸ.

**निढाल**, वि. ಆಯಾಸಪಟ್ಟ, ದಣಿದ; ಉತ್ಸಾಹಗುಂದಿದ, ತಣ್ಣಗಾದ.

**निढिल**, वि. ಬಿಗಿ, ಗುತ್ತ, ಗಟ್ಟಿ.

**नितंब,** पु. ಪೃಷ್ಠ, ಪಿರ್ರೆ; ಉಬ್ಬು; ಹೆಗಲು.

**नित,** क्रिवि. ನಿತ್ಯ, ಸದಾ, ಯಾವಾಗಲೂ. नित नित = ಪ್ರತಿ ನಿತ್ಯ.

**नितांत,** वि. ಬಹಳ, ತುಂಬ, ಹೆಚ್ಚು

**नित्य,** वि. ನಿತ್ಯವಾದ, ಶಾಶ್ವತ; ಪ್ರತಿ ದಿವಸದ, ನಿತ್ಯ. क्रिवि. ಪ್ರತಿನಿತ್ಯ; ಯಾವಾಗಲೂ, ಸದಾ.

**नित्यता,** स्त्री. ನಿತ್ಯತ್ವ, ಶಾಶ್ವತತ್ವ.

**नित्यनियम,** पु. ನಿತ್ಯಗಟ್ಟಲೆ.

**निथरना,** अक्रि. ತಿಳಿಗಟ್ಟು, ತಿಳಿ, ತೇಟಿಯಾಗು.

**निथरा,** वि. ತಿಳಿಗಟ್ಟಿದ; ಶುದ್ಧವಾದ.

**निथार,** पु. ತಿಳಿಗಟ್ಟಿದ ನೀರು; ಕಟ್ಟು; ಗಸಿ, ರಾಡಿ; ಮುಷ್ಟು, ಬಂಡು.

**निथारना,** सक्रि. ತಿಳಿಯಿಡು, ತೇರಿಕ್ಕು, ತೇಟಿ ಮಾಡು; ಬಸಿ, ತಿಳಿಸುರಿಸು.

**निदना,** अक्रि. ನಿದ್ದೆಹೋಗು, ನಿದ್ರಿಸು

**निदरना,** सक्रि. ಅನಾದರಮಾಡು; ತಿರಸ್ಕರಿಸು; ಭಂಗಪಡಿಸು, ಸೋಲಿಸು.

**निदर्शन,** पु. ತೋರಿಸುವಿಕೆ; ನಿದರ್ಶನ, ತಾರ್ಕಣೆ.

**निदहना,** सक्रि. ಉರಿಸು, ಸುಡು.

**निदा,** स्त्री. ಕೂಗುವಿಕೆ; ಕರೆ; ಸಾರುವಿಕೆ, ಘೋಷಣೆ; ಶಬ್ದ, ಧ್ವನಿ; ಆಕಾಶವಾಣಿ.

**निदाई,** स्त्री. ಕಳೆಕೀಳುವಿಕೆ; ಕೊಯ್ಲು

**निदाघ,** पु. ಉಷ್ಣ; ಧಗೆ, ಝಳ; ಬಿಸಿಲು, ಬೇಸಗೆ.

**निदान,** पु. ಮೂಲ, ಕಾರಣ; ರೋಗಲಕ್ಷಣ, ರೋಗಪರೀಕ್ಷಣ. क्रिवि. ಕೊನೆಗೆ, ಕಡೆಗೆ, ಕಡೆಯದಾಗಿ; ಕನಿಷ್ಠಪಕ್ಷ. वि. ಕಡೆಯದು; ಕೀಳಾದ.

**निदाना,** सक्रि. ಕಳೆಕೀಳು, ಕಳೆತೆಗೆ; ಕೊಯ್ಯು, ಕಟಾಯಿಸು.

**निदालु,** वि, ನಿದ್ರಿಸುವ; ಜೂಗರಿಸುವ, ಸೋಮಾರಿ.

**निदेश,** पु. ಶಾಸನ, ಆಜ್ಞೆ, ಅಣತಿ; ಕಥನ, ಹೇಳಿಕೆ; ಉಪದೇಶ; ಪಕ್ಕ, ನೆರೆ.

**निद्रा,** स्त्री. ನಿದ್ರೆ, ನಿದ್ದೆ.

**निधड़क,** वि. ಹೆದರದ, ನಿರ್ಭೀತ. क्रिवि. ಅಭ್ಯಂತರವಿಲ್ಲದೆ, ತಡೆಯಿಲ್ಲದೆ; ನಿಶ್ಚಿಂತೆಯಾಗಿ, ದುಡುಮ್ಮನೆ.

**निधन,** पु. ಕೊನೆ, ಮುಕ್ತಾಯ; ನಾಶ, ಅಳಿವು; ಸಾವು, ನಿಧನ; ಕುಲ, ಕುಲಪತಿ. वि. ನಿರ್ಧನ, ಬಡ.

**निधनता,** स्त्री. ಬಡತನ, ದಾರಿದ್ರ್ಯ.

**निधनी,** वि. ನಿರ್ಧನ, ಬಡ, ಗರೀಬ.

**निधान,** पु. ಆಧಾರ, ಆಶ್ರಯ; ಭಂಡಾರ, ಬೊಕ್ಕಸ, ನಿಧಿ.

**निधि,** स्त्री. ಭಂಡಾರ; ನಿಧಿ, ಇಡಿಗಂಟು.

**निनरा,** वि. ಪ್ರತ್ಯೇಕ, ಬೇರೆ.

**निनाद,** पु. ನಾದ, ಶಬ್ದ.

**निनादी,** वि. ಶಬ್ದಮಾಡುವ.

**निनान,** क्रिवि. ಕೊನೆಯಲ್ಲಿ, ಕೊನೆಗೆ. वि. ಪೂರ್ಣ, ತೀರ; ಕೀಳಾದ.

**निनाया,** पु. ತಿಗಣೆ, ಮತ್ಕುಣ.

**निनारा,** वि. ಪ್ರತ್ಯೇಕ, ಭಿನ್ನ, ಬೇರೆ.

**निनावां,** पु. ಬಾಯೊಳಗೆ ಏಳುವ ಚಿಕ್ಕ ಗುಳ್ಳೆಗಳು, ಗಂಟಲು ಹುಣ್ಣು.

निनौना, सक्रि. ಬಗ್ಗಿಸು, ಬಾಗಿಸು.
निन्नानबे, निन्नानवे, निन्यानवे, वि. ತೊಂಭತ್ತೊಂಭತ್ತು.
निपंग, वि. ಕುಂಟ, ಮುರವ, ಹೆಳವ.
निपजना, अक्रि. ಹುಟ್ಟು, ಮೊಳೆ; ಬೆಳೆ, ಬಲಿ; ಆಗು.
निपजी, स्त्री. ಹುಟ್ಟುವಳಿ, ಉತ್ಪತ್ತಿ.
निपट, क्रिवि. ಶುದ್ಧ; ಮಾತ್ರ, ಕೇವಲ; ಅತಿ, ಬರೀ, ತೀರ; ಸುತರಾಂ.
निपटना, अक्रि. = निबटना.
निपटाना, सक्रि. = निबटाना.
निपटारा, पु. = निबटेरा.
निपात, पु. ಪತನ; ನಾಶ; ಸಾವು. वि. ಎಲೆಗಳಿಲ್ಲದ.
निपाती, वि. ಬೀಳಿಸುವವ; ವಿನಾಶಕ.
निपान, पु. ನೀರಿನ ತೊಟ್ಟಿ. ಹೌದ; ಕುಡಿಯುವಿಕೆ, ಪಾನ.
निपीड़न, पु. ಪೀಡಿಸುವಿಕೆ; ಕಾಟ, ಹಿಂಡುವಿಕೆ, ಹಿಸುಕುವಿಕೆ.
निपीड़ना, सक्रि. ಹಿಂಡು, ಹಿಸುಕು; ಅಮುಕು; ಪೀಡಿಸು.
निपुन, वि. ನಿಪುಣ; ಗಟ್ಟಿಗ.
निपुनता, स्त्री. ನಿಪುಣತೆ, ಸಾಮರ್ಥ್ಯ.
निपूत, निपूता, वि. ಪುತ್ರಸಂತಾನವಿಲ್ಲದ, ಮಕ್ಕಳಿಲ್ಲದವ.
निपोड़ना, सक्रि. ಹಲ್ಲು ಕಿಸಿ
निफन, वि. ಪೂರಾ, ಪೂರ್ತಿ. क्रिवि. ಪೂರ್ತಿಯಾಗಿ, ತೀರ.
निफरना, अक्रि. ಹೊಗು, ಛೇದಿಸಿಕೊಂಡು ಹೋಗು; ಸ್ಪಷ್ಟವಾಗು, ಸ್ಫುಟವಾಗು.
निफ़ाक़, स्त्री. ವಿರೋಧ, ಹಗೆ; ವೈಮನಸ್ಯ; ಭಿನ್ನಾಭಿಪ್ರಾಯ. पु. ಜಾಲ, ಠಕ್ಕು.
निफ़ास, पु. ಪ್ರಸವ.
निपोट, वि. ಸ್ಪಷ್ಟ, ವಿಶದ.
निबंध, पु. ತಡೆ, ಬಂಧನ; ಕಟ್ಟು; ಕೈಕೋಳ, ಬೇಡಿ; ಲೇಖನ, ಪ್ರಬಂಧ.
निबकौरी, स्त्री. ಬೇವಿನ ಹಣ್ಣು.
निबख़्ता, वि. ನಿರ್ಭಾಗ್ಯ.
निबटना, अक्रि. ವಿಮುಕ್ತನಾಗು; ಮುಕ್ತಾಯವಾಗು, ತೀರು; ಇತ್ಯರ್ಥವಾಗು, ತೀರ್ಮಾನವಾಗು; ಬಗೆಹರಿ.
निबटाना, सक्रि. ಮುಗಿಸು, ತೀರಿಸು; ಸಂದಾಯ ಮಾಡು, ಸಲ್ಲಿಸು; ತೀರ್ಮಾನಿಸು; ಇತ್ಯರ್ಥ ಮಾಡು; ಬಗೆ ಹರಿಸು.
निबटाव, निबटेरा, पु. ಮುಕ್ತಾಯ, ತೀರುಪಾಟು; ಇತ್ಯರ್ಥ, ತೀರ್ಮಾನ; ನಿರ್ಣಯ, ಪೈಸಲು.
निबड़ना, अक्रि. = निबटना.
निबद्ध, वि. ತಡೆದ; ಕಟ್ಟಿದ; ಸೇರಿಸಿದ; ಪೋಣಿಸಿದ.
निबरना, अक्रि. ಮುಕ್ತಾಯವಾಗು; ಬಗೆ ಹರಿಯು, ಇತ್ಯರ್ಥವಾಗು; ಬೇರೆಯಾಗು, ಅಗಲು; ಬಿಚ್ಚಿಹೋಗು; ಕಳಚು, ಬಿಡು.
निबल, वि. ನಿರ್ಬಲ, ಬಲಹೀನ.
निबलाई, स्त्री. ಬಲಹೀನತೆ, ನಿಶ್ಶಕ್ತಿ.
निबह, पु. ಸಮುದಾಯ, ಗುಂಪು.
निबहना, अक्रि. ನೆರವೇರು, ಈಡೇರು;

ಸಾಗು, ಪೂರೈಸು, ಪಾರಾಗು.
**निबहुर**, पु. ಯಮಪುರಿ.
**निबहुरा**, वि. ಹಿಂತಿರುಗಿ ಬಾರದವ, (ಶಪಿಸುವಾಗ ಹೇಳುವುದು).
**निबाड़ा**, पु. ಬೇರೆಯಾಗುವಿಕೆ.
**निबाह**, पु. ನಿರ್ವಹಿಸುವಿಕೆ, ನಿರ್ವಹಣ; ಕಾಲಕ್ಷೇಪ; ಸಫಲತೆ; ಸಾಗಿಸುವಿಕೆ; ಪರಿಪಾಲನೆ, ಕಾಪಾಡುವಿಕೆ; ನಿರ್ವಾಹ
**निबाहना**, सक्रि. ನೆರವೇರಿಸು, ಈಡೇರಿಸು; ನಿರ್ವಹಿಸು; ಪರಿಪಾಲಿಸು; ಸಾಗಿಸು, ನೀಸು, ನಿಭಾಯಿಸು, ಸಂಭಾಳಿಸು; ಸಾಧಿಸು; ಕೊನೆಗಾಣಿಸು; ಸುಧಾರಿಸಿ ಕೊಂಡು ಹೋಗು.
**निबाहू**, वि. ನಿಭಾಯಿಸುವುದಕ್ಕೆ ಬೇಕಾದಷ್ಟು; ಸಾಕಷ್ಟು. पु. ಸಾಗಿಸುವವ, ನಿಭಾಯಿಸುವವ.
**निबिड़**, वि. ಘನ, ದಟ್ಟ, ನಿಬಿಡ.
**निबुआ**, पु. ನಿಂಬೆ.
**निबुकना**, अक्रि. ಬಿಡುಗಡೆಯಾಗು; ಮುಕ್ತನಾಗು. सक्रि. ಬಿಡು, ಬಿಡಿಸು.
**निबेड़ना**, सक्रि. ಬಿಡುಗಡೆ ಮಾಡು, ಖುಲಾಸೆ ಮಾಡು; ಚುನಾಯಿಸು, ಆಯ್ಯು, ಬಿಡಿಸು; ಬಗೆಹರಿಸು, ನಿರ್ಣಯ ಮಾಡು; ಪೂರೈಸು, ನೆರವೇರಿಸು.
**निबेड़ा**, पु. ಆಯುವಿಕೆ; ಬಿಡಿಸುವಿಕೆ; ಬಿಡುಗಡೆ; ಮುಕ್ತಾಯ; ನಿರ್ಣಯ, ಇತ್ಯರ್ಥ.
**निबेरना**, सक्रि. = **निबेड़ना**.
**निबेरा**, पु. = **निबेड़ा**.
**निबौरी, निबौली**, स्त्री. ಬೇವಿನ ಹಣ್ಣು
**निभना**, अक्रि. ಪಾರಾಗು; ಪೂರೈಸು, ನೆರವೇರು; ಸಾಗು, ಸಲ್ಲು; ಕೈಸಾರು, ಕೈಗೂಡು.
**निभागा**, वि. ನಿರ್ಭಾಗ್ಯ, ನತದೃಷ್ಟ.
**निभाना**, सक्रि. ನಿರ್ವಹಿಸು; ಪಾಲಿಸು, ನೆರವೇರಿಸು; ಸಾಗಿಸು; ಪೂರೈಸು; ನೀಸು, ನಿಭಾಯಿಸು, ಏಗು.
**निभाव**, पु. ನಿರ್ವಾಹ; ನಿಭಾಯಿಸುವಿಕೆ, ಸಾಗಿಸುವಿಕೆ; ಪರಿಪಾಲನೆ.
**निमंत्रण**, पु. ಆಹ್ವಾನ, ಕರೆ; ಔತಣಕ್ಕೆ ಕರೆಯುವಿಕೆ, ಆಮಂತ್ರಣ.
**निमंत्रणपत्र**, पु. ಆಹ್ವಾನ ಪತ್ರಿಕೆ.
**निमंत्रना**, सक्रि. ಆಹ್ವಾನಿಸು, ಕರೆ.
**निमक**, पु. = **नमक**.
**निमकी**, स्त्री. ನಿಂಬೆ ಹಣ್ಣಿನ ಉಪ್ಪಿನಕಾಯಿ; ಮೈದಾಹಿಟ್ಟಿನಿಂದ ಮಾಡಿದ ಉಂಡಲಿಗೆ, ಚೀಡೆ.
**निमकौड़ी**, स्त्री. ಬೇವಿನ ಹಣ್ಣು.
**निमग्न**, वि. ಮುಳುಗಿದ; ತನ್ಮಯ.
**निमज्जन**, पु. ಸ್ನಾನ, ಜಳಕ, ಮೀಹ.
**निमटना**, अक्रि. = **निबटना**.
**निमन**, वि. ಬಿಗಿ, ಗಟ್ಟಿ, ಗಡುತರ.
**निमनाई**, स्त्री. ಬಲ, ಶಕ್ತಿ.
**निमनाना**, सक्रि. ಬಲಪಡಿಸು.
**निमाना**, वि. ಇಳಕಲಾದ, ತಗ್ಗಾದ; ನಮ್ರ, ವಿನಯವುಳ್ಳ; ಮೆತ್ತಗಿರುವ, ವಶವರ್ತಿ; ನಿಷ್ಕಪಟ, ಯಥಾರ್ಥವಾದ
**निमिख**, पु. = **निमिष**.
**निमित्त**, पु. ನಿಮಿತ್ತ, ಹೇತು, ಕಾರಣ.
**निमिष, निमेष**, पु. ರೆಪ್ಪೆ ಬಡಿಯುವಿಕೆ;

ನಿಮಿಷ, ಕ್ಷಣ.

**नेमूद**, वि. ಮುಗಿದ, ಮುಚ್ಚಿದ.

**नेमेट**, वि. ಅಳಿಯದ, ನಾಶವಿಲ್ಲದ.

**नेमोना**, पु. ಕಡಲೆಬೇಳೆ ಸಾರು.

**निम्न**, वि. ಕೆಳಗಿನ.

**निम्नलिखित**, वि. ಕೆಳಗೆ ಬರೆದಿರುವ, ಕೆಳಗೆ ಕಂಡ.

**नियंता**, पु. ನಿಯಮವ ವಿಧಿಸುವವ, ಕಟ್ಟು ಮಾಡುವವ.

**नियंत्रण**, पु. ನಿಯಮ, ಕಟ್ಟು.

**नियत**, वि. ನಿರ್ದಿಷ್ಟ, ಗೊತ್ತಾದ; ನಿಯುತ, ನೇಮಕವಾದ.

**नियती**, स्त्री. ನೇಮಕ; ವಿಧಿ; ಭಾಗ್ಯ.

**नियम**, पु. ಕಟ್ಟು, ತಡೆ; ವಿಧಿ, ನಿಬಂಧನೆ, ನಿಯಮ; ವ್ರತ.

**नियमबद्ध**, वि. ನಿಯಮಗಳಿಗೊಳಗಾದ, ಕಟ್ಟಿಗೊಳಗಾದ.

**नियर**, क्रिवि. ಹತ್ತಿರ, ಸಮೀಪ, ಬಳಿ.

**नियराई**, स्त्री. ಸಾಮೀಪ್ಯ; ಹತ್ತಿರ, ನೆರೆ

**नियराना**, अक्रि. ಬಳಿ ಸಾರು, ಸಮೀಪಿಸು, ಅಯ್ದು, ತಲಪು.

**नियाज़**, स्त्री. ಪ್ರೀತಿ, ವಿನಂತಿ; ವಿನಯ, ನಮ್ರತೆ; ಪ್ರಸಾದ; ಸಮಾರಾಧನೆ; ನಿವೇದನ, ಕಾಣಿಕೆ; ಸಂದರ್ಶನ, ಭೇಟಿ, ಭೆಟ್ಟಿ.

**नियाज़मंद**, वि. ವಿನೀತ, ನಮ್ರ.

**नियाबत**, स्त्री. ಪ್ರಾತಿನಿಧ್ಯ, ಬದಲಿ.

**नियाम**, पु. ಖಡ್ಗಕೋಶ, ಒರೆ.

**नियामत**, स्त्री. ಅಪರೂಪದ ವಸ್ತು; ಉತ್ತಮವಾದ ಭೋಜನ, ಭರ್ಜರಿ ಊಟ; ಐಶ್ವರ್ಯ, ಸಂಪತ್ತು, ಸಿಧಿ.

**नियार**, पु. ಅಕ್ಕಸಾಲೆಯ ಅಂಗಡಿಯ ಕಸ, ಚಿನ್ನದ ಪುಡಿ ಸೇರಿದ ಮಣ್ಣು.

**नियारना**, सक्रि. (ಚಿನ್ನದ ಧೂಳು ಬೆರತ) ಮಣ್ಣಿನಿಂದ ಚಿನ್ನ ತೆಗೆ.

**नियारा**, स्त्री. ಬೇರೆಯಾದ, ಭಿನ್ನವಾದ.

**नियारिया**, पु. ಚಿನ್ನದ ಧೂಳು ಬೆರತ ಮಣ್ಣಿನಿಂದ ಚಿನ್ನ ತೆಗೆಯುವವನು, ಜಲಗಾರ; ಚತುರ; ಠಕ್ಕ, ಜಾಲಗಾರ.

**नियुक्त**, वि. ನೇಮಕವಾದ; ಪ್ರೇರಿತ; ಸ್ಥಾಪಿತ.

**नियुक्ति**, स्त्री. ಸ್ಥಾಪನೆ; ನೇಮಕ.

**नियोग**, पु. ನೇಮಿಸುವಿಕೆ, ನೇಮಕ, ನೇಮಣೂಕಿ; ಪ್ರೇರಣೆ; ಅಪ್ಪಣೆ; ಕ್ರಿಯಾಪದದ ವಿಧಿರೂಪ.

**नियोगी**, पु. ನೇಮಕವಾದವ; ಅಧಿಕಾರಿ, ಉದ್ಯೋಗಸ್ಥ; ಮಂತ್ರಿ, ಸಚಿವ; ಕಾರ್ಯಸ್ಥ.

**नियोजक**, पु. ನೇಮಕ ಮಾಡುವವ.

**नियोजन**, पु. ನೇಮಕ, ನಿಯುಕ್ತಿ.

**नियोजित**, वि. ನೇಮಕವಾದ, ನಿಯುಕ್ತ.

**निरंकुश**, वि. ಅಂಕೆಯಿಲ್ಲದ, ಕಟ್ಟಿಲ್ಲದ.

**निरंतर**, वि. ತೆರಪಿಲ್ಲದ; ದಟ್ಟವಾದ, ಗುತ್ತ; ನಿರಂತರವಾದ, ಸ್ಥಾಯಿ. क्रिवि. ಸದಾ, ಯಾವಾಗಲೂ, ನಿರಂತರವಾಗಿ

**निरक्ष**, वि. ಅಕ್ಷಾಂಶವಿಲ್ಲದ. निरक्ष रेखा = ನಿರಕ್ಷರೇಖೆ, ಭೂಮಧ್ಯರೇಖೆ.

**निरक्षर**, वि. ಅಕ್ಷರಶೂನ್ಯ, ಅಕ್ಷರ ತಿಳಿಯದವ, ಅನಕ್ಷರಸ್ಥ, ನಿರಕ್ಷರ ಕುಕ್ಷಿ

निरखना, सक्रि. ನೋಡು.

निरचू, वि. ನಿರಾಮವಾಗಿರುವ, ನೆಮ್ಮದಿಯಾದ.

निरच्छ, वि. ಕುರುಡ.

निरजोस, पु. ರಸ, ಸಾರ; ನಿರ್ಣಯ.

निरजोसी, वि. ರಸ ಹಿಂಡುವವ, ಸಾರ ತೆಗೆಯುವವ; ನಿರ್ಣಯ ಮಾಡುವವ.

निरन्न, वि. ಅನ್ನವಿಲ್ಲದ, ನಿರಾಹಾರ.

निरपना, वि. ತನ್ನದಲ್ಲದ, ಪರಾಯಿ, ಪರರ

निरपराध, वि. ಅಪರಾಧವಿಲ್ಲದ, ನಿರ್ದೋಷಿ. क्रिवि. ನಿರಪರಾಧಿಯಾಗಿ.

निरवंसी, वि. ಸಂತಾನವಿಲ್ಲದ.

निरवेट, पु. ವೈರಾಗ್ಯ.

निरभिमान, वि. ಅಹಂಕಾರವಿಲ್ಲದವ, ನಿಗರ್ವಿ.

निरमोल, वि. ಅಮೂಲ್ಯ, ಉತ್ತಮ.

निरर्थक, वि. ಅರ್ಥವಿಲ್ಲದ; ಪ್ರಯೋಜನವಿಲ್ಲದ, ವ್ಯರ್ಥ; ನಿಷ್ಫಲ.

निरवार, पु. ತಪ್ಪಿಸಿಕೊಳ್ಳುವಿಕೆ, ನಿವಾರಣೆ.

निरवारना, सक्रि. ತಳ್ಳು. ದೂಡು; ಬಿಡಿಸು, ಬಿಚ್ಚು; ನಿಷ್ಕರ್ಷೆ ಮಾಡು.

निरशन, पु. ಉಪವಾಸ, ಅನಶನ.

निरस, वि. ರಸವಿಲ್ಲದ, ನೀರಸ, ಸಪ್ಪೆ.

निरसन, पु. ದೂಡುವಿಕೆ; ಮೂಲೆಗೆ ಒತ್ತುವಿಕೆ; ರದ್ದು ಮಾಡುವಿಕೆ, ತಳ್ಳುಪಡಿ; ನಿವಾರಣೆ, ನಾಶ.

निरहंकार, वि. ಅಹಂಕಾರವಿಲ್ಲದ, ನಿರಹಂಕಾರಿ.

निरा, वि. ಶುದ್ಧ, ಕೇವಲ, ಮಾತ್ರ, ಬರಿಯ.

निराई, स्त्री. ಸಸಿಗಳ ಕಳೆ ತೆಗೆಯುವಿಕೆ; ಕಳೆ ಕೀಳುವುದರ ಕೂಲಿ.

निराट, वि. ಬರಿಯ, ಕೇವಲ.

निरादर, पु. ನಿರಾದರಣೆ, ಅವಮರ್ಯಾದೆ; ಅಸಡ್ಡೆ.

निराधार, वि. ಆಧಾರವಿಲ್ಲದ; ಪ್ರಮಾಣವಿಲ್ಲದ.

निराना, सक्रि. ಕಳೆ ತೆಗೆ, ಕಳೆ ಕೀಳು; ಕಟಾಯಿಸು.

निरापद, वि. ಸುರಕ್ಷಿತ, ಜೋಖಾಸ್ನಭದ್ರ

निरामय, वि. ರೋಗವಿಲ್ಲದ, ಆರೋಗ್ಯವಾದ; ಸ್ವಚ್ಛವಾದ.

निरामिष, वि. ಮಾಂಸಭಕ್ಷಣ ಮಾಡದ, ಸಸ್ಯಾಹಾರಿ.

निरायास, वि. ಅನಾಯಾಸ; ಸುಲಭ, ಸರಾಗ.

निरारा, वि. ಬೇರೆ, ಪ್ರತ್ಯೇಕ.

निरालस्य, वि. ಆಲಸ್ಯವಿಲ್ಲದ; ಚುರುಕು, ಸೂಟಿ.

निराला, पु. ಪ್ರತ್ಯೇಕಸ್ಥಾನ, ಏಕಾಂತಸ್ಥಾನ. वि. ಏಕಾಂತ, ಪ್ರತ್ಯೇಕ; ವಿಲಕ್ಷಣ, ಅದ್ಭುತ; ಅಪೂರ್ವ, ಶ್ರೇ.

निरावना, सक्रि. = निराना.

निराश, वि. ನಿರಾಶೆಯಾದ, ಹತಾಶ.

निराशा, स्त्री. ನಿರಾಶೆ, ಆಶಾಭಂಗ.

निराशी, वि. ನಿರಾಶೆಯಾದ, ಉದಾಸೀನ. स्त्री. ನಿರಾಶೆ, ನೈರಾಶ್ಯ.

निराश्रय, वि. ಆಶ್ರಯವಿಲ್ಲದ, ಅಸಹಾಯ; ದಿಕ್ಕಿಲ್ಲದ, ದೀನ.

निराहार, वि. ಆಹಾರವಿಲ್ಲದ, ಉಪವಾಸದ.

निरीक्षक, पु. ನೋಡುವವ; ಮೇಲ್ವಿಚಾರಕ, ಪಾರುಪತ್ಯಗಾರ.

निरीक्षण, पु. ನೋಡುವಿಕೆ; ಕಣ್ಗಾವಲು, ಮೇಲ್ವಿಚಾರಣೆ; ನೋಟ.

निरीह, वि. ಪ್ರಯತ್ನವಿಲ್ಲದ; ದುಡಿಯದ; ಉದಾಸೀನ; ಶಾಂತಿಪ್ರಿಯ.

निरीहता, स्त्री. ಔದಾಸೀನ್ಯ; ಶಾಂತಿಪ್ರಿಯತೆ.

निरुत्तर, वि. ಉತ್ತರವಿಲ್ಲದ; ಉತ್ತರ ಕೊಡಲಾಗದ, ನಿರುತ್ತರ.

निरुत्साह, वि. ಉತ್ಸಾಹವಿಲ್ಲದ.

निरुद्ध, वि. ತಡೆಯಲ್ಪಟ್ಟ; ಕಟ್ಟಲ್ಪಟ್ಟ.

निरुद्यम, वि. ಕೆಲಸವಿಲ್ಲದ; ನಿರುದ್ಯೋಗಿ

निरुद्योग, वि. ಕೆಲಸ ಅಥವಾ ಉದ್ಯೋಗವಿಲ್ಲದ.

निरुपम, वि. ಈಡಿಲ್ಲದ, ಅನುಪಮ.

निरुपयोगी, वि. ಉಪಯೋಗವಿಲ್ಲದ.

निरुपाय, वि. ದಿಕ್ಕಿಲ್ಲದ; ನಿರ್ವಾಹವಿಲ್ಲದ

निरू, पु. ಶಕ್ತಿ, ಬಲ.

निरूप, वि. ರೂಪವಿಲ್ಲದ.

निरूपण, पु. ಪ್ರಕಾಶ; ವಿವೇಚನೆ; ನಿರ್ಣಯ; ತೋರಿಸುವಿಕೆ.

निरेखना, सक्रि. ನೋಡು.

निरोग, निरोगी, वि. ರೋಗವಿಲ್ಲದ, ಸ್ವಸ್ಥ.

निरोध, पु. ನಿರೋಧ; ನಿಲ್ಲಿಸುವಿಕೆ; ತಡೆ, ಕಟ್ಟು; ನಾಶ.

निरोधक, वि. ತಡೆಯುವ, ನಿಲ್ಲಿಸುವ.

निर्ख, पु. ಧಾರಣೆ, ದರ, ಬೆಲೆ; ನಿರಖು, ಧಾರಣೆವಾಸಿ.

निर्खनामा, पु. ಧಾರಣೆಪಟ್ಟಿ, ನಿರಖುಪಟ್ಟಿ.

निर्खबंदी, स्त्री. ಬೆಲೆ ಕಟ್ಟುವಿಕೆ.

निर्खी, पु. ಬೆಲೆ ಕಟ್ಟುವವನು.

निर्गम, पु. ಹೊರಡುವಿಕೆ.

निर्जन, वि. ಜನರಿಲ್ಲದ; ಶೂನ್ಯಸ್ಥಾನ.

निर्जल, वि. ನೀರಿಲ್ಲದ, ಒಣಗಿದ; ಗೊಟ್ಟು ನೀರು ಸಹ ಇಲ್ಲದಿರುವ (ಉಪವಾಸ). निर्जला एकादशी = ಜ್ಯೇಷ್ಠ ಶುದ್ಧ ಏಕಾದಶಿ. (ಈ ದಿವಸ ನಿರ್ಜಲ ಉಪವಾಸವನ್ನು ಆಚರಿಸುವರು).

निर्जीव, वि. ಜೀವವಿಲ್ಲದ, ಸತ್ತುಹೋದ

निर्झर, पु. ಝರಿ, ಊಟೆ.

निर्णय, वि. ನಿರ್ಣಯ, ನಿಷ್ಕರ್ಷೆ.

निर्णीत, वि. ನಿರ್ಣಯವಾದ, ತೀರ್ಮಾನವಾದ.

निर्त, पु. ನೃತ್ಯ, ಕುಣಿತ.

निर्दय, वि. ದಯೆಯಿಲ್ಲದ, ಕ್ರೂರ.

निर्दयता, स्त्री. ಕ್ರೌರ್ಯ, ನಿರ್ದಯತ್ವ

निर्दर, पु. ಗವಿ, ಗುಹೆ.

निर्दिष्ट, वि. ಗೊತ್ತುಮಾಡಿದ, ನಿಶ್ಚಯವಾದ; ನಮೂದಿಸಿದ.

निर्देश, पु. ತೋರಿಸುವಿಕೆ; ಕಥನ, ಹೇಳಿಕೆ; ಆಜ್ಞೆ, ಅಪ್ಪಣೆ.

निर्दोष, निर्दोषी, वि. ದೋಷವಿಲ್ಲದ, ನಿರ್ದೋಷ.

निर्धन, वि. ಹಣವಿಲ್ಲದ, ದರಿದ್ರ.

निर्धनता, स्त्री. ದಾರಿದ್ರ್ಯ, ಬಡತನ.

**निर्धार, निर्धारण,** पु. ನಿಶ್ಚಯಿಸುವಿಕೆ; ಗೊತ್ತುವಳಿ, ಇತ್ಯರ್ಥ.

**निर्धारना,** सक्रि. ಗೊತ್ತುಮಾಡು, ನಿಶ್ಚಯಿಸು.

**निर्बंध,** पु. ತಡೆ, ನಿರ್ಬಂಧ.

**निर्बल,** वि. ಬಲವಿಲ್ಲದ, ನಿಶ್ಶಕ್ತ.

**निर्बलता,** स्त्री. ಬಲಹೀನತೆ, ನಿಶ್ಶಕ್ತಿ.

**निर्बस,** वि. ವಶವಿಲ್ಲದ; ಶಕ್ತಿಯಿಲ್ಲದ.

**निर्बूझ,** वि. ತಿಳಿಯಲಾಗದ, ಗೂಢ.

**निर्बोध,** वि. ತಿಳಿವಳಿಕೆಯಿಲ್ಲದ, ಅರಿಯದ.

**निर्भय,** वि. ಭಯವಿಲ್ಲದ, ನಿರ್ಭೀತ.

**निर्भयता,** स्त्री. ಭಯವಿಲ್ಲದಿರುವಿಕೆ.

**निर्भर,** वि. ಭರಿತ, ತುಂಬಿದ; ಸೇರಿದ, ಮಿಶ್ರಿತ; ಆಶ್ರಿತ, ಅವಲಂಬಿತ.

**निर्भीक,** वि. ಭಯವಿಲ್ಲದ, ನಿರ್ಭಯ.

**निर्भीकता,** स्त्री. ಭಯವಿಲ್ಲದಿರುವಿಕೆ.

**निर्मल,** वि. ಕೊಳೆಯಿಲ್ಲದ, ಸ್ವಚ್ಛ, ಶುದ್ಧ.

**निर्मलता,** स्त्री. ಸ್ವಚ್ಛತೆ, ಶುದ್ಧತೆ.

**निर्मला,** पु. ಸಿಖ್ಖರಲ್ಲಿ ಒಂದು ಜಾತಿ.

**निर्माण,** पु. ನಿರ್ಮಾಣ, ರಚನೆ.

**निर्माता,** पु. ನಿರ್ಮಿಸುವವ; ರಚಿಸುವವ; ಸೃಷ್ಟಿಸುವವ.

**निर्माना,** सक्रि. ನಿರ್ಮಿಸು, ರಚಿಸು.

**निर्मूल,** वि. ಮೂಲವಿಲ್ಲದ, ಬುಡವಿಲ್ಲದ, ನಿರ್ಮೂಲ; ಬುಡಸಹಿತ ಕಿತ್ತುಹಾಕಿದ.

**निर्लज्ज,** वि. ಲಜ್ಜೆಯಿಲ್ಲದ; ನಾಚಿಕೆಗೇಡಿ, ನಾಚಿಕೆಲಿ.

**निर्लज्जता,** स्त्री. ನಾಚಿಕೆಗೇಡಿತನ, ನಾಚಿಕೆಲಿತನ.

**निर्वहना,** अक्रि. ನೆರವೇರು, ಸಾಗು.

**निर्वाचक,** वि. ಚುನಾಯಿಸುವವ.

**निर्वाचन,** पु. ಆರಿಸುವಿಕೆ, ಚುನಾವಣೆ.

**निर्वासन,** पु. ಗಡೀಪಾರು, ದೇಶಭ್ರಷ್ಟ ಮಾಡುವಿಕೆ; ಹೊರಪಡಿಸುವಿಕೆ.

**निर्वाह,** पु. ನಿರ್ವಾಹ, ಪಾಲನೆ; ಪೂರೈಸುವಿಕೆ; ಜೀವನೋಪಾಯ.

**निर्वाहना,** सक्रि. ನಿರ್ವಹಿಸು, ನಿಭಾಯಿಸು; ನೆರವೇರಿಸು, ಸಾಗಿಸು.

**निर्विघ्न,** वि. ವಿಘ್ನವಿಲ್ಲದ, ಅಭ್ಯಂತರವಿಲ್ಲದ. क्रिवि. ಅಡ್ಡಿಯಿಲ್ಲದೆ.

**निर्विवाद,** वि. ವಿವಾದವಿಲ್ಲದ; ಆಕ್ಷೇಪಣೆಯಿಲ್ಲದ.

**निलहा,** वि. ನೀಲಿ ಬಣ್ಣದ, ನೀಲ.

**निवाई,** वि. ಹೊಸ, ನೂತನ; ಅಪೂರ್ವ. स्त्री. ಗಾಳಿಯ ನಿಶ್ಶಬ್ದತೆ; ಹರಾರತ್ತು ಸೆಕೆ.

**निवाजना,** सक्रि. ಅನುಗ್ರಹಿಸು, ಕರುಣಿಸು.

**निवाड़,** पु. = निवार.

**निवाड़ा,** पु. ದೋಣಿ, ತೆಪ್ಪ.

**निवार,** स्त्री. ಅಗಲವಾದ ಲಾಡಿ, ಪಟ್ಟಿ; ಕಸೆ, ನಾಡೆ, ನವಾರ.

**निवारण,** पु. ನಿವಾರಣೆ, ಪರಿಹಾರ; ನಿವೃತ್ತಿ, ತಡೆ.

**निवारना,** सक्रि. ನಿವಾರಿಸು, ಪರಿಹರಿಸು; ನಿಷೇಧಿಸು, ಅಡ್ಡಿಮಾಡು.

**निवारा,** पु. ತಡೆ, ಕಾಪು; ರಕ್ಷೆ.

**निवारी,** स्त्री. ಕಾಡುಮಲ್ಲಿಗೆ.

**निवाला**, पु. ತುತ್ತು, ಕವಳ; ತೆರಳೆ.

**निवास**, पु. ವಾಸ; ವಾಸಸ್ಥಾನ.

**निवासी**, वि. ವಾಸವಾಗಿರುವವ, ನಿವಾಸಿ.

**निवासिनी**, स्त्री. ವಾಸವಾಗಿರುವವಳು.

**निवेदक**, वि. ಬೇಡುವವ, ಪ್ರಾರ್ಥಿಸುವವ.

**निवेदन**, पु. ಪ್ರಾರ್ಥನೆ; ಅರಿಕೆ, ಬಿನ್ನಹ; ಸಮರ್ಪಣೆ

**निवेदनपत्र**, पु. ಪ್ರಾರ್ಥನಾಪತ್ರ, ಅರ್ಜಿ

**निशस्त**, स्त्री. ಕುಳಿತುಕೊಳ್ಳುವಿಕೆ; ತರಹ, ರೀತಿ.

**निशस्तगाह**, पु. ಕುಳಿತುಕೊಳ್ಳುವ ಸ್ಥಳ; ಬೈಠಕಖಾನೆ.

**निशा**, स्त्री. ರಾತ್ರಿ, ಇರುಳು; ಆರಿಸಿನ; ನಂಬಿಕೆ, ಭರವಸೆ.

**निशा-ख़ातिर**, स्त्री. ತೃಪ್ತಿ, ಖಾತ್ರಿ.

**निशान**, पु. ಲಕ್ಷಣ; ಚಿಹ್ನೆ, ಗುರುತು; ಅಚ್ಚು, ತಸ್ಸೆ; ಮಚ್ಚೆ, ಕಲೆ; ಜಾಡು, ಕುರುಹು; ತುಬ್ಬು, ಪತ್ತೆ; ವಿಳಾಸ; ಬಾವುಟ, ಧ್ವಜ, ನಿಶಾನಿ; ಬಿರುದಿನ ಬಿಲ್ಲೆ, ಕಚ್ಚಳಿ; ನಗಾರಿ, ಭೇರಿ; ಚಿಟಿ, ಭರ್ಜಿ; ಲಕ್ಷ್ಯ, ಗುರಿ; ಅಜ್ಞೆ, ನಿರೂಪ. निशान देना = ಗುರುತು ಹಚ್ಚಿಸು, ಗುರುತಿಸು.

**निशानदार**, वि. ಗುರುತು ಹಾಕಿದ; ಚಿಹ್ನೆಯುಳ್ಳ. पु. ಬಾವುಟ, ಧ್ವಜ; ಬಾವುಟಗಾರ.

**निशानदेही**, स्त्री. ಒಬ್ಬನನ್ನು ಇಂತವನೇ ಎಂದು ಗುರುತಿಸಿ ತೋರಿಸಿಕೊಡುವಿಕೆ.

**निशानची**, **निशान-बरदार**, पु. ಧ್ವಜಧಾರಿ, ಬಾವುಟಗಾರ.

**निशाना**, पु. ಗುರುತು, ಚಿಹ್ನೆ; ಗುರಿ, ಲಕ್ಷ್ಯ, ವೇಧ್ಯ; ಉದ್ದೇಶ. निशाना बांधना = ಗುರಿಯಿಡು, ಲಕ್ಷ್ಯವಿಡು.

**निशानी**, स्त्री. ಜ್ಞಾಪಕಾರ್ಥವಾಗಿ ಕೊಟ್ಟ ಅಥವಾ ಏರ್ಪಡಿಸಿದ ವಸ್ತು, ಸ್ಮಾರಕ, ನೆನಪಿನ ಗುರುತು; ಹೆಗ್ಗುರುತು, ಕುರುಹು; ಚಿಹ್ನೆ.

**निशास्ता**, पु. ಗೋಧಿಯ ಅಂಬಲಿ, ಗಂಜಿ; ಹಿಟ್ಟಿನ ಸರಿ.

**निशि**, स्त्री. ರಾತ್ರಿ, ನಿಶಿ, ಇರುಳು.

**निशीद**, पु. ಸಂಗೀತದ ಶಬ್ದ.

**निशीन**, वि. ಕುಳಿತಿರುವ, ಆರೂಢ.

**निशेब**, पु: ಇಳಿತ, ಇಳಕಲು; ತಗ್ಗುನೆಲ.

**निश्चय**, पु. ನಿಶ್ಚಯ, ಖಂಡಿತ, ಖಾತ್ರಿ.

**निश्चल**, वि. ಅಲ್ಲಾಡದ, ಕದಲದ.

**निश्चलता**, स्त्री. ಕದಲದಿರುವಿಕೆ.

**निश्चित**, वि. ನಿಶ್ಚಯವಾದ, ದೃಢ.

**निश्छल**, वि. ಮೋಸವಿಲ್ಲದ, ನಿಷ್ಕಪಟ.

**निश्रेणी**, स्त्री. ಏಣಿ, ನಿಚ್ಚಣಿಕೆ; ಸೋಪಾನ; ಮುಕ್ತಿ.

**निश्शेष**, वि. ಶೇಷವಿಲ್ಲದ, ಪೂರ್ಣ.

**निष्कंटक**, वि. ಅಭ್ಯಂತರವಿಲ್ಲದ.

**निष्कपट**, वि. ಕಪಟವಿಲ್ಲದ, ಸರಳ ಸ್ವಭಾವದ.

**निष्कपटता**, स्त्री. ಸರಳ ಸ್ವಭಾವ.

**निष्कर्ष**, पु. ನಿಷ್ಕರ್ಷೆ, ನಿಶ್ಚಯ; ಸಾರ, ಸಾರಾಂಶ.

**निष्कारण,** वि. ಕಾರಣವಿಲ್ಲದ, ವ್ಯರ್ಥ.
**निष्क्रिय,** वि. ಪ್ರತೀಕಾರವಿಲ್ಲದ.
**निष्ठा,** स्त्री. ನಂಬಿಕೆ; ನಿಷ್ಠೆ.
**निष्ठुर,** वि. ಕ್ರೂರ, ನಿಷ್ಠುರ, ಕಡದು.
**निष्ठुरता,** स्त्री. ಕ್ರೂರತನ, ಕಾಠಿಣ್ಯ.
**निष्प्रयोजन,** वि. ಪ್ರಯೋಜನವಿಲ್ಲದ, ವ್ಯರ್ಥ. क्रिवि. ವ್ಯರ್ಥವಾಗಿ, ಸುಮ್ಮನೆ
**निष्फल,** वि. ಲಾಭವಿಲ್ಲದ; ನಿರರ್ಥಕ.
**निसंठ,** वि. ಬಡವ, ನಿರ್ಧನ.
**निसबत,** स्त्री. ಸಂಬಂಧ, ಅನುಷಂಗ; ವಿವಾಹದವಾಙ್ನಿಶ್ಚಯ, ನಿಶ್ಚಿತಾರ್ಥ, ವೀಳೆಯಶಾಸ್ತ್ರ; ವಿವಾಹದ ಮೂಲಕ ಆಗುವ ಸಂಬಂಧ, ಬಳಗ; ಹೋಲಿಕೆ, ತುಲನೆ.
**निसबती,** वि. ವಿವಾಹದ ಮೂಲಕದ ಸಂಬಂಧಿಕ, ಬೀಗರು. निस्बती भाई = ಭಾವನೆಂಟ, ಭಾವಮೈದ, ಮೈದುನ.
**निसरना,** अक्रि. = निकलना.
**निसवां,** स्त्री. ಹೆಂಗಸರು, ಮಹಿಳೆಯರು. वि. ಸ್ತ್ರೀಸಂಬಂಧವಾದ, ಮಹಿಳೆಯರ.
**निसांस, निसास,** पु. ನಿಟ್ಟುಸಿರು. वि. ಉಸಿರಾಡದ; ಮೃತಪ್ರಾಯವಾದ.
**निसा,** स्त्री. ಹೆಂಗಸು; ಸ್ತ್ರೀಜಾತಿ.
**निसाब,** स्त्री. ಬಂಡವಾಳ, ಮೂಲಧನ.
**निसार,** पु. ಆಹುತಿ, ಬಲಿ; ಪರಿತ್ಯಾಗ.
**निसारना,** सक्रि. = निकालना.
**निसीठा,** वि. ನಿಸ್ಸಾರ, ಟೊಳ್ಳು.
**निसेनी,** स्त्री. ಏಣಿ, ನಿಚ್ಚಣಿಕೆ.
**निस्तार, निस्तारा,** पु. ಪಾರಾಗುವಿಕೆ; ಬಿಡುಗಡೆ; ಮೋಕ್ಷ, ಮುಕ್ತಿ.
**निस्तारना,** सक्रि. ಬಿಡುಗಡೆ ಮಾಡು; ಪಾರಾಗಿಸು.
**निस्फ,** वि. ನಡುವಿನ; ಅರ್ಧ, ಅರೆ. निस्फ़ा निस्फ़ = ಸರಿಯಾಗಿ ಅರ್ಧ.
**निस्बत,** स्त्री. = निसबत.
**निस्या,** पु. ಮರೆಯುತಕ್ಕ ಸಂಗತಿ.
**निस्यान,** पु. ಮರವು, ವಿಸ್ಮರಣ.
**निस्संकोच,** वि. ಸಂಕೋಚವಿಲ್ಲದ.
**निस्संदेह,** क्रिवि. ಸಂದೇಹವಿಲ್ಲದೆ.
**निहंग,** पु. ಮೊಸಳೆ. वि. ಒಬ್ಬನೇಯಾದ, ಒಬ್ಬಂಟಿಗ; ದಿಗಂಬರ, ಬೆತ್ತಲೆ; ನಾಚಿಕೆಯಿಲ್ಲದ. निहंग लाड़ला = ಮುದ್ದುಗಾರ ಹುಡುಗ.
**निहत्था,** वि. ಬರಿಗೈಯವ, ದರಿದ್ರ.
**निहां,** वि. ಗುಟ್ಟಾದ, ಗುಪ್ತ.
**निहां-खाना,** पु. ಗುಪ್ತವಾದ ಕೊಠಡಿ; ನೆಲಮನೆ.
**निहाई,** स्त्री. ಅಡಿಗಲ್ಲು, ಪಟ್ಟಡೆ, ಅಡ್ಗಣೆ.
**निहाद,** स्त्री. ಬುಡ, ಮೂಲ; ಕುಲ, ವಂಶ; ಸ್ವಭಾವ, ಪ್ರಕೃತಿ; ಗುಣ.
**निहानी,** वि. ಗುಪ್ತವಾದ; ರಹಸ್ಯ. स्त्री. ಉಳಿ, ಚಾಣ.
**निहायत,** वि. ಬಹಳ, ಅತ್ಯಂತ, ಅತಿ. स्त्री. ಕೊನೆ, ಅಂತ; ತುದಿ.
**निहार,** पु. ಮಂಜು, ಇಬ್ಬನಿ, ದಿನ.
**निहारना,** सक्रि. ನೋಡು, ದೃಷ್ಟಿಸು.
**निहाल,** पु. ಸಸಿ, ಗಿಡ; ತಳಿರು; ಸುಪ್ಪತ್ತಿಗೆ, ಮೆತ್ತೆ; ಬೇಟೆಯ ಮೃಗ. वि. ಸಫಲ, ಸಂಪನ್ನ; ಸಂತುಷ್ಟ.

निहालचा, पु. ಸುಪ್ಪತ್ತಿಗೆ, ರಜಾಯಿ.
निहाली, स्त्री. ಸುಪ್ಪತ್ತಿಗೆ, ಮೆತ್ತೆ. ಮೆತ್ತೆ; ಅರೆಗಲ್ಲು, ಅಡ್ಡಣಿ; ಸಸಿ, ಗಿಡ.
निहुफ़्तगी, स्त्री. ಬಚ್ಚಿಡುವಿಕೆ.
निहुफ़्ता, वि. ಗುಪ್ತ, ಬಚ್ಚಿಟ್ಟ.
निहुरना, अक्रि. ಬಗ್ಗು, ಬಾಗು.
निहुराना, सक्रि. ಬಗ್ಗಿಸು, ಬಾಗಿಸು.
निहोरना, सक्रि. ಪ್ರಾರ್ಥಿಸು, ಹರಸು; ಕೃತಜ್ಞತೆ ತೋರಿಸು.
निहोरा, पु. ಪ್ರಾರ್ಥನೆ, ವಿನಂತಿ; ಅನುಗ್ರಹ, ಉಪಕಾರ; ಕೃತಜ್ಞತೆ. क्रिवि. ಅನುಗ್ರಹದಿಂದ; ಮುಖಾಂತರ; ಓಸ್ಕರ
नींद, स्त्री. ನಿದ್ರೆ, ನಿದ್ದೆ. नींद लगना = ನಿದ್ದೆಹತ್ತು. नींद खुलना = ನಿದ್ದೆ ಬಿಡು, ನಿದ್ರೆ ಹರಿ. नींद हराम होना = ನಿದ್ದೆ ಕೆಡು.
नींदड़ी, स्त्री. ನಿದ್ದೆ.
नींदना, सक्रि. ಕಳೆ ಕೀಳು, ಕಳೆ ತೆಗೆ.
नींदू, वि. ನಿದ್ರಾಳು.
नीक, नीका. वि. ಒಳ್ಳೆಯ; ಅಂದವಾದ. पु. ಒಳ್ಳೆಯತನ; ಉತ್ಕೃಷ್ಟತೆ.
नीके, क्रिवि. ಚೆನ್ನಾಗಿ.
नीच, वि. ನೀಚ, ಕೀಳು ತರದ; ಅಧಮ; ಕೆಟ್ಟ. ऊंचनीच = ಕೀಳು ಮೇಲು, ಊಚನೀಚ; ಕಷ್ಟ ನಷ್ಟ.
नीचता, स्त्री. ನೀಚತನ; ಕೆಟ್ಟತನ.
नीचा, वि. ಕೆಳಗಿನ, ತಗ್ಗಾದ; ಮಂದ; ಕೀಳುತರದ. नीचा दिखाना = ನೀಚಗಾಣಿಸು, ಸೋಲಿಸು; ಸೊಕ್ಕಿಳಿಸು; ಲಜ್ಜೆಪಡಿಸು.
नीचे, क्रिवि. ಕೆಳಗೆ, ಅಡಿಯಲ್ಲಿ. नीचे ऊपर = ಒಂದರಮೇಲೊಂದಾಗಿ.
नीज़, क्रिवि. ಹೀಗೆ, ಇಂತು.
नीट, वि. ನೇರವಾದ.
नीठ, क्रिवि. ಹಾಗೂ ಹೀಗೂ, ಯಾವುದಾದರೊಂದು ರೀತಿಯಲ್ಲಿ
नीठि, स्त्री. ಅರುಚಿ, ಅಪ್ರಿಯ. क्रिवि. ಹಾಗೂಹೀಗೂ, ಯಾವುದಾದರೊಂದು ರೀತಿಯಲ್ಲಿ, ಏನಕೇನ ಪ್ರಕಾರೇಣ.
नीड़, पु. ಹಕ್ಕಿಯ ಗೂಡು.
नीति, स्त्री. ಸದ್ವ್ಯವಹಾರ; ಸದಾಚಾರ; ನೀತಿ; ಯುಕ್ತಿ; ರಾಜತಂತ್ರ.
नीबू, पु. ನಿಂಬೆ ಹಣ್ಣು.
नीम, पु. ಬೇವಿನ ಮರ, ಬೇವು. वि. ಅರ್ಧ, ಅರೆ; ಅರೆಬರೆ. नीम हकीम = ಅರೆವೈದ್ಯ, ಅಳಲೆಕಾಯಿ ಪಂಡಿತ.
नीमचा, पु. ಚಿಕ್ಕ ಕಠಾರಿ, ಬಾಕು.
नीमजान, वि. ಅರೆಜೀವದ; ಮರಣಾವಸ್ಥೆಯಲ್ಲಿರುವ, ಕುಟುಕು ಜೀವದ.
नीमन, वि. ಸ್ವಸ್ಥ, ವಾಸಿ; ಸರಿಯಾದ.
नीम-निगाह, स्त्री. ಅರೆನೋಟ, ಓರೆನೋಟ.
नीमरज़ा, वि. ಸ್ವಲ್ಪ ಒಪ್ಪಿಕೆಯುಳ್ಳ; ಅರೆಮನಸ್ಸಿನ; ಸ್ವಲ್ಪ ತೃಪ್ತನಾದ.
नीमरोज़, पु. ಮಧ್ಯಾಹ್ನ, ನಡುಹಗಲು.
नीमा, पु. ಒಳ ಅಂಗಿ, ಬನೀನು.
नीमास्तीन, स्त्री. ಅರೆತೋಳಿನ ಜುಬ್ಬ, 'ಹಾಫ್ ಆರಂ'; ಬಗಲಂಗಿ.
नीयत, स्त्री. ಮನೋಭಾವ, ಮನೋಗತ, ನಿಯತ್ತು; ಉದ್ದೇಶ, ಆಶಯ;

ಸಂಕಲ್ಪ. नीयत डिगना = ಮನೋಭಾವ ಕೆಡು. नीयत लगी रहना = ಹಂಬಲಿಸುತ್ತಿರು, ಹಾತೊರೆಯು.

**नीरस,** वि. ರಸವಿಲ್ಲದ, ಸಪ್ಪೆಯಾದ.

**नीरोग,** वि. ರೋಗವಿಲ್ಲದ, ಸ್ವಸ್ಥ.

**नील,** वि. ನೀಲಿ ಬಣ್ಣದ. पु. ನೀಲಿ ಬಣ್ಣ; ನೀಲಿ ಗಿಡ; ಗಾಯದ ಕಲೆ; ಕಳಂಕ, ಲಾಂಛನ; ನೀಲ ಮಣಿ, ಇಂದ್ರನೀಲ.

**नीलक,** पु. ರೇಷ್ಮೆ ವಸ್ತ್ರ.

**नीलगर,** पु. ನೀಲಿ ಕೆಲಸದವ.

**नीलता,** स्त्री. ನೀಲಿ ಬಣ್ಣ.

**नीलम,** पु. ನೀಲಮಣಿ, ಇಂದ್ರನೀಲ.

**नीलांबर,** पु. ನೀಲವರ್ಣದರೇಷ್ಮೆ ವಸ್ತ್ರ.

**नीला,** वि. ನೀಲ; ಆಕಾಶ ವರ್ಣದ. नीला पीला करना = ಹಣ್ಣುಗಾಯಿ ನೀರುಗಾಯಿ ಮಾಡು. नीला थोथा = ತುತ್ಥ, ಮೈಲುತುತ್ತ.

**नीलाई,** स्त्री. ನೀಲವರ್ಣ, ನೀಲಿ.

**नीलाम,** पु. ಹರಾಜು, ಏಲಂ, ಲೈಲಾಂ, ಲಿಲಾವು.

**नीलामची,** पु. ಹರಾಜು ಅಥವಾ ಏಲಂ ಹಾಕುವವ.

**नीलिका,** स्त्री. ಮಡಿಬಕ್ಕೆ, ಮಡಿಮೆ.

**नीलिमा,** स्त्री. ನೀಲವರ್ಣ, ಶ್ಯಾಮಲವರ್ಣ.

**नीली घोड़ी,** स्त्री. ವೇಷಗಾರರ ಕಾಗದದ ಕುದುರೆ.

**नीलोफ़र,** पु. ಕನ್ನೈದಿಲೆ, ನೀಲೋತ್ಪಲ.

**नीव, नीवँ,** स्त्री. ತಳಹದಿ, ಅಸ್ತಿವಾರ, ಕುಟ್ಟಿಮ; ಅಡಿಗಲ್ಲು, ಪಾಯ; ಬುಡ. नीवँ डालना = ಅಸ್ತಿವಾರ ಹಾಕು; ಸ್ಥಾಪಿಸು.

**नीवा,** स्त्री. ನಿಶ್ಶಬ್ದತೆ, ಮೌನ.

**नीवि, नीवी,** स्त्री. ಸೀರೆಯ ಗಂಟು, ಉಡಿಯ ಸೀರೆಯ ಕಚ್ಚೆ, ನೀವಿ; ನಿರಿಗೆ; ಸೀರೆ.

**नीहार,** पु. ಇಬ್ಬನಿ, ಮಂಜು.

**नीहारिका,** स्त्री. ಅಸ್ಪಷ್ಟವಾಗಿ ಕಾಣುವ ತಾರಾಗಣ, ತೇಜಃಪುಂಜ.

**नुकता,** पु. ಗೂಢ ಸಂಗತಿ; ಗುಟ್ಟು, ರಹಸ್ಯ; ಚಮತ್ಕಾರದ ಮಾತು, ಕುಚೋದ್ಯ; ಕುಂದು, ಐಬು.

**नुक़्ता,** पु. ಚುಕ್ಕೆ, ಬೊಟ್ಟು; ಸೊನ್ನೆ; ಕಲೆ, ಕಳಂಕ; ಅಲ್ಪಭಾಗ.

**नुकताचीन, नुकताबीन,** वि. ತಪ್ಪು ಹುಡುಕುವವ.

**नुकताचीनी,** स्त्री. ತಪ್ಪು ಹುಡುಕುವಿಕೆ

**नुक़्तादान,** पु. ಗೂಢವನ್ನರಿತವ.

**नुकती,** स्त्री. ಬೂಂದಿ, ಬುಂದಿ.

**नुक़रई,** वि. ಬೆಳ್ಳಿಯ, ರಜತ; ಬಿಳಿಯ.

**नुक़रा,** पु. ಬೆಳ್ಳಿ; ರೂಪಾಯಿ; ಶ್ವೇತವರ್ಣ, ಬಿಳಿಬಣ್ಣ. वि. ಬಿಳಿಬಣ್ಣದ.

**नुक़सान,** पु. ಹಾನಿ; ನಷ್ಟ, ಲುಕ್ಸಾನು; ಬಾಧಕ; ಕೊರತೆ. नुक़सान भरना = ನಷ್ಟಕ್ಕೆ ಈಡುಕೊಡು, ನಷ್ಟ ತುಂಬಿಸು, ನಷ್ಟ ಕಟ್ಟಿಕೊಡು; ಲಗ್ಗೆಕೊಡು.

**नुक़सानदेह,** वि. ಹಾನಿಕರವಾದ.

**नुकीला,** वि. ಮೊನೆಯುಳ್ಳ; ಚೂಪಾದ, ಹರಿತವಾದ; ಸೊಟೆಯಾದ;

ಮೋಜುಗಾರ, ಷೋಕಿನವ.

**नुक्कड़**, पु. ಮೊನೆ, ಚಾಚಿದ ತುದಿ.

**नुक्का**, पु. ಮೊನಚಾದ ಕೋಲು.

**नुक़्ल**, पु. ಒಂದು ವ್ಯಂಜನ; ತಿಂಡಿ, ತಿನಸು; ಹಣ್ಣು.

**नुक़्स**, पु. ದೋಷ; ಕುಂದು, ಕೊರತೆ.

**नुचना**, अक्रि. ಪರಚು; ಕೆದರಲ್ಪಡು, ಕೆರೆ.

**नुचवाना**, सक्रि. नोचना का प्रे. रूप.

**नुजूम**, पु. ತಾರಾಗಣ; ನಕ್ಷತ್ರ ವಿದ್ಯೆ; ಜ್ಯೋತಿಶ್ಶಾಸ್ತ್ರ.

**नुजूमी**, पु. ಜೋಯಿಸ, ಜ್ಯೋತಿಷ್ಕ

**नुत्फ़ा**, पु. ಶುಕ್ಲ, ರೇತಸ್ಸು, ವೀರ್ಯ; ಬೀಜ; ಸಂತಾನ. नुत्फ़ाहराम = ಜಾರಪುತ್ರ.

**नुद्बा**, पु. ಶೋಕ, ಮೃತ್ಯುಶೋಕ.

**नुद्मा**, पु. ದರ್ಬಾರಿ, ಪಾರ್ಷದ.

**नुद्रत**, स्त्री. ಏಕಾಂತ.

**नुनखरा**, **नुनखारा**, वि. ಉಪ್ಪಾದ, ಖಾರವಾದ.

**नुनना**, सक्रि. ಪೈರು ಕೊಯ್ಯು, ಕಟಾಯಿಸು.

**नुनाई**, स्त्री. ಲಾವಣ್ಯ; ಸೌಂದರ್ಯ.

**नुनेरा**, पु. ಉಪ್ಪಲಿಗ, ಉಪ್ಪಾರ, ಕೊರೆಯ; ಬಚ್ಚಲೆ ಸೊಪ್ಪು, ನುಚ್ಚು ಗೋಳಿ ಸೊಪ್ಪು.

**नुमा**, वि. ಕಾಣುವ, ತೋರುವ; ಸದೃಶ.

**नुमाइंदा**, पु. ಪ್ರತಿನಿಧಿ. वि. ತೋರಿಸುವವ, ಪ್ರದರ್ಶಕ.

**नुमाइश**, स्त्री. ತೋರಿಕೆ, ಮೆರೆಯುವಿಕೆ; ಆಡಂಬರ, ಠೀವಿ; ಪ್ರದರ್ಶನ.

**नुमाइशगाह**, स्त्री. ಪ್ರದರ್ಶನದಸ್ಥಳ, ಪ್ರದರ್ಶನಶಾಲೆ.

**नुमाइशी**, वि. ತೋರಿಕೆಯ, ಆಡಂಬರದ.

**नुमाई**, स्त्री. ತೋರಿಸುವಿಕೆ, ಪ್ರದರ್ಶನ.

**नुमायाँ**, वि. ಕಾಣುವ, ಪ್ರತ್ಯಕ್ಷ.

**नुमू**, पु. ಮೊಳೆಯುವಿಕೆ, ಬೆಳೆಯುವಿಕೆ

**नुशूर**, पु. ಸತ್ತವರು ಜೀವ ಹೊಂದಿ ಏಳುವಿಕೆ; ದೇವರ ಮುಂದೆ ಕರ್ಮ ವಿಚಾರಣೆಯ ದಿನ, ಲೋಕಾಂತ ದಿನ.

**नुसख़ा**, पु. ಬರೆದ ಕಾಗದ, ಚೀಟು, ಪತ್ರ; ಪುಸ್ತಕದ ಒಂದು ಪ್ರತಿ; ಮಾದರಿ; ವೈದ್ಯರು ಬರೆದುಕೊಟ್ಟ ಔಷಧದ ಪಟ್ಟಿ; ಔಷಧ; ಔಷಧವನ್ನು ಸೇವಿಸುವ ಕ್ರಮ.

**नुसरत**, स्त्री. ಸಹಾಯ, ಸಮರ್ಥನೆ; ರಕ್ಷಣೆ; ವಿಜಯ.

**नुसार**, पु. ನಿವಾಳಿಯ ಹಣ.

**नूतन**, वि. ನೂತನ, ಹೊಸ; ಅದ್ಭುತ.

**नूतनता**, स्त्री. ನವೀನತೆ, ಹೊಸದು.

**नून**, पु. ಒಂದು ಬಗೆ ಮರ; ಲವಣ, ಉಪ್ಪು. नून तेल = ಉಪ್ಪು ಮೆಣಸಿನ ಕಾಯಿ; ಸಾಮಗ್ರಿ, ಸಂಬಾರ.

**नूपुर**, पु. ಕಾಲಂದುಗೆ, ನೂಪುರ.

**नूर**, पु. ಪ್ರಕಾಶ; ಜ್ಯೋತಿ, ಕಾಂತಿ.

**नूरचश्म**, पु. ಕಣ್ಣಿನ ಜ್ಯೋತಿ; ಮಕ್ಕಳು ಮರಿ.

**नूरबाफ़**, पु. ನೆಯಿಗೆಯವ, ಜಾಡ.

**नूरबाफ़ी**, स्त्री. ನೆಯಿಗೆ.

नूरा, वि. ಕಾಂತಿಯುಳ್ಳ; ತೇಜಸ್ವಿ. पु. ಬೇಡವಾದ ಕೂದಲನ್ನು ತೆಗೆಯುಂವಂಥಾ ಲೇಪನ, ರೋಮಸಂಹಾರಿ, ಕೇಶಚ್ಛೇದಕ ಔಷಧ.

नूरानी, वि. ಕಾಂತಿಯುಳ್ಳ, ಪ್ರಕಾಶಮಾನ.

नूरी, स्त्री. ಪ್ರಕಾಶ; ಗಿಳಿಯಂತಹ ಒಂದು ಪಕ್ಷಿ.

नूह, पु. ಪೈಗಂಬರರಲ್ಲೊಬ್ಬನ ಹೆಸರು.

नृत्य, पु. ನೃತ್ಯ, ತಾಂಡವ, ಕುಣಿತ.

ने, प्रत्य. ಪ್ರಥಮಾವಿಭಕ್ತಿ ಪ್ರತ್ಯಯ.

नेक, वि. ಒಳ್ಳೆಯ, ಉತ್ತಮ; ಲಕ್ಷಣವಾದ; ಶಿಷ್ಟ; ಶೀಲವಂತ; ಸಾತ್ವಿಕ, ಪವಿತ್ರ. क्रिवि. ಚೆನ್ನಾಗಿ; ಬಹಳವಾಗಿ.

नेकचलन, वि. ಸದಾಚಾರಿ; ಶೀಲವಂತ, ಸನ್ಮಾರ್ಗಿ.

नेकचलनी, स्त्री. ಸದಾಚಾರ, ಸದ್ವರ್ತನೆ.

नेकनाम, वि. ಒಳ್ಳೆಯ ಹೆಸರಿನ; ಯಶಸ್ವಿಯಾದ.

नेकनामी, स्त्री. ಒಳ್ಳೆಹೆಸರು, ಯಶಸ್ಸು

नेकनीयत, वि. ಒಳ್ಳೆಯ ವಿಚಾರವುಳ್ಳ, ಸದ್ಭಾವವುಳ್ಳ.

नेकनीयती, स्त्री. ಸದ್ಭಾವನೆ.

नेकबख़्त, वि. ಭಾಗ್ಯವಂತ, ಪುಣ್ಯವಂತ; ಸದಾಚಾರಿ; ಸತ್ಯವಂತ; ವಿಧೇಯ.

नेकी, स्त्री. ಒಳ್ಳೆತನ, ಶುಭ; ಹಿತ, ಸುಕೃತ; ಸದ್ವರ್ತನೆ, ಸುಶೀಲತೆ, ಸೌಜನ್ಯ; ಭಕ್ತಿ; ಚೆಲುವು. नेकी बदी = ಹಿತಾಹಿತ; ಪಾಪಪುಣ್ಯ.

नेको, वि. ಒಳ್ಳೆಯ; ಸುಂದರ. क्रिवि. ಚೆನ್ನಾಗಿ; ಸುಲಭವಾಗಿ.

नेग, पु. ಪದ್ಧತಿ; ಮಾಮೂಲು; ವಿವಾಹ ಮತ್ತು ಹಬ್ಬದ ಕಾಲಗಳಲ್ಲಿ ಇಷ್ಟಮಿತ್ರರಿಗೆ ಬಹುಮಾನ ಕೊಡುವ ಸಂಪ್ರದಾಯ, ಬಾಗಿನ; ನೌಕರರಿಗೆ ವಾಡಿಕೆಯಾಗಿ ಕೊಡುವ ಪಾರಿತೋಷಿಕ, ಆಯ, ಇನಾಮು, ಬಕ್ಷೀಸ್; ಮೇಲುವಾಸಿ. नेगचार, नेगजोग = नेग ಅಥವಾ ಬಹುಮಾನ ಕೊಡುವ ಸಂಪ್ರದಾಯ, ಮಾಮೂಲು.

नेगी, पु. ಇನಾಮು ಅಥವಾ ಬಹುಮಾನ ಪಡೆಯಲು ಬಾಧ್ಯತೆಯುಳ್ಳ ಆಳುಗಳು

नेगीजोगी, पु. ಹಬ್ಬಗಳಲ್ಲಿ ಇನಾಮು ಪಡೆಯಲು ಬಾಧ್ಯತೆಯುಳ್ಳವನು, ಬಕ್ಷೀಸಿಗೆ ಹಕ್ಕುದಾರ.

नेज़ा, पु. ಭರ್ಜಿ, ಈಟಿ; ಶೂಲ, ಸಬಳ; ಧ್ವಜ, ಬಾವುಟ; ಲಾಳದ ಕಡ್ಡಿ, ಗಳು.

नेज़ा-बरदार, वि. ಶೂಲಧಾರಿ, ಕೊಂತಕಾರ, ಸಬಳಿಗ; ಬಾವುಟಗಾರ.

नेज़ाबाज़, पु. ಭರ್ಜಿಯವ, ಸಬಳಿಗ.

नेटा, स्त्री. ಸಿಂಬಳ, ಗೊಣ್ಣೆ.

नेत, पु. ತೀರ್ಮಾನ, ನಿಶ್ಚಯ; ವ್ಯವಸ್ಥೆ, ಏರ್ಪಾಡು; ಕಡೆಗೋಲುಹಗ್ಗ; ಒಂದು ಬಗೆಯ ಆಭರಣ. स्त्री. ಹೊದಿಯುವ ವಸ್ತ್ರ, ಚದ್ದರ.

नेता, पु. ಮುಂದಾಳು, ಮುಖಂಡ, ಪುಢಾರಿ; ನಾಯಕ; ಯಜಮಾನ, ಕಾರ್ಯನಿರ್ವಾಹಕ, ಆಡಳಿತಗಾರ; ಕಡೆಗೋಲು ಹಗ್ಗ.

नेतागिरी, स्त्री. ಮುಂದಾಳುತನ.

नेती, स्त्री. ಕಡೆಗೋಲು ಹಗ್ಗ.

नेतृत्व, पु. ನಾಯಕತ್ವ; ಯಜಮಾನಿಕೆ; ಅಗ್ರಾಸನ.

नेत्र, पु. ಕಣ್ಣು; ಕಡೆಗೋಲಿನ ಹಗ್ಗ; ಮರದ ಬೇರು.

नेत्री, स्त्री. ಮುಖಂಡಳು, ಯಜಮಾನಿ.

नेनुवा, पु. ತುಪ್ಪಹೀರೆಕಾಯಿ.

नेपथ्य, पु. ನಾಟಕಗಳಲ್ಲಿ ವೇಷ ಹಾಕಿಕೊಳ್ಳಲಿರುವ ಕೋಣೆ; ಪರದೆಯ ಹಿಂಭಾಗ, ಮರೆ.

नेफ़ा, पु. ಷರಾಯಿಯಲ್ಲಿ ಲಾಡಿ ಪೋಣಿಸುವ ಭಾಗ.

नेम, पु. ನಿಯಮ, ವಿಧಿ; ಕಟ್ಟು, ನೇಮ. नेम धरम = ನೇಮನಿಷ್ಠೆ.

नेमत, स्त्री. = नियामत.

नेमि, नेमी, स्त्री. ಚಕ್ರದ ಪಟ್ಟಿ; ಬಾವಿಯ ಕಟ್ಟೆ.

नेरना, पु. ಹುಲ್ಲು, ಸೊಪ್ಪು.

नेहआ, पु. ಹುಲ್ಲುಕಡ್ಡಿ.

नेवज, पु. ನೈವೇದ್ಯ.

नेवता, पु. = न्योता.

नेवर, पु. ಕಾಲಂದುಗೆ; ಕಾಲಿನ ಹುಣ್ಣು, ಕುದುರೆಯ ಹಿಂಗಾಲುಗಳ ಮೊಣಕಾಲು. वि. ಕೆಟ್ಟ.

नेवला, पु. ಮುಂಗಸಿ, ಮುಂಗಲಿ, ಕೀರ

नेवा, पु. ರೂಢಿ, ಸಂಪ್ರದಾಯ; ಸಾಮ್ಯ, ಹೋಲಿಕೆ; ಗಾದೆ, ಸಾಮತಿ; ಸಿದ್ಧಾಂತ.

नेवारना, सक्रि. ನಿವಾರಿಸು, ಪರಿಹರಿಸು.

नेवारी, स्त्री. ವನಮಲ್ಲಿಕೆ.

नेश, पु. ಮೊನೆ, ತುದಿ, ಅಗ್ರ; ಮುಳ್ಳು; ಕೊಂಡಿ; ಚಿಕ್ಕ ಶಸ್ತ್ರ, ವೇಧನಿ.

ने-शकर, पु. ಕಬ್ಬು.

नेशज़न, पु. ಕೊಂಡಿಯಿಂದ ಕುಟುಕುವವ; ಚಾಡಿಖೋರ.

नेसुक, क्रिवि. ತುಸ, ಒಸಿ.

नेस्त, वि. ಇಲ್ಲದಿರುವ, ಅಭಾವವಾದ; ನಷ್ಟ; ಅಳಿದ; ರದ್ದಾದ. नेस्त नाबूद = ನಷ್ಟ ಭ್ರಷ್ಟವಾದ, ಹಾಳಾದ; ನಿರ್ಮೂಲವಾದ.

नेस्ती, स्त्री. ಇಲ್ಲದಿರುವಿಕೆ, ಅಭಾವ; ನಾಶ.

नेह, पु. ಸ್ನೇಹ; ಪ್ರೀತಿ; ಜಿಡ್ಡು; ಎಣ್ಣೆ.

नेही, वि. ಸ್ನೇಹಿತ; ಪ್ರಿಯ.

नै, स्त्री. ಬಿದಿರಿನ ಕೊಳಲು; ಮುರಳಿ, ಪಿಳ್ಳಂಗೋವಿ; ಹುಕ್ಕಾವಿನ ನಳಿಗೆ.

नैचक, पु. ಭಾವಿಯ ತಳದಲ್ಲಿರಿಸುವ ಚಕ್ರದಂತಿರುವ ಮರದ ಚೌಕಟ್ಟು, ಗೊಂಡಭಾವಿ ಚಕ್ರ.

नैचा, पु. ಹುಕ್ಕಾವಿನ ನಳಿಗೆ.

नैचाबंद, पु. ಹುಕ್ಕಾವಿನ ನಳಿಗೆ ಮಾಡುವವ.

नैतिक, वि. ನೀತಿಸಂಬಂಧವಾದ, ನೈತಿಕ.

नैन, पु. ನಯನ, ಕಣ್ಣು; ಬೆಣ್ಣೆ. क्रिवि. ಇಲ್ಲ.

नैनसुख, पु. ಒಂದು ಬಗೆ ನಯವಾದ ಬಟ್ಟೆ; ಒಂದು ಬಗೆ ಹೂವು.

नैना, पु. ನಯನ.

नैनू, पु. ಬೆಣ್ಣೆ; ಕಸೂತಿ ಕೆಲಸ ಮಾ

ಡಿದ ಮಲ್‌ಮಲ್ ಬಟ್ಟೆ.

**नैपुण्य**, पु. ಚತುರತೆ; ಅನುಭವ; ದಕ್ಷತೆ.

**नैया**, स्त्री. ನೌಕ, ನಾವೆ, ದೋಣಿ.

**नैरंग**, पु. ಮಾಟ, ಮಂತ್ರ; ಜಾಲ, ಠಕ್ಕು; ನೆಪ, ಸಬಬು; ಹೊಸದು, ಹೊಸ ವಸ್ತು.

**नैरंगसाज़**, पु. ಮಾಟಗಾರ, ಮಂತ್ರಗಾರ.

**नैरंगी**, स्त्री. ಮಾಟಮಂತ್ರ; ಮೋಸಗಾರಿಗೆ; ಚಪಲಚಿತ್ತ.

**नैरा**, पु. ಅಗ್ನಿ, ಬೆಂಕಿ; ತಾಪ, ಸೆಕೆ; ಉರಿ; ಹಗೆತನ, ವಿರೋಧ.

**नैराश्य**, पु. ನಿರಾಶೆ, ನೈರಾಶ್ಯ.

**नैशकर**, स्त्री. ಕಬ್ಬು; ಕಬ್ಬಿನ ಜಲ್ಲೆ.

**नैसर्गिक**, वि. ಸಹಜವಾದ, ಸ್ವಭಾವಜನ್ಯವಾದ, ಸ್ವಾಭಾವಿಕ.

**नैसा**, वि. ಕೆಟ್ಟ.

**नैसान**, पु. ಲಾಳದ ಕಡ್ಡಿಗಳ ಮಡಿ ಅಥವಾ ಪಾತಿ; ಕಬ್ಬಿನ ಗದ್ದೆ.

**नैहर**, पु. (स्त्री.) ತವರುಮನೆ.

**नोई**, स्त्री. ಹಗ್ಗ, ದಾಮು, ಕಣ್ಣಿ.

**नोक**, स्त्री. ತುದಿ, ಮೊನೆ; ಶಿಖರ, ಅಗ್ರ; ಪಕ್ಷಿಯ ಚಂಚು, ಕೊಕ್ಕು. नोक दुम भागना = ಬಾಲವನ್ನು ಮುಳಿಚಿಕೊಂಡು ಓಡು; ಕಂಬಿ ಕೀಳು, ಗಚ್ಚಿ ಹೊಡೆ. नोके-ज़बान = ನಾಲಿಗೆ ತುದಿಯಲ್ಲಿ, ಬಾಯಿಪಾಠವಾಗಿ, ಕಂಠಸ್ಥ.

**नोक-झोंक**, स्त्री. ಜಗ್ಗಾಟ; ಶೃಂಗಾರ, ಸೊಗಸು; ಷೋಕಿ, ಜೋಕು; ಉಗ್ರತೆ; ಚುಚ್ಚುವ ಮಾತು; ಪರಿಹಾಸ, ಸರಸ, ಚೆಲ್ಲಾಟ.

**नोकना**, सक्रि. ಮೋಹಿಸು, ಮೋಹಗೊಳಿಸು.

**नोकदार**, वि. ಮೊನೆಯುಳ್ಳ; ಚೂಪಾದ; ತೀಕ್ಷ್ಣವಾದ; ಚುಚ್ಚುವ, ಪ್ರಚಂಡ; ದಿವ್ಯ.

**नोका-झोंकी**, स्त्री. ಎಳೆದಾಟ.

**नोखा**, वि. = अनोखा.

**नोच**, स्त्री. ಹೆರೆಯುವಿಕೆ, ಕೆದರುವಿಕೆ; ಜುಲುಂ; ದೋಚುವಿಕೆ. नोच-खसोट = ಹೊಡೆದು ಕಸಕೊಳ್ಳುವಿಕೆ, ಸುಲಿಗೆ.

**नोचना**, सक्रि. ಕೆರೆ, ಕೆದರು; ಕುಕ್ಕು, ಗೂರಾಡು; ಕಿತ್ತುಕೊ, ದೋಚಿಕೊ.

**नोचा-नोची**, स्त्री. ಒಬ್ಬರನ್ನೊಬ್ಬರು ಪರಚುವಿಕೆ, ಪರಚಾಟ.

**नोन**, पु. ಉಪ್ಪು, ಲವಣ. नोन मिर्च लगाकर कहना = ಉಪ್ಪುಕಾರ ಹಚ್ಚಿ ವರ್ಣಿಸು. नोन-तेल = ಉಪ್ಪುಎಣ್ಣೆ; ಸಂಸಾರಕ್ಕೆ ಬೇಕಾದ ಸಾಮಾನು ಸರಂಜಾಮುಗಳು, ಉಪ್ಪು ಮೆಣಸಿನಕಾಯಿ.

**नोना**, पु. ಉಪ್ಪು ಮಣ್ಣು, ಚವುಳು ಮಣ್ಣು; ಸೀತಾಫಲ. सक्रि. ಹಾಲು ಕರೆಯುವಾಗ ಹಸುವಿನ ಹಿಂಗಾಲುಗಳನ್ನು ಕಟ್ಟು.

**नोनिया**, पु. ಉಪ್ಪು ತೆಗೆಯುವವ, ಉಪ್ಪಲಿಗ, ಉಪ್ಪಾರ, ತೊರೆಯ. स्त्री. ಬಚ್ಚಲೆ ಸೊಪ್ಪು, ಮುಚ್ಚುಗೋಳಿ ಸೊಪ್ಪು.

**नोनी**, स्त्री. ಚವುಳು ಮಣ್ಣು; ಗೋಡೆ

ಯಲ್ಲಿ ಉಪ್ಪಾಡುವಿಕೆ, ಸವುಳು ಅಡರುವಿಕೆ; ನುಚ್ಚುಗೋಳಿ ಸೊಪ್ಪು.

नोल, स्त्री. ಪಕ್ಷಿಯ ಚಂಚು, ಕೊಕ್ಕು; ಪಾತ್ರೆಯ ಮೂಗು.

नोवना, सक्रि. ಹಾಲು ಕರೆಯುವಾಗ ಪಶುವಿನ ಹಿಂಗಾಲುಗಳನ್ನು ಕಟ್ಟು.

नोश, पु. ಕುಡಿಯುವಿಕೆ, ಪಾನ; ಪಾನೀಯ; ವಿಷನಾಶಕ, ಕಟ್ಟು ಮದ್ದು; ಜೇನುತುಪ್ಪ; ಅಮೃತ.

नोशदारू, पु. ವಿಷನಾಶಕ, ಕಟ್ಟು ಮದ್ದು.

नोशां, वि. ಕುಡಿಯುವ.

नोशी, स्त्री. ಕುಡಿಯುವಿಕೆ, ಪಾನ.

नौ, वि. ಒಂಭತ್ತು; ನವ, ನವೀನ; ಕೊ.ನ. नौ दो ग्यारह होना = ಕಾಲಿಗೆಬುದ್ಧಿ ಹೇಳು, ಕಂಬಿ ಕೀಳು, ಗಟ್ಟಿ ಹೊಡೆ.

नौकर, पु. ಸೇವಕ, ಆಳು, ಪೇದೆ; ಚಾಕರಿಯವ, ನೌಕರ नौकर-चाकर =ಆಳುಕಾಳು.

नौकरशाही, स्त्री. ಪದಸ್ಥರು ಮಾಡುವ ದೊರೆತನ, ಅಧಿಕಾರಿಗಳ ಪ್ರಭುತ್ವ, ನೌಕರಶಾಹಿ.

नौकरानी, स्त्री. ಸೇವಕಿ, ದಾಸಿ, ತೊತ್ತು

नौकरी, स्त्री. ಸೇವೆ; ನೌಕರಿ; ಉದ್ಯೋಗ; ಸಂಬಳ, ತಲಬು.

नौकरीपेशा, पु. ಸೇವಾವೃತ್ತಿ ಮಾಡುವವ, ನೌಕರಿಯವ; ಉದ್ಯೋಗಸ್ಥ.

नौका, स्त्री. ನೌಕ, ನಾವೆ; ಚದುರಂಗ ಪಾಟದ ಆನೆ.

नौख़ीज़, वि. ಹೊಸದಾಗಿ ಹುಟ್ಟಿದ. पु. ಯುವಕ, ತರುಣ

नौगरी, स्त्री. ಕೈಕಡಗ.

नौची, स्त्री. ಗುಡಿಸೆಟ್ಟಿಯರ ಮನೆಯಲ್ಲಿರುವ ಸಣ್ಣ ಹುಡುಗಿ.

नौज, अव्य. ಹಾಗೆ ಆಗದಿರಲಿ, ಎಂದಿಗೂ ಇಲ್ಲ.

नौजवान, वि. ನವಯುವಕ, ತರುಣ.

नौजवानी, स्त्री. ತಾರುಣ್ಯ, ಪ್ರಾಯ.

नौजा, पु. ಬಾದಾಮಿ, ದಾರುಹಣ್ಣು.

नौटंकी, स्त्री. ವಾದ್ಯಗಳ ಮೇಳ, ವಾದ್ಯಗೋಷ್ಠಿ, “ ಆರ್ಕೆಸ್ಟ್ರಾ.

नौढ़ना, अक्रि. ಬಗ್ಗು, ಬಾಗು.

नौढ़ाना, सक्रि. ಬಗ್ಗಿಸು, ಬಾಗಿಸು.

नौतना, सक्रि. ಆಹ್ವಾನಿಸು, ಕರೆ.

नौध, पु. ಮೊಳಕೆ, ಚಿಗುರು.

नौनगा, पु. ತೋಳುಬಂದಿ, ವಂಕಿ.

नौनिहाल, पु. ಸಸಿ, ಅಂಕುರ; ಅಗೆ, ನಾಟಿ; ನವಯುವಕ, ತರುಣ.

नौना, अक्रि. = नवना.

नौबढ़, वि. ಇದೀಗ ವೃದ್ಧಿಹೊಂದಿದ.

नौबढ़िया, पु. ಹೊಸದಾಗಿ ಹಣವಂತನಾದವ, ನಡಾಂತರದಲ್ಲಿ ವೃದ್ಧಿಹೊಂದಿದವ.

नौबत, स्त्री. ಬಾರಿ, ಸರ್ತಿ; ಸಮಯ, ಕಾಲ; ಸಂದರ್ಭ, ಅವಕಾಶ; ಪ್ರಸಕ್ತಿ, ಪ್ರಮೇಯ; ಮಂಗಳವಾದ್ಯ, ನಗಾರಿ, ನವಪತ್ತು. नौबत आना = ಪ್ರಸಂಗ ಒದಗು.

नौबतख़ाना, पु. ನಗಾರಿ ನವಪತ್ತು

ಬಾರಿಸುವ ಸ್ಥಳ, ನಗಾರಖಾನೆ.

**नौबती**, वि. ಸಾಮಯಿಕ, ಕಾಲಕಾಲಕ್ಕೆ ಬರುವ; ಬಿಟ್ಟು ಬಿಟ್ಟು ಬರುವ, ಪೊರೆ (ಜ್ವರ). पु ನಗಾರಿ ಬಾರಿಸುವವ, ಬಾಗಿಲು ಕಾಯುವವ; ಸವಾರನಿಲ್ಲದ ಅಲಂಕೃತವಾದ ಕುದುರೆ, ಕೋತಲು ಕುದುರೆ; ದೊಡ್ಡ ಗುಡಾರ, ಡೇರೆ.

**नौबहार**, पु. ವಸಂತಕಾಲದ ಪ್ರಥಮ ಭಾಗ.

**नौमासा**, पु. ಗರ್ಭದ ಒಂಭತ್ತನೆಯ ತಿಂಗಳಲ್ಲಿ ನಡೆವ ಒಂದು ಸಂಸ್ಕಾರ.

**नौमी**, स्त्री. ನವಮಿ.

**नौरतन**, पु. ನವರತ್ನ; ಭುಜದಲ್ಲಿ ಧರಿಸುವ ಒಂದು ಆಭರಣ, ವಂಕಿ. स्त्री. ಒಂದು ಬಗೆಯ ಚಟ್ನಿ

**नौरोज़**, पु. ಪಾರ್ಸಿಯರ ಯುಗಾದಿ; ಹೊಸ ವರ್ಷದ ಹುಟ್ಟು, ಸಂವತ್ಸರಾದಿ; ಹಬ್ಬದ ದಿವಸ.

**नौल**, पु. ಹಡಗಿನ ಬಾಡಿಗೆ.

**नौलक्खा**, पु. ಒಂಭತ್ತು ಲಕ್ಷ ರೂಪಾಯಿ ಉಳ್ಳವ, ದೊಡ್ಡ ಧನಿಕ.

**नौलासी**, वि. ನವ; ಮೆದು, ಕೋಮಲ.

**नौवारिद**, वि. ಹೊಸದಾಗಿ ಬಂದವ, ಹೊಸಬ.

**नौशह, नौशा**, पु. ಮದುವಣಿಗ, ವರ; ಯುವಕ, ತರುಣ.

**नौसत**, पु. ಶೃಂಗಾರ, ಅಲಂಕಾರ.

**नौसादर**, पु. ನವಾಸಾಗರ.

**नौसिख, नौसिखिया, नौसिखुआ**, वि. ಹೊಸತಾಗಿ ಕಲಿತವ, ಕಲಿಕೆಯವ; ಹೊಸಬ.

**नौसिर**, वि. ಹೊಸ, ನೂತನ.

**नौसेना**, स्त्री. ನೌಕಾಸೈನ್ಯ.

**नौहड़**, पु. ಹೊಸ ಮಡಕೆ ಅಥವಾ ಗಡಿಗೆ

**नौहा**, पु. ಅಳುವಿಕೆ, ಅಳು, ವಿಲಾಪ.

**नौहागर**, पु. ಅಳುವವ.

**नौहागरी**, स्त्री. ಅಳುವಿಕೆ, ಅಳಲು.

**न्याम**, पु. ಖಡ್ಗಕೋಶ, ಒರೆ.

**न्याय**, पु. ನ್ಯಾಯ; ನ್ಯಾಯ ವಿಚಾರಣೆ, ತೀರ್ಪು.

**न्यायकर्त्ता**, पु. ನ್ಯಾಯಾಧಿಪತಿ.

**न्यायत**, क्रिवि. ನ್ಯಾಯವಾಗಿ, ಸರಿಯಾಗಿ.

**न्यायाधीश, न्यायी**, पु. ನ್ಯಾಯಾಧಿಪತಿ.

**न्यारा**, वि. ದೂರ; ಬೇರೆಯಾದ, ಭಿನ್ನವಾದ; ಅಸಾಧಾರಣವಾದ; ವಿಚಿತ್ರ.

**न्यारिया**, पु. = नियारिया.

**न्यारे**, क्रिवि. ದೂರವಾಗಿ, ಬೇರೆ.

**न्याव**, पु. ನ್ಯಾಯ; ಕ್ರಮ; ಉಚಿತ.

**न्यास**, पु. ಇಡುವಿಕೆ; ಠೇವಣಾತಿ; ಅರ್ಪಣ; ಸನ್ಯಾಸಿ.

**न्यून**, वि. ಸ್ವಲ್ಪ; ಕೊರೆಯಾದ; ಕಡಮೆ. न्यूनाधिक्य = ಹೆಚ್ಚು ಕಡಮೆಗಳು, ಕುಂದುಕೊರತೆಗಳು.

**न्यूनता**, स्त्री. ಕೊರತೆ, ಕುಂದು, ಕಡಮೆ.

**न्योछावर**, स्त्री. = निछावर.

**न्योजी**, स्त्री. ಫಲವಿಶೇಷ.

**न्योतनहरी**, वि. ಕರೆಯಲ್ಪಟ್ಟವ,

ಆಹ್ವಾನಿತ.
न्योतना, सक्रि. ಆಹ್ವಾನಿಸು, ಕರೆ.
न्योता, पु. ಆಹ್ವಾನ, ಔತಣಕ್ಕೆ ಕರೆಯುವಿಕೆ; ಔತಣ, ಬಿದ್ದಣ; ಉಡುಗೊರೆ,
न्योला, पु. ಮುಂಗುಸಿ, ಕೀರ.
न्योली, स्त्री. ನೀರಿನಿಂದ ಕರುಳುಗಳನ್ನು ಶುದ್ಧಿಮಾಡುವ ಯೋಗಾಭ್ಯಾಸ.
न्हाना, अक्रि. ಸ್ನಾನಮಾಡು, ಮೀಯು.
न्हिलाना, सक्रि. ಸ್ನಾನಮಾಡಿಸು.

# प

पंक, पु. ಕೆಸರು, ಬದಿ.
पंकज, पु. ಕಮಲ, ತಾವರೆ.
पंक्ति, स्त्री. ಪಂಕ್ತಿ, ಸಾಲು, ವರಸೆ.
पंख, पु. ರೆಕ್ಕೆ, ಪುಕ್ಕ, ಗರಿ.
पंखा, पु. ದೊಡ್ಡ ಬೀಸಣಿಗೆ, ಪಂಖಾ.
पंखड़ी, स्त्री. ಹೂವಿನ ರೇಕು, ಎಸಳು.
पंखिया, स्त्री. ಸಣ್ಣ ಬೀಸಣಿಗೆ.
पंखी, स्त्री. ಚಿಕ್ಕಬೀಸಣಿಗೆ; ಪಕ್ಷಿ, ಹಕ್ಕಿ.
पंखुड़ा, पु. ಹೆಗಲಿನ ಎಲುಬು, ಜತ್ರು.
पंग, पु. ಒಂದು ಬಗೆ ಉಪ್ಪು.
पंगत, पंगति, स्त्री. ಪಂಕ್ತಿ.
पंगु, पंगुल, वि. ಕುಂಟ, ಹೆಳವ.
पंच, वि. ಐದು, ಪಂಚ. पु. ಐದು; ಐದು ಜನರು, ಪಂಚಾಯತರು; ಪಂಚಾಯಿತಿ.
पंचक, पु. ಐದರ ಸಮೂಹ, ಪಂಚಕ.
पंचकड़ी, स्त्री. ಐದು ಚರಣಗಳ ಪದ್ಯ, ಪಂಚಪದಿ.
पंचतोलिया, पु. ಬಹಳ ತೆಳುವೂ ನಯವೂ ಆದ ಒಂದು ಬಗೆ ಬಟ್ಟೆ.
पंचनामा, पंचायत-नामा, पु. ಪಂಚಾಯಿತರ ತೀರ್ಪು ಬರೆದಿರುವ ಕಾಗದ.
पंचमेला, वि. ಐದು ವಸ್ತುಗಳು ಬೆರೆದ.
पंचरंग, पंचरंगा, वि. ಪಂಚವರ್ಣದ, ಪಂಚರಂಗಿ.
पंचलड़ा, वि. ಐದು ಎಳೆಗಳ (ಹಾರ).
पंचवांसा, पु. ಗರ್ಭದ ಐದನೆಯ ತಿಂಗಳಲ್ಲಾಗುವ ಒಂದು ಸಂಸ್ಕಾರ.
पंचायत, स्त्री. ಪಂಚಾಯಿತಿ.
पंचायती, वि. ಪಂಚಾಯಿತಿಗೆ ಸಂಬಂಧಪಟ್ಟ; ಪಂಚಾಯಿತರ.
पंछा, पु. ಗುಳ್ಳೆಯಿಂದ ಬಸಿಯುವ ನೀರು, ರಸಿಕೆ, ಲಸಿಕೆ.
पंछाला, पु. ಗುಳ್ಳೆ, ಹೊಪ್ಪಳೆ, ಬೊಬ್ಬೆ; ಗುಳ್ಳೆಯ ಲಸಿಕೆ; ಬಾಲಂಗಚ್ಚೆ.
पंछी, पु. ಪಕ್ಷಿ, ಹಕ್ಕಿ.
पंज, वि. ಐದು, ಪಂಚ.
पंजड़ी, स्त्री. ಪಕ್ಕೆಲುಬು.
पंजना, अक्रि. ಬೆಸಗೆ ಹಾಕಲ್ಪಡು.
पंजर, पु. ಪಂಜರ, ಗೂಡು; ಅಸ್ಥಿಪಂಜರ, ಪಕ್ಕೆಲುಬು.
पंजशंबा, पु. ಗುರುವಾರ, ಬೃಹಸ್ಪತಿವಾರ.
पंजहज़ारी, पु. ಐದುಸಾವಿರ ದಂಡಾಳಿನ ನಾಯಕ; ಒಂದು ಬಿರುದು.
पंजा, पु. ಐದರ ಸಮೂಹ, ಪಂಚಕ; ಐದು ಬೆರಳುಗಳು, ಅಂಗೈ; ಪಂಜ,

ಹಿಡಿ; ಇಸ್ಪೀಟಿನಲ್ಲಿ ಐದನೆಯ ಬಂದು.

पंजारा, पु. ಅರಳೆ ಎಕ್ಕುವವ, ಪಿಂಜಾರ.

पंजिका, स्त्री. ಹತ್ತಿಯ ಹಂಜಿ.

पंजी, स्त्री. ಐದು ಮುಖಗಳುಳ್ಳ ದೀಪದ ಕಂಬ, ಸಮೆ.

पंजीरी, स्त्री. ಮೇಣದ ಬತ್ತಿ; ಐದು ಪದಾರ್ಥಗಳಿಂದ ತಯಾರಾದ ಒಂದು ಬಗೆ ಲೇಹ್ಯ, ಬಾಣಂತಿ ಲೇಹ್ಯ.

पंजुम, वि. ಪಂಚಮ, ಐದನೆಯ.

पंजेरा, पु. ಬೆಸಿಗೆ ಹಾಕುವವ.

पंडवा, पु. ಎಮ್ಮೆಯ ಕರು.

पंडा, पु. ಪೂಜಾರಿ, ತಮ್ಮಡಿ, ಪಂಡ.

पंडाइन, स्त्री. पांडे का स्त्री. रूप; पंडा का स्त्री. रूप.

पंडाल, पु. ಹಂದರ, ಚಪ್ಪರ, ಮಂಟಪ.

पंडित, पु. ಪಂಡಿತ, ವಿದ್ಯಾವಂತ.

पंडितख़ाना, पु. ಬಂದೀಖಾನೆ, "ದೊಡ್ಡಮನೆ", ಸೆರೆಮನೆ.

पंडिताइन, स्त्री. पंडित का स्त्री. रूप.

पंडिताई, स्त्री. ಪಾಂಡಿತ್ಯ, ವಿದ್ವತ್ತು.

पंडिताऊ, वि. ಪಾಂಡಿತ್ಯದ; ಪಂಡಿತರ.

पंडितानी, स्त्री. पंडित का स्त्री. रूप.

पंडुक, पु. पंडुकी, स्त्री. ಪಾರಿವಾಳ, ಬೆಳವ.

पंडुर, पु. ನೀರು ಹಾವು.

पंत, पु. ಪಂಡಿತ; ಉಪಾಧ್ಯಾಯ.

पंती, पु. ಮರಿಮಗ.

पंथ, पु. ದಾರಿ, ಮಾರ್ಗ; ಸಂಪ್ರದಾಯ; ಮತಾಚಾರ.

पंथी, पु. ಮಾರ್ಗಸ್ಥ, ಹಾದಿಗ; ಸಂಪ್ರದಾಯಸ್ಥ, ಸಂಪ್ರದಾಯಿ.

पंद, पु. ಉಪದೇಶ, ಬುದ್ಧಿವಾದ; ನೀತಿ.

पंदरवारा, पु. ೧೫ ದಿವಸ, ಪಕ್ಷ.

पंद्रह, वि. ಹದಿನೈದು.

पंपना, अक्रि. ಶೋಭಿಸು, ನಳನಳಿಸು.

पंवर, पु. ಸಾಮಾನು, ಸಾಮಗ್ರಿ.

पंवरना, अक्रि. ಈಜು, ಅಳನೋಡು.

पंवरि, स्त्री. ಬಾಗಿಲು, ಅಗಸೆ, ದ್ವಾರ.

पंवरिया, पु. ದ್ವಾರಪಾಲಕ; ಚಾರಣ.

पंवाड़ा, पु. ವೃತ್ತಾಂತ, ಕತೆ; ಪುರಾಣ; ಜಂಜಡ.

पंवार, पु. ಚಕೋರಪಕ್ಷಿ.

पंवारना, सक्रि. ಎಸೆ, ಬಿಸಾಡು.

पंसारी, पु. ಪಸಾರಿ ಅಂಗಡಿಯವ, ಕಿರಾಣಿ ಅಂಗಡಿಯವ.

पसेरी, स्त्री. ಪಂಚೇರು; ಪಂಚೇರಿನ ಬಟ್ಟು.

पइसना, अक्रि. ಪ್ರವೇಶಿಸು, ಹೊಗು.

पइसार, पु. ಪ್ರವೇಶ, ಹೊಗುವಿಕೆ.

पकड़, स्त्री. ಹಿಡಿಯುವಿಕೆ, ಹಿಡಿತ; ಮುಷ್ಟಿ, ಪಟ್ಟು; ಆಕ್ಷೇಪ.

पकड़ना, सक्रि. ಹಿಡಿ, ತುಡುಕು, ಕೈಗೊಳ್ಳು.

पकड़बंदी, स्त्री. ಆಕ್ಷೇಪಣೆ; ಟೀಕಟಿಪ್ಪಣಿ

पकड़वाना, पकड़ाना, सक्रि. ಹಿಡಿಯಿಸು.

पकना, अक्रि. ಪಕ್ವವಾಗು; ಹದಕ್ಕೆ ಬರು; ಪಾಡಾಗು, ಮಾಗು; ಹಣ್ಣಾಗು, ಕಳಿ; ಅವಿತುಬರು; ಕೂದಲು ನರೆಯು

पकला, पु. ಕಾಲು ಬೆರಳಿನ ಹುಣ್ಣು

कवाई, स्त्री. ಅಡಿಗೆಯ ಕೂಲಿ.

कवान, पु. ಹಿಟ್ಟಡಿಗೆ, ಕಜ್ಜಾಯ, ಪಂಜ್ಞಾರ, ಪಕ್ವಾರ.

कवाना, सक्रि. पकाना का प्रे. रूप.

का, वि. ಪಕ್ವವಾದ; ಬೆಂದ, ಅಡಿಗೆ ಯಾದ; ಹಣ್ಣಾದ, ಮಾಗಿದ, ಕಳಿತ; ಪರಿಪಕ್ವವಾದ; ಬಲಿತ.

काई, स्त्री. ಅಡಿಗೆ ಮಾಡುವಿಕೆ; ಅಡಿಗೆ; ಅಡಿಗೆಯ ಕೂಲಿ.

काना, सक्रि. ಪಕ್ವಮಾಡು, ಪಾಕ ಮಾಡು; ಮಾಗಿಸು; ಅಡಿಗೆ ಮಾಡು; ಬೇಯಿಸು.

काव, पु. ಹಣ್ಣಾಗುವಿಕೆ; ಕೀವು ಕಟ್ಟುವಿಕೆ.

कुआ, पु. ಒಂದು ಸಪ್ಪೆ ಹಣ್ಣು.

कौड़ा, पु. पकौड़ी, स्त्री. ಪಕೋಡ.

क्का, वि. ಬಲಿತ; ಮಾಗಿದ; ಪರಿಪಕ್ವ ವಾದ; ಪ್ರೌಢ; ಅನುಭವವುಳ್ಳ; ಗಟ್ಟಿಗ, ದೃಢ; ಪಕ್ಕಾ. पक्की रसोई = ಘೃತಪಕ್ವ

क्ष, पु. ಪಕ್ಷ; ಪಕ್ಕ; ಪಾರ್ಶ್ವ; ಪರಿ.

क्षपात, पु. ಪಕ್ಷಪಾತ, ಪಾರಪಕ್ಷ.

क्षाघात, पु. ಪಾರ್ಶ್ವವಾಯು, ಲಕ್ವ.

क्षी, पु. ಪಕ್ಷಿ, ಹಕ್ಕಿ.

ख, स्त्री. ಪಕ್ಷ; ಜಗಳ; ಐಬು.

खड़ी, स्त्री. ಹೂವಿನ ರೇಕು, ಎಸಳು

खरौटा, पु. ಪಾನ್ ಬೀಡಾದ ಮೇಲೆ ಹತ್ತಿರುವ ಬೆಳ್ಳಿಯ ವರಕು.

खवाड़ा, पु. ೧೫ ದಿನ, ಪಕ್ಷ.

खान, पु. ಪಾಷಾಣ, ಕಲ್ಲು.

खाना, पु. ಗಾದೆ, ವಚನ; ಕತೆ.

पखारना, पखालना, सक्रि. ಪ್ರಕ್ಷಾ ಲನೆ ಮಾಡು, ತೊಳೆ, ಗಲಬರಿಸು.

पखाल, स्त्री. ನೀರು ತುಂಬುವ ಚರ್ಮದ ಚೀಲ, ಪಕಾಲಿ, ಊದುಗೊಳವಿ; ३ दि. पु. ಕೊಚ್ಚೆ, ಕೆಸರು.

पखावज, स्त्री. ಮೃದಂಗ, ಮದ್ದಲೆ.

पखावजी, पु. ಮದ್ದಲೆ ಬಾರಿಸುವವ.

पखुआ, पु. ಪಕ್ಕ, ಮಗ್ಗುಲು; ಪಕ್ಕೆ.

पखुरी, स्त्री. ಹೆಗಲಿನ ಎಲುಬು, ಜತ್ರು; ಹೂವಿನ ಎಸಳು.

पखेरू, पु. ಪಕ್ಷಿ, ಹಕ್ಕಿ.

पखेस, पु. ಗುರುತು, ಚಿಹ್ನೆ.

पखौटा, पु. ರೆಕ್ಕೆ, ಗರಿ, ಪುಕ್ಕ.

पखौड़ा, पु. ಹೆಗಲಿನ ಎಲುಬು, ಜತ್ರು.

पग, पु. ಪಾದ, ಅಡಿ; ದಾಪು, ಹೆಜ್ಜೆ; ಜಾಡು. पग पग पर = ಅಡಿಗಡಿಗೂ.

पगडंडी, स्त्री. ಕಾಲುದಾರಿ.

पगड़ी, स्त्री. ಪಾಗು, ತಲೆಗುಡ್ಡೆ, ಪಗಡಿ, ಮುಂಡಾಸು, ಪೇಟ, ರುಮಾಲು. पगड़ी उतारना = ಅವಮಾನಪಡಿಸು, ಮಾನಗಳೆ.

पगतरी, पगदासी, स्त्री. ಪಾದರಕ್ಷೆ, ಮೆಟ್ಟು.

पगना, अक्रि. ರಸದಲ್ಲಿ ಚೆನ್ನಾಗಿ ನೆನೆ, ಊರು, ಉಸಿ; ಮಗ್ನನಾಗು, ಅನು ರಕ್ತನಾಗು.

पगनियाँ, स्त्री. ಮೆಟ್ಟು, ಕೆರ, ಎಕ್ಕಡ.

पगपोंछना, पु. ಕಾಲು ಒರೆಸುವ ಕಂಬಳಿ, ಕಾಲೊರೆಸಿ, ಮೆಟ್ಟುಗಂಬಳಿ.

पगला, पु. ಹುಚ್ಚ, ಮರುಳ.

**पगलाना,** अक्रि. ಮರುಳಾಗು, ಹುಚ್ಚು ಹಿಡಿ.

**पगली,** स्त्री. ಹುಚ್ಚಿ.

**पगहा,** पु. **पगही,** स्त्री. ಹಗ್ಗ, ಕಣ್ಣಿ; ಒಂದು ಬಗೆ ಉಕ್ಕು.

**पगाना,** सक्रि. ಉನಿಯುಹಾಕು, ನೆನಸು, ಅದ್ದು; ಅನುರಕ್ತನಾಗಿಸು.

**पगार,** पु. ಪ್ರಾಕಾರ, ಪೌಳಿ; ಸುತ್ತು ಗೋಡೆ; ಮಣ್ಣುಗಾರೆ; ಕಾಲುಹೊಳೆ, ಹಾಯ್ಗಡ.

**पगाह,** स्त्री. ಪ್ರಾತಃಕಾಲ, ಬೆಳಗು.

**पगिया,** स्त्री. ಪೇಟಾ,ಪಾಗು,ತಲೆಗುಡ್ಡೆ

**पगुराना,** सक्रि. ಮೆಲಕು ಹಾಕು; ಮೆಲ್ಲು, ಅಗಿಯು, ಚರ್ವಿಸು.

**पग्गड़,** पु. ದೊಡ್ಡ ತಲೆಗುಡ್ಡೆ, ಭಾರಿ ತಲೆಪಾಗು.

**पघा,** पु. ಹಗ್ಗ, ಕಣ್ಣಿ.

**पच,** स्त्री. ಅಡಿಗೆ ಮಾಡುವಿಕೆ; ಜೀರ್ಣ, ಅರಗುವಿಕೆ; ಆಧಾರ; ನೆರವು; ರಕ್ಷಣೆ.

**पचकना,** अक्रि. ಇಂಗಿಹೋಗು; ಕುಸಿ.

**पचगुना,** वि. ಐದರಷ್ಟು.

**पचड़ा,** पु. ಜಗಳ, ಜಂಜಡ, ರಗಳೆ; ಒಂದು ಬಗೆಯ ಲಾವಣಿ.

**पचतोरिया,** स्त्री. ಒಂದು ಬಗೆ ನಯವಾದ ರೇಷ್ಮೆಯ ಸೀರೆ.

**पचन,** पु. ಬೇಯುವಿಕೆ, ಅಡಿಗೆ; ಜೀರ್ಣವಾಗುವಿಕೆ.

**पचना,** अक्रि. ಜೀರ್ಣವಾಗು, ಅರಗು.

**पचनिया,** वि. ಜೀರ್ಣವಾಗುವ, ಅರಗುವ.

**पचपच,** स्त्री. ಕೆಸರಿನಲ್ಲಿ ನಡೆವ ಶಬ್ದ.

**पचपचा,** वि. ಮೆದುವಾದ; ಸಡಿಲವಾದ

**पचपचाना,** अक्रि. ಬೆವರು ಸುರಿ, ಬೆವರು.

**पचपन,** वि. ಐವತ್ತೈದು.

**पचमहला,** वि. ಐದು ಮಹಡಿಗಳುಳ್ಳ.

**पचमेल,** वि. ಕಲಬೆರಿಕೆ; ಗಡಿಬಿಡಿ.

**पचलड़ा,** पु. **पचलड़ी,** स्त्री. ಐದು ಎಳೆಗಳ ಹಾರ.

**पचलोना,** पु. ಪಂಚಲವಣ.

**पचहत्तर,** वि. ಎಪ್ಪತ್ತೈದು.

**पचानबे,** वि. ತೊಂಭತ್ತೈದು.

**पचाना,** सक्रि. ಜೀರ್ಣಿಸು, ಅರಗಿಸು.

**पचारना,** सक्रि. ಜಗಳಕ್ಕೆ ಕರೆಯುತಿಕೆ.

**पचाव,** पु. ಜೀರ್ಣ, ಪಾಚನ.

**पचास,** वि. ಐವತ್ತು.

**पचासा,** पु. ಐವತ್ತರ ಸಮೂಹ; ५० ರೂಪಾಯಿಯ ತೂಕದ ಬಟ್ಟು.

**पचासी,** स्त्री. ಎಂಭತ್ತೈದು.

**पचीस, पच्चीस** वि. ಇಪ್ಪತ್ತೈದು.

**पचीसी,** स्त्री. ಇಪ್ಪತ್ತೈದರ ಸಮೂಹ; ಒಂದು ಬಗೆ ಕವಡೆಯಾಟ. ವರ್ಷ ಪಚೀಸಿ = ಇಪ್ಪತ್ತೈದು ವರ್ಷಗಳು; ಇಪ್ಪತ್ತೈದು ವರ್ಷಗಳ ಪೂರ್ತಿ, ಇಪ್ಪತ್ತೈದನೆಯ ಅಬ್ದ ಪೂರ್ತಿ; ಈ ಸಂದರ್ಭದಲ್ಲಿ ಆಚರಿಸುವ ಸಮಾರಂಭ, ರಜತಮಹೋತ್ಸವ, "ಸಿಲ್ವರ್ ಜ್ಯೂಬಿಲಿ".

**पचूका,** पु. ಜೇರುಕೊಳವಿ, ಪಿಚಕಾರಿ

**पचोतरा,** पु. ಶೇಕಡ ಐದರಂತೆ ತೆರಿಗೆ

**पचौनी**, स्त्री. ಜೀರ್ಣಕೋಶ; ಹೊಟ್ಟೆ; ಕರುಳು.

**पचौर, पचौली**, पु. ಮುಖಂಡ, ಮುಂದಾಳು, ಯಜಮಾನ.

**पच्चड़, पच्चर**, पु. ಗೂಟ, ದಶಿ, ಬೆಣೆ, ತಪ್ಪು.

**पच्ची**, स्त्री. ಬೆಸಗೆ, ಅಪ್ಪಿಗೆ; ಜೋಡು ಪಣಿ, ಸಂಧಿ.

**पच्चीकारी**, स्त्री. ಬೆಸೆಯುವಿಕೆ, ಬೆಸಿಗೆ; ಪಚ್ಚಿಯ ಕೆಲಸ.

**पच्छ**, पु. ಪಕ್ಷ; ಕಕ್ಷಿ.

**पच्छम, पच्छिम**, पु. ಪಶ್ಚಿಮ, ಪಡುವಲು.

**पच्छमी**, वि. ಪಶ್ಚಿಮದ, ಪಡುವಣ.

**पच्छी**, पु. ಪಕ್ಷಿ, ಹಕ್ಕಿ.

**पछ**, पु. ಪಕ್ಷ, ಕಕ್ಷಿ; ಪಕ್ಷಪಾತ; ರೆಕ್ಕೆ, ಪುಕ್ಕ.

**पछड़ना**, अक्रि. ಕೆಳಕ್ಕೆ ಬೀಳು; ಹಿಂದುಳಿ; ಸೋಲು.

**पछताना, पछतावना**, अक्रि. ಪಶ್ಚಾತ್ತಾಪ ಪಡು.

**पछतावा**, पु. ಪಶ್ಚಾತ್ತಾಪ, ಸಂತಾಪ.

**पछना**, अक्रि. ಸೀಳಲ್ಪಡು, ಕುಯ್ಯಲ್ಪಡು. पु. ಸೀಳುವ ಶಸ್ತ್ರ, ವೇಧನಿ; ಹುಣ್ಣನ್ನು ಸೀಳಿ ರಕ್ತ ತೆಗೆಯುವಿಕೆ.

**पछवा**, वि. ಪಶ್ಚಿಮದ. स्त्री. ಪಶ್ಚಿಮ ಗಾಳಿ.

**पछांह**, पु. ಪಶ್ಚಿಮದೇಶ, ಪಡುವಲು.

**पछाड़**, स्त्री. ಮೂರ್ಛೆ ಹೋಗುವಿಕೆ; ಬೆನ್ನಿನ ಮೇಲೆ ಬೀಳುವಿಕೆ; ತೂರುವಿಕೆ, ಕೇರುವಿಕೆ. पछाड़ खाना = ಬೆನ್ನಿನ ಮೇಲೆ ಕೆಳಕ್ಕೆ ಬೀಳು.

**पछाड़ना**, सक्रि. ನೆಲಕ್ಕಪ್ಪಳಿಸು; ಹೊಡೆ, ಬಡಿ.

**पछियाना**, अक्रि. ಹಿಂಬಾಲಿಸು.

**पछिया, पछियाव**, स्त्री. ಪಡುವಣಗಾಳಿ.

**पछेरू**, वि. ರೆಕ್ಕೆಗಳುಳ್ಳ. पु. ಹಕ್ಕಿ, ಪಕ್ಷಿ.

**पछेली**, स्त्री. ಕೈಬಳೆ, ಕಡಗ.

**पछोड़**, पु. ಕೇರುವಿಕೆ, ಒನೆಯುವಿಕೆ.

**पछोड़न**, पु. ಕೇರುವಾಗ ಬಿದ್ದ ಹೊಟ್ಟು.

**पछोड़ना**, सक्रि. ತೂರು, ಕೇರು, ಸಾಣಿಸು; ಒನೆಯು.

**पछयावर**, स्त्री. ಒಂದು ಷರಬತ್ತು.

**पज़मुर्दा** वि. ಕಂದಿದ, ಬಳಲಿದ.

**पजरना**, अक्रि. ಹೊತ್ತಿಕೊಳ್ಳು, ಉರಿ; ತಪಿಸು.

**पज़ावा**, पु. ಆವಿಗೆ, ಇಟ್ಟಿಗೆ ಗೂಡು.

**पज़ीर**, वि. ತೆಗೆದುಕೊಳ್ಳುವವ, ಸ್ವೀಕರಿಸುವವ; ತಕ್ಕ, ಅರ್ಹ; ಒಪ್ಪಿಕೆಯಾದ, ಪಸಂದಾದ; ಸ್ವೀಕೃತ.

**पज़ीरा**, वि. ಒಪ್ಪಿಕೆಯ; ಸ್ವೀಕೃತ.

**पजौड़ा**, वि. ನೀಚ; ಕುತ್ಸಿತ, ಪಿಂಜಾಳ.

**पट**, पु. ವಸ್ತ್ರ, ಬಟ್ಟೆ; ಪರದೆ, ತೆರೆ; ಕದ, ಬಾಗಿಲು; ತಾಮ್ರಪಟ್ಟ; ಪೀಠ; ಸಮತಳ, ಪಾತಳಿ. वि. ಬೋರಲುಬಿದ್ದ, ಕುಪ್ಪರಿಸಿದ; ನಿಷ್ಪ್ರಯೋಜಕ; ಪಡಬಿದ್ದ ಜಮೀನು, ಬಂಜರು; ಅಬಾದಿಲ್ಲದ; ಮರೆತುಹೋದ, ವಿಸ್ಮೃತ.

**पटइत**, स्त्री. पटवा का स्त्री. रूप.

**पटकन**, स्त्री. ಬಡಿಯುವಿಕೆ, ಅಪ್ಪಳಿಸು

ವಿಕೆ; ಅಪ್ಪಳಿಸಿ ಬೀಳುವಿಕೆ; ಚಪಾಟಿ; ಸಣ್ಣ ಕೋಲು.

**पटकना**, सक्रि. ಎತ್ತಿ ಬಡಿ, ನೆಲಕ್ಕೆ ಅಪ್ಪಳಿಸು, ರಾಚು; ದಿಂಡುಗೆಡವು; ಕುಪ್ಪರಿಸು, ಕೆಡವು. अक्रि. ಕುಸಿ, ಇಂಗು.

**पटकनी**, स्त्री. ಅಪ್ಪಳಿಸುವಿಕೆ, ನೆಲದ ಮೇಲೆ ಬೀಳುವಿಕೆ.

**पटका**, पु. ನಡುಕಟ್ಟು, ಕಮ್ಮರ್ಬಂದು.

**पटकवाना, पटकाना**, सक्रि. पटकना का प्रे. रूप.

**पटकान**, स्त्री. = पटकनी.

**पटन**, पु. ಹೋಲಿಕೆ, ಸಾದೃಶ್ಯ, ಉಪಮೆ. वि. ಸಮವಾದ, ಸಮತಲ.

**पटतरना**, अक्रि. ಹೋಲು, ಸದೃಶವಾಗು

**पटतारना**, सक्रि. ಖಡ್ಗವನ್ನು ಎತ್ತು; ಗುರಿಕಟ್ಟು; ಸಮತಲ ಮಾಡು.

**पटन**, पु. ಚಪ್ಪರಕ್ಕೆ ಹುಲ್ಲು ಹೊಚ್ಚುವಿಕೆ.

**पटना**, अक्रि. ಹೂಳು ತುಂಬು, ಮುಚ್ಚಲ್ಪಡು; ಹೊದಿಸಲ್ಪಡು; ಅಡಕಲ್ಪಡು; ನೀರು ಹಾಯಿಸಲ್ಪಡು; ಸಂದಾಯವಾಗು, ಸಲ್ಲು; ಸರಿಬೀಳು, ಪಾಟಿ ಬೀಳು; ಸ್ವೀಕೃತವಾಗು; ಹೊಂದಿಕೆಯಾಗಿರು; ಒಪ್ಪು, ಕಳೆಕಟ್ಟು.

**पटनी**, स्त्री. ಕಾಯಂ ಗುತ್ತಿಗೆ ಜಮೀನು. पु. ದೋಣಿಗಾರ, ಅಂಬಿಗ.

**पटपट**, स्त्री. ಪಟಪಟ ಶಬ್ದ.

**पटपटाना**, अक्रि. ಪಟಪಟ ಅನ್ನು; ಚಡಪಡಿಸು, ಕಷ್ಟಪಡು. सक्रि. ಪಟಪಟ ಶಬ್ದಮಾಡು.

**पटपर**, वि. ಸಮವಾದ, ಸಪಾಟ. पु. ಬಯಲು, ಮೈದಾನ; ಮೆಕ್ಕಲು; ಬಂಜರು.

**पटबंधक**, पु. ಇಳಿಭೋಗ್ಯ.

**पटबीजना**, पु. ಮಿಂಚುಹುಳು.

**पटमंडप**, पु. ಗುಡಾರ, ಡೇರೆ.

**पटड़ा, पटरा**, पु. ಹಲಗೆ; ಮಣೆ, ಪೀಠ; ಚಪ್ಪಡಿಕಲ್ಲು; ಒಗೆಯುವ ಕಲ್ಲು; ಬಳಿಯದ ಕಾಳು.

**पटरानी**, स्त्री. ಪಟ್ಟದ ರಾಣಿ.

**पटड़ी, पटरी**, स्त्री. ಹಲಗೆ, ಕಪ್ಪುಹಲಗೆ, ಪಾಟಿ; ಪಾತಿ, ಮಡಿ; ರಸ್ತೆಯ ಎರಡು ಪಕ್ಕಗಳಲ್ಲಿಯೂ ಇರುವ ಕಾಲುದಾರಿ; ನಾಲೆಯ ಏರಿ; ಚಮಕಿ ಅಂಚು, ನಕ್ಕಿ, ಗೋಟು; ಒಂದು ಬಗೆ ಬಳೆ; ತಾಯಿತಿ.

**पटल**, पु. ಪಟಲ; ಸಮೂಹ.

**पटवा**, पु. ಮುತ್ತಿನ ಸರ ಪೋಣಿಸುವವ; ಗೋಟು ಕಟ್ಟುವವ; ಗೋಣಿ ನಾರು.

**पटवाना**, सक्रि. पाटना का प्रे. रूप.

**पटवारगी**, स्त्री. ಶಾನುಭೋಗನ ಕೆಲಸ.

**पटवार, पटवारी**, पु. ಶಾನುಭೋಗ, ಕಾರಕೂನ, ಕರ್ಣಿಕ, ಕುಲಕರ್ಣಿ.

**पटवास**, पु. ಗುಡಾರ, ಡೇರೆ; ಲ[illegible] ಹಕ್ಕಿಗಳು ಕುಳಿತುಕೊಳ್ಳಲು ಹಾಕಿದ ಗಳು.

**पटसन**, पु. ಸಣಬು, ಗೋಣಿನಾರು.

**पटसाल**, पु. ಪಾಠಶಾಲೆ.

**पटहा**, पु. ದುಂದುಭಿ, ನಗಾರಿ.

**पटहार**, पु. ಮುತ್ತಿನ ಸರ ಪೋಣಿಸುವವ; ಗೋಟು ಕಟ್ಟುವವ, ಪಟ್ವೇದಾರ.

**पटहारिन**, स्त्री. पटहार का स्त्री. रूप.
**पटांग**, पु. ಪಟ್ಟಾಂಗ, ಅಸಂಬದ್ಧ ಮಾತು
**पटा**, पु. ಅಭ್ಯಾಸಕ್ಕಾಗಿ ಉಪಯೋಗಿಸುವ ಮರದ ಕತ್ತಿ, ಬಡ್ಡು ಕತ್ತಿ; ಆಸನ, ಪೀಠ; ಹಸೆ ಮಣೆ; ಪಟ್ಟಿ, ಪಟಾಪಟಿ; ಪಟ್ಟ.
**पटाई**, स्त्री. ಹೂಳು ತುಂಬಿಸುವಿಕೆ, ಮುಚ್ಚುವಿಕೆ; ಹೊದಿಸುವಿಕೆ; ಹೊದಿಸುವುದಕ್ಕೆ ಕೊಡುವ ಕೂಲಿ.
**पटाक**, पु. ಪಟಾರೆನ್ನುವ ಶಬ್ದ.
**पटाका, पटाख़ा**, पु. ಪಟಾಕಿ, ಪಟಾಸು, ಪಟಾಟಿ.
**पटाना**, सक्रि. ಮುಚ್ಚಿಸು; ಹೊಚ್ಚಿಸು; ಹೂಳು ತುಂಬಿಸು; ತೀರಿಸು, ಸಲ್ಲಿಸು; ನೀರು ಹಾಯಿಸು; ಸಗಣಿಯಿಂದ ಸಾರಿಸು. अक्रि. ತಣ್ಣಗಾಗು, ತಮ್ಮಣಿಸು.
**पटापट**, स्त्री. ಪಟಪಟ ಶಬ್ದ.
**पटापटी**, स्त्री. ವಿವಿಧ ಬಣ್ಣದ ವಸ್ತ್ರ; ಪಟಾಪಟ ಸೀರೆ.
**पटाव**, पु. ಹುಲ್ಲು ಹೊಚ್ಚುವಿಕೆ; ಛಾವಣಿ; ಮುಚ್ಚುವಿಕೆ.
**पटास**, पु. ಛಾವಣಿ; ಹಲಗೆ ಸೇರುವೆ; ನೀರು ಹಾಯಿಸುವಿಕೆ, ನೀರಾವರಿ.
**पटिया**, स्त्री. ಹಾಸುಗಲ್ಲು, ಪದರುಕಲ್ಲು; ಬರೆಯುವ ಹಲಗೆ, ಪಾಟೀ; ಹಲಗೆ, ಮಣೆ, ಪೀಠ; ಬೈತಲೆ.
**पटी**, स्त्री. ನಡುಕಟ್ಟು; ನವಾರ, ಪಟ್ಟಿ; ತೆರೆ, ಪರದೆ.
**पटीमा**, पु. ಅಚ್ಚುಹಾಕುವಾಗ ಬಟ್ಟೆ ಮುಸ್ಸು ಹರವುವ ಹಲಗೆ.
**पटीलना**, सक्रि. ಗೋಲ್‌ಮಾಲ್ ಮಾಡು, ಪುಸಲಾಯಿಸು; ಠಕ್ಕಿಸು; ಅಪಹರಿಸು; ಅಡಗಿಸು; ಮೋಸ ಮಾಡು; ಹೊಡೆ, ಬಡಿ.
**पटु**, वि. ನಿಪುಣ; ಚತುರ; ಜಾಣ.
**पटुआ**, पु. ಸಣಬು, ಗೋಣಿ ನಾರು.
**पटुका**, पु. ನಡುಕಟ್ಟು, ಕಮ್ಮರ್ಬಂದ್.
**पटुकी**, स्त्री. ಸಣ್ಣ ಮಡಕೆ.
**पटुली**, स्त्री. ಉಯ್ಯಾಲೆ ಮಣೆ.
**पटेबाज़**, पु. ಕತ್ತಿ ವರಸೆ ಕಲಿಯುವವ; ವ್ಯಭಿಚಾರಿ, ಲಂಪಟ.
**पटेल**, पु. ಪಟೇಲ, ಗೌಡ, ಹೆಗ್ಗಡೆ; ದೊಣ್ಣೆ ವರಸೆ.
**पटेला**, पु. **पटेली**, स्त्री. ಹಲಗೆಗಳಿಂದ ಮಾಡಿದ ದೋಣಿ; ಹಲಗೆ, ಮಣೆ; ಗೋರುಮಣೆ, ಹಲುಬೆ.
**पटैत**, पु. ಪಟ್ಟಾದಾರ; ಲಾಠಿ ವರಸೆ ಕಲಿಯುವವ; ದಡ್ಡ, ಹೆಡ್ಡ; ಶತ್ರು.
**पटैला**, पु. ಅಗಳಿ, ತಾಪಾಳು.
**पटोतन**, पु. ಹಲಗೆ ಸೇರುವೆ.
**पटोर, पटोल**, पु. ಪಡವಲಕಾಯಿ, ಪಟ್ಲಕಾಯಿ; ಒಂದು ಬಗೆ ರೇಷ್ಮೆ ಬಟ್ಟೆ.
**पटोहिया**, पु. ಗೂಬೆ, ಗೂಗೆ.
**पटौनी**, पु. ದೋಣಿಗಾರ, ಅಂಬಿಗ.
**पट्टा**, पु. ಚಪ್ಪಡಿ ಕಲ್ಲು, ಹಾಸುಗಲ್ಲು; ಶಾಸನ ಬರೆಯುವ ತಗಡು, ತಾಮ್ರದ ಪಟ್ಟಿ; ರಾಜನ ಶಿಲಾಶಾಸನ; ಜಮೀನಿನ ಶಾಸನ ಪತ್ರ, ಪಟ್ಟಾ; ಅಧಿಕಾರ ಪತ್ರ, ಸನ್ನದು; ಕೂದಲು, ಜುಟ್ಟು, ಅಲಕ; ಹಣೆ ಪಟ್ಟಿ; ನಾಯಿಯ ಕೊರಳು ಪಟ್ಟಿ; ತೊಗಲಿನ ಪಟ್ಟಿ; ಪಟ್ಟಾ ಕತ್ತಿ; ಮಣೆ,

ಪೀಠ; ಸಿಂಹಾಸನ; ತಲೆಗುಡ್ಡೆ, ಪೇಟಾ.

**पट्टी**, स्त्री. ಹಲಗೆ; ಕಪ್ಪು ಹಲಗೆ, ಪಾಟೀ; ಪಾಠ, ಬೋಧನೆ; ಬಟ್ಟೆ ಅಥವಾ ಹಲಗೆಯ ಪಟ್ಟಿ; ಪಟ್ಟಿ ಕಟ್ಟುವಿಕೆ; ಭಾಗ, ಹಿಸ್ಸೆ; ಸಾಲು, ವರಸೆ; ಬೈತಲೆ; ಹೆಚ್ಚಿನ ತೆರಿಗೆ, ಮೇಲಾದಾಯ; ಬರೆದಿರುವ ಕಾಗದ, ಪಟ್ಟಿ; ಚಕ್ರದ ಆರೆ; ಒಂದು ಮಿಠಾಯಿ. पट्टी देना=ದುರ್ಬೋಧನೆ ಮಾಡು,ಠಕ್ಕಿಸು.

**पट्टीदार**, पु. ಭಾಗಸ್ಥ, ಹಿಸ್ಸೆದಾರ, ಪಾಲುಗಾರ.

**पट्टीदारी**, स्त्री. ಪಾಲುಗಾರಿಕೆ, ಪತ್ತಿಗೆ; ಹಲವರಿಗೆ ಸಾಮಾನ್ಯವಾದ ಹಕ್ಕು ಬಾಧ್ಯತೆಗಳುಳ್ಳದ್ದು, ಹುದುವು.

**पट्टू**, पु. ಕಂಬಳಿ, ಧಾವಳಿ.

**पट्ठा**, पु. ಪ್ರಾಯಸ್ಥ, ಬಲಿತವ; ದಾಂಡಿಗ, ದಡಿಯ; ಜಟ್ಟಿ, ಮಲ್ಲ; ಸ್ನಾಯು, ನರ; ತೊಡೆಸಂದು; ಕಡಗ, ಬಳೆ; ಉದ್ದವಾದ ಎಲೆ; ಕೂದಲಿನ ಸುರುಳಿ, ಅಲಕ.

**पट्ठी**, स्त्री. ಬಲಿತವಳು, ದಡುಮಿ.

**पठकाइन**, स्त्री. पाठक का स्त्री. रूप.

**पठन**, पु. ಓದುವಿಕೆ, ಪಠನ; ವಾಚನ. पठन पाठन = ಅಧ್ಯಯನ ಅಧ್ಯಾಪನ

**पठनेटा**, पु. ಪಠಾಣನ ಮಗ.

**पठवना**, सक्रि. ಕಳುಹಿಸು, ರವಾನಿಸು.

**पठान**, पु. ಪಠಾಣರು; ಸಿಪಾಯಿ.

**पठवाना, पठाना**, सक्रि. ಕಳುಹು, ಕಳುಹಿಸು.

**पठानी**, स्त्री. ಪಠಾಣರ ಸ್ತ್ರೀ, ಪಠಾಣಗಿತ್ತಿ; ಪಠಾಣರ ಗುಣ.

**पठावन**, पु. ದೂತ.

**पठावनी**, स्त्री. ಕಳುಹಿಸುವಿಕೆ; ಸಂದೇಶ

**पठित**, वि. ಓದಿದ, ಪಾಠವಾದ.

**पठिया**, स्त्री. ಕಡಸು; ಬಲಿತವಳು, ದಡುಮಿ.

**पठौनी**, स्त्री. ಕಳುಹಿಸುವಿಕೆ, ಸಂದೇಶ.

**पड़छटी, पड़छत**, स्त्री. ಗೋಡೆಯ ಮೇಲಿನ ಚಪ್ಪರ; ಅಟ್ಟ.

**पड़त**, स्त्री. ಮುಟ್ಟುವಳಿ, ಲಾಗೋಡು, ಅಸಲು ಖರೀದಿ; ನಿಕ್ಕಿ ಕ್ರಯ, ತಳಧಾರಣೆ; ದರ; ಸರಾಸರಿ.

**पड़ता**, पु. ಮುಟ್ಟುವಳಿ, ತಗಲುಪಟಿ, ಲಾಗೋಡು; ಭಾಗ, ಪಾಲು, ಹಿಸ್ಸೆ.

**पड़ताल**, पु. ಸರಿನೋಡುವಿಕೆ, ಪರಿಶೀಲನೆ, ಪರೀಕ್ಷಣ, ಪೈಮಾಯಿಷಿ.

**पड़तालना**, सक्रि. ಪರಿಶೋಧಿಸು, ಪರಿಶೀಲಿಸು.

**पड़ती**, स्त्री. ಪಡಬಿದ್ದ ಜಮೀನು, ಬೀಳುಗದ್ದೆ, ತರಸು,ಬಂಜರು,ಹಡಿಲು.

**पड़ना**, अक्रि. ಬೀಳು, ಸಂಘಟಿಸು; ಸಂಭವಿಸು, ಒದಗು; ಪಡಲಿಸು, ಮಲಗು; ಬೀಡು ಬೀಳು. जान पड़ना = ಕಂಡುಬರು, ತೋರು.

**पड़पड़ाना**, अक्रि. ಬಡಬಡಿಸು, ಒಟಗುಟ್ಟು; ನವೆಯಾಗು, ಉರಿ.

**पड़वा**, स्त्री. ಪ್ರತಿಪತ್ತು, ಪಾಡ್ಯಮಿ.

**पड़ा**, पु. ಗದ್ದೆಯ ಬದು; ಎಮ್ಮೆಕರು.

**पड़ाना**, सक्रि. ಬೀಳಿಸು, ಮಲಗಿಸು

**पड़ाव**, पु. ತಂಗುವ ಸ್ಥಳ, ಪಾಳೆಯ,

ಬೀಡು. पड़ाव डालना=ಬೀಡುಬಿಡು.

**पढ़िया**, स्त्री. ಎಮ್ಮೆಯ ಕಡಸು.

**पड़ोस**, पु. ನೆರೆ, ದಂಡೆ, ಅಕ್ಕಪಕ್ಕ. पास पड़ोस=ನೆರೆಹೊರೆ, ಅಜುಬಾಜು.

**पड़ोसिन**, स्त्री. ನೆರೆಮನೆಯವಳು.

**पड़ोसी**, पु. ನೆರೆಮನೆಯವ, ನೆರೆಯವ.

**पढंत**, स्त्री. ಪಠನ, ಓದುವಿಕೆ, ಓದು.

**पढंता**, पु. ಓದುವವ, ಪಾಠಕ.

**पढ़ना**, स्त्री. ಓದುವಿಕೆ, ಪಠನ; ಮಂತ್ರ ಪಠನ. लिखत पढ़त=ಪತ್ರವ್ಯವಹಾರ.

**पढ़न**, पु. ಓದುವಿಕೆ, ಪಠನ.

**पढ़ना**, सक्रि. ಓದು, ಪಠಿಸು; ಪಾಠ ಮಾಡು; ಕಲಿ. पढ़ना पढ़ाना, पढ़ना लिखना=ಓದು ಕಲಿ, ವಿದ್ಯೆ ಕಲಿ.

**पढ़वाना**, सक्रि. पढ़ाना का प्रे. रूप.

**पढ़ा-गुना**, **पढ़ा-लिखा**, वि ವಿದ್ಯಾವಂತ, ಓದಾಳಿ, ಅಕ್ಷರಸ್ಥ.

**पढ़ाई**, स्त्री. ಓದುವಿಕೆ, ಓದುಗಾರಿಕೆ; ವಿದ್ಯಾಭ್ಯಾಸ, ಅಧ್ಯಯನ; ಓದಿಸುವಿಕೆ, ಅಧ್ಯಾಪನ, ಶಿಕ್ಷಣ; ವಿದ್ಯಾಶುಲ್ಕ, ಗುರುದಕ್ಷಿಣೆ.

**पढ़ाना**, सक्रि. ಓದಿಸು; ಪಾಠಮಾಡಿಸು; ವಿದ್ಯೆ ಕಲಿಸು, ಬೋಧಿಸು; ತರಬೇತು ಮಾಡು.

**पढ़िन**, स्त्री. **पढ़िना**, पु. ಒಂದು ಬಗೆ ಮೀನು.

**पण**, पु. ಪಂಥ್ಯ, ಜೂಜು; ಪಂತ, ಪಣ; ಪ್ರತಿಜ್ಞೆ, ಒಪ್ಪಂದ.

**पतंग**, पु. ದೀಪದ ಹುಳು, ಪತಂಗ ಹುಳು; ಗಾಳಿ ಪಟ, ಪತಂಗ; ಚೆಂಡು.

**पतंगबाज़**, पु. ಗಾಳಿಪಟ ಹಾರಿಸುವವ.

**पतंगा**, पु. ದೀಪದ ಹುಳು, ಪತಂಗ; ಗುಂಗಾಡು; ಕಿಡಿ.

**पत**, स्त्री. ಮಾನ, ಗೌರವ. पत पानी =ಮಾನ ಮರ್ಯಾದೆ.

**पतझड़**, स्त्री. ಎಲೆಯುದುರುವಿಕೆ; ಎಲೆಯುದುರುವ ಕಾಲ, ಶಿಶಿರಋತು.

**पतन**, पु. ಬೀಳುವಿಕೆ, ಪತನ.

**पतरिंगा**, पु. ಸಣ್ಣ ಹುಳುಗಳನ್ನು ತಿನ್ನುವ ಒಂದು ಬಗೆ ಹಕ್ಕಿ.

**पतरी**, स्त्री. ಬಡಿಸಿದ ಎಲೆ, ಎಡೆ.

**पतला**, वि. ತೆಳುವಾದ; ಸಣಕಲಾದ, ಬಡವಾದ; ಕ್ಷೀಣ, ಬಡಕಲ; ಅಲ್ಪಕ.

**पतलाई**, स्त्री. **पतलापन**, पु. ತೆಳುವು; ಬಡಕಲು; ನಯ; ಕ್ಷೀಣತೆ.

**पतलून**, पु. ಷರಾಯಿ, ಇಜಾರು, ಪಾಯಿಜಾಮ, ಚಲ್ಲಣ.

**पतलो**, स्त्री. ಮುಂಜಹುಲ್ಲು, ಮೊದೆ.

**पतवार**, **पतवारी**, **पतवाल**, स्त्री. ಹಡಗು ನಡೆಸುವ ಯಂತ್ರ, ಚುಕ್ಕಾಣಿ; ಹಡಗಿನ ಸೋಗೆ, ಕೇನಿಪಾತಕ.

**पतवास**, पु. ಪಕ್ಷಿಗಳ ಇಕ್ಕೆ, ಗೂಡು.

**पता**, पु. ಚಿಹ್ನೆ; ಜಾಡು,ಸುಳಿವು; ಠುಬ್ಬು, ಪತ್ತೆ; ವಿಳಾಸ, ಗೊತ್ತು; ಗುರುತು. पता लगाना=ಗೊತ್ತುಹಚ್ಚು, ಪತ್ತೆ ಮಾಡು

**पताई**, स्त्री. ತರಗೆಲೆ, ಉದುರಿದ ಎಲೆ.

**पताका**, स्त्री. ಧ್ವಜ, ಬಾವುಟ.

**पतिंग**, पु. ದೀಪದ ಹುಳು, ಪತಂಗ.

**पति**, पु. ಯಜಮಾನ, ಒಡೆಯ; ಪತಿ, ಗಂಡ. पति पत्नी = ಗಂಡ ಹೆಂಡತಿ.

**पतित**, वि. ಕೆಳಗೆ ಬಿದ್ದ; ಹಿಂದುಳಿದ; ದೋಷಿ, ಅಪರಾಧಿ; ಪಾಪಿ.
**पतित्व**, पु. ಯಜಮಾನಿಕೆ, ಒಡೆತನ; ಪತಿತ್ವ.
**पतिया**, स्त्री. ಸಣ್ಣ ಕಾಗದ, ಚೀಟಿ.
**पतियाना**, सक्रि. ನಂಬು, ನೆಚ್ಚು.
**पतियारा**, पु. ನಂಬಿಕೆ, ನೆಚ್ಚಿಕೆ; ನಚ್ಚು ಮೆಚ್ಚು.
**पतिव्रत**, पु. ಪಾತಿವ್ರತ್ಯ, ಸತೀತ್ವ.
**पतिव्रता**, स्त्री. ಪತಿವ್ರತೆ, ಹದಿಬದೆ.
**पतीजना**, सक्रि. ನಂಬು, ನೆಚ್ಚು.
**पतील**, वि. ತೆಳುವಾದ, ಅಳ್ಳಕವಾದ; ಬಡಕಲ, ಸಣಕಲ. पु. ದೀಪದ ಬತ್ತಿ; ಸರಬತ್ತಿ, ಜಾವಿಗೆ ಪುರಿ.
**पतीलसोज़**, पु. ದೀಪದಾನಿ, ದೀಪದ ಕಂಬ.
**पतीला**, पु. **पतीली**, स्त्री. ತಪ್ಪಲೆ, ಬೋಸಿ, ಪಾತೇಲಿ.
**पतुरिया**, स्त्री. ವೇಶ್ಯೆ, ಸೂಳೆ; ನರ್ತಕಿ.
**पतोखा**, पु. ದೊನ್ನೆ; ಕೊಕ್ಕರೆ, ಬಕ.
**पतोखी**, स्त्री. ದೊನ್ನೆ; ತೆಂಗಿನ ಗರಿಯ ಕೊಡೆ ಅಥವಾ ಕೊಪ್ಪೆ, ಗೊಂಗಡಿ ಕೊಪ್ಪೆ.
**पतोह**, **पतोहू**, स्त्री. ಸೊಸೆ, ವಧು.
**पतौआ**, पु. ಪತ್ರ, ಪರ್ಣ, ಎಲೆ.
**पतौड़**, स्त्री. ಸೊಪ್ಪಿನ ಪಕೋಡ.
**पत्तर**, पु. ತಗಡು, ರೇಕು, ವರಕು; ಪತ್ರ
**पत्तल**, स्त्री. ಊಟದೆಲೆ, ಪತ್ರಾವಳಿ; ಎಲೆಯಲ್ಲಿ ಬಡಿಸಿದ ಪದಾರ್ಥ, ಎಡೆ.
**पत्ता**, पु. ಎಲೆ, ಪತ್ರ; ಕಿವಿಯ ಓಲೆ; ಕಾಗದದ ಹಾಳೆ. पत्ता होना = ಓಡಿ ಹೋಗು, ಹಾರಿಹೋಗು.
**पत्ती**, स्त्री. ಎಲೆ, ಸೊಪ್ಪು; ಭಂಗಿ ಸೊಪ್ಪು; ಪಾಲು, ಭಾಗ, ಹಿಸ್ಸೆ; ಹೂವಿನ ರೇಕು; ತಗಡು.
**पत्तीदार**, पु. ಪಾಲುಗಾರ, ಹಿಸ್ಸೆದಾರ.
**पत्थर**, पु. ಕಲ್ಲು; ಬಂಡೆ; ಹರಳು; ಶಿಲೆ; ಆನೆಕಲ್ಲು.
**पत्थरकला**, पु. ಚಕಮುಕಿ ಕಲ್ಲಿನಿಂದ ಹಾರಿಸುವ ತುಪಾಕಿ.
**पत्थरचटा**, पु. ಲೋಭಿ, ಜಿಪುಣ.
**पत्थरफूल**, पु. ಕಲ್ಲು ಹೂ, ಹಾವಸಿಗೆ, ಬೂಸನಿಗೆ.
**पत्नी**, स्त्री. ಪತ್ನಿ, ಹೆಂಡತಿ.
**पत्र**, पु. ಎಲೆ, ಪತ್ರ; ಓಲೆ, ಕಾಗದ, ಚೀಟಿ; ಹಾಳೆ; ಸಮಾಚಾರ ಪತ್ರ. पत्र-पत्रिकायें = ವೃತ್ತಪತ್ರಿಕೆಗಳು, ವರ್ತಮಾನ ಪತ್ರಗಳು.
**पत्रकार**, पु. ಪತ್ರಿಕೆಯ ಸಂಪಾದಕ; ಪತ್ರಿಕೋದ್ಯೋಗಿ.
**पत्रकारिता**, स्त्री. ಪತ್ರಿಕೋದ್ಯಮ.
**पत्रवाहक**, पु. ಓಲೆಕಾರ, ಹರಿಕಾರ.
**पत्रा**, पु. ಪಂಚಾಂಗ; ಹಾಳೆ.
**पत्रिका**, स्त्री. ಕಾಗದ, ಪತ್ರ; ಪತ್ರಿಕೆ.
**पत्री**, स्त्री. ಚಿಕ್ಕಪತ್ರ, ಪತ್ರಿಕೆ; ಕಾಗದ.
**पथ**, पु. ಪಥ, ಮಾರ್ಗ, ದಾರಿ; ಪಥ್ಯ.
**पथना**, अक्रि. ಬೆರಣಿ ತಟ್ಟಲ್ಪಡು.
**पथरकला**, पु. = पत्थरकला.
**पथरचट**, पु. ಪಾಷಾಣ ಭೇದಿಗಿಡ.
**पथराना**, अक्रि. ಜಡ್ಡುಗಟ್ಟು; ಕಲ್ಲಾ

ಗು; ಕಲ್ಲಿನಂತೆ ಗಟ್ಟಿಯಾಗು.

**पथरी,** स्त्री. ಕಲ್ಲು, ಹರಳು; ಕಲ್ಲುಗಡಿಗೆ, ಕಲ್ಲುಮರಿಗೆ; ಸಾಣೆಕಲ್ಲು, ಹದ ಕಲ್ಲು, ಮಸೆಗಲ್ಲು; ಅಶ್ಮರಿ ರೋಗ.

**पथरीला,** वि. ಕಲ್ಲುಗಳುಳ್ಳ, ಕಲ್ಲಿನ.

**पथवारी,** स्त्री. ಬೆರಣಿ ತಟ್ಟುವ ಸ್ಥಳ.

**पथिक,** पु. ಮಾರ್ಗಸ್ಥ, ಹಾದಿಗ, ದಾರಿಹೋಕ.

**पथ्य,** पु. ಪಥ್ಯವಾದ ಆಹಾರ, ಪಥ್ಯ.

**पद,** पु. ಪದ, ಸ್ಥಾನ, ನೆಲೆ; ಪದವಿ, ಅಂತಸ್ತು; ಅಡಿ, ಪಾದ; ಚರಣ.

**पदक,** पु. ಪದಕ, 'ಮೆಡಲು'; ಪದ, ಅಡಿ.

**पद-तल,** पु. ಅಂಗಾಲು.

**पद-च्युत,** वि. ನೆಲೆಗೆಟ್ಟ, ಸ್ಥಾನಭ್ರಷ್ಟ.

**पद-दलित,** वि. ತುಳಿಯಲ್ಪಟ್ಟ, ಮೆಟ್ಟಲ್ಪಟ್ಟ.

**पदवी,** स्त्री. ಪದವಿ, ಬಿರುದು, ಅಂತಸ್ತು.

**पदाति,** पु. ಕಾಲಾಳು; ಕಾಲಾಳಿನ ಪಡೆ.

**पदाधिकारी,** पु. ಪದವೀಧರ; ಅಡಳಿತಗಾರ.

**पदाना,** सक्रि. ಪೀಡಿಸು, ಸತಾಯಿಸು, ಕಾಡು.

**पदार्थ,** पु. ಪದಾರ್ಥ, ವಸ್ತು.

**पदिक,** पु. ಪದಕ; ಪದಕದ ಮಣಿ.

**पदीद,** वि. ತೆರೆದ, ಸ್ಪಷ್ಟವಾದ.

**पद्धति,** स्त्री. ಪದ್ಧತಿ, ರೂಢಿ, ವಾಡಿಕೆ.

**पद्य,** पु. ಪದ್ಯ, ಕವನ; ಛಂದಸ್ಸು.

**पधरना,** अक्रि. ಆಗಮಿಸು, ಬಿಜಯಮಾಡು.

**पधराना,** सक्रि. ಬಿಜಯಮಾಡಿಸು.

**पधरावनी,** स्त्री. ದೇವರನ್ನು ಬಿಜಯಮಾಡಿಸುವಿಕೆ.

**पधारना,** अक्रि. ಬಿಜಯಂಗೈಯು, ಬಿಜಯಮಾಡು, ದಯಮಾಡಿಸು, ಆಗಮಿಸು. सक्रि. ಬಿಜಯಮಾಡಿಸು.

**पन,** पु. ಪ್ರತಿಜ್ಞೆ, ಸಂಕಲ್ಪ; ಸ್ಥಿತಿ; ಸಿರಿ, ಸಂಪತ್ತು; ಆಟ; ಪಂದ್ಯ. प्रत्य. ಭಾವವಾಚಕ ಪ್ರತ್ಯಯ, -ತನ, -ತ್ವ. ಉದಾ:- लड़कपन = ಹುಡುಗತನ.

**पनकपड़ा,** पु. ಒದ್ದೆ ಬಟ್ಟೆ; ಒದ್ದೆ ಬಟ್ಟೆಯ ಪಟ್ಟಿ.

**पन-काल,** पु. ನೀರಿನ ಅಭಾವ; ಬರ, ಕ್ಷಾಮ.

**पनकौआ,** पु. ನೀರುಕೋಳಿ.

**पनगोटी,** स्त्री. ಸೀತಾಳಸಿಡುಬು, ಸೀತಾಳಿ.

**पनघट,** पु. ನದಿಯ ಘಟ್ಟ, ಕಡವು; ಭಾವಿ, ಕೊಳ.

**पनच, पनचक,** स्त्री. ಬಿಲ್ಲಿನ ಹಗ್ಗ; ಹೆದೆ.

**पनचक्की,** स्त्री. ನೀರಿನ ಸೆಳವಿನಿಂದ ತಿರುಗುವ ಬೀಸುವ ಯಂತ್ರ.

**पनडब्बा,** पु. ವೀಳ್ಯದೆಲೆಯ ಪೆಟ್ಟಿಗೆ.

**पनडुब्बा,** स्त्री. ನೀರಿನಲ್ಲಿ ಮುಳುಗುವವ; ನೀರುಮುಳುಗು ಹಕ್ಕಿ, ಬುಡಗನ ಹಕ್ಕಿ, ನೀರು ಕೋಗಿಲೆ.

**पनडुब्बी,** स्त्री. ಸಮುದ್ರದೊಳಗೆ ಮುಳುಗಿ ಸಂಚರಿಸುವ ಹಡಗು, ಮುಳುಗುನಾವೆ, ಅಂತರ್ಜಲ ನೌಕ.

**पनपना,** अक्रि. ಚಿಗುರು, ಕೊನರು; ದೊಡ್ಡದಾಗು, ಬೆಳೆ; ಪ್ರವರ್ಧಿಸು;

ಪುಷ್ಟನಾಗು; ಅಭ್ಯುದಯಕ್ಕೆ ಬರು, ಏಳಿಗೆಗೆ ಬರು.

**पनपाना**, ಸಕ್ರಿ. ಚಿಗುರಿಸು; ಬೆಳೆಸು; ಉಜ್ಜೀವಿಸು.

**पनबट्टा**, पु. ವೀಳೆಯದೆಲೆಯ ಡಬ್ಬಿ.

**पनभरा**, पु. ನೀರು ತುಂಬುವವ, ನೀರು ಹೊರುವವ.

**पनभरिन**, स्त्री. ನೀರು ತುಂಬುವವಳು, ನೀರು ಹೊರುವವಳು.

**पनवाड़ी**, पु. ವೀಳೆಯ-ದೆಲೆ ಮಾರುವವ; ವೀಳೆಯದೆಲೆಯ ತೋಟ.

**पनवारा**, पु. ಊಟದೆಲೆ, ಪತ್ರಾವಳಿ; ಎಲೆಯಲ್ಲಿ ಬಡಿಸಿದ ಪದಾರ್ಥ, ಎಡೆ.

**पनस**, पु. ಹಲಸಿನ ಹಣ್ಣು.

**पनसाखा**, पु. ಐದು ಮೂಗುಗಳುಳ್ಳ ದೀಪದ ಕಂಬ, ಸಮೆ.

**पनसाल, पनसाला**, स्त्री. ಅರವಟ್ಟಿಗೆ.

**पनसुइया, पनसोई**, स्त्री. ಸಣ್ಣ ದೋಣಿ, ಓಡ.

**पनसेरी**, स्त्री. ಪಂಚೇರು; ಪಂಚೇರಿನ ಬಟ್ಟು.

**पनहा**, वि. ಅಗಲವಾದ, ವಿಸ್ತೃತವಾದ. पु. ವಿಸ್ತಾರ, ಅಗಲ; ಪನ್ನ; ಗುಟ್ಟು, ಮರ್ಮ; ಪತ್ತೇದಾರ, ತುಬ್ಬುಗಾರ; ತುಬ್ಬು ಹೇಳುವುದಕ್ಕೆ ಕೊಡುವ ಹಣ.

**पनहरा, पनहारा**, पु. ನೀರು ಹೊರುವವ, ನೀರಿನವ.

**पनहारिन, पनहारी**, स्त्री. ನೀರು ಹೊರುವವಳು, ನೀರಿನವಳು.

**पनही**, पु. ಎಕ್ಕಡ, ಮೆಟ್ಟು, ಕೆರ.

**पना**, पु. ಪಾನೀಯ, ಪಾನಕ.

**पनातिन**, स्त्री. ಮರಿಮಗಳು.

**पनाती**, पु. ಪ್ರಪೌತ್ರ, ಮರಿಮಗ.

**पनाना**, सक्रि. ಹಾಲಿನ ಸೊರೆ ಬಿಡಿಸು.

**पनारा, पनाला**, पु. **पनाली**, स्त्री. ಪ್ರನಾಲಿಕೆ, ಕಾಲುವೆ; ಜಲದಾರಿ, ಚರಂಡಿ, ಮೊಹರಿ.

**पनाह**, स्त्री. ಅಭಯಸ್ಥಾನ, ಶರಣ; ಮರೆ, ಆಶ್ರಯ; ಉಳಿವು. पनाह लेना = ಮರೆ ಹೊಗು.

**पनाहगीर**, पु. ಮರೆಹೊಕ್ಕವ, ಶರಣಾಗತ, ಶರಣಾರ್ಥಿ.

**पनिया**, पु. ನೀರು, ನೀರು ಹಾವು. वि. ನೀರಿನ; ನೀರಿನಲ್ಲಿ ವಾಸಿಸುವ.

**पनियाना**, सक्रि. ನೀರು ಕಟ್ಟು, ನೀರು ಹಾಯಿಸು.

**पनियारा**, वि. ನೀರು ತುಂಬಿದ, ಜಲಮಯ; ನೀರು ಹಾಯಿಸಿದ.

**पनिहा**, वि. ನೀರಿನ; ನೀರು ಸೇರಿದ. पु. ಜಲಜಂತು; ನೀರು ಹಾವು; ಪತ್ತೆದಾರ, ತುಬ್ಬುಗಾರ.

**पनीर**, पु. ಹಾಲು ಖೋವಾ, ಹಾಲಿನ ಕೆನೆ, ಪನೀರು. पनीर चटाना = ಮುಖಸ್ತುತಿ ಮಾಡು.

**पनीरक**, स्त्री. ಸಸಿಮಡಿ, ಅಗೆಯಪಾತಿ.

**पनीरी**, स्त्री. ನಾಟಿ ಹಾಕಲು ಬೆಳೆದ ಸಸಿ, ನಾಟಿ, ಅಗೆ, ನೇಜಿ, ಅಗೆಯ ಪಾತಿ, ಸಸಿಮಡಿ, ಬಾಲನಾಕ್ಷೇತ್ರ.

**पनीला**, वि. ನೀರು ಸೇರಿದ; ಜಲಯುಕ್ತ.

**पनुआं**, वि. ರಸವಿಲ್ಲದ; ಸಪ್ಪೆ; ತಾರಿದ.

**पन्ना**, पु. ಹಾಳೆ; ಪುಟ, ಪಾನು, ಪೇಜು; ಬಂಗಾರದ ರೇಕು; ಪಚ್ಚೆ ಕಲ್ಲು, ಮರಕತ; ಜೋಡಿನ ಮೇಲ್ಭಾಗ; ಹುಣಸೆ ಹಣ್ಣಿನ ಗೊಜ್ಜು.

**पन्नी**, स्त्री. ಹಿತ್ತಾಳೆ ಅಥವಾ ತವರದ ತೆಳ್ಳಗಿರುವ ಹಾಳೆ, ವರಕು; ಗುನ್ನಾಂಪಟ್ಟಿ, ತವರದ ಬೇಗಡೆ; ಒಂದು ತೂಕದ ಪರಿಮಾಣ; ಒಂದು ಬಗೆ ಹುಲ್ಲು.

**पपड़ा**, पु. ಚಿಪ್ಪು, ಸಿಪ್ಪೆ, ತೊಗಟೆ; ಹೊರಿಕೆ, ಹುರುಕು, ಹಕ್ಕಳೆ.

**पपड़ाना**, अक्रि. ಚಿಪ್ಪುಗೊಳ್ಳು, ಹುರುಕುಗಟ್ಟು.

**पपड़ी**, स्त्री. ಸಿಪ್ಪೆ, ಚಿಪ್ಪು; ಹಕ್ಕಳೆ, ಹುರುಕು; ಒಂದು ಮಿಠಾಯಿ.

**पपनी**, स्त्री. ಕಣ್ಣಿನ ಕೂದಲು, ಎವೆ.

**पपीता**, पु. ಪಪ್ಪಾಯಿ ಹಣ್ಣು, ಪರಂಗಿ ಹಣ್ಣು.

**पपीहा**, पु. ಚಾತಕ ಪಕ್ಷಿ; ಪೀಪಿ.

**पपैया**, पु. ಸೀಟಿ, ಪೀಪಿ, ಸಿಳಿಪೆ; ಪಪ್ಪಾಯಿ ಹಣ್ಣು, ಪರಂಗಿ ಹಣ್ಣು, ಗೊಪ್ಪೆ.

**पपोटा**, पु. ಕಣ್ಣಿನ ರೆಪ್ಪೆ.

**पपोरना**, सक्रि. ಮಾಂಸಖಂಡವನ್ನು ತೋರಿಸುವಂತೆ ಕೈಯನ್ನು ನುಲಿಚು.

**पपोलना**, सक्रि. ಅಗಿ, ಜಿಗಿ, ಮೆಲ್ಲು.

**पयंबर**, पु. ದೂತ, ಪೈಗಂಬರ.

**पयान**, पु. ಹೋಗುವಿಕೆ, ಪಯಣ.

**पयाम**, पु. ವಾರ್ತೆ, ವರ್ತಮಾನ; ಸಂದೇಶ.

**पयार**, **पयाल**, पु. ಜೋಳದ ಕಡ್ಡಿ, ಸೊಪ್ಪೆ; ಸೂಪುರ, ಕಾಲಂದುಗೆ.

**परंतु**, अव्य. ಆದರೆ, ಪರಂತು.

**परंपरा**, स्त्री. ಕ್ರಮವಾಗಿ ಬಂದದ್ದು, ಪರಂಪರೆ; ವರಿಸೆ, ಸಾಲು.

**पर**, वि. ಪರ, ಇತರ; ಪರಾಯಿ; ಅನಂತರದ. अव्य. ಪರಂತು, ಆದರೆ. पु. ರೆಕ್ಕೆ, ಪುಕ್ಕ, ಗರಿ. प्रत्य. ಮೇಲೆ, -ಲ್ಲಿ.

**परई**, स्त्री. ಹಣತೆ, ದೀಪ.

**परकटा**, वि. ರೆಕ್ಕೆ ಕತ್ತರಿಸಿಹೋದ.

**परकना**, अक्रि. ರೂಢಿಯಾಗು, ಅಭ್ಯಸ್ತನಾಗು.

**परकाज**, पु. ಇತರರ ಕೆಲಸ, ಪರಕಾರ್ಯ

**परकाजी**, वि. ಪರೋಪಕಾರಿ.

**परकार**, पु. ಕೈವಾರ, 'ಕಂಪಾಸು'.

**परकारना**, सक्रि. ಕೈವಾರದಿಂದ ವರ್ತುಲ ಬರೆ, ಸುತ್ತುಗಟ್ಟು.

**परकाला**, पु. ಏಣಿ, ನಿಚ್ಚಣಿಕೆ; ಚೌಕಟ್ಟು, ದಾರವಂದ; ತುಂಡು, ಚೂರು, ತುಣಕು; ಕಿಡಿ; ಪಿಡುಗ.

**परकीय**, वि. ಇತರರ, ಅನ್ಯರ.

**परकीया**, स्त्री. ಬೇರೊಬ್ಬನ ಪತ್ನಿ ಅಥವಾ ಪ್ರೇಮಿಕೆ.

**परकोटा**, पु. ಕೋಟೆ, ಪ್ರಾಕಾರ, ಸುತ್ತಾಲೆ; ದಿಣ್ಣೆ, ಕಟ್ಟೆ.

**परख**, स्त्री. ಪರೀಕ್ಷೆ, ಪರಿಶೀಲನೆ, ವಿಮರ್ಶೆ.

**परखना**, सक्रि. ಪರೀಕ್ಷಿಸು, ಪರಿಶೀಲಿಸು, ವಿಮರ್ಶಿಸು; ನೋಡು.

**परखाई**, स्त्री. ಪರೀಕ್ಷಿಸುವಿಕೆ; ಪರೀಕ್ಷಿಸುವುದಕ್ಕೆ ಕೊಡುವ ಹಣ.

**परखाना,** सक्रि. ಪರೀಕ್ಷೆ ಮಾಡಿಸು.
**परख़ाश,** पु. ಯುದ್ಧ, ಜಗಳ; ಬಲಾತ್ಕಾರ.
**परखैया,** पु. ಪರೀಕ್ಷಿಸುವವ; ನೋಟಗಾರ, ಪರೀಕ್ಷಕ.
**परगन, परगना,** पु. ಹೋಬಳಿ, ಪರಗಣೆ
**परगाछा,** पु. ಬಂದಣಿಕೆ, ಬದನಿಕೆ.
**परगार,** पु. = परकार.
**परघटी, परघनी,** स्त्री. ಮೂಸೆ, ಕೂವೆ
**परचना,** अक्रि. ಪರಿಚಯವಾಗು; ಕೂಡು, ಸೇರು, ಪಳಗು; ರುಚಿ ಹತ್ತು, ಪಸಂದಾಗು.
**परचा,** पु. ಚೀಟಿ, ಚೀಟು, ಕಾಗದ; ಕಾಗದದ ತುಂಡು; ವೃತ್ತಪತ್ರಿಕೆ; ಪ್ರಶ್ನಪತ್ರ; ಪರಿಚಯ; ರುಜುವಾತು.
**परचाना,** सक्रि. ಪರಿಚಯ ಮಾಡಿಸು; ಆಕರ್ಷಿಸು; ರುಚಿ ಹುಟ್ಟಿಸು; ಮುಗ್ಧಗೊಳಿಸು; ಪಳಗಿಸು.
**परचून,** पु. ಹಿಟ್ಟು, ರವೆ; ಆಹಾರ ಪದಾರ್ಥ.
**परचूनिया, परचूनी,** पु. ಹಿಟ್ಟು ಮಾರುವವ, ಹಿಟ್ಟಿನಂಗಡಿಯವ.
**परछती,** स्त्री. ಮಣ್ಣಿನ ಗೋಡೆಯ ಮೇಲೆ ಹಾಕಿರುವ ಚಿಕ್ಕ ಛಾವಣಿ; ಹುಲ್ಲು ಹೊದಿಕೆ; ಚಪ್ಪರ, ಹಂದರ; ಅಟ್ಟ, ಮಂಚಿಕೆ.
**परछन,** पु. ನಿವಾಳಿ, ಆರತಿ.
**परछना,** सक्रि. ಇಳಿ ತೆಗೆ; ಆರತಿ ಎತ್ತು.
**परछा,** पु. ನೂಲು ಸುತ್ತುವ ಅರಟೆ.
**परछाई,** स्त्री. ಪ್ರತಿಚ್ಛಾಯೆ, ಪ್ರತಿಬಿಂಬ, ಪಡಿನೆಳಲು; ನೆಳಲು.
**परजा,** स्त्री. ಪ್ರಜೆ, ಆಶ್ರಿತ ಜನ.
**परजौट,** स्त्री. ನೆಲಕ್ಕೆ ಕೊಡುವ ಬಾಡಿಗೆ ಅಥವಾ ತೆರಿಗೆ, ಸ್ಥಳ ಬಾಡಿಗೆ.
**परतंत्र,** वि. ಪರಾಧೀನ, ಪರಾಶ್ರಿತ
**परत,** स्त्री. ಪದರು, ಪೊರೆ, ಹೋರೆ; ಮಡಿಕೆ, ನಿರಿಗೆ; ಹಂಚಿಕೆ, ಉಪಾಯ.
**परतल, परताल,** पु. ಕುದುರೆಯ ಕವುದಿ, ಕವುದಿ, ಸಬರ; ಹೊರೆ
**परतला,** पु. ಕತ್ತಿಯನ್ನು ಕಟ್ಟಿಕೊಳ್ಳುವ ಚಕ್ಕಳದ ಪಟ್ಟಿ; ಚರ್ಮದ ದವಾಲಿ.
**परताल,** स्त्री. = पड़ताल.
**परती,** स्त्री. = पड़ती.
**परतीत,** स्त्री. ನಂಬಿಕೆ, ನೆಚ್ಚಿಕೆ; ಭರವಸೆ.
**परथन,** पुं. = पलेथन.
**परदा,** पु. ತೆರೆ, ಪರದೆ, ತಡಿಕೆ; ಮರೆ, ಮುಸುಕು, ಬುರುಕಿ; ಗೋಷಾ.
**परदाज़,** पु. ಅಲಂಕಾರ, ಸಿಂಗಾರ.
**परदाज़ी,** स्त्री. ನೆರವೇರಿಸುವಿಕೆ, ಪೂರೈಸುವಿಕೆ.
**परदादा,** पु. ಪ್ರಪಿತಾಮಹ, ಮುತ್ತಜ್ಜ, ಮುತ್ತಾತ.
**परदादी,** स्त्री. ಪ್ರಪಿತಾಮಹಿ, ಮುತ್ತಜ್ಜಿ
**परदा-नशीन,** वि. ಬುರುಕಿಹಾಕಿದ, ಗೋಷಾ.
**परदेश, परदेस,** पु. ವಿದೇಶ, ದೇಶಾಂತರ.
**परदेसिन,** स्त्री. ಪರದೇಶದವಳು, ಪರದೇಶಿನಿ.
**परदेशी, परदेसी,** वि. ವಿದೇಶದ,

परदेशद, ವಿಲಾಯತಿ. पु. ದೇಶಾಂತರಿ, ಪರದೇಶಿ.
परनाना, पु. ತಾಯಿಯ ಪಿತಾಮಹ, ಮುತ್ತಜ್ಜ.
परनानी, स्त्री. ತಾಯಿಯ ಪಿತಾಮಹಿ, ಮುತ್ತಜ್ಜಿ.
परना, पु. ರೆಕ್ಕೆ, ಪುಕ್ಕ; ಎಲೆ, ಪರ್ಣ; ವೀಳ್ಯದೆಲೆ.
परनाम, पु. ಪ್ರಣಾಮ, ನಮಸ್ಕಾರ.
परनाला, पु. परनाली, स्त्री. ಜಲದಾರಿ, ಚರಂಡಿ, ಬಚ್ಚಲು, ಮೋಹರಿ.
परनी, स्त्री. ಕನ್ಯೆ, ಕುಮಾರಿ.
परपट, पु. ಸಮತಲ, ಪಾತಳಿ, ಬಯಲು
परपराना, अकि. =पड़पड़ाना.
परपार, पु. ಆಚೆಯ ದಡ.
परपैठ, पु. ಹುಂಡಿಯ ಎದುರು ಚೀಟು, ಪಾರ್ಚೀಟು.
परपोता, पु. ಪ್ರಪೌತ್ರ, ಮರಿಮಗ.
परपोती, स्त्री. ಮರಿಮಗಳು.
परबत, पु. ಪರ್ವತ, ಬೆಟ್ಟ.
परबती, वि. ಪರ್ವತದ; ಬೆಟ್ಟಗುಡ್ಡಗಳ.
परबस, वि. ಪರವಶನಾದ, ವಿವಶ.
परबाल, पु. ಹುಬ್ಬಿನ ಕೂದಲು.
परमट, पु. ಸುಂಕದ ಕಚೇರಿ, ಚಾವಡಿ; ಸುಂಕ, ಮಹಸೂಲು
परमल, पु. ಪರಿಮಳ, ಕಂಪು; ಜೋಳದ ಪುರಿ, ಅರಳು.
परमार, पु. ರಾಜಪುತ್ರರ ಒಂದು ಜಾತಿ.
परला, वि. ಆಚೆಯ, ಅತ್ತಣ; ಅತಿ.
परले सिरे का = ಅತ್ಯಂತ, ಅತಿಯಾದ; ದೊಡ್ಡ, ಭಾರಿ
परलोक, पु. ಪರಲೋಕ, ಸ್ವರ್ಗ.
परवर, वि. ಕಾಪಾಡಿಸುವವ, ರಕ್ಷಕ. (ಸಮಾಸದಲ್ಲಿ).
परवरदा, वि. ಸಾಕಿದ, ಪಾಲಿತ, ಪೋಷಿತ.
परवरदिगार, पु. ಸಂರಕ್ಷಕ; ಈಶ್ವರ.
परवरिश, स्त्री. ಪಾಲನೆ, ಪೋಷಣೆ, ಸಂರಕ್ಷಣೆ.
परवरी, स्त्री. ಸಾಕುವಿಕೆ, ಪಾಲನೆ.
परवल, पु. ಹುಚ್ಚು ಪಡವಲಕಾಯಿ.
परवा, स्त्री. ಪ್ರತಿಪತ್ತು, ಪಾಡ್ಯಮಿ; ಪಾಡ್ಯ; ಲಕ್ಷ್ಯ, ಪರವಾ, ಪರಿವೆ, ಚಿಂತೆ
परवाज़, स्त्री. ಉದಯ, ಅಭ್ಯುದಯ, ಏಳಿಗೆ.
परवान, पु. ನಾವೆಯ ಪಟಸ್ತಂಭದ ಅಡ್ಡಮರ; ಸತ್ಯ, ಪ್ರಮಾಣ.
परवानगी, स्त्री. ಅನುಮತಿ, ಅಪ್ಪಣೆ, ಅನುಜ್ಞೆ.
परवाना, पु. ಅನುಮತಿ ಪತ್ರ, ಅಪ್ಪಣೆ ಚೀಟಿ; ಪ್ರವೇಶ ಪತ್ರ; ಉಂಡಿಗೆ ಚೀಟು, ಪರವಾನೆ; ದೀಪದ ಹುಳು, ಶಲಭ, ಪತಂಗ.
परवाल, पु. ಎವೆಯ ಕೂದಲು ಬಿದ್ದು ಹೋಗುವ ಒಂದು ರೋಗ.
परवाह, स्त्री. ಚಿಂತೆ, ಲಕ್ಷ್ಯ, ಪರವಾ; ಇಷ್ಟ; ಭಯ.
परवीं, पु. ಕೃತ್ತಿಕಾ ನಕ್ಷತ್ರ.
परश, परस, पु. ಸ್ಪರ್ಶ; ಸ್ಪರ್ಶಮಣಿ.

**परसना,** सक्रि. ಸ್ಪರ್ಶಿಸು; ಬಡಿಸು.

**परसा,** पु. ಎಲೆಯಲ್ಲಿ ಬಡಿಸಿದ ಪದಾರ್ಥ, ಎಡೆ; ಪರಶು, ಕೊಡಲಿ.

**परसाना,** सक्रि. ಸ್ಪರ್ಶ ಮಾಡಿಸು, ಸೋಕಿಸು; ಬಡಿಸು.

**परसाल,** पु. ಕಳೆದ ವರ್ಷ, ಗತಾಬ್ದ.

**परसिया,** स्त्री. ಕುಡುಗೋಲು.

**परसों,** क्रिवि. ನಾಡದು, ನಾಳಿದ್ದು; ಮೊನ್ನೆ.

**परस्त,** वि. ಪೂಜಿಸುವವ, ಆಸಕ್ತ, ಉಪಾಸಕ; ಅಲಂಕರಿಸುವವ.

**परस्तिश,** स्त्री. ಪೂಜೆ, ಉಪಾಸನೆ, ಆರಾಧನೆ.

**परस्ती,** स्त्री. ಉಪಾಸನೆ.

**परस्पर,** पु. ಪರಸ್ಪರ, ಅನ್ಯೋನ್ಯ.

**परहेज़,** पु. ಪಥ್ಯ; ಸಂಯಮ.

**परहेज़गार, परहेज़ी,** वि. ಸಂಯಮಿ, ಜಿತೇಂದ್ರಿಯ.

**परहेज़गारी,** स्त्री. ಸಂಯಮ, ಇಂದ್ರಿಯನಿಗ್ರಹ.

**परांठा,** पु. = **परौठा.**

**परा,** पु. ಪಂಕ್ತಿ, ಸಾಲು.

**पराक्रम,** पु. ಪರಾಕ್ರಮ, ಶೌರ್ಯ.

**पराक्रमी,** वि. ಶೂರ; ವೀರ.

**पराग,** पु. ಹೂವಿನ ಧೂಳು, ಪರಾಗ.

**परागंदा,** वि. ಚದರಿದ; ಭಿನ್ನಭಿನ್ನವಾದ; ದಿಕ್ಕೆಟ್ಟ.

**पराजय,** स्त्री. ಪರಾಜಯ, ಸೋಲು.

**परात,** स्त्री. ಪರಾತ, ತಾಂಬಾಣ, ಹರಿವಾಣ.

**पराना,** अक्रि. ಓಡಿಹೋಗು, ಪಲಾಯನಮಾಡು.

**परामर्श,** पु. ಅಭಿಪ್ರಾಯ, ವಿಚಾರ; ಸಲಹೆ.

**पराया,** वि. ಅನ್ಯ, ಹೆರರ; ಪರಾಯಿ.

**पराल,** स्त्री. ಹುಲ್ಲುಕಡ್ಡಿ.

**परावन,** पु. ಗುಂಪು ಕಟ್ಟಿಕೊಂಡು ಓಡುವಿಕೆ, ಗುಳೆ ತೆಗೆಯುವಿಕೆ.

**परास्त,** वि ಪರಾಜಿತ, ಸೋತ.

**परिंद, परिंदा,** पु. ಪಕ್ಷಿ, ಹಕ್ಕಿ.

**परिखा,** स्त्री. ಕಂದಕ, ಅಗಳತೆ.

**परिचय,** पु. ಪರಿಚಯ, ಮೊಗಸರಿಕೆ.

**परिचित,** वि. ತಿಳಿದವ, ಪರಿಚಿತ.

**परिणत,** वि. ಪರಿಣಮಿಸಿದ परिणत होना=ಮುಗಿ, ಪರಿಸಮಾಪ್ತಿಯಾಗು.

**परिणाम,** पु. ಪರಿಣಾಮ, ಫಲಿತಾಂಶ.

**परित्याग,** पु. ಕೈಬಿಡುವಿಕೆ, ಪರಿತ್ಯಾಗ.

**परिधि,** स्त्री. ಸುತ್ತಳತೆ; ಪರಿಧಿ.

**परिपाटी,** स्त्री. ಪದ್ಧತಿ, ಸಂಪ್ರದಾಯ.

**परिपालन,** पु. ಪೋಷಣೆ, ಪಾಲನೆ.

**परिभ्रमण,** पु. ತಿರುಗುವಿಕೆ, ಸಂಚಾರ.

**परिलेख,** पु. ರೇಖಾಚಿತ್ರ, ಪರಿಲೇಖ.

**परिवर्तन,** पु. ತಿರುಗುವಿಕೆ, ಮಾರ್ಪಾಟು, ಅದಲುಬದಲು, ಪರಿವರ್ತನೆ.

**परिवा,** स्त्री. = **पड़वा.**

**परिवार,** पु. ಪರಿಜನ, ಕುಟುಂಬ; ಕುಲ, ಬುಡಕಟ್ಟು.

**परिशिष्ट,** पु. ಪರಿಶಿಷ್ಟ, ಪುರವಣಿ.

**परिश्रम,** पु. ಶ್ರಮ, ಪ್ರಯಾಸ; ಮೆಹನತ್ತು.

परिश्रमी, वि. ಶ್ರಮಪಡುವವ.

परिष्कार, पु. ಶುದ್ಧಿ, ಪರಿಷ್ಕಾರ; ಅಲಂಕಾರ; ಒಡವೆ, ನಗ, ಜವಾಹಿರಿ.

परिस्तान, पु. ಅಪ್ಸರೆಯರಿರುವ ಸ್ಥಳ, ಸುಂದರಿಯರಿರುವಸ್ಥಳ; ಯಕ್ಷಲೋಕ

परिहरना, सक्रि. ಬಿಡು, ಬಿಟ್ಟುಬಿಡು.

परिहार, पु. ಪರಿಹಾರ, ನಿವಾರಣೆ; ಹುಲ್ಲುಗಾವಲು, ಗೋಮಾಳ; ಸೋಡಿ, ಉತ್ತಾರ.

परिहास, पु. ಪರಿಹಾಸ, ಗೇಲಿ, ನಗಚಾಟಿಕೆ; ತಮಾಷೆ, ವಿನೋದ.

परी, स्त्री. ಅಪ್ಸರೆ, ದೇವಾಂಗನೆ; ಮೋಹಿನಿ, ಚೆಲುವೆ. परी पैकर = ಅಪ್ಸರೆಯಂಥ ಚೆಲುವಿನ; ಸುಂದರಿ; ಪ್ರಿಯೆ.

परीक्षक, पु. ಪರೀಕ್ಷಿಸುವವ, ಪರೀಕ್ಷಕ.

परीक्षा, स्त्री. ಪರೀಕ್ಷೆ; ಪರಿಶೀಲನೆ, ಪರಿಶೋಧನೆ, ವಿಮರ್ಶೆ. परीक्षा लेना = ಪರೀಕ್ಷೆ ಮಾಡು.

परीक्षार्थिनी, स्त्री. परीक्षार्थी, पु. ಪರೀಕ್ಷೆಗೆ ಕುಳಿತುಕೊಳ್ಳುವವರು, ಪರೀಕ್ಷೆ ಕೊಡುವವರು.

परीक्षित, वि. ಪರೀಕ್ಷಿತ, ಪರೀಕ್ಷಿಸಲ್ಪಟ್ಟ

परीज़ाद, वि. ಬಲು ಸುಂದರ; ಚೆಲುವ, ಚೆಲುವಿ.

परीबंद, पु. ಒಂದು ಆಭರಣ.

परीरू, पु. ಚೆಲುವ; ಮತ್ಸ್ಯಪುರುಷ.

परे, क्रिवि. ಅತ್ತ, ಆಚೆ; ದೂರವಾಗಿ; ಮೀರಿ, ಅತಿರಿಕ್ತವಾಗಿ.

परेई, स्त्री. ಪಾರಿವಾಳ, ಬೆಳವ.

परेखना, सक्रि. ಪರೀಕ್ಷಿಸು; ನೋಡು, ನಿರೀಕ್ಷಿಸು.

परेखा, पु. ಪರೀಕ್ಷೆ; ನಿರೀಕ್ಷಣೆ; ಪ್ರತೀತಿ; ಪಶ್ಚಾತ್ತಾಪ, ಖೇದ.

परेतना, सक्रि. ನೂಲುತೋಡು, ಸುತ್ತು

परेता, पु. ನೂಲು ತೋಡುವ ಕಡ್ಡಿ, ದಾರದ ಕಡ್ಡಿ.

परेवा, पु. ಪಾರಿವಾಳ, ಪಾರಾವತ, ಬೆಳವ; ಪತ್ರವಾಹಕ, ಹರಿಕಾರ.

परेशान, वि. ಗಲಿಬಿಲಿಯಾದ; ಪೇಚಾಡುವ, ವ್ಯಗ್ರ; ಕಂಗೆಟ್ಟ, ವಿಹ್ವಲ.

परेशानी, स्त्री. ಪೇಚಾಟ; ದಿಗಿಲು, ಸಿಡಿಮಿಡಿ; ವ್ಯಾಕುಲತೆ, ಕಂಗೆಡಿಕೆ, ಗೋಟಾಳ.

परेय, पु. ಸಾರು, ಹುಳಿ.

परोरना, सक्रि. ಮಂತ್ರ ಪಠಿಸು, ಮಂತ್ರ ಹಾಕು.

परोस, पु. = पड़ोस.

परोसना, सक्रि. ಬಡಿಸು, ಊಟಕ್ಕಿಡು.

परोसा, पु. ಎಲೆಯಲ್ಲಿ ಬಡಿಸಿದ ಊಟ, ಬಡಿಸಿದ ಎಲೆ, ಎಡೆ; ಒಬ್ಬನಿಗೆ ಬೇಕಾದ ಊಟದ ಸಾಮಾನು, ಉಲುಫೆ.

परोसैया, पु. ಬಡಿಸುವವ; ಪರಿಚಾರಕ.

परोहन, पु. ವಾಹನ, ಗಾಡಿ, ಬಂಡಿ.

परोवा, पु. ಕಪಿಲೆಯ ಬಾನೆ.

परौठा, पु. ತುಪ್ಪ ಸವರಿ ಬೇಯಿಸಿದ ಗೋಧಿಯ ರೊಟ್ಟಿ, ಚಪಾತಿ.

पर्चा, पु. = परचा.

पर्दा, पु. = परदा.

पर्पटी, स्त्री. ಪರ್ಪಟಿ, ಪಾಪಟಿ.

पर्व, पु. ಪರ್ವಕಾಲ, ಪುಣ್ಯದಿನ.

**पलंका**, पु. ದೂರದ ಸ್ಥಳ.

**पलंग**, पु. ಚಿರತೆ; ಪಲಂಗ, ಮಂಚ.

**पलंगड़ी**, स्त्री. ಸಣ್ಣ ಮಂಚ.

**पलंगपोश**, पु. ಮಂಚದಮೇಲೆ ಹೊದಿಸುವ ಬಟ್ಟೆ, ಚಟ್ಟು.

**पलंगिया**, स्त्री. ಚಿಕ್ಕ ಮಂಚ, ಪಲಂಗ.

**पलंगी**, स्त्री. ಕ್ರೂರ, ಹಿಂಸಕ.

**पल**, पु. ವಿಘಟಿಕೆ, ನಿಮಿಷ; ಜೋಳದ ಕಡ್ಡಿ, ಸೊಪ್ಪೆ; ತಕ್ಕಡಿ, ತ್ರಾಸು; ತಾರ ತಕ್ಕಡಿ, ಮೋಸ. स्त्री. ಕಣ್ಣು ರೆಪ್ಪೆ; ರೆಪ್ಪೆ ಬಡಿಯುವಷ್ಟು ಹೊತ್ತು, ಕ್ಷಣ.

**पलई**, स्त्री. ಶಾಖೆ, ಕೊಂಬೆ; ಪಕ್ಕೆ, ನೋವು, ಪಕ್ಕಶೂಲೆ.

**पलक**, स्त्री. ಎವೆ, ರೆಪ್ಪೆ; ರೆಪ್ಪೆ ಬಡಿಯುವಿಕೆ; ಕ್ಷಣ, ನಿಮಿಷ.

**पलका**, पु. ಮಂಚ.

**पलखन**, पु. ಪರ್ಕಟಿ ಮರ.

**पलटन**, पु. ಸೇನೆಯ ಒಂದು ಭಾಗ, ಪಟಾಲಂ, ಪಡೆ.

**पलटना**, अक्रि. ತಿರುಗು; ಮಗುಚಿ ಬೀಳು, ಪಲ್ಲಟಿಸು; ಹೊರಳು. सक्रि. ತಿರುಗಿಸು; ಮಗುಚು, ಬೋರಲಿಸು, ಹೊರಳಿಸು; ಬದಲಾಯಿಸು.

**पलटनिया**, पु. ಪಟಾಲಂನಲ್ಲಿ ಕೆಲಸ ಮಾಡುವವ.

**पलटा**, पु. ಹಿಂತಿರುಗುವಿಕೆ; ತಿರುಗಿ ಬೀಳುವಿಕೆ, ಪಲ್ಲಟ; ಬದಲು, ಪ್ರತಿಫಲ; ಹೊರಳೆ; ಮಗುಚುವ ಕೈ.

**पलटाना**, सक्रि. ತಿರುಗಿಸು, ಮಗುಚು, ಕವುಚು.

**पलटाव**, पु. ತಿರುಗುವಿಕೆ, ಪಲ್ಲಟ.

**पलटे**, क्रिवि. ಪ್ರತಿಯಾಗಿ, ಬದಲಿಗೆ.

**पलड़ा**, पु. ತಕ್ಕಡಿಯ ತಟ್ಟೆ.

**पलथी**, स्त्री. = पालथी.

**पलना**, अक्रि. ಸಾಕಲ್ಪಡು; ಪುಷ್ಟನಾಗು; ಬೆಳೆ, ಬಲಿ.

**पलनाना**, सक्रि. ಕುದುರೆಗೆ ಜೀನು ಹಾಕು.

**पलल**, पु. ಮಾಂಸ, ಬಾಡು.

**पलवा**, पु. ಅಂಗೈ, ಕುಡಿತೆ, ಬೊಗಸೆ. वि. ಪಳಗಿಸಿದ, ಸಾಕಿದ.

**पलवाना**, सक्रि. ಸಾಕು, ಸಲಹು; ಬೆಳೆಯಿಸು.

**पलवार**, पु. ದೋಣಿ, ಓಡ.

**पलवारी**, पु. ದೋಣಿಯವ, ಓಡಗಾರ.

**पलवैया**, पु. ಸಾಕುವವ, ಪಾಲಕ.

**पलस्तर**, पु. ಗಾರೆ ಕೆಲಸ, ಗಚ್ಚು; ಮೆತ್ತಿಗೆ, ಗಿಲಾವು, ಲೇಪ, ಲೆಪ್ಪ.

**पलहना**, अक्रि. ಚಿಗುರು, ಕೊನರು.

**पलहा**, पु. ಚಿಗುರು, ತಳಿರು.

**पला**, पु. ನಿಮಿಷ, ಕ್ಷಣ; ತಕ್ಕಡಿಯ ತಟ್ಟೆ; ಅಂಚು, ಸೆರಗು; ಸೌಟು.

**पलाई**, स्त्री. ಪಾಲನೆ, ಪೋಷಣೆ; ಸಂರಕ್ಷಣೆ; ಪೋಷಣೆಗಾಗಿ ಕೊಡುವ ಖರ್ಚು.

**पलान**, पु. ಜೀನು, ಹಲ್ಲಣ, ಕವುದಿ.

**पलानना**, सक्रि. ಜೀನು ಹಾಕು, ಹಲ್ಲಣ ಹಾಕು.

**पलाना**, अक्रि. ಪಲಾಯನ ಮಾಡು, ಓಡಿಹೋಗು. सक्रि. ಓಡಿಸು.

**पलानी**, स्त्री. ಹುಲ್ಲು ಹೊಚ್ಚುವಿಕೆ,

ಘಾವಣೆ ಹಾಕುವಿಕೆ; ಜೀನು, ಹಲ್ಲಣ.

पलायन, पु. ಓಡಿಹೋಗುವಿಕೆ, ಪಲಾಯನ.

पलायित, वि. ಓಡಿಹೋದ, ಪಲಾಯಿತ. पलायित होना = ಪಲಾಯನ ಮಾಡು, ಓಡಿಹೋಗು.

पलाल, पु. ಒಣ ಹುಲ್ಲು.

पलाश, पु. ಮುತ್ತುಗದ ಮರ.

पलास, पु. ಪಲಾಶ, ಮುತ್ತುಗ; ಡೇಗೆ, ಗಿಡುಗ.

पलिक्नी, स्त्री. ಮುದುಕಿ.

पली, स्त्री. ಚಮಚ, ಮಿಳ್ಳೆ.

पलीत, पु. ಭೂತ, ಪಿಶಾಚ.

पलीता, पु. पलीती, स्त्री. ಜಾಮಿಗೆ ಸುರಿ, ಸರಬತ್ತಿ; ಸುತ್ತು, ಸುರುಳಿ; ದೀಪದ ಬತ್ತಿ.

पलीद, वि. ಅಶುದ್ಧ; ಹೊಲಸಾದ; ನಿಕೃಷ್ಟ, ಹೇಯ.

पलीदी, स्त्री. ಗಲೀಜು; ಕೊಳೆ; ಮಲ.

पलुआ, पु. ಸಾಕುಪ್ರಾಣಿ.

पलेज़, स्त्री. ಕೆಕ್ಕರಿಕೆ ಅಥವಾ ಕಲ್ಲಂ ಗಡಿ ಹಣ್ಣಿನ ಹೊಲ.

पलेथन, पु. ರೊಟ್ಟಿ ಅಥವಾ ಹಪ್ಪಳ ಲಟ್ಟಿಸುವಾಗ ಹಚ್ಚಿಕೊಳ್ಳುವ ಅಕ್ಕಿಯ ಹಿಟ್ಟು; ಮತ್ತೆ ಒದಗುವ ಕಷ್ಟ ಅಥವಾ ನಷ್ಟ. पलेथन निकालना = ಚೆನ್ನಾಗಿ ಹೊಡೆ.

पलेना, सक्रि. ಬಿತ್ತನೆಗೆ ಮೊದಲು ನೀರು ಹಾಯಿಸು.

पलेव, पु. ಮಾಂಸದ ಸಾರು.

पलोटना, सक्रि. ಮೆತ್ತಗೆ ತುಳಿ, ಮೆಟ್ಟು; ತಿರುಗಿಸು, ಮಗುಚು. अक्रि. ತಳಮಳಿಸು, ಒದ್ದಾಡು; ಹಾರಾಡು.

पलोथन, पु. = पलेथन.

पलोसना, सक्रि. ತೊಳೆ, ಅಲುಬು; ಪುಸಲಾಯಿಸು, ಗೋರ್ಲೆ ಮಾಡು.

पलौठा, वि. = पहलौठा.

पल्लव, पु. ಚಿಗುರು, ತಳಿರು.

पल्ला, पु. ದೂರ, ಅಂತರ; ಅಂಚು, ಸೆರಗು; ಪಕ್ಕ, ಪಾರ್ಶ್ವ; ಮಡಿಕೆ, ಪಟಲ; ಕವಾಟ, ಪುಟೀಪು, ಪಡಕು; ಕತ್ತರಿಯ ಒಂದು ಅಲಗು; ತಕ್ಕಡಿಯ ತಟ್ಟೆ; ಮೂರು ಮಣದ ತೂಕ; ಧಾನ್ಯದ ಮೂಟೆ; ಸಹಾಯ, ಒತ್ತಾಸೆ. पल्ला छुड़ाना = ಬಿಡುಗಡೆ ಹೊಂದು.

पल्ली, स्त्री. ಕುಗ್ರಾಮ, ಹಳ್ಳಿ; ಗುಡಿಸಲು

पल्लीवाल, पु. ಹಳ್ಳಿಯವ; ಗ್ರಾಮಸ್ಥ; ಗಾಂಪ.

पल्लू, पु. ಅಂಚು, ಸೆರಗು; ಪಟ್ಟಿ, ಗೋಟು.

पल्लेदार, पु. ತೂಕಮಾಡುವವ; ಮೂಟೆ ಹೊರುವವ, ಹೊರೆಯಾಳು.

पल्लेदारी, स्त्री. ತೂಕ ಮಾಡುವಿಕೆ; ಹೊರುವಿಕೆ.

पवनी, स्त्री. ಅಗಸ, ನಾಯಿಂದ ಮೊದಲಾದ ಜಾತಿ.

पवर, पवरी, स्त्री. = पंवरी.

पवाँरना, सक्रि. ಎಸೆ, ಬಿಸಾಡು.

पवाई, स्त्री. ಕಾಲು ಸರಪಣಿ, ಗೊಲಸು, ರುಳಿ; ಒಂಟಿ ಎಕ್ಕಡ; ಬೀಸುವಕಲ್ಲಿನ

ಒಂದು ಭಾಗ, ಹೋಳು.

**पवाड़ा**, पु. ವೃತ್ತಾಂತ; ಕತೆ, ಪುರಾಣ; ಜಂಜಡ.

**पवाना**, सक्रि. ರೊಟ್ಟಿ ಬೇಯಿಸು; ಅಡಿಗೆ ಮಾಡು; ಊಡು, ತಿನ್ನಿಸು.

**पशम**, (स्त्री.) पु. ಒಂದು ಬಗೆ ನಯವಾದ ಉಣ್ಣೆ, ತುಪ್ಪಟ; ಶಂಟ, ಶಷ್ಪ; ನಿಕೃಷ್ಟವಸ್ತು.

**पशमक**, पु. ಒಂದು ಮಿಠಾಯಿ.

**पशमी, पशमीन**, वि. ಕೂದಲುಳ್ಳ; ತುಪ್ಪಟದ.

**पशमीना**, पु. पशम ಎಂಬ ನಯವಾದ ಉಣ್ಣೆ; ಇದರಿಂದ ಮಾಡಿದ ಬಟ್ಟೆ; ಪಟ್ಟೆ ಸೀರೆ.

**पशानी**, स्त्री. ತೂಕದ ಬಟ್ಟು, ಬಟ್ಟಿನ ಕಲ್ಲು; ಕಲ್ಲುಳಿ.

**पशु**, पु. ಪಶು, ಮೃಗ.

**पशेमान**, वि. ವ್ಯಥಿತ; ಪಶ್ಚಾತ್ತಾಪಪಡುವ; ಲಜ್ಜೆಪಡುವ.

**पशेमानी**, स्त्री. ಪಶ್ಚಾತ್ತಾಪ, ಖೇದ; ಲಜ್ಜೆ, ನಾಚಿಕೆ.

**पश्चात्**, क्रिवि. ತರುವಾಯ, ಬಳಿಕ.

**पश्चात्ताप**, पु. ಪಶ್ಚಾತ್ತಾಪ, ಖೇದ.

**पश्चात्तापी**, वि. ಪಶ್ಚಾತ್ತಾಪಪಡುವ, ವ್ಯಥಿತ.

**पश्म**, पु. = पशम.

**पसंघा**, पु. = पासंग.

**पसंद**, वि. ಇಷ್ಟವಾದ, ಒಪ್ಪುವ, ಪಸಂದಾದ. स्त्री. ಇಷ್ಟ, ಪಸಂದು; ಅಂಗೀಕಾರ; ಆಯ್ಕೆ.

**पसंदगी, पसंदीदगी**, स्त्री. ಅಭಿರುಚಿ, ಇಷ್ಟ, ಮೆಚ್ಚಿಕೆ.

**पसंदा**, पु. ಮಾಂಸದ ಚೂರು.

**पसंदीदा**, वि. ಪಸಂದಾದ, ಇಷ್ಟದ, ಮೆಚ್ಚಿಕೆಯ; ಒಪ್ಪಿದ; ವಾಂಛನೀಯ; ಆರಿಸಿದ, ಆಯ್ದ.

**पस**, क्रिवि. ಆದುದರಿಂದ, ಅತಃ; ಬಳಿಕ, ತರುವಾಯ; ಕೊನೆಗೆ, ಕಡೆಗೆ.
पसोपेश = ಹಿಂದು ಮುಂದು, ಊಹಾಪೋಹ.

**पसनी**, स्त्री. ಅನ್ನಪ್ರಾಶನ.

**पस-मांदगी**, स्त्री. ಹಿಂದುಳಿಯುವಿಕೆ.

**पस-मांदा**, वि. ಹಿಂದುಳಿದ; ಮಿಕ್ಕ; ಮಿಗಿತಾಯ, ಉಳಿತಾಯ.

**पसर**, पु. ಕರತಲ, ಅಂಜಲಿ; ಒಂದು ಅಂಗೈಯಲ್ಲಿ ಹಿಡಿಯುವಷ್ಟು, ಸೆಕೆ; ವಿಸ್ತಾರ, ಪ್ರಸಾರ.

**पसरना**, अक्रि. ಪ್ರಸರಿಸು, ವಿಸ್ತರಿಸು, ಹರಡು; ಕಾಲನ್ನು ಚಾಚಿ ಮಲಗು.

**पसरहट्टा**, पु. ಸಸ್ಸಾರಿ ಅಂಗಡಿ ಬೀದಿ.

**पसराना**, सक्रि. ಹರಡಿಸು, ಪ್ರಸರಿಸು.

**पसला**, पु. ಸುರಿಮಳೆ.

**पसली**, स्त्री. ಮಗ್ಗುಲಿನ ಎಲುಬು, ಪಕ್ಕೆಯೆಲುಬು.

**पसही**, स्त्री. ಒಂದು ಬಗೆ ಭತ್ತ.

**पसा**, पु. ಬೊಗಸೆ, ಅಂಜಲಿಪುಟ.

**पसाई**, स्त्री. ಒಂದು ಬಗೆ ಭತ್ತ.

**पसाना**, सक्रि. ಗಂಜಿ ಬಸಿ; ಸುರಿಸು.

**पसार**, पु. ಪ್ರಸಾರ, ಪ್ರಸರಣ, ವಿಸ್ತಾರ.

**पसारना**, सक्रि. ಪ್ರಸರಿಸು, ಹರಡು;

ಚಾಚು, ನೀಡು; ಒಪ್ಪಿಕೊ; ಬಯಸು.

पसारा, पु. ವಿಸ್ತರಣ, ವಿಸ್ತಾರ.

पसारी, पु. = पंसारी.

पसाव, पसावन, पु. ಗಂಜಿ,ರಬ್ಬಳಿಗೆ.

पसीज, पु. ಸಿದ್ಧತೆ. ತಯಾರಿ; ಯಾತ್ರೆಗೆ ಸಿದ್ಧತೆ; ಪಾಥೇಯ, ಬುತ್ತಿ.

पसीजना, अक्रि. ಕರಗು, ದ್ರವಿಸು; ಕನಿಕರಪಡು; ಬೆವರು ಸುರಿ.

पसीन, वि. ಹಿಂದಿನ, ಹಿಂಭಾಗದ; ಹೊಸ, ನವ.

पसीना, पु. ಬೆವರು, ಬೇವರು, ಸ್ವೇದ.

पसूज, स्त्री. ದಾಟು ಹೊಲಿಗೆ, ಟಾಕ.

पसूजना, सक्रि. ಟಾಕಹಾಕು, ಹೊಲಿ; ಅವಸರಪಡಿಸು.

पसेरी, स्त्री. = पंसेरी.

पसेव, पु. ರಸ, ಕಟ್ಟು, ಸಾರ; ಬೆವರು.

पसोपेश, पु. ಹಿಂದುಮುಂದು, ಪೂರ್ವಾಪರ; ಹಿಂಜರಿಯುವಿಕೆ, ನಸನಸೆ.

पस्त, वि. ಸೋತುಹೋದ; ದಣಿದ, ಕುಂದಿದ; ಕುಗ್ಗಿದ; ನೀಚ पस्त क़द =ಕುಗ್ಗಿದ; ಕುಳ್ಳ, ಗಿಡ್ಡ.

पस्तहिम्मत, वि. ಧೈರ್ಯಗುಂದಿದ.

पस्ती, स्त्री. ತಗ್ಗು, ಕುಂದು; ಕೀಳುತನ, ನೀಚತನ; ಅಭಾವ.

पहँसुल, स्त्री. ಈಳಿಗೆ ಮಣೆ.

पह, स्त्री. ಪ್ರಾತಃಕಾಲ, ಮುಂಜಾನೆ.

पहचनवाना, सक्रि. पहचानना का प्रे.रूप.

पहचान, स्त्री. ಗುರುತು ಹಿಡಿಯುವಿಕೆ, ಗುರುತರಿಕೆ; ನೆಪ್ಪು, ಅಭಿಜ್ಞಾನ; ಗುರುತು; ಪರಿಚಯ, ಮೊಗವರಿಕೆ.

पहचानना, सक्रि. ಗುರುತು ಹಿಡಿ, ಗುರುತಿಸು; ಭೇದವನ್ನರಿ.

पहटना, सक्रि. ಹಿಮ್ಮೆಟ್ಟಿಸು; ಅಟ್ಟು, ತರುಬು.

पहटा, पु. ಹಲುಬೆ, ಕುಂಟೆ.

पहनना, सक्रि. ಧರಿಸು, ಉಡು, ತೊಡು.

पहनवाना, सक्रि. पहनाना का प्रे.रूप

पहनाई, स्त्री. ಧರಿಸುವಿಕೆ, ಉಡುವಿಕೆ, ಉಡಿಸುವುದಕ್ಕೆ ಕೊಡುವ ಕೂಲಿ; ಅಗಲ, ಪನ್ನ.

पहनाना, सक्रि. ಉಡಿಸು, ತೊಡಿಸು, ಹೊದಿಸು.

पहनावन, पु. ಮದುವೆಯಲ್ಲಿ ನೆಂಟರಿಷ್ಟರಿಗೆ ಉಪಾಯನವಾಗಿ ಕೊಡುವ ಬಟ್ಟೆಬರೆ, ಉಡುಗೊರೆ.

पहनाव, पहनावा, पु. ಉಡಿಗೆ ತೊಡಿಗೆ; ಉಡುಪು, ಪೋಷಾಕು.

पहपट, स्त्री. ಒಂದು ಬಗೆ ಹಾಡು; ಗದ್ದಲ, ಗಲಾಟೆ; ಅಪವಾದ; ಮೋಸ, ಕಪಟ.

पहपटबाज़, वि. ಗಲಾಟೆಖೋರ; ಮೋಸಗಾರ.

पहर, पु. ಪ್ರಹರ, ಜಾವ; ಮೂರು ಗಂಟೆಗಳ ಕಾಲ, ೭॥ ಘಳಿಗೆ.

पहरना, सक्रि. = पहनना.

पहरा, पु. ಕಾವಲು, ಪಾರಾ, ಪಹರೆ; ಪ್ರಹರಿ, ಪಹರೆಯುವ; ಪಹರೆ ತಿರುಗುವಿಕೆ; ಬಂಧನ, ಸೆರೆ; ಆಗಮನದ ಫಲ.

पहराना, सक्रि. = पहनना.

**पहरावनी, पहरौनी,** स्त्री. ವಸ್ತ್ರ ಉಡಿಸುವವಳು; ಸನ್ಮಾನವಾಗಿ ಕೊಟ್ಟ ಉಡಿಗೆತೊಡಿಗೆ, ಉಡುಗೊರೆ.

**पहरी, पहरुआ, पहरू, पहरेदार,** पु. ಪ್ರಹರಿ, ಪಹರೆಯುವ, ಕಾವಲುಗಾರ.

**पहल,** पु. ಜಡೆ ಕಟ್ಟಿದ ಹತ್ತಿ ಅಥವಾ ಉಣ್ಣೆ, ಗಂಟು ಕಟ್ಟಿದ ಹತ್ತಿ; ಪಕ್ಕ, ಮಗ್ಗುಲು, ಪಾರ್ಶ್ವ; ಅಳ್ಳೆ; ಪೊರೆ; ಪ್ರಾರಂಭ, ಮೊದಲು.

**पहलदार,** वि. ಮಗ್ಗುಲುಗಳುಳ್ಳ, ಪಾರ್ಶ್ವಗಳುಳ್ಳ.

**पहलवान,** पु. ಶೂರ, ವೀರ; ಮಲ್ಲ, ಜಟ್ಟಿ, ಪೈಲ್ವಾನ್.

**पहलवानी,** स्त्री. ಶೌರ್ಯ; ಜಟ್ಟಿಯ ಕೆಲಸ; ಪೈಲವಾನುತನ.

**पहलवी,** स्त्री. ಪಾರಸೀಕ ದೇಶದ ಪ್ರಾಚೀನ ಭಾಷೆ.

**पहला,** वि. ಮೊದಲನೆಯ, ಒಂದನೆಯ, ಪ್ರಥಮ; ಮೊದಲಿನ; ಹಿಂದಿನ.

**पहलू,** पु. ಮಗ್ಗುಲು; ಪಕ್ಕೆ, ಅಳ್ಳೆ; ಪಾರ್ಶ್ವ, ಕೆಲ; ಉಪರಿಭಾಗ, ಹೊರಮೈ; ಸಂದೃಷ್ಟಿ, ಮುಖ.

**पहलूदार,** वि. ಪಾರ್ಶ್ವಗಳುಳ್ಳ; ಬಹುಮುಖವಾದ; ಅಗಲವಾದ.

**पहले,** क्रिवि. ಮೊದಲು, ಮುನ್ನ, ಪೂರ್ವದಲ್ಲಿ. पहले पहल = ಮೊಟ್ಟಮೊದಲು.

**पहलौठा,** वि. ಪ್ರಥಮ ಗರ್ಭದಲ್ಲಿ ಜನಿಸಿದ, ಚೊಚ್ಚಲು.

**पहलौठी,** स्त्री. ಪ್ರಥಮ ಗರ್ಭ, ಚೊಚ್ಚಲ ಬಸುರು.

**पहाड़,** पु. ಬೆಟ್ಟ, ಪರ್ವತ; ಬಂಡೆ.

**पहाड़ा,** पु. ಮಗ್ಗಿಕೋಷ್ಟಕ, ಪಟ್ಟಿ.

**पहाड़िया, पहाड़ी,** स्त्री. ಬೆಟ್ಟ, ಗುಡ್ಡ. वि. ಬೆಟ್ಟದ, ಬೆಟ್ಟಗಳುಳ್ಳ.

**पहिनना, पहिरना,** सक्रि. = पहनना.

**पहिना,** पु. ಒಂದು ಬಗೆ ಮೀನು.

**पहिया,** पु. ಚಕ್ರ, ಗಾಲಿ.

**पहिराव, पहिरावा,** पु. ಬಟ್ಟೆ ಬರೆ ಉಡಿಗೆ ತೊಡಿಗೆ.

**पहिला,** वि. = पहला.

**पहुंच,** स्त्री. ತಲಪುವಿಕೆ, ಮುಟ್ಟುವಿಕೆ, ಪ್ರವೇಶ; ನಿಲುಕು, ಎಟಕು; ಅಳವು; ಬುದ್ಧಿ ವಿಸ್ತಾರ, ಗ್ರಾಹಕ ಶಕ್ತಿ; ತಲುಪಿದುದಕ್ಕೆ ಸೂಚನೆ, ರಸೀತಿ.

**पहुंचना,** अक्रि. ಮುಟ್ಟು, ಸೇರು, ತಲಪು; ಒದಗು; ಎಟಕು, ಅಂದು, ನಿಲುಕು; ಪ್ರವೇಶಿಸು; ಗ್ರಹಿಸು, ತಿಳಿ.

**पहुंचा,** पु. ಮಣಿಕಟ್ಟು, ಕೈಹರದು.

**पहुंचाना,** सक्रि. ಮುಟ್ಟಿಸು, ತಲಪಿಸು; ಒದಗಿಸು, ಎಟಕಿಸು; ಪ್ರವೇಶ ಮಾಡಿಸು; ಕಳುಹಿಸಿಕೊಡು.

**पहुंची,** स्त्री. ಮಣಿಕಟ್ಟಿನಲ್ಲಿ ಧರಿಸುವ ಆಭರಣ, ಪವುಂಚಿ, ಪೋಚಿ.

**पहुड़ना,** अक्रि. ಮಲಗು, ವಿಶ್ರಮಿಸು.

**पहुना,** पु. ಅತಿಥಿ, ಬಿದ್ದಿನ; ಅಳಿಯ.

**पहुनाई,** स्त्री. ಆತಿಥ್ಯ, ಅತಿಥಿಸತ್ಕಾರ.

**पहेली,** स्त्री. ಸಮಸ್ಯೆ, ಒಗಟು, ಒಗಟ್ಟು; ಪ್ರಹೇಲಿಕೆ.

**पह्लवी,** स्त्री. = पहलवी.

**पाँईंवाग़**, पु. ಅಂತಃಪುರದ ಉದ್ಯಾನ.
**पांगा**, पु. ಸಮುದ್ರದ ಲವಣ, ಕಡಲುಪ್ಪು.
**पांच**, वि. ಪಂಚ, ಐದು. दस पांच =ಹತ್ತಾರು.
**पांचा**, पु. ಗೋರುಮಣೆ.
**पांचवीं**, पांचैं, स्त्री. ಪಂಚಮಿ ತಿಥಿ.
**पांजना**, सक्रि. ಬೆಸಗೆ ಹಾಕು, ಬೆಸಿ.
**पांजर**, पु. ಪಕ್ಕೆ, ಪಕ್ಕೆಯೆಲುಬು.
**पांजी**, स्त्री. ಹಾಯ್ಗಡ, ಕಾಲುಹೊಳೆ.
**पांडरी**, वि. ಸುಣ್ಣ ಬೆರತ (ನೆಲ).
**पांडित्य**, पु. ಪಾಂಡಿತ್ಯ, ವಿದ್ವತ್ತು.
**पांडुलिपि**, पांडुलेख, पु. ಕರಡುಪ್ರತಿ, ಹಸ್ತಪ್ರತಿ; ಮಸೂದೆ.
**पांडे**, पु. ಪಂಡಿತ, ಉಪಾಧ್ಯಾಯ; ಬ್ರಾಹ್ಮಣರ ಒಂದು ಬಿರುದು; ಅಡಿಗೆ ಮಾಡುವ ಬ್ರಾಹ್ಮಣ.
**पांत**, स्त्री. ಪಂಕ್ತಿ, ವರಸೆ; ಅಂತಸ್ತು. जात पांत=ಜಾತಿಮತ, ಕುಲಗೋತ್ರ.
**पांतर**, पु. ನಿರ್ಜನಸ್ಥಾನ, ವನಾಂತರ.
**पांति**, स्त्री. ಪಂಕ್ತಿ, ಸಾಲು; ಕೂಟ, ಸಮುದಾಯ; ಪಾಂಕ್ತೇಯ; ಹಾರ; ಮಾಲೆ.
**पाँयँ**, पु. ಪಾದ, ಅಡಿ, ಕಾಲು.
**पाँयँचा**, पु. ಪಾಯಖಾನೆ ಗುಂಡಿಯಲ್ಲಿ ಕಾಲಿಡುವ ಕಲ್ಲು; ಷರಾಯಿಯ ಕಾಲುಗಳು, ಷರಾಯಿಯ ಚಾವು.
**पाँयँता**, पु. ಮಂಚದ ಕಾಲುಕಡೆ.
**पाँव**, पु. ಪಾದ, ಕಾಲು, ಅಡಿ; ತಳಹದಿ, ಪಾಯ, ಅಸ್ತಿವಾರ. पाँव पड़ना = ಕಾಲಿಗೆ ಬೀಳು, ಅಡಿಗೆರಗು.
**पाँवड़ा**, पु. ದೊಡ್ಡವರು ನಡೆಯುವಾಗ ದಾರಿಯಲ್ಲಿ ಹಾಸುವ ವಸ್ತ್ರ, ನಡೆಮಡಿ.
**पाँवड़ी**, पाँवरी, स्त्री. ಪಾವಟಿಗೆ, ಸೋಪಾನ, ಮೆಟ್ಟಿಲು; ಎಕ್ಕಡ, ಪಾದರಕ್ಷೆ, ಮೆಟ್ಟು; ಬಾಗಿಲು.
**पांवदान**, पु. ಕಾಲಿಡುವ ಸ್ಥಳ; ಗಾಡಿ ಹತ್ತುವಾಗ ಕಾಲಿಡಲು ಇರಿಸಿದ ಕಬ್ಬಿಣದ ತಗಡು, ಪಾದ ಪೀಠ.
**पांस**, पु. ಗೊಬ್ಬರ, ಗೋಡು.
**पांसना**, सक्रि. ಗೊಬ್ಬರ ಹಾಕು.
**पांसा**, पु. ಪಾಚಿಕೆ, ದಾಳ, ನೆತ್ತ.
**पांसारी**, पु. ಗಂದಿಗೆ ಅಂಗಡಿಯವ.
**पांसी**, स्त्री. ಬಲೆಯ ಚೀಲ.
**पांसु**, पांसुरी, स्त्री. ಪಕ್ಕೆಯೆಲುಬು.
**पा**, पु. ಪಾದ, ಕಾಲು, ಅಡಿ.
**पाइरा**, पु. ಅಂಕೋಲೆ, ರಿಕಾಬು, ಅಂಗವಡಿ.
**पाई**, पु. ಪಾದ, ಕಾಲು; ಕಾಲು ದುಡ್ಡು, ಕಾಸು, ಪೈ; ಕಾಲು ಭಾಗ, ಹಾಗ; ಹಾಗದ ಗುರುತು ಅಂದರೆ ।; ಹಿಂದೀ ಕಾಗುಣಿತದಲ್ಲಿ ಇಳಿಯ ಚಿಹ್ನೆ, ।; ಸುತ್ತುವಿಕೆ, ಸುಳಿದಾಡುವಿಕೆ; ಒಂದು ಬಗೆ ಹುಳು.
**पाए**, पु. ಚಾಲಗೇಣಿಗಾರ, ರೈತ.
**पाक**, वि. ಪವಿತ್ರ, ಪುನೀತ; ಸ್ವಚ್ಛ, ಚೊಕ್ಕಟ. पु. ಪಾಕ, ಅಡಿಗೆ.
**पाकठ**, वि. ನುರಿತ, ಅನುಭವವುಳ್ಳ; ಬಲಿಷ್ಠ.

**पाकदामन**, वि. ಪತಿವ್ರತೆ, ಸತಿ.
**पाकदामनी**, स्त्री. ಪಾತಿವ್ರತ್ಯ, ಸತೀತ್ವ.
**पाकर**, पु. ಸರ್ಕಟಿ ಮರ.
**पाक-रौ**, स्त्री. ಒಳ್ಳೇ ನಡತೆ,ಸದ್ವರ್ತನೆ.
**पाका**, वि. = पक्का.
**पाकी**, स्त्री. ಪವಿತ್ರತೆ, ಶುಚಿ.
**पाकीज़गी**, स्त्री. ಸ್ವಚ್ಛತೆ, ನೈರ್ಮಲ್ಯ; ಪವಿತ್ರತೆ.
**पाकीज़ा**, वि. ಶುದ್ಧ; ನಿರ್ಮಲ, ಸ್ವಚ್ಛ; ಪವಿತ್ರ.
**पाखंड**, पु. ಕಪಟಾಚಾರ, ಬೂಟಾಟಿಕೆ.
**पाखंडी**, वि. ಕಪಟಿ, ವೇಷಧಾರಿ.
**पाख**, पु. ಪಕ್ಷ. ೧೫ ದಿನಸ; ಬೆಂತೊಲೆ ಯಿಡುವ ಗೋಡೆಯ ಭಾಗ.
**पाखर**, पु. ಆನೆ ಅಥವಾ ಕುದುರೆಗಳಿಗೆ ಧರಿಸುವ ಕಬ್ಬಿಣದ ಕವಚ.
**पाखा**, पु. ಮೂಲೆ, ಕೊನೆ; ಬೆಂತೊಲೆ ಯಿಡುವ ಗೋಡೆಯ ಭಾಗ.
**पाख़ाना**, पु. ಕಕ್ಕಸು, ಕಾಲುಗುಣಿ, ಮೊಟ್ಟುಗುಣಿ; ಪಾಯಖಾನೆ, ಮಲ
**पाग**, स्त्री. ಪಾಗು, ಪೇಟಾ, ರುಮಾಲು, ಮುಂಡಾಸು. पु. ಸಕ್ಕರೆ ಪಾಕ, "ಕ್ಷೀರ"; ಪಾಕದಲ್ಲಿ ತಯಾರಾದ ಭಕ್ಷ್ಯ, ಅಥವಾ ಔಷಧ, ಮುರಬ್ಬ.
**पागना**, सक्रि. ಪಾಕದಲ್ಲಿ ಅದ್ದು. अक्रि. ಅನುರಕ್ತನಾಗು.
**पागल**, वि. ಹುಚ್ಚ, ಮರುಳ; ಪೆದ್ದ.
**पागलख़ाना**, पु. ಹುಚ್ಚಾಸ್ಪತ್ರೆ, ಮರುಳರ ಆಸ್ಪತ್ರೆ.
**पागलपन**, पु. ಹುಚ್ಚುತನ, ಹುಚ್ಚು, ಪೈತ್ಯ, ಹೇಕುಳಿ, ಮರುಳು.
**पागा**, पु. ಕುದುರೆ ಪಟಾಲು, ರಾವು... ಪಡೆ. वि. ಪಕ್ವವಾದ, ಪಕ್ವಾದ.
**पागुर**, पु. ಮೆಲುಕು ಹಾಕುವಿಕೆ; ಮೆಲುಕು, ಚರ್ವಣ.
**पागुराना**, सक्रि. = पगुराना.
**पाचक**, वि. ಅಡಿಗೆ ಮಾಡುವ; ಪಚನ ಮಾಡುವ, ಜೀರ್ಣಕಾರಿ.
**पाचन**, पु. ಅಡಿಗೆ ಮಾಡುವಿಕೆ; ಜೀರ್ಣಿಸುವಿಕೆ, ಅರಗಿಸುವಿಕೆ.
**पाछ**, पु. ಮರಗಿಡಗಳ ಅಥವಾ ಶರೀರದ ಚರ್ಮವನ್ನು ಸ್ವಲ್ಪವಾಗಿ ಸೀಳುವಿಕೆ, ಮರದ ಹಾಲು ಅಥವಾ ಸೊನೆ ಸುರಿಸುವಿಕೆ; ಕಚ್ಚು, ಗಾಯ; ಹಿಂಗಾಲೇಟು.
**पाछना**, सक्रि. ಸೀಳು, ಸಿಗಿ; ಸೀಳಿ ರಕ್ತ ತೆಗೆ.
**पाज**, पु. = पांजर.
**पाजामा**, पु. ಷರಾಯಿ, ಇಜಾರು, ಪಾಯಿಜಾಮೆ, ಚಲ್ಲಣ.
**पाजी**, वि. ದುಷ್ಟ, ಪುಂಡ; ನೀಚ, ಬಿಕನಾಸಿ, ಪಾಜಿ.
**पाजीपन**, पु. ದುಷ್ಟತನ, ನೀಚತನ.
**पाज़ेब**, पु. ನೂಪುರ, ಅಂದುಗೆ.
**पाट**, पु. ರೇಷ್ಮೆ, ಪಟ್ಟೆವಸ್ತ್ರ; ಸಣಬು, ಪುಂಡಿನಾರು, ಗೋಣಿನಾರು; ನಾರು ಮಡಿ; ಸಿಂಹಾಸನ, ಪಟ್ಟವಣೆ,ಗದ್ದುಗೆ; ಪೀಠ, ಮಣೆ; ಹಾಸುಗಲ್ಲು, ಚಪ್ಪಡಿ ಕಲ್ಲು; ಬೀಸುವ ಕಲ್ಲು; ಬಾಗಿಲಿನ ಕದ; ಧಾನ್ಯದ ಚೀಲ, ಮೂಟೆ; ಪಾಟಿ ಮಡಿ; ಭಾವಿಯ ಸುತ್ತಲೂ ಕಟ್ಟಿ...

ಽಗಲಿ; ಅಗಲ, ವಿಸ್ತಾರ.

पाटन, पु. ಹುಲ್ಲು ಹೊಚ್ಚುವಿಕೆ, ಹೊದಿಸುವಿಕೆ; ಮುಚ್ಚುವಿಕೆ; ಮಾಳಿಗೆ, ಮಹಡಿ, ಮುಚ್ಚು, ಉಪ್ಪರಿಗೆ; ವಿಷ ಇಳಿಸುವ ಮಂತ್ರ; ಪಟ್ಟಣ.

पाटना, सक्रि. ಹೂಳು, ಮುಚ್ಚು; ಛಾವಣಿ ಹಾಕು, ಹುಲ್ಲು ಹೊಚ್ಚು; ನೀರು ಹಾಯಿಸು; ಕೊಡು, ತೆರು.

पाटल, पु. ಗುಲಾಬಿ ಬಣ್ಣ.

पाटला, पु. ಬಂಗಾರ, ಅಪರಂಜಿ.

पाटव, पु. ದಕ್ಷತೆ, ಕುಶಲತೆ; ದಾರ್ಢ್ಯ.

पाटवी, वि. ಪಟ್ಟದ ರಾಣಿಗೆ ಹುಟ್ಟಿದವ.

पाटा, पु. ಪೀಠ, ಮಣೆ, ಆಸನ.

पाटी, स्त्री. ಪರಿಪಾಟಿ, ಪದ್ಧತಿ; ಹಲಗೆ; ಕಪ್ಪು ಹಲಗೆ; ಪಾಠ; ಚಪ್ಪಡಿ ಕಲ್ಲು; ದೋಣಿ ಹೆಂಚು, ಓಡು; ಚಾಪೆ; ಮಂಚದ ಪಟ್ಟಿ; ಬೈತಲೆ; ಒಂದು ಸಿಹಿ ತಿಂಡಿ.

पाटूनी, पु. ದೋಣಿಗಾರ, ಅಂಬಿಗ.

पाठ, पु. ಪಾಠ, ಪಠನ. स्त्री. ಪಾಠಶಾಲೆ.

पाठक, पु. ಓದುವವ, ಪಾಠಕ; ಶಿಕ್ಷಕ.

पाठकी, स्त्री. ಶಿಕ್ಷಕಿ.

पाठशाला, पु. ಪಾಠಶಾಲೆ, ವಿದ್ಯಾಲಯ.

पाठा, वि. ಕೊಬ್ಬಿದ, ಬಲಿತ, ದಡುವ.

पाठ्य, वि. ಓದತಕ್ಕ; ಓದಬೇಕಾದ.

पाड़, पु. ಧೋತ್ರದ ಅಂಚು, ಕರೆ; ಭಾವಿಯ ಚೌಕಟ್ಟು, ಕಟ್ಟೆ; ಅಟ್ಟ, ಮಂಚಿಗೆ; ಗಲ್ಲಿನ ಅಟ್ಟ, ಗಲ್ಲುಮರ.

पाड़ना, सक्रि. ಬೀಳಿಸು; ಈಡೇರಿಸು, ಸಾಗಿಸು; ಮುಗಿಸು.

पाड़वा, पु. ಹುಣ್ಣಿಮೆ.

पाड़ा, पु. ಮೊಹಲ್ಲೆ, ಪೇಟೆ; ಗದ್ದೆ ಬದು, ತೆವರು; ಎಮ್ಮೆ ಕರು.

पाढ़, पु. ಪೀಠ, ಮಣೆ; ಅಟ್ಟ, ಮಂಚಿಗೆ.

पाढ़त, स्त्री. ಓದುವಿಕೆ; ಮಂತ್ರಪಠನ.

पाढर, पाढल, पु. ಪಾದರಿ ಮರ.

पाढ़ा, पु. ಸಾರಂಗ, ಎರಳೆ.

पाढ़ी, स्त्री. ಹೊಳೆ ದಾಟುವಿಕೆ.

पाणि, पु. ಕೈ, ಪಾಣಿ.

पाणिग्रहण, पु. ಕೈಹಿಡಿಯುವಿಕೆ, ಪಾಣಿಗ್ರಹಣ, ಮದುವೆ.

पात, पु. ಬೀಳುವಿಕೆ, ಪತನ; ಪತ್ರ, ಎಲೆ, ತೊಪ್ಪಲು; ಓಲೆ, ಬೆಂಡೋಲೆ.

पातकी, पु. ಪಾಪಿ, ಪಾತಕಿ.

पातगोभी, स्त्री. ಕೋಸುಗೆಡ್ಡೆ.

पातर, स्त्री. ಎಲೆ; ಪಾತರಗಿತ್ತಿ, ನರ್ತಕಿ. वि. ತೆಳುವಾದ, ಸಣಕಲಾದ.

पाता, पु. ಎಲೆ, ಪತ್ರ; ಓಲೆ, ಬೆಂಡೋಲೆ. गहना पाता=ನಗನಟ್ಟು, ದಾಗೀನು.

पाताबा, पु. ಕಾಲುಚೀಲ, ಮೋಜೋಡು.

पाती, स्त्री. ಎಲೆ, ಪತ್ರ; ಚೀಟು.

पात्र, पु. पात्री, स्त्री. ಪಾತ್ರೆ, ಭಾಂಡ.

पाथना, सक्रि. ತಟ್ಟು, ಸಗಣಿ ತಟ್ಟು.

पाद, पु. ಪಾದ, ಕಾಲು, ಅಡಿ; ಶ್ಲೋಕದ ಒಂದು ಚರಣ, ಅಪಾನವಾಯು, ಹೂಸು. पादटीका=ಪುಟದ ಕೆಳಗೆ ಬರೆದಿರುವ ಟಿಪ್ಪಣಿ, ಅಡಿ ಟಿಪ್ಪಣಿ.

पादना, अक्रि. ಹೂಸು ಬಿಡು, ಹೂಸು.

पादपद्म, पु. ಅಡಿದಾವರೆ.

पादशाह, पु. ಬಾದಶಹ, ಚಕ್ರವರ್ತಿ.

पादाश, पाद्दाश्त, स्त्री. ಪ್ರತಿಫಲ,

ಫಲಿತಾಂಶ.

**पादी**, वि. ಕಾಲುಳ್ಳ, ಪಾದವುಳ್ಳ. पु. ಕಾಲುಭಾಗಕ್ಕೆ ಹಕ್ಕುದಾರ; ಛತ್ರ.

**पादुका**, स्त्री. ಪಾದುಕೆ, ಹಾವುಗೆ.

**पाधा**, पु. ಉಪಾಧ್ಯಾಯ, ಅಧ್ಯಾಪಕ.

**पान**, पु. ಗಂಜಿ, ಅಂಬಲಿ; ಪಾನ, ಕುಡಿತ; ಪಾನೀಯ; ಪ್ರಾಣ; ಎಲೆ, ವೀಳ್ಯದೆಲೆ; ಇಸ್ಪೀಟಾಟದಲ್ಲಿ ಒಂದು ಬಣ್ಣ; ಇಸ್ಪೀಟು; ಬುಟ್ಟಾ ಕೆಲಸ; ಎಕ್ಕಡದ ಹಿಮ್ಮಡಿಯ ಕೆಳಗಣ ಅಟ್ಟೆ; ಎಳೆ; ಲಡಿ; ಹೊಸ ಬಟ್ಟೆಯ ನೇಯದಿರುವ ಎಳೆಗಳು. वि. (=पांच), ಐದು. ಉದಾ:- पान सेर = ಐದು ಸೇರು.

**पानड़ी**, पु. ಒಂದು ಬಗೆ ಸೊಪ್ಪು.

**पानदान**, पु. ವೀಳ್ಯದೆಲೆಯ ಪೆಟ್ಟಿಗೆ, ಅಡಪ, ಸಂಬಳಿಗೆ.

**पान-फूल**, पु. ಎಲೆ ಹೂ ಮುಂತಾದ ಸ್ವಾಗತದ ಸಾಮುಗ್ರಿಗಳು.

**पाना**, सक्रि. ಪಡೆ, ಹೊಂದು; ದೊರಕಿಸಿಕೊಳ್ಳು, ಗಳಿಸು; ಅಯ್ದು, ತಲಪು; ಕಂಡುಕೊಳ್ಳು. पु. ಬರಬೇಕಾದ ಹಣ, ಬಾಕಿ.

**पानी**, पु. ನೀರು, ಜಲ; ಮಳೆ; ರತ್ನಗಳ ಹೊಳಪು, ಹೊಳಕು; ತಳಿ; ಮಾನ, ಮರ್ಯಾದೆ. पानी देवा = ತರ್ಪಣ ಕೊಡುವವ; ವಂಶಸ್ಥ.

**पानीदार**, वि. ಮಾನಸ್ಥ; ಎದೆಗಾರ.

**पानीफल**, पु. ಶೃಂಗಾಟಕ ಬಳ್ಳಿ.

**पानौरा**, पु. ವೀಳ್ಯದೆಲೆಯಿಂದ ಮಾಡುವ ಒಂದು ಭಕ್ಷ್ಯ.

**पाप**, पु. ಪಾಪ, ದುಷ್ಕರ್ಮ.

**पापड़**, पु. ಹಪ್ಪಳ; ಹೊರಿಕೆ, ಪ್ರೊರೆ.

**पापड़ा**, पु. ಒಂದು ಮರ.

**पापा**, पु. ಅಂದುಹುಳು, ನುಸಿ; ಅಪ್ಪ, ತಂದೆ.

**पापोश**, स्त्री. ಪಾದರಕ್ಷೆ, ಎಕ್ಕಡ, ಪಾಪಾಸು.

**पाबंद**, वि. ಬದ್ಧನಾದ, ಕಟ್ಟಿಲ್ಪಟ್ಟ; ವಿವಶ.

**पाबंदी**, स्त्री. ಬದ್ಧತೆ, ಕಟ್ಟು; ವಿವಶತೆ.

**पामड़ा**, पु. = पांवड़ा.

**पामाल**, वि. = पायमाल.

**पायंचा**, पु. ಪಾಯಖಾನೆ ಮನೆಯಲ್ಲಿ ಕಾಲಿಡುವ ಕಲ್ಲು, ಕಾಲುಗುಣಿ; ಷರಾಯಿಯ ಕಾಲುಗಳು; ಷರಾಯಿಯ ಜಾಮು.

**पायंता**, पु. ಮಂಚದ ಕಾಲುಕಡೆ.

**पायंदाज़**, पु. ಕಾಲಿನ ಧೂಳು ಒರೆಸಲು ಬಾಗಿಲಲ್ಲಿ ಹಾಸಿರುವ ಗೋಣಿ ತಟ್ಟು, ಮೆಟ್ಟು ಗಂಬಳಿ, ಕಾಲೊರೆಸಿ.

**पाय**, पु. ಕಾಲು, ಪಾದ, ಅಡಿ.

**पायक**, पु. ಕಾಲಾಳು, ಪದಾತಿ; ದಾಸ; ದೂತ.

**पायख़ाना**, पु. ಕಕ್ಕಸು, ಪಾಯಖಾನೆ ಮನೆ; ಪಾಯಖಾನೆ, ಮಲ.

**पायगी**, स्त्री. ದರ್ಜೆ, ಅಂತಸ್ತು.

**पायजा**, पु. ನಾಗವಾಸ, ಕೊಂಡಿ; ತಿರುಗಣೆ ಮೊಳೆ, ಬಿಜಾಗರಿ.

**पायजामा**, पु. ಷರಾಯಿ, ಇಜಾರು, ಪಾಯಜಾಮೆ, ಚಲ್ಲಣ.

पायज़ेब, पु. ನೂಪುರ, ಕಾಲಂದುಗೆ.
पायठ, पु. ಅಟ್ಟ, ಮಂಚಿಗೆ.
पायतख़्त, पु. ರಾಜಧಾನಿ, ರಾಜನಗರ.
पायता, पु. ಹಾಸಿಗೆಯ ಕಾಲುಕಡೆ.
पायताबा, पु. ಕಾಲುಚೀಲ, ಮೋಜೋಡು.
पायदान, पु. = पांवदान.
पायदार, वि. ಬಾಳಿಕೆಬರುವ, ತಾಳಿಕೆಯ; ಗಟ್ಟಿಯಾದ; ಸ್ಥಿರವಾದ.
पायदारी, स्त्री. ಬಾಳಿಕೆ; ಗಟ್ಟಿ.
पायमाल, वि. ತುಳಿಯಲ್ಪಟ್ಟ, ಧ್ವಂಸವಾದ; ಹಾಳಾದ, ನಷ್ಟವಾದ.
पायमाली, स्त्री. ಧ್ವಂಸ; ಹಾಳು, ನಾಶ
पायरा, पु. = पाइरा.
पायल, स्त्री. ನೂಪುರ, ಕಾಲಂದುಗೆ; ಏಣಿ
पायस, पु. ಪಾಯಸ, ಖೀರು.
पाया, पु. ಮಂಚದ ಕಾಲು; ಆಧಾರ; ಅಸ್ತಿಭಾರ, ತಳಹದಿ; ಅಂತಸ್ತು, ದರ್ಜೆ, ಪದವಿ; ಏಣಿ; ಸೋಪಾನ.
पायाब, पु. ಕಾಲುಹೊಳೆ, ಹಾಯ್ಗಡ.
पार, पु. ಆಚೆಯ ದಡ; ದಡ, ಕಟ್ಟೆ, ಏರಿ; ಕಡೆ, ಕೊನೆ. क्रिवि. ದಾಟಿ, ಕಡೆಹಾಯ್ದು; ದೂರವಾಗಿ. पार होना = ಪಾರಾಗು, ತಡಹಾಯು; ಉತ್ತೀರ್ಣನಾಗು, ತೇರ್ಗಡೆಹೊಂದು.
पारखी, वि. ಪರೀಕ್ಷಿಸುವವ, ಪರೀಕ್ಷಕ.
पारचा, पु. ಬಟ್ಟೆ; ಬಟ್ಟೆಯ ಚೂರು
पारण, पु. ಪೂರೈಸುವಿಕೆ; ಪಾರಣೆ.
पारद, पु. ಪಾದರಸ.
पारना, अक्रि. ಉದ್ಯಾಪನೆ ಮಾಡು; ಪಾರಣೆ ಮಾಡು. सक्रि. ಬೀಳಿಸು; ಇರಿಸು; ಎರಕ ಹೊಯ್ಯು.
पारस, पु. ಪಾರಸೀಕ ದೇಶ, ಪರ್ಷಿಯಾ ದೇಶ; ಸ್ಪರ್ಶಮಣಿ; ಬಡಿಸಿದ ಊಟ, ಊಟದ ಪದಾರ್ಥ, ಎಡೆ.
पारसा, पु. ಶ್ರೇಷ್ಠ, ಆರ್ಯ, ಪವಿತ್ರ.
पारसाई, स्त्री. ಪವಿತ್ರತೆ, ಶ್ರೇಷ್ಠತೆ.
पारसी, वि. ಪರ್ಷಿಯಾದೇಶದ. पु. ಪರ್ಷಿಯಾದೇಶದವ, ಪಾರಸೀಕ; ಪಾರಸೀಕ ಭಾಷೆ; ಪಾರ್ಸಿಯರು.
पारा, पु. ಪಾದರಸ; ಹಣತೆ, ದೀಪ; ಚೂರು, ತುಂಡು; ಇಟ್ಟಿಗೆಯ ಚಿಕ್ಕ ಗೋಡೆ; ಬಹುಮಾನ, ಉಪಾಯನ, ಕಾಣಿಕೆ.
पारितोषिक, पु. ಬಹುಮಾನ, ಇನಾಮು
पारिंदा, पु. ಸಿಂಹ; ಹೆಬ್ಬಾವು.
पारी, स्त्री. ಸರದಿ, ಸರ್ತಿ, ಒಂತು; ಕ್ರಮ; ಚಕ್ಕಳದ ದೊಡ್ಡ ಚೀಲ; ಕಟ್ಟೆ, ಏರಿ.
पार्श्व, पु. ಪಕ್ಕ, ಪಾರ್ಶ್ವ; ಅಳ್ಳೆ, ಬಗಲು, ಮಗ್ಗುಲು.
पारीना, वि. ಅಗಿಹೋದ, ಕಳೆದು ಹೋದ.
पाल, पु. ಹಡಗಿನ ಪಟ, ತೆರೆಚಾಪೆ, ಹಾಯಿ; ಕಟ್ಟುವಾಸ, ಮೇಲ್ಕಟ್ಟು, ಚತ್ತು; ಪರದೆ, ತೆರೆ; ಡೇರೆ, ಗುಡಾರ. स्त्री. ಕಾಯಿಗಳನ್ನು ಹುಲ್ಲು ಎಲೆಗಳ ಮೇಲೆ ಹಾಸಿ ಹಣ್ಣಿಗೆ ಹಾಕುವಿಕೆ; ಅಣೆ, ಅಣೆಕಟ್ಟು; ಕಟ್ಟೆ, ಒಡ್ಡು; ಮರೆ, ಆಸರೆ.

**पालक,** पु. ಸಾಕುವವ, ಪಾಲಕ; ಸಾಕು ಮಗ; ಒಂದು ತರಕಾರಿ; ಮಂಚ.

**पालकरी,** स्त्री. ಮರದ ದಿಂಬು.

**पालकी,** स्त्री. ಪಲ್ಲಕ್ಕಿ, ಡೋಲಿ, ಅಂದಳ, ದಂಡಿಗೆ; ಒಂದು ತರಕಾರಿ.

**पालतू,** वि. ಸಾಕುವ, ಪೋಷಿತ; ಸಾಕು (ಪ್ರಾಣಿ).

**पालथी,** स्त्री. ಚಪ್ಪಣಕಾಲು ಹಾಕಿ ಕೂಡುವಿಕೆ, ಚಕ್ಕಳ ಬಕ್ಕಳ, ಪದ್ಮಾಸನ. आलथी पालथी मारना = ಚಪ್ಪಣಕಾಲು ಹಾಕಿ ಕೂಡು.

**पालन,** पु. ಸಾಕುವಿಕೆ, ಸಲಹುವಿಕೆ; ಸಂರಕ್ಷಣೆ, ಪಾಲನೆ.

**पालनहार,** पु. ಸಾಕುವವ, ಪಾಲಕ.

**पालना,** पु. ತೂಗುಮಂಚ, ತೊಟ್ಟಿಲು, ಕಾಗಡಿ. सक्रि. ಸಾಕು, ಸಲಹು; ಸಂರಕ್ಷಿಸು, ಹೊರೆ, ಪೊರೆ. पालना पोसना = ಸಾಕು ಸಲಹು; ಲಾಲಿಸು ಪಾಲಿಸು.

**पाला,** पु. ಮಂಜು, ಇಬ್ಬನಿ; ಗಿಡಗಳ ಒಂದು ರೋಗ, ಕಾಡಿಗೆ, ಜಿಗಿ; ಪ್ರಸಂಗ, ಸಂದರ್ಭ, ಪ್ರಮೇಯ; ಸರದಿ; ಮುಖ್ಯಸ್ಥಾನ, ನೆಲೆ; ಗದ್ದೆ ಬದು, ತೆವರು; ಗಡಿ, ಸರಹದ್ದು; ಹಗೇವು, ಓಡೆ; ಮಲ್ಲಭೂಮಿ, ಅಖಾಡಾ; ಪಾಲನೆ; ರಕ್ಷಣೆ.

**पालागन,** पु. ಕಾಲಿಗೆ ಬೀಳುವಿಕೆ; ನಮಸ್ಕಾರ.

**पालान,** पु. ಜೀನು, ಹಲ್ಲಣ, ಕವುದಿ.

**पालानी,** वि. ಜೀನುಳ್ಳ, ಹಲ್ಲಣ ಹಾಕಿದ; ಹಲ್ಲಣ ಮಾಡುವವ, ಜೀನುಗಾರ.

**पालित,** वि. ಸಾಕಿದ, ಸಾಕುತ್ತಿರುವ.

**पाली,** स्त्री. ಮುಚ್ಚಳ; ಮೊಣಕಾಲು ಚಿಪ್ಪು; ಕಿವಿಯ ತುದಿ; ಕತ್ತಿಯ ಅಲಗು; ಒಡ್ಡು, ಕಟ್ಟೆ.

**पालू,** वि. = पालतू.

**पावँ,** पु. = पाँव.

**पाव,** पु. ಕಾಲುಭಾಗ, ಹಾಗ; ಪಾವು. पाव रोटी = ಫರಂಗಿಯವರು ಮಾಡುವ ರೊಟ್ಟಿ.

**पावती,** स्त्री. ವರಮಾನ; ಆದಾಯ; ಲಾಭ.

**पावदान,** पु. = पाँवदान.

**पावन,** वि. ಪವಿತ್ರವಾದ, ಪುನೀತ.

**पावना,** सक्रि. ಹೊಂದು, ಪಡೆ, ದೊರಕಿಸಿಕೊಳ್ಳು. पु. ಪಡೆಯಬೇಕಾದ ಹಣ, ಬರತಕ್ಕ ಹಣ; ಅತಿಥಿ, ಬಿದ್ದಿನ.

**पावली,** स्त्री. ನಾಣ್ಯದ ಕಾಲುಭಾಗ; ಕಾಲು ರೂಪಾಯಿ ನಾಣ್ಯ, ಪಾವಲಿ.

**पावस,** स्त्री. ವರ್ಷಾಕಾಲ, ಮಳೆಗಾಲ.

**पाश,** पु. ಪಾಶ, ಹಗ್ಗ; ಸೆರೆಸುವಿಕೆ; ಒಡೆಯುವಿಕೆ; ಚೂರು, ತುಂಡು.

**पाशविकता,** स्त्री. ಪಶುತ್ವ; ಪಶುಪ್ರಾಯ.

**पाशवी,** वि. ಪಶು ಸಂಬಂಧವಾದ, ಪಶುಪ್ರಾಯದ. पाशवी बल = ಮೃಗಬಲ.

**पाशा,** पु. ಪಾಚಿಕೆ, ದಾಳ; ಮರಹತ್ತುವವರು ಕಾಲಿಗೆ ಕಟ್ಟಿಕೊಳ್ಳುವ ಹಗ್ಗ; ತುರ್ಕಿ ರಾಜರ ಬಿರುದು.

पासंग, पु. ಪೇರು ಕಟ್ಟುವಿಕೆ, ದಡೆ ಕಟ್ಟುವಿಕೆ; ಏರುಪೇರು, ಓರಡಿ.

पास, पु. ಪಕ್ಕ, ದಂಡೆ; ಸಮೀಪ, ಹತ್ತಿರ, ಸನಿಯ, ನೆರೆ; ರಕ್ಷಣೆ, ಕಾವಲು, ಪಹರೆ; ಜಾವ, ೩ ಗಂಟೆ ಕಾಲ. क्रिवि. ಬದಿಗೆ; ಬಳಿ, ಹತ್ತಿರ, ಸಮೀಪದಲ್ಲಿ. पास पड़ोस = ಅಕ್ಕ ಪಕ್ಕ, ನೆರೆಹೊರೆ.

पासना, सक्रि. (ಹಾಲು) ಸೊರೆಬಿಡು.

पासनी, स्त्री. ಅನ್ನಪ್ರಾಶನ

पासवां, पासवान, पु. ಕಾವಲುಗಾರ, ಪಹರೆಯವ.

पासा, पु. ಪಗಡೆಯ ದಾಳ, ಪಾಚಿಕೆ, ನೆತ್ತ; ಪಗಡೆಯಾಟ, ನೆತ್ತದಾಟ; ಉರುಳುಕಲ್ಲು, ಕೊರಡ; ಬೊಗಸೆ; ಚಿನ್ನದ ಕಂಬಿ.

पासी, स्त्री. ಸರಗುಣಿಗೆ; ಕುದುರೆಯ ಹಿಂಗಾಲುಗಳನ್ನು ಕಟ್ಟುವ ಹಗ್ಗ, ಹಿಚಾಡಿ. पु. ಬಲೆ ಬೀಸುವವ, ಹಕ್ಕಿ ಬೇಟೆಗಾರ.

पाईं, क्रिवि. ಹತ್ತಿರ, ಬಳಿ.

पाहन, पु. ಕಲ್ಲು.

पाहुन, पाहुना, पु. ಅತಿಥಿ, ಬಿದ್ದಣಿಗ; ಅಳಿಯ.

पाहुनी, स्त्री. ಅತಿಥಿ; ಆತಿಥ್ಯ.

पाहुर, पु. ಕಾಣಿಕೆ, ಉಪಾಯನ, ಉಡುಗೊರೆ.

पाहू, पु. ಒಬ್ಬ ಮನುಷ್ಯ, ವ್ಯಕ್ತಿ.

पिंगल, पु. ಕಪಿಲವರ್ಣ, ನಸ್ಯದ ಬಣ್ಣ; ಛಂದಶ್ಶಾಸ್ತ್ರ.

पिंगूरा, पु. ತೂಗುಮಂಚ, ತೊಟ್ಟಿಲು.

पिंजन, पु. ಅರಳೆ ಎಕ್ಕುವ ಬಿಲ್ಲು.

पिंजड़ा, पिंजर, पिंजरा, पु. ಗೂಡು, ಬೋನು. पिंजरापोल = ಪಶುಶಾಲೆ, ಗೋಶಾಲೆ.

पिंजरी, स्त्री. ಸಣ್ಣ ಗೂಡು.

पिंजारी, पु. ಅರಳೆಎಕ್ಕುವವ, ಪಿಂಜಾರ.

पिंजिराना, सक्रि. ಸೇರಿಸು, ಕೂಡಿಸು.

पिंड, पु. ಉಂಡೆ, ಮುದ್ದೆ, ಪಿಂಡ; ಭೋಜನ; ದೇಹ, ಶರೀರ; ಉರುಳಕ.

पिंडखजूर, पु. ಒಂದು ಬಗೆ ಖರ್ಜೂರ.

पिंडली, स्त्री. ಕಣಕಾಲು, ಮೀನಕಂಡ.

पिंडवाही, स्त्री. ಒಂದು ಬಗೆ ಬಟ್ಟೆ.

पिंडा, पु. ಪಿಂಡ, ಉಂಡೆ; ಮುದ್ದೆ, ತೆರಳೆ; ತುತ್ತು; ಲಾಡು; ಮನುಷ್ಯ, ವ್ಯಕ್ತಿ; ಶರೀರ, ದೇಹ.

पिंडारा, पिंडारी, पु. ಸುಲಿಗೆಕಾರ, ದರೋಡೆಗಾರ.

पिंडालू, स्त्री. ಒಂದು ಬಗೆ ಗೆಣಸು.

पिंडिका, स्त्री. ಚಿಕ್ಕ ಉಂಡೆ, ಮುದ್ದೆ; ಮೀನಕಂಡ; ಪೀಠ, ವೇದಿಕೆ.

पिंडिया, स्त्री. ಉದ್ದವಾದ ಉಂಡೆ, ಮುದ್ದೆ, ಕರಣೆ; ಬೆಲ್ಲದ ಉಂಡೆ; ದಾರದ ಕಂಡು, ಕಂಡಿಕೆ; ತಿರಿ.

पिंडी, स्त्री. ಮುದ್ದೆ, ಉಂಡೆ, ತೆರಳೆ; ಕರಣೆ, ಹಳುಕು; ಒಂದು ಬಗೆ ಕುಂಬಳ ಕಾಯಿ; ಬಲಿಪೀಠ, ವೇದಿಕೆ; ದಾರದ ಕಂಡು; ಕಟ್ಟು, ಪಿಂಡಿ.

पिंडोल, पु. ಗೋಪಿಮಣ್ಣು.

पिअरी, स्त्री. ಅರಸಿನದ ವಸ್ತ್ರ.

पिऊ, पु. ಪ್ರಿಯ, ಇನಿಯ.

**पिक**, पु. ಕೋಗಿಲೆ.

**पिकवयनी, पिकबैनी**, स्त्री. ಕೋಗಿಲೆಯಂತಹ ಮಧುರವಾಣಿಯುಳ್ಳವಳು.

**पिघलना**, अक्रि. ಕರಗು, ಜಿನುಗು; ದ್ರವಿಸು; ಮೆದುವಾಡು.

**पिघलवाना, पिघलाना**. सक्रि. ಕರಗಿಸು; ಜಿನುಗಿಸು; ಮೆದು ಮಾಡು.

**पिघलाव**, पु. ಕರಗುವಿಕೆ.

**पिचकना**, अक्रि. ನಗ್ಗು, ಅದುಗು; ಉಡುಗು; ಕುಸಿ.

**पिचकाना**, सक्रि. ನಗ್ಗಿಸು, ಅದುಗಿಸು; ಅದುಮು, ನಜುಗು; ಉಡುಗಿಸು.

**पिचकारी**, स्त्री. ಜೀರ್ಕೊಳವಿ, ಪಿಚಕಾರಿ.

**पिचना**, अक्रि. ತುಳಿಯಲ್ಪಡು.

**पिचपिचा**, वि. ಮೆದುವಾದ; ಗಿಜಿಬಿಜಿ; ಜಿಗಟಾದ, ಜಿಡ್ಡಾದ; ಜಾರುವ; ತೇವ.

**पिचुक्का**, पु. ಪಿಚಕಾರಿ; ಒಂದು ಬಗೆ ಪೂರಿ.

**पिचैत**, पु. ಮಲ್ಲ, ಕುಸ್ತಿಗಾರ; ಜಟ್ಟಿ.

**पिचैती**, स्त्री. ಮಲ್ಲಯುದ್ಧ, ಕುಸ್ತಿ.

**पिच्चित, पिच्ची**, वि. ಅದುಗಿದ, ನಗ್ಗಿದ, ಜಜ್ಜಿದ.

**पिच्छ**, पु. ಬಾಲ, ಪುಚ್ಛ; ನವಿಲ ಪುಚ್ಛ

**पिच्छल**, पु. ಗೋಂದು, ಹಗಿನು. वि. ಜಿಡ್ಡಾದ, ಜಾರುವ.

**पिछड़ना**, अक्रि. ಹಿಂದುಳಿ, ಹಿಂಜು.

**पिछलगा, पिछलग्गू**, पु. ಒಬ್ಬನ ಹಿಂದೆ ಹೋಗುವವ; ಹಿಂಬಾಲಿಸುವವ; ಅನುಯಾಯಿ.

**पिछलना**, अक्रि. ಜಾರು, ಸರಿ, ನು[...]ಣುಚು.

**पिछलपाई**, स्त्री. ಪಿಶಾಚಿಸಿ, ಡಾಕಿನಿ.

**पिछला**, वि. ಹಿಂದುಗಡೆಯ, ಹಿಂಬದಿಯ, ಹಿಂದಣ; ಕಳೆದ.

**पिछवा**, पु. ಜೀನಿನ ಹಿಂಭಾಗ.

**पिछवाई**, स्त्री. ಹಿಂಭಾಗದ ಪರದೆ, ತೆರೆ.

**पिछवाड़ा**, पु. **पिछवाड़ी**, स्त्री. ಹಿಂಭಾಗ, ಹಿಂಬದಿ, ಹಿಂಗಡೆ; ಮನೆಯ ಹಿಂಭಾಗದ ತೊಟ್ಟಿ, ಹಿತ್ತಲು.

**पिछाड़ना**, सक्रि. ಹಿಮ್ಮೆಟ್ಟಿಸು, ಹಿಂದೂಡು.

**पिछाड़ी**, स्त्री. ಹಿಂಭಾಗ, ಹಿಂಗಡೆ; ಹಿಂಗಟ್ಟು; ಹಿಂಗಾಲನ್ನು ಕಟ್ಟುವ ಹಗ್ಗ, ನಿಗಡ, ಪಿಚಾಡಿ. क्रिवि. ಹಿಂದುಗಡೆ.

**पिछैत, पिछैती**, वि. ಹಿಂಭಾಗದ ಕೊನೆಯ.

**पिछौरा** पु. **पिछौरी**, स्त्री. ಹೊದಿಯುವ ವಸ್ತ್ರ, ದುಪ್ಪಟ; ಕರವಸ್ತ್ರ.

**पिटंत**, स्त्री. ಹೊಡೆಯುವಿಕೆ, ಹೊಡೆತ.

**पिटक**, पु. ಬುಟ್ಟಿ; ಕುರು, ಗುಳ್ಳೆ; ಪುಸ್ತಕದ ಒಂದು ಭಾಗ, ಖಂಡ.

**पिटना**, अक्रि. ಬಡಿಯಲ್ಪಡು; ಕುಟ್ಟಲ್ಪಡು; ಪೆಟ್ಟು ತಿನ್ನು, ಏಟು ತಿನ್ನು. पु. ಪೆಟ್ಟಣಿಗೆ, ದಮ್ಮಸ್ಸು; ಜಗಳ; ಅಳು, ಗೋಳು.

**पिटपिटिया**, पु. ಅರಳೆ ಎಕ್ಕುವವ.

**पिटवाना**, सक्रि. पीठना का प्रे. रूप.

**पिटाई**, स्त्री. ಬಡಿಯುವಿಕೆ, ಕುಟ್ಟುವಿಕೆ; ಹೊಡೆತ, ಪೆಟ್ಟು; ಬಡಿಯುವ

ದರ ಕೂಲಿ, ಕುಟ್ಟಿಸುವುದರ ಮಜೂರಿ.

पिटाना, सक्रि. पीटना का प्रे. रूप.

पिटारा, पु. ಬೆತ್ತದ ಪೆಟ್ಟಿಗೆ; ಬುಟ್ಟಿ, ಪೆಟಾರಿ, ಹೆಡಿಗೆ.

पिटारी, स्त्री. पिटारा का अल्प. रूप.

पिट्टक, पु. ದಂತಮಲ, ಹಲ್ಲುಗಾರೆ.

पिट्ठू, पु. ಹಿಂಬಾಲಿಸುವವ, ಅನುಗಾಮಿ; ಸಹಾಯಕ; ತನ್ನ ಪಕ್ಷದವನಾರೂ ಇಲ್ಲದಿರುವಾಗ ಅವನ ಆಟವನ್ನೂ ತಾನೇ ಆಡುವಿಕೆ.

पिठवन, पिठौनी, स्त्री. ಪೃಷ್ಣಪರ್ಣೀ ಗಿಡ

पिठौरी, स्त्री. ಅಂಬಡೆ, ಬೋಂಡ.

पिड़वाना, सक्रि. ಇಡಿಸು, ಕುಟ್ಟಿಸು.

पितपापड़ा, पु. ಪರ್ಪಟಕ ಗಿಡ.

पितर, पु. ಪೂರ್ವಿಕರು, ಪಿತೃಗಳು.

पितराइं, पितरायंध, स्त्री. ಕಿಲುಬು, ಜಿಲುಮು.

पितराना, पितलाना, अक्रि. ಕಿಲುಬು, ಕಿಲುಬು ಹಿಡಿ.

पिता, पु ತಂದೆ, ಪಿತಾ.

पितारी, स्त्री. ಅಕ್ಕಿಯಲ್ಲಿರುವ ಒಂದು ಹುಳು.

पितिया, पु. ಚಿಕ್ಕಪ್ಪ.

पित्तल, पु. ಪಿತ್ತ ಪದಾರ್ಥ; ಬಡಿಸಿದ ಎಲೆ, ಎಡೆ; ಹಿತ್ತಾಳೆ.

पित्ता, पु. ಪಿತ್ತಕೋಶ; ಧೈರ್ಯ, ಸಾಹಸ; ಕೋಪ.

पित्ती, स्त्री. ಗುಳ್ಳೆ, ಕುರು; ಬೆವರುಗುಳ್ಳೆ, ಬೆವರುಸಾಲೆ.

पिदड़ी, स्त्री. ಒಂದು ಪಕ್ಷಿ, ಗೊಂಗೆ, ಗೊನಗಾ; ಕೆಲಸಕ್ಕೆ ಬಾರದ ವಸ್ತು, ತುಚ್ಛ ವಸ್ತು; ತುಚ್ಛ ಮನುಷ್ಯ.

पिदर, पु. ಪಿತಾ, ತಂದೆ.

पिदराना, वि. ತಂದೆಯಂತಹ.

पिदरी, वि. ತಂದೆಯ, ಪೈತೃಕ.

पिद्दा, पु. पिद्दी, स्त्री. = पिदड़ी.

पिन, पु. ಸೀಟಿ, ಶಿಲಿಪೆ.

पिनक, स्त्री. ಮದ, ಸುಂದು.

पिनकना, अक्रि. ಜೋಂಪಿಸು, ತೂಕಡಿಸು.

पिनकी, स्त्री. ಸುಂದು, ಮದ, ಮೈಕ; ಅಫೀಮು ಸೇವಿಸುವವ.

पिनपिनहां, वि. ಕೆಟ್ಟ; ಅಸಹ್ಯ.

पिनपिनाना, अक्रि. ಗೊಣಗು, ಝೇಂಕರಿಸು.

पिनपिनाहट, स्त्री. ಝೇಂಕಾರ, ಝುಣತ್ಕಾರ.

पिनहां, वि. ಗುಟ್ಟಾದ, ಗುಪ್ತ; ಅದೃಶ್ಯ

पिन्ना, पु. ಹಿಂಡಿ, ಪಿಣ್ಯಾಕ; ದಾರದ ಉಂಡೆ.

पिन्नी, स्त्री. ಒಂದು ಮಿಠಾಯಿ.

पिन्हाना, सक्रि. ಉಡಿಸು, ತೊಡಿಸು.

पिपड़ी, स्त्री. ಸಣ್ಣ ಇರುವೆ.

पिपरामूल, पु. ಹಿಪ್ಪಲಿ ಬೇರು.

पिपला, पु. ಕತ್ತಿಯ ಮೊನೆ.

पिप्पल, पु. ಅಶ್ವತ್ಥಮರ.

पिप्पी, स्त्री. ಗಸಿ, ಜರಟ.

पिय, पिया, पु. ಪ್ರಿಯ, ಇನಿಯ, ಪತಿ.

पियक्कड़, पु. ಸುರಾಪಾನ ಮಾಡುವವ, ಕುಡಕ.

**पिराई**, स्त्री. ಹಳದಿ ಬಣ್ಣ, ಹಳದಿ.

**पियराना**, अक्रि. ವಿವರ್ಣನಾಗು, ಕಳೆಗುಂದು.

**पियरी**, स्त्री. ಅರಿಸಿನದ ವಸ್ತ್ರ.

**पियल्ला**, पु. ಹಾಲುಣ್ಣುವ ಮಗು.

**पियाज़**, स्त्री. =प्याज़.

**पियाना**, सक्रि. ಕುಡಿಸು; ನೀರುಹಾಯಿಸು.

**पियार**, पु. ಒಂದು ಮರ, ಮೊರಲೆ. वि. ಪ್ರಿಯ, ಪ್ರೀತಿಯುಳ್ಳ. स्त्री. ಪ್ರಿಯ, ಪ್ರೀತಿ.

**पिराक**, पु. ಕರಿಗಡುಬು, ಕರ್ಜಿಕಾಯಿ.

**पिराना**, अक्रि. ನೋಯು, ನೋವಾಗು.

**पिरोजा**, पु. =फ़ीरोजा.

**पिरोना**, सक्रि. ಪವಣಿಸು, ಪೋಣಿಸು.

**पिलई**, स्त्री. ಪ್ಲೀಹ, ಗುಲ್ಮ, ತೊರಳೆ.

**पिलचना**, अक्रि. ಅಂಟಿಕೊ, ಕಚ್ಚಿಕೊ.

**पिलड़ी**, स्त्री. ಮಾಂಸದ ಚೂರು; ಹಿಟ್ಟಿನ ಮುದ್ದೆ, ಉಂಡೆ.

**पिलना**, अक्रि. ಎರಗು, ಅಡರು; ಮೇಲೆ ಬೀಳು; ಅಪ್ಪಿಕೊ, ಕಚ್ಚಿಕೊ; ದುಡಿ, ನುರಿ, ಅರೆ; ಜಜ್ಜಿ ಹೋಗು.

**पिलपिला**, वि. ಮೆದುವಾದ, ಅಳ್ಳಾದ; ಗಿಜಿಗಿಜಿ, ಗಿಜಟಿ.

**पिलपिलाना**, अक्रि. ಮೆದುವಾಗು; ಗಿಜಟಿಯಾಗು. सक्रि. ನಜುಗು, ಅದುಗು; ಹಿಸುಕು, ಹಿಂಡು; ಮೆದುಮಾಡು.

**पिलपिलाहट**, स्त्री. ಮೃದುತ್ವ; ಸಡಿಲತೆ

**पिलवाना**, सक्रि. ಕುಡಿಸು; ನೀರುಕಟ್ಟು; ನೂಕಿಸು, ದೂಡಿಸು; ಅದುಗಿಸು

**पिलही**, स्त्री. ಪ್ಲೀಹ, ಗುಲ್ಮ; ವಿ[illegible] ನಡ್ಡಿ; ಸೊಂಟ.

**पिलाई**, स्त्री. ಕುಡಿಸುವಿಕೆ; [illegible] ತಣಿವು; ಕುಡಿಸುವುದಕ್ಕೆ ಕೊಡುವ ಕೂಲಿ; ಪಾನದ ಖರ್ಚು; ಹಳದಿ ಬಣ್ಣ.

**पिलवाना, पिलाना**, सक्रि. ಕುಡಿ[illegible] ಕುಡಿಯಲು ಕೊಡು, ಪಾನಮಾಡಿಸು; ನೀರು ಹಾಯಿಸು.

**पिलाऊ**, पु. =पील्.

**पिलाहट**, स्त्री. ವಿವರ್ಣತೆ, ಬಣ್ಣಗುಂದುವಿಕೆ.

**पिलास**, पु. = प्यास.

**पिलुआ, पिल्लु**, पु. ಒಂದು ಹುಳು.

**पिल्ला**, पु. ನಾಯಿ ಮರಿ, ಕುನ್ನಿ.

**पिवाना**, सक्रि. =पिलाना.

**पिशाच**, पु. ಪಿಶಾಚಿ; ದೆವ್ವ.

**पिशाचिन, पिशाचिनी**, स्त्री. ಹೆಣ್ಣು ಪಿಶಾಚಿ.

**पिशुन**, वि. ಕ್ರೂರ; ಚಾಡಿಕೋರ; ಮೋಸಗಾರ; ನೀಚ; ಕೆಟ್ಟ.

**पिष्ट**, पु. ಹಿಟ್ಟು, ಪಿಷ್ಟ.

**पिष्टपेषण**, पु. ಹಿಟ್ಟನ್ನು ಬೀಸುವಿಕೆ; ಹೇಳಿದ್ದನ್ನೇ ಹೇಳುವಿಕೆ.

**पिसनहारी**, स्त्री. ಹಿಟ್ಟು ಬೀಸುವವ[illegible]

**पिसना**, पु. ಬೀಸುವ ಕಾಳು. [illegible] ಪುಡಿಯಾಗು, ಹಿಟ್ಟಾಗು; ಅರೆ, [illegible] ಕಷ್ಟಪಡು; ಸತ್ತು ಸುಣ್ಣವಾಗು; [illegible] ರಕ್ತನಾಗು.

**पिसर**, पु. ಪುತ್ರ, ಮಗ.

**पिसरज़ादा**, पु. ಮಗನ ಮಗ, [illegible]

पिसवाना, सक्रि. पीसना का प्रे. रूप.
पिसवाई, पिसाई, स्त्री. ಹಿಟ್ಟು ಬೀಸುವಿಕೆ, ಅರೆಯುವಿಕೆ; ಅರೆಯುವುದರ ಕೂಲಿ.
पिसान, पु. ಬೀಸಿದ್ದು, ಹಿಟ್ಟು, ಹುಡಿ.
पिसौनी, स्त्री. ಅರೆಯುವ ಕೆಲಸ, ಬೀಸುವುದು; ಕಠಿಣವಾದ ಕೆಲಸ.
पिस्तई, वि. ಹಸುರು ಮಿಶ್ರಿತ ಹಳದಿ.
पिस्तां, पु. ಸ್ತನ, ಕುಚ; ಕುಚಾಗ್ರ.
पिस्ता, पु. ಒಂದು ಹಣ್ಣು.
पिस्तौल, स्त्री. ಕೈತುಪಾಕಿ, ಪಿಸ್ತೂಲು.
पिस्सू, पु. ಚಿಗಟ, ಚಿಕ್ಕಾಡು.
पिहकना, अक्रि. ಚಿಲಿಪಿಲಿಗುಟ್ಟು.
पींजना, सक्रि. ಹಿಂಜು, ಸಸಿ, ಬಿಡಿಸು.
पींड, पु. = पिंड.
पी, पु. ಚಾತಕಪಕ್ಷಿಯ ಕೂಗು. स्त्री. ಕೊಬ್ಬು, ಚರಬಿ.
पीक, स्त्री. ಅಗಿದ ತಾಂಬೂಲದ ರಸ.
पीकदान, पीकदानी, पु. ತಾಂಬೂಲವನ್ನು ಅಗಿದು ಉಗುಳುವ ಪಾತ್ರೆ, ಪಡಿಗ, ಡಬಕೆ, ಪೀಕದಾನಿ.
पीकना, अक्रि. ಚಿಲಿಪಿಲಿಗುಟ್ಟು
पीका, पु. ಚಿಗುರು, ತಳಿರು, ಕೊನರು.
पीच, पीछ, पु. ಗಂಜಿ.
पीचना, सक्रि. ಒಡೆ, ತುಳಿ, ಮೆಟ್ಟು.
पीछा, पु. ಹಿಂಭಾಗ, ಹಿಂಗಡೆ; ಅನಂತರ; ಹಿಂಬಾಲಿಸುವಿಕೆ, ಅನುಗಮನ; ಅನುಪಸ್ಥಿತಿ. पीछा करना = ಹಿಂಬಾಲಿಸು; ಬೆನ್ನುಹತ್ತು, ಬೆನ್ನಟ್ಟು; ಗೋಗರಿಸು. पीछा छुड़ाना = ತಪ್ಪಿಸಿಕೊಳ್ಳು, ಬಿಡುಗಡೆ ಹೊಂದು.
पीछे, क्रिवि. ಹಿಂದೆ, ಹಿಂದುಗಡೆ; ಪಶ್ಚಾತ್, ತರುವಾಯ, ಅನಂತರ; ಒಬ್ಬನ ಅನುಪಸ್ಥಿತಿಯಲ್ಲಿ.
पीट, स्त्री. ಹೊಡೆಯುವಿಕೆ; ಬಡಿಯುವಿಕೆ
पीटना, सक्रि. ಹೊಡೆ, ಹುಯ್ಯು, ಬಡಿ; ಕುಟ್ಟು, ಮಿದಿ; ಚಚ್ಚು. पु. ಬಡಿದುಕೊಳ್ಳುವಿಕೆ; ಮೃತ್ಯುಶೋಕ; ಕಷ್ಟ.
पीठ, पु. ಪೀಠ, ಆಸನ, ಮಣೆ, ಗದ್ದುಗೆ. स्त्री. ಪೃಷ್ಠ; ಬೆನ್ನು; ಬೆಂಬಲ. पीठ दिखाना = ಬೆಂಗೊಡು, ಬೆನ್ನು ತೋರಿಸಿ ಓಡು. पीठ तोड़ना = ನಿರುತ್ಸಾಹ ಪಡಿಸು.
पीठा, पु. ಕಜ್ಜಾಯ, ಹಿಟ್ಟಡಿಗೆ; ಬುಡ, ಮೂಲ; ಒಂದು ಬಗೆ ಆಭರಣ.
पीठी, स्त्री. ಬೇಳೆಯನ್ನು ನೆನೆ ಹಾಕಿ ತಿರುವಿದ ಹಿಟ್ಟು, ಅರೆದ ಹಿಟ್ಟು, ರುಬ್ಬಿದ ಹಿಟ್ಟು.
पीठौता, पु. ಪುಸ್ತಕದ ಪುಟ, ಪಾನು.
पीड़, स्त्री. ನೋವು, ವೇದನೆ; ಕರುಣೆ, ಕನಿಕರ; ಜಡೆ ಕುಚ್ಚು.
पीड़क, वि. ನೋವನ್ನುಂಟು ಮಾಡುವ, ನೋವುಕೊಡುವ.
पीड़न, पु. ಅಮುಕುವಿಕೆ, ಒತ್ತುವಿಕೆ; ಪೀಡಿಸುವಿಕೆ, ಕಾಟ.
पीड़ा, स्त्री. ಬಾಧೆ, ನೋವು; ಬೇನೆ; ದುಃಖ; ಕಾಟ.
पीड़ित, वि. ಪೀಡಿಸಲ್ಪಟ್ಟ; ದುಃಖಿತ.
पीढ़ा, पु. ಕಾಲುಮಣೆ, ಪೀಠ, ಮಣೆ.
पीढ़ाबंद, पु. ಭೂಮಿಕೆ, ಪ್ರಸ್ತಾವನೆ.

**पीढ़ी**, स्त्री. ಪೀಳಿಗೆ, ವಂಶ ಪರಂಪರೆ; ತಲಾಂತರ, ತಲೆಮಾರು; ಚಿಕ್ಕ ಮಣೆ, ಪೀಠ.

**पीढ़ीनामा**, पु. ವಂಶಾವಳಿ, ವಂಶವೃಕ್ಷ.

**पीत**, वि. ಹಳದಿ. पु. ಪ್ರೀತಿ.

**पीतम**, वि. ಪ್ರಿಯತಮ, ಇನಿಯ.

**पीतल**, पु. ಹಿತ್ತಾಳೆ.

**पीतला**, पु. ಹಿತ್ತಾಳೆಯ.

**पीदड़ी**, स्त्री = पिद्‌ड़ी.

**पीन**, वि. ಕೊಬ್ಬಿದ; ದಪ್ಪ; ಭಾರಿ.

**पीनक**, स्त्री. ತೂಂಕು, ಮೈಕ, ಜೋಂಪು

**पीनता**, स्त्री. ದಪ್ಪ, ಗಾತ್ರ.

**पीनना**, सक्रि. ಬಾಚು, ಹಿಕ್ಕು, ಎಕ್ಕು.

**पीनस**, पु. ಮೂಗಿನ ಒಂದು ರೋಗ. स्त्री. ಪಲ್ಲಕ್ಕಿ, ಡೋಲಿ.

**पीना**, पु. ಕುಡಿಯುವವಸ್ತು, ಪಾನೀಯ; ಹಿಂಡಿ. सक्रि. ಕುಡಿ, ಈಂಟು, ಸೆಡ್ಡು; ಪಾನ ಮಾಡು; ಸೇದು. बीड़ी पीना = ಬೀಡಿ ಸೇದು.

**पीपल**, पु. ಅಶ್ವತ್ಥಮರ. स्त्री. ಹಿಪ್ಪಲಿ.

**पीपा**, पु. ಪೀಪಾಯಿ.

**पीप, पीब**, स्त्री. ಹುಣ್ಣಿನ ಕೀವು.

**पीर**, स्त्री. ನೋವು, ವೇದನೆ; ಸಹವೇದನೆ, ಸಹಾನುಭೂತಿ. पु. ಆಚಾರ್ಯರು, ಗುರು; ಮಹಾತ್ಮ; ಗುರುಹಿರಿಯರು; ವೃದ್ಧ; ಸೋಮವಾರ.

**पीरमुरशिद**, पु. ಪೂಜ್ಯರು, ಮಹಾತ್ಮರು.

**पीराई**, पु. ಮಹಮ್ಮದೀಯ ದಾಸಯ್ಯ

**पीराना**, वि. ದೊಡ್ಡ; ವೃದ್ಧರಂತಹ; ಮಹಾತ್ಮರಂತಹ.

**पीरी**, स्त्री. ಆಚಾರ್ಯರ ಕೆಲಸ ಅಥವಾ ಪದವಿ; ಶಿಷ್ಯಾರ್ಜನೆ; ವಾರ್ಧಕ್ಯ, ಮುಪ್ಪು; ಹಿರಿಮೆ; ಅಪ್ಪಣೆ, ಆಣತಿ; ಗುತ್ತಿಗೆ, ಕರಾರು.

**पील**, पु. ಆನೆ, ಗಜ; ಚದುರಂಗದ ಆನೆ.

**पीलतन**, वि. ದೊಡ್ಡ, ಭಾರಿ.

**पीलपांव**, पु. ಆನೆಗಾಲು, ಶ್ಲೀಪದ, ಹುತ್ತುಗಾಲು, ಒರಲುಗಾಲು.

**पीलपाया**, पु. ಆನೆಯಕಾಲು; ಶ್ಲೀಪದ, ಹುತ್ತುಗಾಲು; ದೊಡ್ಡ ಕಂಬ.

**पीलवान**, पु. ಆನೆಗಾರ, ಮಾವಟಿಗ.

**पीलसाज़**, पु. ದೀಪದ ಕಂಬ, ಸಮೆ.

**पीला**, पु. ಆನೆ. वि. ಹಳದಿ; ವಿವರ್ಣವಾದ, ಕಳೆಗುಂದಿದ. पीला पड़ना = ಕಳೆಗುಂದು, ಬಿಳಚಿಕೊಳ್ಳು.

**पीलाई**, स्त्री. **पीलापन**, पु. ಹಳದಿ; ವಿವರ್ಣತೆ.

**पीलाम**, पु. ವಸ್ತ್ರವಿಶೇಷ, ಕುತಣಿ.

**पीलिया**, स्त्री. ಅರಿಸಿನ ಕಾಮಾಲೆ.

**पीली**, स्त्री. ಚಿನ್ನದ ನಾಣ್ಯ, ಮೊಹರು.

**पीलू**, पु. ಒಂದು ಮರ; ಒಂದು ಹುಳ; ಬಾಣ; ಅಂಬು; ಆನೆ.

**पीसना**, सक्रि. ಬೀಸು, ಅರೆ; ಇಡಿಕುಟ್ಟು; ದುಡಿ, ಪಾಡುಪಡು; ಹಿಸುಕಿಸಿ. पु. ಬೀಸುವ ಕಾಳು; ಬೀಸಲಿಕ್ಕೆ ಕೊಟ್ಟದ್ದು.

**पीह**, स्त्री. ನೆಣ, ವಸೆ, ಕೊಬ್ಬು.

**पीहर**, पु. ತಂದೆಯ ಮನೆ, ತವರುಮನೆ

**पीहान**, पु. ಬೆಣೆ, ಬಿರಡೆ.

हू, पु. ಚಿಗಟ, ಚಿಕ್ಕಾಡು.
गरा, पु. ಹುಡುಗ.
गी, स्त्री. ಕೊಳಲು; ಪುಂಗೀವಾದ್ಯ.
छड़, वि. ಬಾಲವುಳ್ಳ, ಪುಚ್ಛವುಳ್ಳ.
छना, अक्रि. ಒರೆಸಲ್ಪಡು, ಸೀಟಲ್ಪಡು
छाला, पु. ಪುಚ್ಛ, ಬಾಲ; ಬಾಲಂಗಚ್ಚೆ.
ज, पु. ರಾಶಿ, ಪುಂಜ.
आ, पु. ಕಜ್ಜಾಯ, ಅಪೂಪ.
आल, पु. = पयाल.
कार, स्त्री. ಕೂಗು, ಕರೆ; ಕೂಗಾಟ; ದೂರು, ಪುಕಾರು; ದರ್ದು.
कारना, सक्रि. ಕೂಗು, ಕರೆ; ಘೋಷಿಸು; ಕೂಗು ಹಾಕು; ಮೊರೆಯಿಡು, ದೂರು ಹೇಳು. पु. ಕೂಗುವಿಕೆ; ಕೂಗಾಟ.
खराज़, पु. ಪುಷ್ಯರಾಗ, ಪುಷ್ಪರಾಗ.
ख्तगी, स्त्री. ಪಕ್ವವಾಗುವಿಕೆ; ಪಕ್ವ; ...; ಬಲುಮೆ; ಅನುಭವ.
ख्ता, वि. ಪರಿಪಕ್ವವಾದ; ಮಾಗಿದ; ...ಲಿತ, ಪಕ್ಕಾ; ಗಟ್ಟಿಗ, ಚತುರ; ದೃಢ.
गना, अक्रि. ತುಂಬು, ನೆರೆ, ಪೂರೈಸು
गाना, सक्रि. ತುಂಬಿಸು, ಭರ್ತಿಮಾಡಿಸು.
चकार, पुचकारी, स्त्री. ತುಟಿ ಚಪ್ಪರಿಸುವಿಕೆ; ಮುದ್ದಾಟ; ಬೆನ್ನು ತಟ್ಟುವಿಕೆ.
चकारना, सक्रि. ತುಟಿ ಚಪ್ಪರಿಸು; ಬೆನ್ನುತಟ್ಟು; ಮುದ್ದಾಡು, ಅಲ್ಲೆಮಾಡು
चारा, पु. ಮೆತ್ತುವಿಕೆ, ಬಳಿಯುವಿಕೆ; ...ಣ್ಣ ಕೊಡಸುವಿಕೆ; ಲೇಪನ, ಲೇಪ; ಬಳಿಯುವ ಬಟ್ಟೆ; ಕುಚ್ಚು ಮಟ್ಟೆ; ಸುಣ್ಣದ ನೀರು; ತುಪಾಕಿಯ ಕೊಳವಿಯನ್ನು ತಣ್ಣಗೆ ಮಾಡಲು ಒರೆಸುವ ಒದ್ದೆಬಟ್ಟೆ.
पुच्छ, स्त्री. ಪುಚ್ಛ, ಬಾಲ.
पुच्छल, वि. ಪುಚ್ಛವುಳ್ಳ, ಬಾಲವುಳ್ಳ. पुच्छल तारा = ಬಾಲಚುಕ್ಕಿ.
पुच्छल्ला, पु. ಪುಚ್ಛ, ಬಾಲ; ಬಾಲಂಗಚ್ಚೆ; ಹಿಂಬಾಲಿಸುವವ.
पुछवाना, सक्रि. ಪ್ರಶ್ನೆಮಾಡಿಸು, ಕೇಳಿಸು.
पुछवैया, पुछार, पु. ಕೇಳುವವ.
पुजना, अक्रि. ಪೂಜಿಸಲ್ಪಡು, ಸನ್ಮಾನಿಸಲ್ಪಡು; ತುಂಬು; ಪೂರ್ಣವಾಗು; ತೃಪ್ತನಾಗು.
पुजवाना, सक्रि. ಪೂಜೆ ಮಾಡಿಸು; ಪೂಜಿಸಿಕೊಳ್ಳು; ತುಂಬಿಸು; ಪೂರೈಸು.
पुजाई, स्त्री. ಪೂಜಿಸುವಿಕೆ; ಆರಾಧನೆ, ಪೂಜೆ.
पुजाना, सक्रि. ಪೂಜೆಮಾಡಿಸು; ಪೂಜಿಸಿಕೊಳ್ಳು; ಹಣ ವಸೂಲು ಮಾಡು; ತುಂಬಿಸು, ಭರ್ತಿ ಮಾಡು; ಪೂರ್ತಿ ಮಾಡು.
पुजापा, पु. ಪೂಜೆ, ಆರಾಧನೆ; ಪೂಜಾ ಸಾಮಗ್ರಿ; ಗಲಿಬಿಲಿ, ಗೊಂದಲ.
पुजारिन, पुजारिनी, स्त्री. ಪೂಜೆ ಮಾಡುವವಳು; ಪೂಜಾರಿಯ ಹೆಂಡತಿ; ಪೂಜಾರಿಣಿ.
पुजारी, पु. ಪೂಜಿಸುವವ, ಪೂಜಾರಿ, ತಮ್ಮಡಿ.

**पुजैया,** पु. ಪೂಜಿಸುವವ, ತುಂಬುವವ. स्त्री. ಪೂಜೆ.

**पुजौरा,** पु. ನೈವೇದ್ಯ; ಮೀಸಲು; ಪ್ರಸಾದ.

**पुट,** पु. ಬೆರಸುವುದಕ್ಕೆ ಚಿಮುಕಿಸಿದ ದ್ರವ ಪದಾರ್ಥ; ಬಣ್ಣ ಕಟ್ಟುವಿಕೆ; ಅದ್ದುವಿಕೆ; ಮುಚ್ಚಳ; ಸಂಪುಟ; ದೊನ್ನೆ; ಬಣ್ಣ; ಸುಳಿವು.

**पुटकी,** स्त्री. ಚಿಕ್ಕ ಗಂಟು, ಪೊಟ್ಟಣ; ಅವಘಡ, ಅನಾಹುತ; ಅನರ್ಥ; ಕೂಟು ಅಥವಾ ಹುಳಿಗೆ ಸೇರಿಸುವವ ಅಕ್ಕಿ ಹಿಟ್ಟು, ಹೊಂದಿಟ್ಟು.

**पुटरी,** स्त्री. ಸಣ್ಣ ಗಂಟು, ಪಿಂಡಿ.

**पुटी,** स्त्री. ದೊನ್ನೆ, ಪೊಟ್ಟಣ.

**पुट्ठा,** पु. ಪೃಷ್ಠ, ಪಿರ್ರೆ; ಬೆನ್ನುಕಡೆ.

**पुट्ठी,** स्त्री. ಚಕ್ರದ ಕುಂಬಕಟ್ಟು.

**पुठवाल,** पु. ಹಿಂದಿರುವವ; ಸಹಾಯಕ.

**पुड़ा,** पु. ಪೊಟ್ಟಣ; ಪೃಷ್ಠ.

**पुड़िया,** स्त्री. ಪೊಟ್ಟಣ; ಔಷಧದ ಪೊಟ್ಟಣ; ಔಷಧದ ಒಂದು ಹೊತ್ತು.

**पुड़ी,** स्त्री. ಪೊಟ್ಟಣ; ಚರ್ಮ, ಚಕ್ಕಳ.

**पुण्य,** पु. ಪುಣ್ಯ, ಸುಕೃತ.

**पुतना,** अक्रि. ಮೆತ್ತಲ್ಪಡು; ಸಾರಿಸಲ್ಪಡು.

**पुतला,** पु. ಬೊಂಬೆ; ವಿಗ್ರಹ.

**पुतली,** स्त्री. ಬೊಂಬೆ, ಗೊಂಬೆ; ಪುತ್ಥಳಿ, ಕಣ್ಣುಪಾಪೆ, ಕನೀನಿಕೆ; ಕುದುರೆಯ ಗೊರಸಿನ ಗುರುತು; ನೇಯುವ ಯಂತ್ರ; ಗಿರಣಿ.

**पुतलीघर,** पु. ನೆಯ್ಗೆಯ ಕಾರಖಾನೆ, ಗಿರಣಿ.

**पुताई,** स्त्री. ಸುಣ್ಣ ಬಳಿಯುವಿಕೆ; ... ಲಾವು; ತೊಡೆಸುವಿಕೆ, ಸಾರಣೆ; ... ಕೆಲಸಗಳಿಗೆ ಕೊಡುವ ಕೂಲಿ.

**पुताना,** सक्रि. पोतना का प्रे. रू.

**पुती,** वि. ಕೊಳೆತ; ನಾರುವ.

**पुत्र,** पु. ಮಗ, ಪುತ್ರ.

**पुत्रिका,** स्त्री. ಮಗಳು; ಗೊಂಬೆ.

**पुत्री,** स्त्री. ಪುತ್ರಿ, ಮಗಳು.

**पुदीना,** पु. ಪುದೀನಾ ಸೊಪ್ಪು.

**पुन,** पु. = पुण्य.

**पुनना,** अक्रि. ಬೈಯು, ನಿಂದಿಸು.

**पुनवाना, पुनाना,** सक्रि. ಬೈಯಿಸು...

**पुनश्च,** क्रिवि. ಮತ್ತೆ, ತಿರುಗಿ, ಪುನಃ... ಹಿಂದಿನಿಂದ.

**पुनसलाई,** स्त्री. ರಾಟೆಯ ಕದು...

**पुपलाना,** अक्रि. ಗೊಣಗುಟ್ಟು; ...

**पुपली,** स्त्री. ಬಿದಿರಿನ ನಳಿಗೆ, ಗೊಟ್ಟ.

**पुमबा,** पु. ಹತ್ತಿ.

**पुमबाई,** वि. ಹತ್ತಿಯಿಂದ ಮಾಡಿದ... ಹತ್ತಿಯು.

**पुमबा-दहन,** वि. ಮಿತಭಾಷಿ; ಮ...

**पुमबा-दोज़,** पु. ಅರಳೆ ಎಕ್ಕುವವ...

**पुर,** पु. ಪುರ, ನಗರ; ಕಪಿಲೆಯ ಬಾ... वि. ತುಂಬಿದ, ಭರ್ತಿ; ಪೂರ್ತಿ. पुर जोश = ಹುರಿದುಂಬಿದ, ಉತ್ಸಾ... ಭರಿತ.

**पुरइन,** पु. ತಾವರೆ, ಕಮಲ.

**पुरकार,** वि. ಚತುರ, ಜಾಣ; ದಟ್ಟ, ನಿಬಿಡ.

पुरकारी, स्त्री. ನಿಬಿಡತೆ, ದಟ್ಟ.

पुरखा, पु. ಪೂರ್ವಿಕರು; ಹಿರಿಯರು.

पुरचक, स्त्री. ಮೈದಡವುವಿಕೆ; ಮುದ್ದಾಟ; ಸಲಿಗೆ; ಮುಖಸ್ತುತಿ; ಮೋಸ, ಠಕ್ಕು. पु. ಚಿಹ್ನೆ, ಗುರುತು; ಮುಖ, ಮೋರೆ; ಪ್ರೋತ್ಸಾಹ; ಸಹಾಯ.

पुरज़ा, पु. ತುಂಡು, ತುಣುಕು, ಚೂರು; ಭಾಗ, ಅಂಗ; ಬಟ್ಟೆಯ ಚೂರು; ಪಕ್ಷಿಗಳ ರೆಕ್ಕೆ. चलता पुरज़ा = ಕಾರ್ಯದಕ್ಷ, ಗಟ್ಟಿಗ, ಘಾಟಿ.

पुरज़ोर, वि. ಶಕ್ತಿಪೂರ್ಣ, ಬಲಿಷ್ಠ.

पुरट, पु. ಚಿನ್ನ, ಬಂಗಾರ.

पुरदर्द, वि. ನೋವುಳ್ಳ, ವೇದನಾಪೂರ್ಣ.

पुरदिल, वि. ಎದೆಗಾರ, ಧೀರ.

पुरदिली, स्त्री. ಎದೆಗಾರಿಕೆ, ಧೀರತನ.

पुरनिया, पु. ವೃದ್ಧ; ಹಿರಿಯವ.

पुरबला, वि. ಪೂರ್ವದ, ಹಿಂದಿನ.

पुरबिया, वि. ಪೂರ್ವದಿಕ್ಕಿನ, ಮೂಡಣ

पुरमज़ाक, वि. ಹಾಸ್ಯಪೂರ್ಣವಾದ.

पुरवट, पु. ಕಪಿಲೆಯ ಬಾನೆ.

पुरवा, पु. ಸಣ್ಣ ಗ್ರಾಮ; ಮೂಡಣಗಾಳಿ; ಮಣ್ಣಿನ ಬಟ್ಟಲು.

पुरवाई, पुरवैया, स्त्री. ಮೂಡಣಗಾಳಿ.

पुरवाना, सक्रि. ಪೂರ್ತಿ ಮಾಡಿಸು, ತುಂಬಿಸು.

पुरविया, वि. ಪೂರ್ವದ, ಮೂಡಣ.

पुरसा, पु. ಒಂದು ಪೌರುಷ, ಆಳುದ್ದ.

पुरस्कार, पु. ಸನ್ಮಾನ, ಬಹುಮಾನ, ಇನಾಮು, ಪುರಸ್ಕಾರ.

पुरा, पु. ದೊಡ್ಡ ಊರು, ಪಟ್ಟಣ.

पुराण, पु. ಪುರಾಣ.

पुराणी, पु. ಪುರಾಣ ಹೇಳುವವ, ಪುರಾಣಿಕ.

पुरातत्व, पु. ಪ್ರಾಚೀನ ಕಾಲ ಸಂಬಂಧವಾದ ಶಾಸ್ತ್ರ.

पुरातन, वि. ಪುರಾತನವಾದ, ಹಳೆಯ

पुराना, सक्रि. ತುಂಬಿಸು, ಭರ್ತಿಮಾಡು; ಪೂರೈಸು. वि. ಪುರಾತನ, ಪ್ರಾಚೀನ; ಹಳೆಯ; ಸನಾತನ. पुराना धुराना = ಹಳೆಯ ಪಳೆಯ.

पुरी, स्त्री. ತುಂಬಿಸುವಿಕೆ, ಭರ್ತಿ; ನಗರ.

पुरुखा, पु. = पुरखा.

पुरुखिन, स्त्री. पुरखा का स्त्री. रूप.

पुरुष, पु. ಪುರುಷ, ಮನುಷ್ಯ.

पुरोसा, पु. ಕ್ಷೌರಕ ಅಗಸ ಮೊದಲಾದವರಿಗೆ ವಿವಾಹ ಕಾಲದಲ್ಲಿ ಕೊಡುವ ಇನಾಮು ಆದಿ.

पुरोहित, पु. ಪುರೋಹಿತ, ಶಾಸ್ತ್ರಿ.

पुरोहिताई, स्त्री. ಪುರೋಹಿತನ ಕೆಲಸ ಅಥವಾ ವೃತ್ತಿ, ಪೌರೋಹಿತ್ಯ; ಪುರೋಹಿತರ ರುಸುಂ ಅಥವಾ ದಕ್ಷಿಣೆ.

पुरोहितानी, स्त्री. पुरोहित का स्त्री. रूप.

पुर्तगाली, स्त्री. ಪೋರ್ಚುಗೀಸರು; ಪೋರ್ಚುಗೀಸರ ಭಾಷೆ.

पुर्स, पु. ಕೇಳುವಿಕೆ; ಪ್ರಶ್ನಿಸುವಿಕೆ.

पुर्सां, वि. ಕೇಳುವವ, ವಿಚಾರಿಸುವವ; ಪ್ರಶ್ನಿಸುವವ.

पुर्सिश, स्त्री. ಕೇಳುವಿಕೆ; ಪ್ರಶ್ನಿಸುವಿಕೆ.

ವಿಚಾರಿಸುವಿಕೆ.

**पुर्सी**, स्त्री. ಕೇಳುವಿಕೆ; ಉಪಚಾರ ಕೇಳುವಿಕೆ.

**पुल**, पु. ಸೇತುವೆ, ಸಂಕ, ಪಾಲ. पुल टूटना = ಗುಂಪು ಕಟ್ಟು, ಸಂದಣಿಯಾಗು.

**पुलक**, पु. ರೋಮಾಂಚ, ಪುಲಕ.

**पुलकना**, अक्रि. ಪುಲಕಿತನಾಗು.

**पुलकाना**, सक्रि. ರೋಮಾಂಚಗೊಳಿಸು; ಸಂತೋಷಪಡಿಸು.

**पुलकित**, वि. ರೋಮಾಂಚವಾದ, ಪುಲಕಿತ; ಹರ್ಷಿತ.

**पुलट**, स्त्री. = पलट.

**पुलपुला**, वि. ಮೆತ್ತಗಾದ; ಬಳುಕುವ.

**पुलपुलाना**, सक्रि. ಅದುಗು, ನಗ್ಗಿಸು; ಹೀರು, ಸೀಪು; ಮೊಮ್ಮು; ಅಗಿ अक्रि. ಹೆದರು.

**पुलपुलाहट**, स्त्री. ಭಯ, ಹೆದರಿಕೆ; ಅಗಿಯುವಿಕೆ, ಮೊಮ್ಮುವಿಕೆ.

**पुलहाना**, सक्रि. ಒಡಂಬಡಿಸು, ಒಪ್ಪಿಸು

**पुलाव**, पु. ಮಾಂಸ ಸೇರಿಸಿದ ಕಲಸನ್ನ, ಮಾಂಸದ ಹುಗ್ಗಿ.

**पुलिंदा** पु. ಕಾಗದಗಳ ಕಟ್ಟು; ಕಂತೆ, ತೋಟೆ; ಭಾಂಗಿ.

**पुलिज**, पु. ಪ್ರತಿ ಬೆಳೆಗೂ ಉಪಯೋಗಿಸುವ ಜಮೀನು.

**पुलिया**, स्त्री. ಸಣ್ಣ ಸೇತುವೆ, ಸಂಕ.

**पुलिस**, पु. ಪೋಲೀಸಿನವ, ಠಾಣೆಯವ.

**पुलिहोरा**, पु. ಹುಳಿಯನ್ನ, ಪುಳಿಹೋರೆ.

**पुवार, पुवाल**, पु. ಹುಲ್ಲುಕಡ್ಡಿ.

**पुश्त**, स्त्री. ಹಿಂಭಾಗ, ಬೆನ್ನು; ಬೆಂಬ[illegible] ಒತ್ತಾಸೆ; ಸಹಾಯಕ, ಆಶ್ರಯದಾತ; ವಂಶಪರಂಪರೆ, ತಲಾಂತರ; ಪೀಳಿಗೆ, ತಲೆಮಾರು; ಸಂತತಿ. पुश्त दर पुश्त = ತಲತಲಾಂತರ. पुश्त देना = ಓ[illegible] ಹೋಗು.

**पुश्तक**, स्त्री. ಹಿಂಗಾಲೇಟು, ಒಕ್ಕ[illegible]

**पुश्तनामा**, पु. ವಂಶಾವಳಿ, ವಂಶವೃಕ್ಷ.

**पुश्त-पनाह**, स्त्री. ಬೆಂಬಲ, ಆಸ[illegible] ಆಶ್ರಯದಾತ.

**पुश्ता**, पु. ಒತ್ತುಗೋಡೆ, ಮುಟ್ಟು[illegible] ಗೋಡೆ; ಗೋಡೆ ಅಥವಾ ಏರಿಗೆ ಒ[illegible] ಕೊಡುವಿಕೆ, ಪುಸ್ತಿಬಂದಿ; ಆಧಾ[illegible] ಏರಿ, ಕಟ್ಟೆ, ಒಡ್ಡು; ಪುಸ್ತಕದ ರಟ್ಟಿನ ಹಿಂಭಾಗ, ಬೆನ್ನು; ರಾಶಿ; ಗಂಟು, ಕಟ್ಟು.

**पुश्तारा**, पु. ಬೆನ್ನಿನ ಮೇಲೆ ಹೊ[illegible] ವಷ್ಟು ಭಾರ.

**पुश्ती**, स्त्री. ಸಹಾಯ, ನೆರವು; ಪುಸ್ತಕದ ರಟ್ಟು.

**पुश्तैनी**, वि. ಪರಂಪರಾಗತವಾ[illegible] ಪೈತೃಕ; ಸನಾತನ, ಬಹುಕಾಲದ.

**पुष्ट**, वि. ಪುಷ್ಟನಾದ; ಬಲಿಷ್ಠ; ಪೌಷ್ಟಿಕವಾದ. पुष्ट करना = ಪುಷ್ಟೀಕರಿಸು

**पुष्टई**, स्त्री. ಪೌಷ್ಟಿಕ ವಸ್ತು; [illegible] ವರ್ಧಕ ಔಷಧ.

**पुष्टि**, स्त्री. ಪೋಷಣೆ, ಪುಷ್ಟಿ; ದೃಢತೆ, ಸಮರ್ಥನೆ; ಪುಷ್ಟೀಕರಿಸುವಿಕೆ.

**पुष्प**, पु. ಪುಷ್ಪ, ಹೂ.

**पुस्तक**, स्त्री. ಪುಸ್ತಕ, ಹೊತ್ತಗೆ.

पुस्तकालय, पु. ಪುಸ್ತಕ ಭಂಡಾರ, ಪುಸ್ತಕಾಲಯ.
पुस्तिका, स्त्री. ಚಿಕ್ಕ ಪುಸ್ತಕ.
पुहुप, पु. ಪುಷ್ಪ, ಹೂ.
पुंगी, स्त्री ಪುಂಗಿ ವಾದ್ಯ; ಕೊಳಲು.
पूँछ, स्त्री. ಪುಚ್ಛ, ಬಾಲ; ಬಾಲಂಗಚ್ಚಿ.
पूँछार, वि. ಬಾಲವುಳ್ಳ.
पूँजी, स्त्री. ರಾಶಿ, ಸಮೂಹ; ಭಂಡಾರ; ನಿಧಿ, ಧನ; ಮೂಲಧನ, ಬಂಡವಾಳ.
पूँजीदार, पूंजीपति, पु. ಬಂಡವಾಳಗಾರ; ರೊಕ್ಕವಾಳ.
पूआ, पु. ಹೋಳಿಗೆ, ಒಬ್ಬಟ್ಟು.
पूग, पु. ಸಭೆ, ಕೂಟ; ರಾಶಿ, ಕುಪ್ಪೆ; ಸ್ವಭಾವ; ಅಡಕೆ.
पूगना, अक्रि. ಪೂರ್ತಿಯಾಗು, ತುಂಬು
पूच, वि. ಅಲ್ಪ; ತುಚ್ಛ; ನಿಕೃಷ್ಟ; ಅಶ್ಲೀಲ
पूछ, स्त्री. ಕೇಳುವಿಕೆ, ಪ್ರಶ್ನಿಸುವಿಕೆ; ಹುಡುಕುವಿಕೆ, ಪರೀಕ್ಷೆ; ಆದರ, ಗೌರವ.
पूछगाछ, पूछताछ, पूछपाछ, पूछाताछी, पूछापाछी, स्त्री. ಕೇಳುವಿಕೆ, ವಿಚಾರಿಸುವಿಕೆ, ತಣಿಕಾಯಿಸುಕೆ; ತಪಾಸಿ.
पूछन, पु. ಕೇಳುವಿಕೆ, ಪ್ರಶ್ನಿಸುವಿಕೆ.
पूछना, सक्रि. ಕೇಳು, ಪ್ರಶ್ನಿಸು, ಬೆಸಗೊಳ್ಳು; ವಿಚಾರಿಸು. पूछना ताछना, पूछना पाछना = ವಿಚಾರಿಸು, ತಣಿಕಾಯಿಸು.
पूजक, वि. ಪೂಜಿಸುವವನ, ಪೂಜಕ.
पूजन, पु. ಪೂಜಿಸುವಿಕೆ, ಉಪಾಸನೆ.
पूजना, सक्रि. ಪೂಜಿಸು, ಆರಾಧಿಸು; ಗೌರವಿಸು; ಹಾಳುಮಾಡು. अक्रि. ಪೂರ್ತಿಯಾಗು, ತುಂಬು, ನೆರೆ; ಹೂಳು; ಪೂರೈಸು, ತೀರು.
पूजा, स्त्री. ಪೂಜೆ; ಆರಾಧನೆ; ದಂಡನೆ. पूजा पाठ = ಪೂಜೆ ಪುನಸ್ಕಾರ.
पूट, पु. ಹಸುವಿನ ಬಾಲದ ಮೇಲುಗಡೆ ಇರುವ ಎಲುಬು.
पूठ, पु. ಪೃಷ್ಠ, ಹಿಂಭಾಗ.
पूठा, पु. ಪುಸ್ತಕದ ರಟ್ಟಿನ ಹಿಂಭಾಗ.
पूड़ा, पु. = पूआ.
पूड़ी, स्त्री. ಪೂರಿ.
पूत, वि. ಪವಿತ್ರ, ಪೂತ. पु. ಪುತ್ರ, ಮಗ.
पूतला, पु, पूतली, स्त्री. = पुतली.
पूती, स्त्री. ಗಣಿಕೆ, ಗಿಣ್ಣು.
पूनी, स्त्री. ಅರಳೆಯ ಬತ್ತಿ, ಹಂಜಿ.
पूनो, स्त्री. ಪೂರ್ಣಿಮಾ, ಹುಣ್ಣಿಮೆ.
पूरंपूर, वि. ಭರ್ತಿಯಾದ.
पूर, पु. ತುಂಬುವಿಕೆ; ಪೂರ; ಹೂರಣ. वि. ಪೂರ್ತಿಯಾದ, ತುಂಬಿದ.
पूरक, वि. ಪೂರ್ತಿಗೊಳಿಸುವ, ಪೂರಕ.
पूरन, वि. ಪೂರ್ಣವಾದ.
पूरनपूरी, स्त्री. ಹೂರಣ ಹೋಳಿಗೆ.
पूरना, सक्रि. ಪೂರ್ತಿಮಾಡು, ಭರ್ತಿಮಾಡು; ಪೂರೈಸು; ಈಡೇರಿಸು, ನೆರವೇರಿಸು; ಹೆಣೆ, ಮೊಡರು; ನೂಲು ತುಂಬಿಸು, ಹೊಲಿ; ಶಂಖ ಪೂರಿಸು, ಊದು. अक्रि. ತುಂಬು, ಭರ್ತಿಯಾಗು
पूरब, पु. ಪೂರ್ವ, ಮೂಡಲು.

**पूरबी**, वि. ಪೂರ್ವದಿಕ್ಕಿನ, ಮೂಡಣ. पु. ಒಂದು ಬಗೆ ಹಾಡು.

**पूरा**, वि. ಪೂರ್ತಿಯಾದ; ಭರ್ತಿ; ತುಂಬಿದ; ಪೂರಾ; ಪೂರೈಸಿದ; ಸಿದ್ಧಿಹೊಂದಿದ. पूरा करना = ನೆರವೇರಿಸು; ಈಡೇರಿಸು; ಪೂರ್ತಿಗೊಳಿಸು.

**पूराई**, स्त्री. **पूरापन**, पु. ಪೂರ್ತಿ, ಪೂರ್ಣತೆ; ಸಿದ್ಧಿ.

**पूरी**, स्त्री. ಪೂರ್ತಿಮಾಡುವಿಕೆ; ಪೂರ್ಣತೆ; ಕರಿದ ಕಡುಬು, ಪೂರಿ; ಮದ್ದಲೆ ಅಥವಾ ಮೃದಂಗದ ಚರ್ಮ.

**पूर्ण**, वि. ಪೂರ್ಣವಾದ, ಪೂರ್ತಿಯಾದ; ತುಂಬಿದ; ಪೂರೈಸಿದ.

**पूर्णतया**, क्रिवि. ಪೂರ್ತಿಯಾಗಿ, ಸಂಪೂರ್ಣವಾಗಿ.

**पूर्ति**, स्त्री. ಪೂರ್ತಿ; ಮುಕ್ತಾಯ.

**पूर्व**, पु. ಪೂರ್ವ, ಮೂಡಲು. वि. ಪೂರ್ವದ; ಹಿಂದಿನ ಕಾಲದ. क्रिवि. ಪೂರ್ವದಲ್ಲಿ; ಮುಂದೆ; ಮೊದಲು.

**पूर्वज**, पु. ಹಿರಿಯರು; ಪೂರ್ವಿಕರು.

**पूला**, पु. **पूली**, स्त्री. ಹುಲ್ಲಿನ ಕಟ್ಟು, ಕಂತೆ, ಪಿಂಡಿ.

**पूस**, पु. ಪುಷ್ಯಮಾಸ

**पृथक**, वि. ಬೇರೆ, ಭಿನ್ನವಾದ.

**पृथ्वी**, स्त्री. ಭೂಮಿ; ಜಮೀನು, ನೆಲ.

**पृष्ठ**, पु. ಪೃಷ್ಠ; ಹಿಂಭಾಗ; ಬೆನ್ನು; ಪುಟ, ಪಾನು, ಪೇಜು.

**पृष्ठभूमि**, स्त्री. ಹಿನ್ನೆಲೆ.

**पेंग**, स्त्री. ಹೊಯಿದಾಟ, ಜೋಲಾಡುವಿಕೆ, ಆಂದೋಳನ; ಒಂದು ಹಕ್ಕಿ.

**पेंगना**, अक्रि. ಹೊಯಿದಾಡು, ಜೋ[illegible] ಲಾಡು, ಓಲಾಡು, ತೂಗಾಡು.

**पेंच**, पु. = पेच.

**पेंठ**, स्त्री. ಸಂತೆ; ಸಂತೆಯ ದಿನ

**पेंडुकी**, स्त्री. ಪಾರಿವಾಳ; [illegible] ಳವಿ; ಕರ್ಜಿಕಾಯಿ.

**पेंदा**, पु. **पेंदी**, स्त्री. ಬುಡ, ತಳ, [illegible] ಪಾತ್ರೆಗಳ ಅಂಡು.

**पेई**, स्त्री. ಸಣ್ಣ ಕುಕ್ಕೆ, ಬುಟ್ಟಿ

**पेउसी**, स्त्री. = पेवसी.

**पेखना**, पु. ಗೊಂಬೆ, ಬೊಂಬೆ; [illegible] ಆಟದ ಸಾಮಾನು, ಆಟಿಗೆ. स[illegible] ಪ್ರೇಕ್ಷಿಸು, ನೋಡು; ಆಶಿಸು,ಬಯಸು

**पेच**, पु. ಸುತ್ತು; ತಿರುವು, ಮು[illegible] ಮುರಿಗೆ, ಪೇಚು; ಸಿಕ್ಕು, ತೊಡಕು, ಗೋಜಲು; ಮರಸುತ್ತು, ಸ್ಕ್ರೂ [illegible] ಕೀಲುಮೊಳೆ, ಮುರು; ಒಂದು [illegible] ರಣ, ಕಿವಿ ಮುರು; ಸಿರ್ಪೇಚ್, ಕುಸ್ತಿಯ ಒಂದು ವರಸೆ; ತಂತ್ರ; [illegible] ಟಯುಕ್ತಿ, ಮೋಸ, ತಾರತಕ್ಕ[illegible] ತಿರುಗಂಚಿ ಮರಗಂಚಿ.

**पेचक**, स्त्री. ದಾರದ ಬಳೆ, ಕಂಡಿಕೆ ಲಡಿ. पु. ಗೂಬೆ; ಹೇನು; ಮು[illegible]

**पेचकश**, पु. ಬಿರಡೆಯನ್ನು ಕಳ[illegible] ಮರಸುತ್ತು; ತಿರುಗುಳಿ, ತಿರುಪು[illegible].

**पेचताब**, पु. ಮನಸ್ಸಿನಲ್ಲೆ ಅಡಗಿಸಿ[illegible] ಕೋಪ; ಕಾತರತೆ; ತಲ್ಲಣ.

**पेचदार**, वि. ಸುತ್ತುಳ್ಳ; ಕೀಲು[illegible] ಸಿಕ್ಕಿನ; ತೊಡಕಿನ; ತಕ್ಕಿನ; ಮೋಸ[illegible]

**पेचवान**, पु. ಹುಕ್ಕಾವಿನ ಉದ್ದ [illegible]

ನಳಿಗೆ; ಹುಕ್ಕಾ, ಗುಡುಗುಡಿ.

पेचा, पु. ಗೂಬೆ, ಗೂಗೆ.

पेचिश, स्त्री. ಹೊಟ್ಟೆ ಕಡತ, ಹೊಟ್ಟೆ ನುಲಿ; ಸಂಗ್ರಹಣಿ, ಶೀತಭೇದಿ; ಗೋಜಲು, ಗೊಂದಲ; ತೊಡಕು; ತಟವಟ.

पेचीदगी, स्त्री. ಸಿಕ್ಕು ತೊಡಕು; ಕಷ್ಟ.

पेचीदा, पेचीला, वि. ಸುತ್ತಿನ; ತೊಡಕಿನ, ಸಿಕ್ಕಿನ; ಕಠಿನವಾದ.

पेज, स्त्री. ಗಡ್ಡೆ ಕಟ್ಟಿಸಿದ ಹಾಲು.

पेट,पु. ಹೊಟ್ಟೆ, ಉದರ; ಗರ್ಭ; ಬಸಿರು; ಸ್ಥಳ, ಇಂಬು; ಬಂದೂಕದ ಕೊಳವೆ; ಪಸಿವೆ; ಹೊಟ್ಟೆಯ ಪಾಡು. पेट चलना=ಹೊಟ್ಟೆ ಕಳೆ, ಭೇದಿಯಾಗು. पेटवाली=ಬಸುರಿ, ಗರ್ಭಿಣಿ. पेट पीठ से लग जाना=ಹಸಿವಿನಿಂದ ಹೊಟ್ಟೆ ಬೆನ್ನಿಗೆ ಹತ್ತು. पेट में चूहे कूदना=ಹೊಟ್ಟೆಯಲ್ಲಿರುವ ಕಿಲುಬೆ ಹುಳು ಸತ್ತು ಹೋಗು, ಹೊಟ್ಟೆಯಲ್ಲಿ ಕಾಗೆಯಾಡು, ಬಹಳ ಹಸಿವಾಗು.

पेटक, पु. ಪೆಟ್ಟಿಗೆ; ಗುಂಪು, ಸಂದಣಿ.

पेटल, वि. ಹೊಟ್ಟೆಯುವ, ಬೊಜ್ಜ.

पेटा, पु. ಹೊಟ್ಟೆ; ನಡು, ಮಧ್ಯ; ತಪಶೀಲು, ವಿವರ, ಮಾಹಿತಿ. स्त्री. ದೊಡ್ಡ ಬುಟ್ಟಿ, ಪೆಟಾರಿ.

पेटारा, पु. = पिटारा.

पेटार्थू, वि. ಹೊಟ್ಟೆಬಾಕ, ತಿನಾಳಿ.

पेटिका, स्त्री. ಚಿಕ್ಕ ಪೆಟ್ಟಿಗೆ, ಕೈಪೆಟ್ಟಿಗೆ.

पेटिया, स्त्री. ಅಶನ, ಪಡಿ; ವರ್ಷಾಶನ.

पेटी, स्त्री. ಪೆಟ್ಟಿಗೆ, ಮಂದಾಸು; ಹೊಟ್ಟೆ, ಕಿಬ್ಬೊಟ್ಟೆ; ನಡುಕಟ್ಟು, ಕಮ್ಮರ್ ಬಂದು; ನವಾರ, ಡವಾಲಿ; ಹಡಪ.

पेटू, वि. ಹೊಟ್ಟೆಬಾಕ, ತಿಂಡಿಬಾಕ.

पेटूनी, स्त्री. ಗರ್ಭಿಣಿ, ಬಸುರಿ.

पेठा, पु. ಸಿಹಿ ಕುಂಬಳಕಾಯಿ; ಒಂದು ಮಿಠಾಯಿ.

पेड़, पु. ಮುದ್ದೆ; ಮರ, ವೃಕ್ಷ; ಗಿಡ. पेड़ पौधा = ಗಿಡಗೆಂಟೆ, ಗಿಡಮರ.

पेड़ा, पु. ಒಂದು ಮಿಠಾಯಿ, "ದೂದ್ ಪೇಡಾ"; ಹಪ್ಪಳದ ಕಣಕದ ಬಿಲ್ಲೆ.

पेड़ी, स्त्री. ಅಡಿಮರ, ಬಡ್ಡೆ; ವೀಳೆಯದೆಲೆಯ ತಾಯಿ ಬಳ್ಳಿ; ಇದರಿಂದ ಕೊಯ್ದ ವೀಳೆಯದೆಲೆ; ಮರಗಳ ಮೇಲಿನ ತೆರಿಗೆ; ಮರವಳಿ ಗುತ್ತಿಗೆ.

पेड़ू, पु. ಹೊಕ್ಕಳಿನ ಕೆಳಗಣ ಭಾಗ, ಕಿಬ್ಬೊಟ್ಟೆ, ಕಿಬ್ಬಸುರು.

पेन्हाना, अक्रि. ಹಾಲಿನ ಸೊರೆಬಿಡು.

पेड़ना, पेरना, सक्रि. ಹಿಸಕು, ಹಿಂಡು, ಒತ್ತು; ತಿಪ್ಪಲುಪಡಿಸು.

पेरू, पु. ಸೀಮೆ ಕೋಳಿ.

पेल, पु. ನೂಕಾಟ; ನೂಕು ನುಗ್ಗು, ನುಗ್ಗಲು; ಸಂದಣಿ. स्त्री. ಹೇರಳ, ದಂಡಿ. रेल पेल = ಸಮೃದ್ಧಿ; ಸುಗ್ಗಿ, ದಂಡಿ.

पेलना, सक्रि. ಒತ್ತು, ಅಮುಕು; ದೂಡು, ತಳ್ಳು, ನೂಕು; ಬಲವಂತಪಡಿಸು; ಅಡಚು; ತುರುಕು.

पेला, पु. ದೂಡುವಿಕೆ, ತಳ್ಳುವಿಕೆ; ಜಗಳ; ಅಪರಾಧ; ರೇಷ್ಮೆಹುಳು; ರೇಷ್ಮೆಗೂಡು.

पेलू, वि. ದೂಡುವವ, ನೂಕುವವ;

ಕುಸ್ತಿ ಮಾಡುವವ, ಜಟ್ಟಿ.

**पेवस, पेवसी,** स्त्री. ಗಿಣ್ಣು ಹಾಲು; ಗಿಣ್ಣುಹಾಲಿನಿಂದ ತಯಾರಾದ ಹಾಲು ಖೋವಾ.

**पेश,** वि. ಮುಂಭಾಗ, ಪೂರ್ವಭಾಗ; ಮುಂದುವರಿದ; ಗೌರವಿಸಿದ, ಮಾನ್ಯ; ನಂಬಿಕೆಯುಳ್ಳ, ವಿಶ್ವಸ್ತ. क्रिवि. ಮುಂದೆ, ಮುಂದುಗಡೆ, ಎದುರಿನಲ್ಲಿ. पेश आना = ಮುಂದೆ ಬರು; ಒದಗು; ವರ್ತಿಸು. पेश करना = ಮುಂದು ವರಿಸು; ಮುಂದಿಡು; ಸಮರ್ಪಿಸು.

**पेश-क़दमी,** स्त्री. ಮುಂದುವರಿಯುವಿಕೆ; ಪೂರ್ವಾಲೋಚನೆ, ಮುಂದೃಷ್ಟಿ; ಚುರುಕು, ಚಟುವಟಿಕೆ; ಮುಂದಾಳುತನ, ನೇತೃತ್ವ.

**पेशकब्ज़,** स्त्री. ಕಠಾರಿ, ಚಾಕು.

**पेचकश,** पु. ಕಪ್ಪ, ಕಾಣಿಕೆ; ಜಮೀನಿನ ಲಾವಣಿ, ಕಂದಾಯ.

**पेशकार,** पु. ಕಾರ್ಯಸ್ಥ; ಬಕ್ಷಿ; ಪೇಷ್ಕಾರ.

**पेशकारी,** स्त्री. ಕಾರ್ಯಸ್ಥನ ಕೆಲಸ; ಪೇಷ್ಕಾರನ ಉದ್ಯೋಗ.

**पेशख़ेमा,** पु. ಪೂರ್ವಭಾವಿಯಾಗಿ ರವಾನಿಸುವ ದಂಡಿನಸಾಮಾನು; ಮುಂದಳ, ದಳಮುಖ; ಪೂರ್ವಲಕ್ಷಣ; ಅಗ್ರದೂತ.

**पेशगाह,** स्त्री. ಮೊಗಸಾಲೆ.

**पेशगी,** स्त्री. ಮುಂಗಡ; ಸಂಚಕಾರ.

**पेशकर,** वि. ಪೂರ್ವದ, ಮೊದಲಿನ. क्रिवि. ಪೂರ್ವದಲ್ಲಿ, ಮೊದಲು.

**पेशदस्त,** वि. ಪೂರ್ವಭಾವಿಯಾಗಿ ವ್ಯವಸ್ಥೆ ಮಾಡುವವ; ಉತ್ಕೃಷ್ಟ ... ಶ್ರೇಷ್ಠ. पु. ಸಹಾಯಕ; ಸಂಚಕಾರ.

**पेशदस्ती,** स्त्री. ಮೊದಲೇ ಮಾಡುವ ಏರ್ಪಾಡು, ಪೂರ್ವಸಿದ್ಧತೆ; ಬಲಾತ್ಕಾರ; ಶ್ರೇಷ್ಠತೆ, ಉತ್ಕೃಷ್ಟತೆ; ಮುಂಗಡವಾಗಿ ಕೊಡುವಿಕೆ.

**पेशनामा,** पु. ಭೂಮಿಕೆ, ಮುನ್ನುಡಿ.

**पेशबंद,** पु. ಜೀನನ್ನು ಕಟ್ಟುವ ಮುಂದುಗಡೆಯ ಹಗ್ಗ.

**पेशबंदी,** स्त्री. ಪೂರ್ವವ್ಯವಸ್ಥೆ; ಪೂರ್ವಸಿದ್ಧತೆ; ಭೂಮಿಕೆ, ಪೀಠಿಕೆ.

**पेशबीन,** वि. ಮುಂದಾಲೋಚನೆಯುಳ್ಳವ; ಜಾಣ.

**पेशबीनी,** स्त्री. ಮುಂದಾಲೋಚನೆ, ಪೂರ್ವಾಲೋಚನೆ; ಜಾಣತನ.

**पेशरफ़्त,** वि. ಸಫಲವಾದ; ಗುಣಕಾರಿ.

**पेशरौ,** पु. ಮುಂದೆಹೋಗುವವ, ಮಾರ್ಗದರ್ಶಿ; ಮುಂದಳ.

**पेशराज़,** पु. ಕಲ್ಲು ಹೊರುವ ಆಳು.

**पेशवा,** पु. ಆದರ್ಶಪುರುಷ; ಮಾರ್ಗ...; ದಳಪತಿ, ನಾಯಕ; ಗುರು, ಆಚಾರ್ಯ; ಮಹಂತ; ಮುಂದಾಳು, ಪ್ರಧಾನಿ; ಮರಾಠರ ಸಾಮ್ರಾಜ್ಯದ ಪ್ರಧಾನ ಮಂತ್ರಿಯ ಬಿರುದು, ಪೇಶ್ವೆ.

**पेशवाई,** स्त्री. ಮುಂದಾಳುತನ; ನಾಯಕತ್ವ; ಶ್ರೇಷ್ಠತೆ; ಎದುರುಗೊಳ್ಳುವಿಕೆ, ಸ್ವಾಗತ; ಪೇಶ್ವೆಯರ ಪದವಿ ಅಥವಾ ರಾಜತಂತ್ರ.

**पेशवाज़,** स्त्री. ಸೂಳೆಯರು ನರ್ತನ...

ವಾಡುವಾಗ ಧರಿಸುವ ಲಂಗ, ಅಲಂಕಾರದ ಉಡುಪು.

पेशा, स्त्री. ವೃತ್ತಿ, ಉದ್ಯೋಗ, ಕೆಲಸ, ಕಾಯಕ, ಕಸಬು.

पेशानी, स्त्री. ಹಣೆ; ಹಣೆ ಬರಹ; ಭಾಗ್ಯ.

पेशाब, पु. ಮೂತ್ರ, ಉಚ್ಚೆ.

पेशाबख़ाना, पु. ಉಚ್ಚೆ ಹೊಯ್ಯುವ ಸ್ಥಳ, ಮೂತ್ರಿ.

पेशाब-बंद, पु. ಉಚ್ಚೆ ಕಟ್ಟುವಿಕೆ, ಮೂತ್ರಕೃಚ್ಛ್ರ.

पेशावर, पु. ಕಸಬುದಾರ, ಕೆಲಸಗಾರ.

पेशी, स्त्री. ಮೊಕದ್ದಮೆಯು ನ್ಯಾಯಾಧಿಪತಿಯ ಮುಂದೆ ಬರುವಿಕೆ, ವಿಚಾರಣೆ, "ಹೀರಿಂಗು"; ಮುಂದೆ ಬರುವಿಕೆ; ಉಪಸ್ಥಿತಿ, ಹಾಜರಿ; ಮುಂಗಡ; ಚೀಲ, ಗವಸಣಿಗೆ, ಒರೆ.

पेशीन, वि. ಪೂರ್ವದ; ಮುಂದಿನ. पु. ಪ್ರಾತಃಕಾಲ, ಬೆಳಿಗ್ಗೆ.

पेशीनगो, पु. ಭವಿಷ್ಯ ಹೇಳುವವ, ಅಗಮಿಕ.

पेशीनगोई, स्त्री. ಭವಿಷ್ಯ ಹೇಳುವಿಕೆ, ಭವಿಷ್ಯದ್ವಾಕ್ಯ.

पेश्तर, वि. = पेशतर.

पेठा, पु. ಕಕ್ಕರಿಕೆ, ಮಿಸಿಕೆ ಹಣ್ಣು.

पैचना, सक्रि. ಕೇರು, ತೂರು, ಒನೆಯು

पैंचा, पु. ಸಾಲ, ಕಡ; ಮುಯ್ಯಿ.

पैंजन, पैंजनी, स्त्री. ಗೆಜ್ಜೆಯ ಸರ; ನೂಲಸು, ರುಳಿ, ಪಾಡಗ, ಪೈಜಣ.

पैंट, पु. = पतलून.

पैंठ, स्त्री. ಸಂತೆ, ಅಂಗಡಿ; ಪ್ರವೇಶ; ದ್ವಾರ; ಹುಂಡಿಯ ದ್ವಿಪ್ರತಿ.

पैंड, पु. ಹೆಜ್ಜೆ; ದಾರಿ.

पैंडा, पु. ದಾರಿ, ಹಾದಿ; ಲಾಯ, ತಬೇಲಿ.

पैंतरा, पु. ಕಾಲಿನ ಚಲನೆ, ಗತ್ತು; ಪೇರಣಿ, ಜತಿ; ವರಸೆ.

पैंताना, पु. ಮಂಚದ ಕಾಲುಕಡೆ.

पैंतालीस, वि. ನಲವತ್ತೈದು.

पैंतीस, वि. ಮೂವತ್ತೈದು.

पैंसठ, वि. ಅರವತ್ತೈದು.

पै, पु. ಕಾಲು, ಪಾದ. अव्य. ಆದರೆ, ಪರಂತು. प्रत्य. ಮೇಲೆ.

पैक, पु. ದೂತ, ಹರಕಾರ.

पैकड़ा, पु. ಕಾಲುಸಂಕೊಲೆ.

पैकड़ी, स्त्री. ಕಾಲು ಸರಪಣಿ; ರುಳಿ.

पैकर, पु. ಆಕೃತಿ, ಆಕಾರ; ರೂಪ.

पैकान, स्त्री. ಅಂಬಿನ ಮೊನೆ.

पैकार, पु. ಚಿಲ್ಲರೆ ವ್ಯಾಪಾರಿ, ಕೋರಿಸೆಟ್ಟಿ. स्त्री. ಯುದ್ಧ, ಕದನ.

पैकी, पु. ಹುಕ್ಕಾವನ್ನು ಬಾಡಿಗೆಗೆ ಕೊಡುವವ.

पैख़ाना, पु. = पायख़ाना.

पैग़ंबर, पु. ಈಶ್ವರನ ದೂತ, ದೇವದೂತ; ಪೈಗಂಬರು, ನಬೀ.

पैग़ंबरी, वि. ಪೈಗಂಬರನಿಗೆಸಂಬಂಧಿಸಿದ

पैग़ाम, पु. ಸಂದೇಶ; ದೌತ್ಯ.

पैग़ार, पु. ನೇಗಿಲ ಸಾಲು; ಹಳ್ಳ.

पैगू, पु. ಒಂದು ಬಗೆ ಹಸುರು ಕಲ್ಲು.

पैज, स्त्री. ಪ್ರತಿಜ್ಞೆ, ಪ್ರಮಾಣ.

पैजामा, पु. = पायजामा.

पैज़ार, पु. ಪಾದರಕ್ಷೆ, ಜೋಡು, ಕೆರ,

ಎಕ್ಕಡ. जूती पैजार = ಎಕ್ಕಡದ ಏಟು; ಪರಸ್ಪರ ಜಗಳ.

**पैठ,** स्त्री. ಪ್ರವೇಶಿಸುವಿಕೆ, ಪ್ರವೇಶ.

**पैठना,** अक्रि. ಹೊಗು, ಪ್ರವೇಶಿಸು; ನುಸುಳು; ಧುಮುಕು.

**पैठाना, पैठालना,** सक्रि. ಹೊಗಿಸು; ಪ್ರವೇಶವಮಾಡಿಸು; ನುಸುಳಿಸು.

**पैठाव,** पु. ಪ್ರವೇಶಿಸುವಿಕೆ; ಪ್ರವೇಶ.

**पैड़ी,** स्त्री. ಏಣಿ; ಸೋಪಾನ; ಮೆಟ್ಟಿಲು.

**पैतरा,** पु. = पैंतरा.

**पैतला,** वि. ಆಳವಿಲ್ಲದ, ಗಾಧ.

**पैतृक,** वि. ಪಿತೃಸಂಬಂಧವಾದ.

**पैदल,** क्रिवि. ಕಾಲುನಡೆಯಾಗಿ, ಪಾದಚಾರಿಯಾಗಿ. पु. ಕಾಲುನಡಿಗೆ; ಪಾದಚಾರಿ; ಕಾಲಾಳು; ಪದಾತಿ.

**पैदा,** वि. ಜನಿಸಿದ; ಹುಟ್ಟಿದ; ಉಂಟಾದ; ಏರ್ಪಟ್ಟ. स्त्री. ಹುಟ್ಟುವಳಿ; ಸಂಪಾದನೆ; ಲಾಭ. पैदा होना = ಹುಟ್ಟು; ಉಂಟಾಗು; ಏರ್ಪಡು.

**पैदाइश,** स्त्री. ಜನ್ಮ, ಹುಟ್ಟು; ಉತ್ಪತ್ತಿ; ಸಂಪಾದನೆ, ಆಯ; ಲಾಭ.

**पैदाइशी,** वि. ಜನ್ಮದ, ಹುಟ್ಟು(ಗುಣ); ಆಗರ್ಭ; ಸಹಜವಾದ.

**पैदावर, पैदावार, पैदावारी,** स्त्री. ಹುಟ್ಟುವಳಿ, ಉತ್ಪತ್ತಿ; ಫಸಲು; ಫಲ; ಲಾಭ.

**पैन,** पु. ಸಣ್ಣಜಲಾಶಯ, ಹಳ್ಳ, ಕಾಲುವೆ.

**पैना,** वि. ತೀಕ್ಷ್ಣವಾದ; ಕೂರಾದ, ಚೂಪಾದ; ಮೊನಚಾದ, ಹರಿತ. पु. ಮುಳ್ಳುಗೋಲು, ಅಂಕುಶ.

**पैनाना,** सक्रि. ಹರಿತಮಾಡು, ಮಸೆ.

**पैनाला,** पु. ನಳಿಗೆ, ಚರಂಡಿ, ಮೋರಿ.

**पैमक,** स्त्री. ಪಟ್ಟಿರೇಶಿಮೆ, ಕಿನಕಾಬು.

**पैमा,** स्त्री. ಅಳೆಯುವಿಕೆ; ಅಳೆಯುವವ.

**पैमाइश,** स्त्री. ಅಳೆಯುವಿಕೆ, ಸೈವಾಯಿಷಿ.

**पैमान,** पु. ಅಳೆಯುವಿಕೆ; ಒಡಂಬಡಿಕೆ, ಒಪ್ಪಂದ, ಕರಾರು; ವಾಗ್ದಾನ, ಪ್ರತಿಜ್ಞೆ.

**पैमाना,** पु. ಅಳೆಯುವ ಉಪಕರಣ. ಮಾನ; ಪ್ರಮಾಣ, ಪರಿಮಾಣ.

**पैया,** पु. ಪೊಳ್ಳುಕಾಳು, ಜೊಳ್ಳು; ಚಕ್ರ.

**पैर,** पु. ಕಾಲು; ಅಡಿ; ಹೆಜ್ಜೆ. पैर गाडी = ದ್ವಿಚಕ್ರಬಂಡಿ, ಕಾಲ್ಗಾಡಿ "ಬೈಸಿಕಲ್ಲು".

**पैरना,** अक्रि. ಈಜು, ಈಜಾಡು.

**पैरवी,** स्त्री. ಅನುಸರಿಸುವಿಕೆ, ಅನುಗಮನ; ಹಿಂಬಾಲಿಸುವಿಕೆ; ಮುಂದುವರಿಸುವಿಕೆ, ಸವಣಿಸುವಿಕೆ; ಮುಂದಿನ ಕ್ರಮ ನಡೆಸುವಿಕೆ.

**पैरवीकार,** पु. ಅನುಸರಿಸುವವ; ಮುಂದಿನ ಕ್ರಮ ನಡೆಸುವವನ.

**पैरा,** पु. ಕಾಲಿಡುವಿಕೆ, ಪದಾರ್ಪಣ; ಏಣಿ; ಸೋಪಾನ.

**पैराई,** स्त्री. ಈಜುವಿಕೆ, ಈಜಾಟ.

**पैराक, पैराकू,** पु. ಈಜುವವ, ಈಜುಗಾರ.

**पैराकी,** स्त्री. ಈಜುಗಾರಿಕೆ.

**पैराना,** सक्रि. ಈಜಾಡಿಸು; ಈಜುಕಲಿಸು.

**पैराव,** पु. ಈಜುವಷ್ಟು ಆಳ.

**पैरावा,** पु. ಸಾಗುವಳಿ, ಆರಂಬ.

**पैरास्ता**, वि. ಅಲಂಕೃತ, ಸಿಂಗರಿಸಿದ.
**पैराहन**, पु. ಹೊದಿಕೆ, ಆಚ್ಛಾದನ; ವಸ್ತ್ರ; ಜೂಲುಬಟ್ಟೆ.
**पैरी**, स्त्री. ಏಣಿ; ಸೋಪಾನ; ಕಾಲಿನ ಒಂದು ಆಭರಣ.
**पैरो**, पु. ಅನುಯಾಯಿ, ಶಿಷ್ಯ.
**पैरोकार**, पु. = पैरवीकार.
**पैला**, पु. **पैली**, स्त्री. ಧಾನ್ಯ ಅಳೆಯುವ ಪಾತ್ರೆ, ಕೊಳಗ; ಶ್ರಾವೆ
**पैवंद**, पु. ತೇಪೆ, ಅಪ್ಪಿಗೆ; ಸೇರಿಸುವಿಕೆ, ಜಂಟಿ; ಕಸಿ ಮಾಡುವಿಕೆ. वि. ಜಂಟಿಸಿದ, ಸೇರಿಸಿದ.
**पैवंदकार**, वि. ತೇಪೆಹಾಕುವವ; ಜಂಟಿಸುವವ; ಕಸಿ ಮಾಡುವವ.
**पैवंदी**, वि. ತೇಪೆಹಾಕಿದ; ಸೇರಿಸಿದ, ಜಂಟಿಸಿದ; ಕಸಿ ಮಾಡಿದ (ಗಿಡ); ಸಂಕರ ಜಾತಿಯ.
**पैवस्तगी**, स्त्री. ಸೇರಿಕೆ, ಜಂಟಿ; ಸ್ನೇಹ.
**पैवस्त**, **पैवस्ता**, वि. ಮಿಳಿತವಾದ, ಸೇರಿದ; ಕಲೆತ, ಬೆರೆತ.
**पैसना**, अक्रि. ಪ್ರವೇಶಿಸು, ಹೊಗು.
**पैसरा**, पु. ಪ್ರಯತ್ನ; ಕಷ್ಟ; ರಗಳೆ.
**पैसा**, पु. ಕಾಲಾಣೆಯ ನಾಣ್ಯ, ಪೈಸಾ, ದಿಲ್ಲೆ; ಮೂರು ಕಾಸು; ಹಣಕಾಸು, ಧನ. [ನಾಣ್ಯಗಳ ಹಿಂದೀ ಹೆಸರುಗಳನ್ನು ಅನುಬಂಧದಲ್ಲಿಕೊಟ್ಟಿರುವ ನಾಣ್ಯಗಳ ಕೋಷ್ಟಕದಿಂದ ತಿಳಿಯಬಹುದು.]
**पैसार**, पु. ಹೊಗುವಿಕೆ, ಪ್ರವೇಶ.
**पोंका**, पु. ಒಂದು ಬಗೆ ಮಿಡಿತೆ; ಕೀಟ.
**पोंगा**, वि. ಪೊಳ್ಳು, ಟೊಳ್ಳು. पु. ಕೊಳವೆ, ನಳಿಗೆ; ಗೊಟ್ಟ; ದಡ್ಡ, ಪೆದ್ದ. **पोंगा पंडित** = ಪೆದ್ದಭಟ್ಟ, ಕೋಚು ಭಟ್ಟ; ಮಡ್ಡಿ ಸಾಂಬ್ರಾಣಿ.
**पोंगी**, स्त्री. ಚಿಕ್ಕ ನಳಿಗೆ; ಕೊಳಲು, ಪಿಳ್ಳಂಗೋವಿ; ಪುಂಗಿ ವಾದ್ಯ.
**पोंछन**, स्त्री. ಮೈ ಒರೆಸುವ ಬಟ್ಟೆ; ಕಸ; ಒರೆಸಿ ತೆಗೆದದ್ದು, ಉಜ್ಜಿ ತೆಗೆದದ್ದು.
**पोंछना**, सक्रि. ಒರೆಸು, ಸೀಟು; ತಿಕ್ಕು, ಉಜ್ಜು, ತೀಡು; ತೊಡೆ. पु. ಉಜ್ಜುವ ವಸ್ತ್ರ; ಒರೆಸುವ ಬಟ್ಟೆ.
**पोंटा**, पु. ಸಿಂಬಳ, ಗೊಣ್ಣೆ.
**पोआ**, पु. ಹಾವಿನ ಮರಿ; ಒಂದು ಸೊಪ್ಪು.
**पोआना**, सक्रि. पोना का प्रे. रूप.
**पोआर**, **पोआल**, पु. ಒಣಹುಲ್ಲು.
**पोइया**, स्त्री. ನಾಗಾಲೋಟ, ದೌಡು.
**पोइस**, स्त्री. ನಾಗಾಲೋಟ, ದೌಡು. अव्य. ಜೋಕೆ, ಹುಷಾರ್, ಪರಾಕು!
**पोई**, स्त्री. ಬಸಲೆ ಸೊಪ್ಪು; ಕುದುರೆಯ ನಿಧಾನ ನಡಿಗೆ.
**पोखर**, **पोखरा**, पु. **पोखरी**, स्त्री. ಪುಷ್ಕರಣಿ, ಹೊಕ್ಕರಣಿ.
**पोच**, वि. ತುಚ್ಛ, ನಿಕೃಷ್ಟ, ಹೀನ.
**पोज़बंद**, पु. ಬಾಯಿ, ಮೂತಿ.
**पोज़िश**, स्त्री. ಕ್ಷಮಾಪಣೆ, ಮಾಫಿ.
**पोट**, स्त्री ಮೂಟೆ, ಗಂಟು; ಹೊರೆ; ಭಾಂಗಿ; ರಾಶಿ, ಕುಪ್ಪೆ; ನಳಿಗೆ; ಬೆಳ್ಳುಳ್ಳಿ.
**पोटड़ी**, स्त्री. ಮಾವಿ ಚೀಲ, ಮಾಸು.
**पोटना**, सक्रि. ಶೇಖರಿಸು, ಒಟ್ಟುಗೂಡಿಸು; ಪುಸಲಾಯಿಸು; ಹೊರಳಾಡು.

**पोटला**, पु. ದೊಡ್ಡ ಪೊಟ್ಟಣ; ಭಾಂಗಿ.

**पोटली**, स्त्री. ಪೊಟ್ಟಣ; ಚಿಕ್ಕ ಗಂಟು.

**पोटा**, पु. **पोटी**, स्त्री. ಕಣ್ಣಿನ ಎವೆ; ಬೆರಳಿನ ತುದಿ; ಹೊಟ್ಟೆ, ಉದರ; ಪಿಳ್ಳೆ, ಮರಿ; ಗರಿಗಟ್ಟಿದ ಪಕ್ಕಿಮರಿ; ಸಾಮರ್ಥ್ಯ, ಯೋಗ್ಯತೆ, ಅಂತಸ್ತು; ಮನೆ ಸಾಮಾನು; ಸಿಂಬಳ, ಗೊಣ್ಣೆ.

**पोढ़**, **पोढ़ा**, वि. ದೃಢವಾದ; ಬಲಿಷ್ಠ; ಗಟ್ಟಿ; ದಟ್ಟ, ನಿಬಿಡ.

**पोढ़ाई**, स्त्री. ದೃಢತೆ; ಗಟ್ಟಿ; ನಿಬಿಡತೆ, ಸಾಂದ್ರತೆ.

**पोढ़ाना**, अक्रि. ದೃಢವಾಗು, ಗಟ್ಟಿಯಾಗು. सक्रि. ದೃಢಪಡಿಸು.

**पोत**, पु. ಮರಿ, ಪಿಳ್ಳೆ; ಕಂದು; ನೆಯ್ಗೆ, ಅಣಿ; ನಾವೆ, ಹಡಗು; ರೀತಿ, ವಿಧ; ಸ್ವಭಾವ; ಗುಣ; ಸರ್ತಿ, ಸರದಿ, ಒಂತು; ಜಮಾಸಿನ ತೆರಿಗೆ, ಕಂದಾಯ; ಸಗಣಿ. स्त्री. ತುಳಸಿ ಮಣಿ, ಗಾಜಿನ ಮಣಿ.

**पोतदार**, पु. ಕೋಶಾಧ್ಯಕ್ಷ, ಖಜಾನ್ಜಿ, ಖಜಾನದಾರ; ಸರಾಫ, ಪತ್ತಾರಿ.

**पोतना**, सक्रि. ಸವರು, ಬಳಿ; ಪೂಸು; ಸಾರಿಸು; ಮೆತ್ತು. पु. ಸಾರಿಸುವಬಟ್ಟೆ, ಬಳಿಯುವ ಬಟ್ಟೆ; ಕುಚ್ಚುಮಟ್ಟೆ.

**पोतरा**, पु. ಚಿಕ್ಕ ವಸ್ತ್ರ, ಪುಟಗೋಸಿ.

**पोतला**, पु. = **परौठा**.

**पोता**, पु. ಪೌತ್ರ, ಮೊಮ್ಮಗ; ಮರಿ; ನಾಕ; ತೆರಿಗೆ, ಕಂದಾಯ; ಅಂಡಕೋಶ; ಲೇಪ, ಮೆತ್ತನೆ, ಸಾರಣೆ; ಬಳಿಯುವ ವಸ್ತ್ರ; ಕುಚ್ಚುಮಟ್ಟೆ; ಮಣ್ಣುಗಾರೆ, ಗಚ್ಚು.

**पोतिया**, पु. ಸ್ನಾನದ ಪಂಚೆ, ಪಾಣಿಪಂಚೆ; ಪುಟಗೋಸಿ; ಸರ್ತಿಯವ; ಆಟದ ಸಾಮಾನು.

**पोती**, स्त्री. ಮೊಮ್ಮಗಳು, ಪೌತ್ರಿ; ಬಳಿಯುವಿಕೆ, ಸವರುವಿಕೆ, ಪೂಸುವಿಕೆ. लीपा पोती = ಸಾರಣೆ, ಸವರುವಿಕೆ; ಕಣ್ಣು ಒರೆಸುವಿಕೆ.

**पोथ**, स्त्री. ಬೆಳ್ಳುಳ್ಳಿಯ ಕೊನೆ; ಪುಸ್ತಕ; ಗಾಜಿನ ಮಣಿ.

**पोथा**, पु. ಪುಸ್ತಕ; ಕಾಗದದ ಕಟ್ಟು.

**पोथी**, स्त्री. ಪುಸ್ತಕ, ಹೊತ್ತಗೆ; ಪುರಾಣ.

**पोदना**, पु. ಒಂದು ಪಕ್ಷಿ; ಕುಳ್ಳ, ಗಿಡ್ಡ.

**पोद्दार**, पु. = **पोतदार**.

**पोना**, सक्रि. ಹೋಳಿಗೆ ಅಥವಾ ರೊಟ್ಟಿ ತಟ್ಟು, ರೊಟ್ಟಿ ಸುಡು, ಬೇಯಿಸು; ಪೋಣಿಸು, ಕೋಡು.

**पोनी**, स्त्री. ಹತ್ತಿಯ ತೊಳೆ; ಹಂಜಿ.

**पोपता**, पु. ಒಂದು ಬಗೆ ಹಣ್ಣು; ರೆಪ್ಪೆ, ಎವೆ.

**पोपनी**, स्त्री. ಸುಷಿರವಾದ್ಯ, ಮುಖವಾದ್ಯ; ಎಲೆ ಮೊದಲಾದುವುಗಳಿಂದ ಮಾಡಿದ ಶಿಲಿಪೆ.

**पोपला**, वि. ಹಲ್ಲುಗಳಿಲ್ಲದ, ಬೋಡು.

**पोपलाना**, अक्रि. ಬೊಕ್ಕ ಬಾಯಾಗು, ಬೋಡು ಬಾಯಾಗು.

**पोर**, **पोरी**, स्त्री. ಗಣಿಕೆ, ಗಣಿಲು; ಬಿದಿರಿನ ಗಿಣ್ಣು; ಬೆನ್ನುಹುರಿ.

**पोरा**, पु. ಬೆರಳು; ತುಂಡು, ತುಣುಕು; ತೊಲೆ, ಜಂತಿ.

**पोरुआ**, पु. ಬೆರಳಿನ ಗಣಿಕೆ.

**पोल**, पु. ಬಾಗಿಲು, ದ್ವಾರ; ಮನೆಯ ಮುಂದಣ ಅಂಗಳ; ಪೈಸಾ, ಹಣ; ಮರಿ, ಪಿಳ್ಳೆ; ಶೂನ್ಯ, ಖಾಲಿ; ಟೊಳ್ಳು, ಪೊಳ್ಳು. पोल खुलना = ಪೊಳ್ಳುತನ ಬಯಲಾಗು, ಗುಟ್ಟು ರಟ್ಟಾಗು.

**पोला**, वि. ಖಾಲಿ; ಟೊಳ್ಳಾದ, ಪೊಳ್ಳು; ಗಟ್ಟಿಯಿಲ್ಲದ; ಮೆದುವಾದ; ರಂಧ್ರಮಯ.

**पोलिया**, पु. ದ್ವಾರಪಾಲಕ, ಪಡಿಯರ.

**पोली**, स्त्री. ಜೇನುಗೂಡು; ರಂಧ್ರಮಯವಾದ ವಸ್ತು.

**पोष**, पु. ಬೆಳವಣಿಗೆ; ಸೌಖ್ಯ; ಸಮೃದ್ಧಿ.

**पोषक**, वि. ಪೋಷಿಸುವವ, ಪೋಷಕ.

**पोश**, पु. ಉಡಿಗೆ, ತೊಡಿಗೆ.

**पोशाक**, **पोशिश**, स्त्री. ಉಡಿಗೆ, ಉಡುಪು, ದುಸ್ತು, ಪೋಷಾಕು.

**पोशीदगी**, स्त्री. ಮುಚ್ಚುಮರೆ; ಗೋಪ್ಯ, ರಹಸ್ಯ.

**पोशीदा**, वि. ವಸ್ತ್ರಧರಿಸಿದ; ಮುಚ್ಚಿದ; ಗುಟ್ಟಾದ, ಗುಪ್ತವಾದ. क्रिवि. ಗುಟ್ಟಾಗಿ, ಗೋಪ್ಯವಾಗಿ.

**पोषना**, **पोसना**, सक्रि. ಪೋಷಿಸು, ಸಾಕು, ಸಲಹು.

**पोस्त**, पु. ಚರ್ಮ; ಸಿಪ್ಪೆ; ತೊಗಟೆ; ಗಸಗಸೆಯ ಗಿಡ ಅಥವಾ ಕಾಯಿ; ಅಫೀಮು.

**पोस्ता**, पु. ಗಸಗಸೆ ಗಿಡ; ಒಡ್ಡು, ಕಟ್ಟೆ

**पोस्ती**, पु. ಅಫೀಮು ಸೇವಿಸುವವ, ಅಫೀಮುಖೋರ; ಸೋಮಾರಿ.

**पोस्तीन**, वि. ಚರ್ಮದ. पु. ಮೃಗಗಳ ಚರ್ಮದಿಂದ ಹೊಲಿದ ಅಂಗಿ; ಕೃಷ್ಣಾಜಿನದ ಅಂಗಿ; ಪುಸ್ತಕಕ್ಕೆ ರಟ್ಟು ಕಟ್ಟುವಾಗ ಒಳಗಡೆ ಅಂಟಿಸುವ ಗಟ್ಟಿ ಕಾಗದ; ಕುಂದು, ದೋಷ; ದೂರು, ಚಾಡಿ.

**पोह**, स्त्री. ಬೆಳಗು, ಮುಂಜಾನೆ.

**पोहना**, सक्रि. ಪೋಣಿಸು; ತುರುಕು; ಜಡಿ, ಕುಟ್ಟು; ಮೆತ್ತು; ರೊಟ್ಟಿ ತಟ್ಟು, ರೊಟ್ಟಿ ಸುಡು.

**पोहा**, पु. ಗೋಮಾಳದಲ್ಲಿ ಮೇಯುವ ದನಕರುಗಳು; ದನಕರು; ಹತ್ತಿಯ ತೊಳೆ.

**पौंचा**, पु. ಐದೂವರೆಯ ಮಗ್ಗಿ.

**पौंडा**, पु. ರಸದಾಳಿ ಕಬ್ಬು.

**पौंरना**, अक्रि. ಈಜು, ಈಜಾಡು.

**पौ**, स्त्री. ನೆತ್ತದಾಟದಲ್ಲಿಯ ಕ್ಕ; ದಾಯ; ದನಗಳಿಗೆ ನೀರು ಕುಡಿಸುವ ಸ್ಥಳ; ಪಾನೀಯಶಾಲೆ, ಅರವಟ್ಟಿಗೆ; ಸೂರ್ಯೋದಯದ ಬೆಳಕು, ಅರುಣೋದಯ. पौ फटना = ಬೆಳಕು ಹರಿ, ಅರುಣೋದಯವಾಗು. पौ बारह = ಒಳ್ಳೆಯ ಗರ; ಅದೃಷ್ಟ; ಜಯ.

**पौआ**, पु. = पोचा.

**पौढ़ना**, अक्रि. ತೂಗಾಡು; ಜೋಲಾಡು; ಮಲಗು, ಒರಗು, ಪವಡಿಸು.

**पौढ़ाना**, सक्रि. ಜೋಲಾಡಿಸು, ಅಲ್ಲಾಡಿಸು; ತೂಗಾಡಿಸು; ಮಲಗಿಸು.

**पौद**, स्त्री. ಚಿಕ್ಕ ಗಿಡ; ಸಸಿ, ನಾಟಿ; ನಡೆಯಲು ಹಾಸಿದ ವಸ್ತ್ರ, ನಡೆಮುಡಿ.

**पौदर**, स्त्री. ಹೆಜ್ಜೆಯ ಜಾಡು; ಕಾಲು

ದಾರಿ.

**पौदा, पौधा,** पु. ಚಿಕ್ಕ ಮರ, ಗಿಡ.

**पौधाघर,** पु. ಅಗೆ ಅಥವಾ ಸಸಿಗಳನ್ನು ಬೆಳೆಸುವ ಜಾಗ, ಅಗೇಡಿ.

**पौन,** स्त्री. ಗಾಳಿ; ಉಸಿರು. वि. ಕಾಲು ಕಡಮೆ ಒಂದು, ಮುಕ್ಕಾಲು.

**पौना,** पु. ಜಾಲರಿ ಸೌಟು; ಸಟ್ಟುಗ; ಮುಕ್ಕಾಲು; ಮುಕ್ಕಾಲಿನ ಮಗ್ಗಿ.

**पौनी,** स्त्री. ಚಿಕ್ಕಜಾಲರಿ ಸೌಟು; ವಿವಾಹಾದಿಗಳಲ್ಲಿ ಇನಾಮು ಪಡೆಯುವ ನಾಪಿತ ಅಗಸ ಮೊದಲಾದವರು.

**पौने,** वि. ಕಾಲು ಕಡಮೆ; ಮುಕ್ಕಾಲು. पौने सात = ಕಾಲು ಕಡಮೆ ಏಳು, ಆರೂಮುಕ್ಕಾಲು; $6\frac{3}{4}$.

**पौर,** स्त्री. ಬಾಗಿಲು, ದ್ವಾರ.

**पौरा,** पु. ಕಾಲಿಡುವಿಕೆ, ಪದಾರ್ಪಣ; ಇಟ್ಟ ಕಾಲು.

**पौरिया,** पु. ದ್ವಾರಪಾಲಕ.

**पौरी, पौली,** स्त्री. ದ್ವಾರ, ಬಾಗಿಲು; ಸೋಪಾನ, ಮೆಟ್ಟಲು; ಮೆಟ್ಟು.

**पौला,** पु. ಪಾದರಕ್ಷೆ, ಹಾವುಗೆ.

**पौवा,** पु. ಕಾಲು ಸೇರು, ಪಾವು.

**पौसरा, पौसला, पौह, प्याऊ,** पु. ಅರವಟ್ಟಿಗೆ, ಪಾನೀಯಶಾಲೆ.

**प्याज़,** पु. ಈರುಳ್ಳಿ, ಉಳ್ಳಿಗೆಡ್ಡೆ, ನೀರುಳ್ಳಿ.

**प्याज़ी,** वि. ಈರುಳ್ಳಿಯಂಥ; ಈರುಳ್ಳಿಯ ಬಣ್ಣದ.

**प्यादा,** पु. ಕಾಲಾಳು; ಸಿಪಾಯಿ; ದೂತ; ಚದುರಂಗದ ಆಳು, ಪೇದೆ.

**प्याना, प्यावना,** सक्रि. ನೀರು ಕುಡಿಸು; ನೀರು ಕಟ್ಟು.

**प्यार,** पु. ಪ್ರೀತಿ, ಪ್ರೇಮ, ಒಲ್ಮೆ.

**प्यारा,** वि. ಪ್ರಿಯ, ಪ್ರೀತಿಯ; ಇಷ್ಟದ.

**प्याला,** पु. ಬಟ್ಟಲು, ಪೇಲೆ; ತುಪಾಕಿಯಲ್ಲಿ ಮದ್ದಿಡುವ ಬಟ್ಟಲು.

**प्याली,** स्त्री. ಚಿಕ್ಕ ಬಟ್ಟಲು, ಲೋಟ.

**प्यास,** स्त्री. ನೀರಡಿಕೆ, ಬಾಯಾರಿಕೆ, ದಾಹ; ಬಯಕೆ, ಗೀಳು.

**प्यासा,** वि. ನೀರಡಿಕೆಯುಳ್ಳ, ದಾಹವುಳ್ಳ, ಬಾಯಾರಿದ.

**प्योसार, प्यौसाल,** पु. = पीहर.

**प्रकट,** वि. ಪ್ರಕಟವಾದ, ಹೊರಬಿದ್ದ

**प्रकार,** पु. ಪ್ರಕಾರ; ವಿಧ; ಬಗೆ; ಭೇದ.

**प्रकाश,** पु. ಪ್ರಕಾಶ, ಬೆಳಕು; ಪ್ರಕಟಿಕೆ

**प्रकाशक,** पु. ಪ್ರಕಟಿಸುವವ, ಪ್ರಕಾಶಕ

**प्रकाशन,** पु. ಪ್ರಕಟಿಸುವಿಕೆ, ಪ್ರಕಟಿಕೆ

**प्रगट,** वि. ಪ್ರಕಟವಾದ, ಹೊರಬಿದ್ದ.

**प्रगटना,** अक्रि. ಹೊರಬೀಳು, ಪ್ರಕಟವಾಗು.

**प्रचलन,** पु. ಚುರುಕು, ಚಟುವಟಿಕೆ; ಚಾಲ್ತಿ, ರೂಢಿ; ಪದ್ಧತಿ.

**प्रचलित,** वि. ಚಾಲ್ತಿಯಲ್ಲಿರುವ, ಪ್ರಚಲಿತ.

**प्रचार,** पु. ಚಾಲ್ತಿ; ಪ್ರಚುರ, ಪ್ರಚಾರ; ವರ್ತನೆ; ರೂಢಿ; ಹುಲ್ಲುಗಾವಲು.

**प्रजा,** स्त्री. ಪ್ರಜೆ; ಸಂತಾನ.

**प्रणाम,** पु. ನಮಸ್ಕಾರ, ವಂದನೆ.

**प्रणाली,** स्त्री. ಚರಂಡಿ; ಬಚ್ಚಲು ಹಾದಿ; ಮಾರ್ಗ; ರೀತಿ; ವಿಧಾನ.

प्रताप, पु. ಪ್ರತಾಪ; ವೈಭವ.
प्रति, अव्य. ಬದಲಾಗಿ, ಪ್ರತಿಯಾಗಿ; ಎದುರಾಗಿ; ಒಂದೊಂದು.
प्रतियोग, पु. ಸ್ಪರ್ಧೆ; ಮೇಲಾಟ.
प्रतियोगिता, स्त्री. ಸ್ಪರ್ಧೆ; ಮೇಲಾಟ.
प्रतियोगी, पु. ವಿರೋಧಿ, ಎದುರಾಳಿ.
प्रतिष्ठा, स्त्री. ಮರ್ಯಾದೆ, ಗೌರವ, ಮಾನ; ಕೀರ್ತಿ; ಕೀರ್ತಿ ಪ್ರತಿಷ್ಠೆ.
प्रतिष्ठित, वि. ಮರ್ಯಾದಸ್ಥ, ಗೌರವಸ್ಥ; ಮಾನ್ಯ.
प्रतीकार, पु. ಪರಿಹಾರ; ಪ್ರತೀಕಾರ.
प्रतीक्षा, स्त्री. ಎದುರುನೋಡುವಿಕೆ, ಪರೀಕ್ಷಣೆ.
प्रतीत, वि. ವೇದ್ಯ, ವಿದಿತ.
प्रतीति, स्त्री. ಭರವಸೆ; ನಂಬಿಕೆ; ವಿಶ್ವಾಸ
प्रत्येक, क्रिवि. ಒಂದೊಂದಾಗಿ, ಬಿಡಿಬಿಡಿಯಾಗಿ.
प्रथा, स्त्री. ಸಂಪ್ರದಾಯ, ರೂಢಿ.
प्रदर, पु. ಸ್ತ್ರೀಯರ ಒಂದು ರೋಗ. ಬಿಳಿಸೆರಗು.
प्रदीप, पु. ದೀಪ, ಬತ್ತಿ.
प्रधान, वि. ಪ್ರಧಾನವಾದ, ಮುಖ್ಯ. पु. ಮುಖ್ಯಸ್ಥ, ತಲೆಯಾಳು; ಅಗ್ರೇಸರ; ಸಭಾಪತಿ; ಪ್ರಧಾನಮಂತ್ರಿ.
प्रधानता, स्त्री. ಮುಖ್ಯತೆ; ಪ್ರಾಧಾನ್ಯ.
प्रपंच, पु. ಜಗತ್ತು; ಜಗಜ್ಜಾಲ; ಮೋಸ.
प्रपंची, वि. ಜಾಲಗಾರ; ಮೋಸಗಾರ.
प्रफुलना, अक्रि. ಅರಳು, ವಿಕಸಿಸು.
प्रफुलित, वि. ವಿಕಸಿತವಾದ, ಅರಳಿದ.
प्रबंध, पु. ಕಟ್ಟು, ರಚನೆ; ಏರ್ಪಾಡು, ವ್ಯವಸ್ಥೆ.
प्रभा, स्त्री. ಹೊಳಪು, ಕಾಂತಿ, ಪ್ರಭೆ.
प्रभात, पु. ಬೆಳಗಿನ ಜಾವ, ಮುಂಜಾನೆ.
प्रभाती, स्त्री. ಉದಯರಾಗ.
प्रभाव, पु. ಪ್ರಭಾವ, ಮಹಿಮೆ.
प्रमाण, पु. ರುಜುವಾತು, ತಾರ್ಕಣೆ; ಉದಾಹರಣೆ.
प्रमोद, पु. ಸಂತೋಷ, ಆನಂದ.
प्रयत्न, पु. ಯತ್ನ, ಪ್ರಯತ್ನ. प्रयत्नशील = ಪ್ರಯತ್ನಪಡುವ.
प्रलोभ, प्रलोभन, पु. ಆಶೆ ತೋರಿಸುವಿಕೆ, ಪ್ರಲೋಭನ
प्रवास, पु. ಪರದೇಶದಲ್ಲಿರುವಿಕೆ, ಪ್ರವಾಸ.
प्रवाह, पु. ನೀರಿನ ಹರಿತ, ಪ್ರವಾಹ.
प्रविष्ट, वि. ಒಳಕ್ಕೆ ಸೇರಿಸಿದ; ಹೊಗಿಸಿದ. प्रविष्ट करना = ಒಳಕ್ಕೆಸೇರಿಸು.
प्रवृत्त, वि. ಕೆಲಸದಲ್ಲಿ ತೊಡಗಿದ. प्रवृत्त होना = ತೊಡಗು, ಪ್ರವೃತ್ತಿಸು.
प्रवेश, पु. ಒಳಕ್ಕೆ ಸೇರುವಿಕೆ; ಹೊಗುವಿಕೆ; ಪ್ರವೇಶ.
प्रशंसन, पु. ಪ್ರಶಂಸಿಸುವಿಕೆ.
प्रशंसना, सक्रि. ಪ್ರಶಂಸಿಸು, ಹೊಗಳು.
प्रशंसनीय, वि. ಹೊಗಳತಕ್ಕ, ಸ್ತುತ್ಯ.
प्रशंसा, स्त्री. ಪ್ರಶಂಸೆ, ಹೊಗಳಿಕೆ.
प्रशस्त, वि. ಉತ್ತಮವಾದ, ಪ್ರಶಸ್ತ.
प्रशस्ति, स्त्री ಪ್ರಶಂಸೆ; ಉತ್ಕೃಷ್ಟತೆ; ಒಕ್ಕಣೆ.
प्रश्न, पु. ಪ್ರಶ್ನೆ, ಸವಾಲು.
प्रसन्न, वि. ಸಂತೋಷಿಸುವ, ಮುದಿತ.

**प्रसन्नता**, स्त्री. ಸಂತೋಷ.
**प्रसिद्धि**, स्त्री. ಪ್ರಸಿದ್ಧಿ, ಹೆಸರುವಾಸಿ.
**प्रसूता, प्रसूतिका**, स्त्री. ಬಾಣಂತಿ.
**प्रसून**, पु. ಪುಷ್ಪ, ಹೂ; ಹಣ್ಣು.
**प्रस्ताव**, पु. ಪ್ರಸ್ತಾಪ; ಠರಾವಿನ ಸೂಚನೆ; ಠರಾವು, ಗೊತ್ತುವಳಿ.
**प्रस्तावना**, स्त्री. ಪ್ರಸ್ತಾವನೆ, ಪೀಠಿಕೆ.
**प्रस्तावित** वि. ಪ್ರಸ್ತಾಪಿಸಿದ, ಸೂಚಿಸಿದ
**प्रस्तुत**, वि. ಸಿದ್ಧ, ತಯಾರು.
**प्रहर**, पु. ಪ್ರಹರ, ಪಹರೆ, ೩ ಗಂಟೆ.
**प्रहरी**, पु. ಪಹರೆಯವನು, ಪ್ರಹರಿ.
**प्रहसन**, पु. ಹಾಸ್ಯ, ನಗಚಾಟಿಕೆ; ಹಾಸ್ಯರಸವುಳ್ಳ ಚಿಕ್ಕ ನಾಟಕ, ಹುಚ್ಚಾಟ, ಪ್ರಹಸನ.
**प्रहार**, पु. ಏಟು, ಹೊಡೆತ; ಪೆಟ್ಟು.
**प्राण**, पु. ಪ್ರಾಣ, ಜೀವ.
**प्राप्त**, वि. ಪ್ರಾಪ್ತವಾದ, ಲಭಿಸಿದ. प्राप्त होना = ಲಭಿಸು.
**प्राप्ति**, स्त्री. ಪಡೆಯುವಿಕೆ, ದೊರಕುವಿಕೆ, ಪ್ರಾಪ್ತಿ.
**प्रायद्वीप**, पु. ದ್ವೀಪಕಲ್ಪ, ಪರ್ಯಾಯದ್ವೀಪ.
**प्रार्थना**, स्त्री. ಪ್ರಾರ್ಥನೆ, ಬಿನ್ನಹ.
**प्रार्थना-पत्र**, पु. ಅರ್ಜಿ, ಮನವಿ.
**प्रिय**, वि. ಪ್ರೀತಿಯ, ಪ್ರಿಯ
**प्रीति**, स्त्री. ಪ್ರೀತಿ, ಪ್ರಿಯ, ಪ್ರೇಮ.
**प्रीतिभोज**, पु. ಔತಣ.
**प्रेक्षक**, पु. ನೋಡುವವ; ನೋಟಗಾರ.
**प्रेम**, पु. ಪ್ರೇಮ, ಪ್ರೀತಿ; ಅಭಿಮಾನ.
**प्लीह**, स्त्री. ಪ್ಲೀಹ, ಗುಲ್ಮ, ನಡ್ಡಿ.

## फ

**फंका**, पु. ತುತ್ತು, ಕವಳ.
**फंकार**, वि. = फांकड़ा.
**फंकी**, स्त्री. ನುಂಗುವ ಔಷಧ; ತುತ್ತು.
**फंग**, पु. ಪಾಶ, ಕಟ್ಟು.
**फंगा**, पु. ಮಿಡಿತೆ.
**फंद**, पु. ಬಂಧನ, ಕಟ್ಟು; ಪಾಶ; ಬಲೆ; ಹಿಡಿತ; ಮೂಗುತಿಯ ತಂತಿ ಅಥವಾ ಉಂಗುರ; ಜಾಲ, ಮೋಸ; ತೊಡಕು.
**फंदना**, अक्रि. ಕಟ್ಟುಬೀಳು, ಸಿಕ್ಕಿಕೊಳ್ಳು. सक्रि. ದಾಟು.
**फंदलाना**, सक्रि. ಬಲೆಯಲ್ಲಿ ಹಿಡಿ; ಕಟ್ಟು.
**फंदवार**, पु. ಬಲೆ ಬೀಸುವವ.
**फंदा**, पु. ಬಲೆ, ಕಣ್ಣಿಬಲೆ; ಜಾಲ; ಕತ್ತರಿ; ಪಾಶ; ಕಟ್ಟು; ತೊಡಕು; ಪೀಕಲಾಟ.
**फंदाना**, सक्रि. ಬಲೆಯಲ್ಲಿ ಹಿಡಿ, ಸಿಕ್ಕಿಸು; ದಾಟಿಸು; ಹಾರಿಸು.
**फंसना**, अक्रि. ಸಿಕ್ಕು, ಸಿಕ್ಕಿಕೊಳ್ಳು; ಸಿಕ್ಕಿಬೀಳು; ಗಂಟುಬೀಳು; ಹೊಂದಿಕೊಳ್ಳು.
**फंसाना**, सक्रि. ಸಿಕ್ಕಿಸು, ಸಿಕ್ಕಿಬೀಳಿಸು.
**फंसाव**, पु. ಸಿಕ್ಕು, ಗುಂಜು; ತೊಡಕು.
**फंसियारा**, पु. ಸುಲಿಗೆಯವ; ಗಲ್ಲಿಗೆ ಹಾಕುವ ಸೇವಕ, ಮಾರೆಕಾರ.
**फंसिहारा**, पु. ಸಿಕ್ಕಿಸುವವ.
**फ़क्क**, वि. ಬಿಳಿಯ, ಬಿಳುಪೇರಿದ.

फक्ड़ी, स्त्री. ಒರಟುತನ, ಒಡ್ಡು; ಅವಮಾನ.

फक़त, वि. ಒಂಟಿ; ಮಾತ್ರ; ಬರಿ. पु. ಮುಕ್ತಾಯ, ಕೊನೆ

फकिया, स्त्री. ಚೂರು; ಹೋಳು; ತೊಳೆ

फक़ीर, पु. ಬಡವ, ಗರೀಬ; ಭಿಕ್ಷುಕ, ಭಿಕಾರಿ; ಮುಹಮ್ಮದೀಯ ಸನ್ಯಾಸಿ, ಫಕೀರ.

फक़ीरन, फक़ीरनी, स्त्री. फक़ीर का स्त्री. रूप.

फक़ीराना, वि. ಫಕೀರರಂತಹ. पु. ಫಕೀರರ ಪೋಷಣೆಗಾಗಿ ಬಿಡುವ ದತ್ತಿ.

फक़ीरी, स्त्री. ಭಿಕ್ಷುಕತನ, ಬಡತನ; ಫಕೀರನ ವೃತ್ತಿ.

फ़क, स्त्री. ಮುಕ್ತಿ, ಬಿಡುಗಡೆ.

फक्कड़, पु. ಬಂಡಾಟ; ಪೋಲಿಮಾತು.

फक्कड़बाज़, फक्कोड़िया, पु. ಪೋಲಿ ಮಾತಾಡುವವ, ಪೋಲಿ.

फक्किका, स्त्री. ಪುಂಡತನ; ಮೋಸ.

फक़्र, पु. ದಾರಿದ್ರ್ಯ, ಬಡತನ; ಫಕೀರನ ವೃತ್ತಿ; ಅನಾಸಕ್ತಿ.

फ़ख़र, फ़ख़्र, पु. ಗೌರವ; ಹೆಮ್ಮೆ; ಹೆಚ್ಚಳ; ವೈಭವ.

फगुआ, पु. ಹೋಳಿ ಹಬ್ಬ, ಕಾಮನ ಹಬ್ಬ; ಹೋಳಿ ಹಬ್ಬದ ಉಡುಗೊರೆ ಅಥವಾ ಹಾಡು; ಅಶ್ಲೀಲ ಗೀತಗಳು.

फगुनहट,स्त्री. ಫಾಲ್ಗುನಮಾಸದ ಗಾಳಿ.

फगुहारा, पु. फगुहारिन, फगुहारी, स्त्री. ಕಾಮನ ಹಬ್ಬದ ಆಟಪಾಟದಲ್ಲಿ ಭಾಗವಹಿಸುವವರು.

फ़जर, स्त्री. ಪ್ರಾತಃಕಾಲ, ಮುಂಜಾನೆ.

फ़ज़ल, पु. ಕೃಪೆ, ಅನುಗ್ರಹ; ಭಯಂಕರ ವಸ್ತು, ಗೊಗ್ಗಯ್ಯ, ಗುಮ್ಮ.

फ़ज़ीलत, स्त्री. ಶ್ರೇಷ್ಠತೆ, ಉತ್ಕೃಷ್ಟತೆ; ದಕ್ಷತೆ; ಪಾಂಡಿತ್ಯ.

फ़ज़ीहत, स्त्री. ನಾಚಿಕೆ; ಅವಮಾನ; ಮಾನಗೇಡು; ಫಜೀತಿ; ಕಲಂಕ; ಜಗಳ; ಕಚ್ಚಾಟ, ದುರವಸ್ಥೆ.

फ़ज़ूल, वि. ವ್ಯರ್ಥ, ನಿರರ್ಥಕ.

फ़ज़ूलख़र्च, वि. ಅಪವ್ಯಯ ಮಾಡುವವ, ದುಂದುಗಾರ, ದಂದರಹಾಳ.

फ़ज़ूलख़र्ची, स्त्री. ವ್ಯರ್ಥ ಖರ್ಚು.

फट, स्त्री. ಒಡಕು, ಬಿರುಕು; ಪಟಪಟ ಶಬ್ದ.

फटक, पु. ಪಟಿಕ. क्रिवि. ಥಟ್ಟನೆ.

फटकन, स्त्री. ಹೊಟ್ಟು, ಉಬ್ಬಲು.

फटकना, अक्रि. ಸೇರು, ತಲಪು; ದೂರವಾಗು; ಒದ್ದಾಡು; ಪ್ರಯತ್ನಪಡು. सक्रि. ಜಾಡಿಸು, ಕೊಡವು; ಜಟಕಾಯಿಸು; ಕೇರು; ತೂರು; ಅರಳೆ ಎಕ್ಕು.

फटकनी, स्त्री. ಮೊರ.

फटका, पु. ಅರಳೆ ಎಕ್ಕುವ ಬಿಲ್ಲು; ಬರಿಯ ಪ್ರಾಸದ ಕವನ; ಬಾಗಿಲು.

फटकाना, सक्रि. ಎಸೆ, ಬಿಸಾಡು.

फटकार, स्त्री. ದೊಡ್ಡ ಚಾವಟಿ; ಜಡಿಯುವಿಕೆ, ಜಾಡಿಸುವಿಕೆ; ಗದರಿಕೆ, ಜಂಕಣೆ; ನಿಂದೆ, ತಿರಸ್ಕಾರ; ಶಾಪ.

फटकारना, सक्रि. ಎಸೆ, ಬಿಸಾಡು; ಬಟ್ಟೆ ಒಗೆ; ಬಡಿ, ಜಡಿ; ಜಾಡಿಸು, ಜಟಕಾಯಿಸು, ಕೊಡವು; ಗದರಿಸು,

ಮೂದಲಿಸು; ತಳ್ಳು, ಮಾರಿಬಿಡು.

**फटकी**, स्त्री. ಬಲೆ; ಬೋನು; ಬೇಟೆ ಗಾರನ ಚೀಲ.

**फटना**, अक्रि. ಒಡೆ; ಬಿರಿ, ಬಿರುಕು ಬಿಡು; ಹಿಸಿ; ಸೀಳು, ಆಣೆಸು; ಬಹಳ ನೋವಾಗು; ಬೇರೆಯಾಗು.

**फटफटाना**, सक्रि. ಒಟಗುಟ್ಟು; ಪಟ ಪಟ ಶಬ್ದಮಾಡು; ಕೈಯಾಡಿಸು, ಜಾ ಡಿಸು. अक्रि. ಪಟಪಟ ಶಬ್ದವಾಗು.

**फटा**, वि. ಬಿರಿದ; ಒಡೆದ; ಹರಿದ; ಸೀಳಿದ. पु. ಒಡಕು; ಬಿರುಕು.

**फटाक**, क्रिवि. ತಟ್ಟನೆ, ತಟಕ್ಕನೆ.

**फटाका**, पु. ಸಿಡಿಮದ್ದಿನ ಶಬ್ದ.

**फटाना**, सक्रि. ಒಡೆಸು; ಹರಿಸು; ಬಿ ರುಕು ಬೀಳಿಸು.

**फटाव**, पु. ಹರಕು; ಬಿರುಕು; ಒಡಕು; ಬೇರೆಯಾಗುವಿಕೆ.

**फटिक**, पु. ಸ್ಫಟಿಕ.

**फट्टा**, पु. **फट्टी**, स्त्री. ಬಿದಿರಿನ ಸೀಳು, ದಬ್ಬೆ.

**फड़**, स्त्री. ಅಂಗಡಿ, ಮಂಡಿ; ಜೂಜಾಟ; ಆಟದ ಮರಸೆ, ಜೂಜಾಡುವ ಸ್ಥಳ; ಕಕ್ಷಿ, ಪಕ್ಷ; ತುಪಾಕಿಯ ಗಾಡಿ, ಗಾಡಿಯ ಮೂಕಿಮರ.

**फड़क, फड़कन**, स्त्री. ಅದರುವಿಕೆ, ದುಡಿತ, ಸ್ಫುರಣ.

**फड़कना**, अक्रि. ಅದರು, ದುಡಿ; ಬಡಿ ದುಕೊಳ್ಳು; ಚಿಟಿಗುಟ್ಟು, ಹಾರು; ಹಾತೊರೆ.

**फड़काना**, सक्रि. फड़कना का प्रे.रूप.

**फड़काव**, पु. ಆಡಂಬರ, ತೀವಿ.

**फड़की**, स्त्री. ತಡಿಕೆ, ನೆರಕೆ.

**फड़फड़ाना**, क्रि. = फटफटाना.

**फड़फड़ाहट**, स्त्री. ರೆಕ್ಕೆ ಬಡಿದುಕೊ ಳ್ಳುವಿಕೆ, ಹಾರಾಟ.

**फड़फड़िया**, वि. ಹಾರುವ, ತೀವ್ರ ಚುರುಕಾದ; ಜಂಭ ಕೊಚ್ಚುವವ.

**फड़ाना**, सक्रि. फाड़ना का प्रे. रू.

**फड़ाफड़ी**, स्त्री. ಜಗಳ, ಕಚ್ಚಾಟ.

**फड़बाज़, फड़ित**, पु. ಜೂಜುಕೋರ, ಜೂದಾಳಿ; ಒಟಗುಟ್ಟುವವ, ಜಟ್ಟಿ ಮಲ್ಲ.

**फड़िया**, पु. ಜೂಜುಮನೆಯ ಒಡೆಯ, ಜೂಜಿನ ಕಟ್ಟೆಯವ; ಚಿಲ್ಲರೆ ಸಾಮಾ ನುಗಳನ್ನು ಹೊತ್ತು ಮಾರುವವ. स्त्री. ಲಂಗ, ಪಾವಡೆ; ಕೊಯ್ಲಿನ ಗುತ್ತಿಗೆ ದಾರ.

**फड़ी**, स्त्री. ಚಪ್ಪಡಿಕಲ್ಲು, ಹಾಸುಗಲ್ಲು, ಕಲ್ಲುಬಂಡೆ.

**फड़ुआ**, पु. ಗುದ್ದಲಿ, ಎಲೆಕೋಟು.

**फड्डा**, पु. ಶುಂಠಿಯ ಕೊನೆ; ಜೋಳದ ಕಾಂಡ.

**फ़तवा**, पु. ಕುರಾನಿನಪ್ರಕಾರ ನ್ಯಾಯ ವಿಧಾನ, ಧರ್ಮ ವಿಧಾಯಕ.

**फ़तह**, स्त्री. ಜಯ, ಗೆಲುವು; ಸಿದ್ಧಿ.

**फ़तहख़ान**, पु. ವೀರ, ಕಡುಗಲಿ.

**फ़तहगढ़**, पु. ಜಯಸ್ತಂಭ.

**फ़तहनामा**, पु. ವಿಜಯವಾರ್ತೆಯ ಪತ್ರ; ಜಯ ಪತ್ರ.

**फ़तहपेच**, पु. ಪೇಟಾಸುತ್ತುವ ಒಂದು

ಬಗೆ; ಹುಕ್ಕಾವಿನ ಉದ್ದವಾದ ನಳಿಗೆ.
फ़तहमंद, फ़तह्‌याब, वि. ವಿಜಯಿಯಾ, ಜಯಶಾಲಿ.
फतिंगा, पु. फतिंगी, स्त्री. ಹಾರುವ ಹುಳು, ದೀಪದ ಹುಳು, ಪತಂಗ.
फ़तीलसोज़, पु. ದೀಪದ ಕಂಬ, ಸವೆ.
फ़तीला, पु. ದೀಪದ ಬತ್ತಿ; ಸರಬತ್ತಿ, ಕಾವಿಗೆ ಹುರಿ; ಸುತ್ತು, ತಿರಿ.
फ़तूर, पु. ವಿಕಾರ, ದೋಷ; ಹಾನಿ; ಉಪದ್ರವ, ಉಪಟಳ; ರಗಳೆ.
फ़तूरिया, पु. ಉಪದ್ರವ ಮಾಡುವವ.
फ़तूही, स्त्री. ತೋಳಿಲ್ಲದ ಅಂಗಿ, ಬಗಲಂಗಿ; ಲೂಟ ಮಾಡಿದ ಹಣ, ಸೂರೆ.
फ़तेह, स्त्री. ವಿಜಯ, ಜಯ.
फदकना, अक्रि. ಕುಣಿ; ಉಕ್ಕು, ಕುದಿ.
फदफदाना, अक्रि. ಉಕ್ಕಿಬರು, ಉಬ್ಬು.
फन, पु. ಸರ್ಪದ ಹೆಡೆ, ಫಣ.
फ़न, पु. ಗುಣ, ಸ್ವಭಾವ; ವಿದ್ಯೆ, ಕಲೆ; ಶಾಸ್ತ್ರ; ಕೈಕೆಲಸ, ಕೈಮಾಟ; ತಕ್ಕು, ಜಾಲ.
फनकना, अक्रि. ಗಾಳಿಗೆ ಅಲ್ಲಾಡು.
फनकार, स्त्री. ಬುಸುಗುಟ್ಟುವಿಕೆ.
फनगा, पु. ದೀಪದ ಹುಳು, ಪತಂಗ.
फनफनाना, अक्रि. ಬುಸುಗುಟ್ಟು, ಬುಸ್ಸೆನ್ನು.
फनस, ಹಲಸಿನ ಹಣ್ಣು.
फ़ना, पु. ಭಂಗ; ನಾಶ; ಹಾಳು; ವಿನಾಶ; ಸಾವು.
फनी, स्त्री. ಪಾಶ; ಜಾಲ, ಬಲೆ.
फन्नी, स्त्री. ಕವಣೆ; ಬೆಣೆ, ಆಪು.

फफकना, अक्रि. ಅಂಕುರಿಸು; ಚಿಗುರು.
फफका, पु. ಕುರು, ಗುಳ್ಳೆ.
फफदना, अक्रि. ಕೀವುಗಟ್ಟು; ಕೊಳೆ, ಹಳಿ; ಉಕ್ಕು.
फप्फस, फफसा, वि. ಊದಿದ, ಉಬ್ಬಿದ; ಬೀಗಿದ.
फफूँदना, अक्रि. ಬೂಜುಹಿಡಿ; ಮುಗ್ಗು.
फफूँदी, स्त्री. ಬೂಜು; ಮುಗ್ಗಲು; ಸೀರೆಯ ನಿರಿಗೆ, ನೀವಿ.
फफोला, पु. ಹೊಪ್ಪಳೆ, ಹುಗುಳು, ಬೊಬ್ಬೆ; ಗುಳ್ಳೆ, ಬುದ್ಬುದ.
फब, स्त्री. ಅಲಂಕರಣ, ಭೂಷಣ.
फबकना, अक्रि. ಚಿಗುರು, ಕಳಕಳಿಸು.
फबता, वि. ಒಪ್ಪುವ; ಹಾಳತ; ತಕ್ಕ.
फबती, स्त्री. ಒಪ್ಪು, ಹಾಳತ; ಆಭರಣ; ಅಲಂಕಾರ; ಪರಿಹಾಸ; ಗೇಲಿ, ಕೊರಚಾಟ.
फबन, स्त्री. ಭೂಷಣ, ಒಪ್ಪು; ಅಲಂಕಾರ, ಸಿಂಗಾರ; ಉಡಿಗೆ, ಉಡುಪು; ಸೊಗಸು, ಅಂದ; ರಮಣೀಯತೆ.
फबना, अक्रि. ಹಾಳತವಾಗು; ಚಲೋವಾಗಿರು, ಒಪ್ಪು; ಶೋಭಿಸು, ಸೊಗಯಿಸು.
फबाना, सक्रि. ಒಪ್ಪುವಾಗಿಸು, ಅಲಂಕರಿಸು.
फबीला, वि. ಒಪ್ಪುವ, ಶೋಭಿಸುವ, ಸೊಗಸಿನ.
फ़य्याज़, वि. ದಾನಶೀಲ, ಉದಾರ.
फ़य्याज़ी, स्त्री. ದಾನಶೀಲತೆ, ಔದಾರ್ಯ; ಧಾರಾಳ.

**फरक,** स्त्री. ಉಬ್ಬುವಿಕೆ, ಉಕ್ಕುವಿಕೆ. पु. ಡಾಲು, ಗುರಾಣಿ.

**फ़रक़,** पु. = फ़र्क़.

**फरकन,** स्त्री. ಅದುರುವಿಕೆ, ದುಡಿತ, ಹಾರುವಿಕೆ.

**फरकना,** अक्रि. ಅದುರು, ದುಡಿ; ಹಾರು; ಉಕ್ಕು, ಹೊಮ್ಮು.

**फरका,** पु. ಒಪ್ಪಾರು, ಚಾಟುಚಪ್ಪರ; ತಡಿಕೆ.

**फरकाना,** सक्रि. ಹಾರಿಸು; ಅಲ್ಲಾಡಿಸು; ದೂರಮಾಡು; ಬಿಸಾಡು.

**फरचा,** वि. ಶುದ್ಧ, ನಿರ್ಮಲ; ಪರಿಷ್ಕಾರವಾದ. पु. ಮೋಡಗಳು ಚದರಿ ಹೋಗುವಿಕೆ, ಆಕಾಶವು ನಿರ್ಮಲವಾಗುವಿಕೆ; ಹವಾಗುಣದ ಒಳ್ಳೆಯ ಸ್ಥಿತಿ; ತೀರ್ಮಾನ; ತೀರ್ಪು; ಬಿಡುಗಡೆ.

**फरचाई,** स्त्री. ಶುದ್ಧತೆ, ನಿರ್ಮಲತೆ; ಹೊಳಪು; ಪ್ರಾಮಾಣಿಕತೆ, ಆರ್ಜವ.

**फरचाना,** सक्रि. ಶುದ್ಧಮಾಡು, ಪರಿಷ್ಕರಿಸು; ಒರೆಸು; ತಿಕ್ಕು; ತೀರಿಸು; ತೀರ್ಪು ಹೇಳು.

**फ़रज़ंद,** पु. ಪುತ್ರ, ಮಗ.

**फ़रज़ंदी,** स्त्री. ತಂದೆತಾಯಿಯರೊಡನೆ ಮಗನಿಗಿರುವ ಸಂಬಂಧ.

**फ़रज़ीं,** पु. ಮಂತ್ರಿ; ಚದುರಂಗದಲ್ಲಿ ರಾಣಿ, ಪರ್ಜಿ.

**फ़रज़ींबंद,** पु ಚದುರಂಗದಲ್ಲಿ ರಾಣಿಯಿಂದ ದೊರೆಯನ್ನು ಕಟ್ಟುವಿಕೆ.

**फ़रद,** स्त्री. = फ़र्द.

**फरफंद,** पु. ಠಕ್ಕು, ಜಾಲ; ತಂತ್ರ.

**फरफंदी,** वि. ಠಕ್ಕ; ತಂತ್ರಗಾ[illegible] ಮೋಸಗಾರ.

**फरफर,** क्रिवि. ಸರಸರನೆ.

**फरफराना,** अक्रि. ನಡುಗು, ಅದುರು.

**फरबही,** स्त्री. ದಪ್ಪ, ಗಾತ್ರ.

**फरबा,** वि. ಬಲಿತ, ಕೊಬ್ಬಿದ.

**फ़रमाँबरदार,** पु. ಆಜ್ಞಾಧಾರಕ, ಆಜ್ಞಾಪಾಲಕ, ಆಜ್ಞಾನುವರ್ತಿ.

**फ़रमाँबरदारी,** स्त्री. ಆಜ್ಞೆಗೆ ಒಳಪಟ್ಟು ವರ್ತಿಸುವಿಕೆ, ಆಜ್ಞಾಪಾಲನೆ, ವಿಧೇಯತೆ.

**फ़रमा,** पु. ಚೌಕಟ್ಟು, ಸಾಚ, ಕ[illegible]ವಾಯಿ; ಪಡಿಯಚ್ಚು; ಅಚ್ಚಿನ ಫಾ[illegible]

**फ़रमाइश,** स्त्री. ಅಪ್ಪಣೆ, ಆಣತಿ; ಸಾಮಾನು ಮಾಡಲು ಅಥವಾ ಕಳುಹಿಸಲು ಕೊಡುವ ಆಜ್ಞೆ, 'ಆರ್ಡರು'; ಬೇಡಿಕೆ.

**फ़रमाइशी,** वि. ಆಜ್ಞೆ ಅಥವಾ ಆರ್ಡರು ಕೊಟ್ಟು ತಯಾರಿಸಿದ (ಸಾಮಾನು); ಫರಮಾಯಿಷಿ, ಉತ್ಕೃಷ್ಟವಾದ. फ़रमाइशी लगाना = ಜೋರಿನಿಂದ ಚೆನ್ನಾಗಿ ಹೊಡೆ.

**फ़रमान,** पु. ಅಪ್ಪಣೆ; ರಾಜಾಜ್ಞೆ, ಆಣತಿ; ಸಿರೂಪ, ಶ್ರೀಮುಖ; ಆದೇಶ.

**फ़रमाना,** सक्रि. ಆಜ್ಞಾಪಿಸು, ಆಜ್ಞೆ ಹೊರಡಿಸು; ಅಪ್ಪಣೆ ಕೊಡಿಸು, ಹೇಳು.

**फ़रवरी,** स्त्री. ಫೆಬ್ರುವರಿ ತಿಂಗಳು.

**फरवा,** स्त्री. ಅರಳು, ಪುರಿ, ಮಂಡಕ್ಕಿ.

**फरसा,** पु. ಪರಶು, ಕೊಡಲಿ.

**फ़रहंग,** स्त्री. ವಿವೇಕ, ಜ್ಞಾನ; ತಿ[illegible]

ಕೋಶ, ನಿಘಂಟು; ಟೀಕೆ, ಟಿಪ್ಪಣಿ.

फ़रहत, स्त्री. ವಿನೋದ; ತಮಾಷೆ; ಮನೋರಂಜನೆ.

फ़रहत-बख़्श, वि. ಆನಂದದಾಯಕ, ಮನೋರಂಜಕ.

फ़रहद, पु. ಹಾಲವಾಣದ ಮರ.

फहरना, अक्रि. ಅದುರು, ನಡುಗು; ಹಾರಾಡು.

फहरा, पु. फरहरी, स्त्री. ಬಾವುಟ, ಪತಾಕೆ. वि. ಅರ್ಧ ಒಣಗಿದ; ಒಣಕಲು

फ़रहाद, पु. ಬೆಟ್ಟ ತೋಡುವವ, ಸುರಂಗಕಾರ.

फ़राक, पु. ಬಯಲು, ವೈದಾನ.

फ़राकत, वि. ವಿಸ್ತಾರವಾದ, ಬಯಲಾದ

फ़राख़, वि. ವಿಸ್ತೃತವಾದ, ವಿಶಾಲ; ಯಥೇಷ್ಟವಾದ, ಹೇರಳ.

फ़राख़ी, स्त्री. ವಿಸ್ತಾರ, ವೈಶಾಲ್ಯ; ಹೇರಳ, ಸಮೃದ್ಧಿ.

फ़राग़, पु. ವಿರಾಮ, ಪುರಸತ್ತು.

फ़राग़त, स्त्री. ಬಿಡುಗಡೆ, ವಿಮೋಚನ; ಅವಕಾಶ; ವಿರಾಮ, ಪುರಸತ್ತು; ಸುಖ, ಸೌಖ್ಯ; ನೆಮ್ಮದಿ; ಮಲಬಾಧೆಯನ್ನು ತೀರಿಸಿಕೊಳ್ಳುವಿಕೆ.

फ़राज़, वि. ಉಚ್ಚ; ಉನ್ನತವಾದ. स्त्री. ಔನ್ನತ್ಯ, ಎತ್ತರ.

फ़रामोश वि. ವಿಸ್ಮೃತ, ಮರೆತ. स्त्री. ಮರೆಯುವಿಕೆ, ಮರೆವು; ಮಕ್ಕಳ ಒಂದು ಆಟ.

फ़रामोशी, स्त्री. ಮರೆವು, ವಿಸ್ಮೃತಿ.

फ़रार, पु. ಓಡಿಹೋಗುವಿಕೆ, ಪಲಾಯನ. वि. ಓಡಿಹೋದ, ಪಲಾಯಿತ; ಪರಾರಿ.

फ़रारी, वि. ಪರಾರಿ; ಪಲಾಯಿತ.

फ़रासीस, पु. ಫ್ರಾನ್ಸ್ ದೇಶ; ಫ್ರಾನ್ಸ್ ದೇಶವಾಸಿ; ಕೆಂಪು ಬಣ್ಣದ ಚೀಟಿಬಟ್ಟೆ.

फ़राहम, वि. ಶೇಖರಿಸಿದ, ಸಂಗ್ರಹಿಸಿದ; ಕೂಡಿಟ್ಟ; ಗಳಿಸಿಟ್ಟ; ಒಟ್ಟಾದ.

फ़राहमी, स्त्री. ಸಂಗ್ರಹ, ಶೇಖರಣೆ.

फरिया, स्त्री. ಒಂದು ಬಗೆ ಲಂಗ.

फ़रिश्ता, पु. ದೇವದೂತ; ದೇವತೆ.

फरी, स्त्री. ಗುರಾಣಿ, ಡಾಲು.

फ़रीक़, पु. ಕ್ರಮ; ಪಾಲು; ವಿಭಾಗ; ವ್ಯತ್ಯಾಸ ತಿಳಿಯುವವ, ವಿರೋಧ ಮಾಡುವವ; ವಿರೋಧಿ, ಎದುರಾಳಿ; ಪ್ರತಿಪಕ್ಷದವ, ಕಕ್ಷಿ; ಪಂಗಡ. फ़रीक़ सानी = ಪ್ರತಿವಾದಿ. फ़रीक़ैन = ಉಭಯ ಪಕ್ಷದವರು, ವಾದಿಪ್ರತಿವಾದಿಗಳು.

फ़रीद, वि. ಅನುಪಮ, ಅಸದಳ.

फरुवक, पु. ವೀಳ್ಯದೆಲೆ ಪೆಟ್ಟಿಗೆ.

फरुवा, पु. ಮರದ ಪಾತ್ರೆ, ಮರಿಗೆ.

फरुहा, पु. फरुही, स्त्री. ಕೈಕೊಡಲಿ; ಗುದ್ದಲಿ, ಮಮಟಿ; ಕಡೆಗೋಲು.

फरेंदा, पु. फरेंदी, स्त्री. ಒಂದು ಬಗೆ ನೇರಳೆ ಹಣ್ಣು.

फरेफ़्तगी, स्त्री. ಮರುಳಾಗುವಿಕೆ, ಮುಗ್ಧತೆ; ಮೋಹ, ಮೋಹನ.

फ़रेफ़्ता, वि. ಮರುಳಾದ, ಮೋಹಿತ.

फ़रेब, पु. ಚಿತ್ತಾಕರ್ಷಣೆ; ಮೋಹಗೊಳಿಸುವಿಕೆ; ಮೋಸ, ಠಕ್ಕು; ತಂತ್ರ.

फ़रेबदिह, वि. ಮೋಸಗಾರ.

फ़रेबदिही, स्त्री. ಮೋಸ; ಅಪಹರಣ.
फ़रेबन्, क्रिवि. ಮೋಸದಿಂದ, ವಂಚಿಸಿ
फ़रेबिया, पु. ಮೋಸಗಾರ, ವಂಚಕ.
फ़रेबी, वि. ಮೋಸದ, ಠಕ್ಕಿನ. पु. ಮೋಸಗಾರ; ಠಕ್ಕ, ಕಪಟಿ.
फरेरा, पु. ಧ್ವಜ, ಬಾವುಟ.
फरेरी, स्त्री. ಕಾಡು ಹಣ್ಣುಗಳು.
फ़रो, क्रिवि. ಕೆಳಗೆ, ಕೆಳಕ್ಕೆ. वि. ಕೆಳಗಾದ; ತಗ್ಗಿದ; ತಣಿದ.
फ़रोकश, वि. ಇಳಿದ, ತಂಗಿರುವ; ಬಿಡಾರ ಮಾಡುವ.
फ़रोख़्त, स्त्री ಮಾರಾಟ, ವಿಕ್ರಯ, ಬಿಕರಿ
फ़रोग़, पु. ಪ್ರಕಾಶ, ಕಾಂತಿ, ಜ್ಯೋತಿ.
फ़रोतन, वि. ಕೀಳುತರದ, ದ್ರಾಬೆ; ಬಡ, ದರಿದ್ರ; ವಿನೀತ, ನಮ್ರ.
फ़रोतनी, स्त्री. ನಮ್ರತೆ.
फ़रोद, पु. ಇಳಿಯುವಿಕೆ, ತಂಗುವಿಕೆ; ಜಮಾವಣೆ.
फ़रोमाया, वि. ನಗಣ್ಯ; ತುಚ್ಛ, ನಿಕೃಷ್ಟ
फ़रोश, पु. ಮಾರುವಿಕೆ, ಮಾರಾಟ. वि. ಮಾರುವವ, ವರ್ತಕ.
फ़रोशिंदा, पु. ಮಾರುವವ, ವರ್ತಕ.
फ़रोशी, स्त्री. ಮಾರುವಿಕೆ.
फ़र्क़, पु. ಬೇರೆಯಾಗುವಿಕೆ; ವ್ಯತ್ಯಾಸ, ಭೇದ; ಅಂತರ, ದೂರ; ಬೇರೆ; ಕೊರತೆ, ಕಡಮೆ; ದೋಷ, ದುರ್ಗುಣ.
फ़र्ज़, पु. ಭಗವದಾಜ್ಞೆ; ಕರ್ತವ್ಯ, ಧರ್ಮ; ಭಾವನೆ, ಕಲ್ಪನೆ. फ़र्ज़ करो कि = ಎಂದು ಭಾವಿಸಿಕೊ, ಅಂದುಕೊ
फ़र्ज़न्, क्रिवि ಭಾವನೆಯಾಗಿ, ಮಸಲಾ.
फ़र्ज़ानगी, स्त्री. ವಿವೇಕ, ಜ್ಞಾನ.
फ़र्ज़ाना, पु. ಜ್ಞಾನಿ, ವಿವೇಕಿ; ಪಂಡಿತ
फ़र्ज़ी, वि. ಅಗತ್ಯವಾದ, ಕಡ್ಡಾಯವಾದ; ಕಲ್ಪನೆಯ, ಕಾಲ್ಪನಿಕವಾದ ಮಸಲಾ; ಊಹೆಯ; ಹೆಸರಿಗೆ ಮಾತ್ರ ಇರುವ, "ನಾಮ್ ಕಾವಾಸ್ತೆ".
फ़र्द, स्त्री. ಲೆಕ್ಕ; ಲೆಕ್ಕದ ಪುಸ್ತಕ, ಖಾತೆ; ಪಟ್ಟಿ, ತಪಶೀಲು, ಜಾಬಿತ; ಯಾದಿ; ಕಾಗದದ ಹಾಳೆ; ಸುಪ್ಪತ್ತಿಗೆ ಮೊದಲಾದುವುಗಳ ಮೇಲ್ಮದಿಕೆ; ಜೋಡು, ಒಂಟಿ ಶ್ಲೋಕ; ಒಬ್ಬನು. वि. ಒಂಟಿ फ़र्द फ़र्द, फ़र्दन् फ़र्दन् = ಒಂದೊಂದಾಗಿ, ಬೇರೆಬೇರೆಯಾಗಿ.
फ़र्दा, क्रिवि. ನಾಳೆ.
फ़र्याद, स्त्री. ದೂರು, ಮೊರೆ, ಪ್ರಕಾಶ; ಫಿರ್ಯಾದು; ದಾವಾ; ಮೊರೆಯಿಡುವಿಕೆ
फ़र्यादी, पु. ದೂರು ಕೊಡುವವ, ಫಿರ್ಯಾದಿದಾರ, ವಾದಿ.
फर्र, पु. ಆಡಂಬರ, ಭರಭರಾಟೆ
फ़र्राटा, पु. ಓಟ; ಹಾಯುವಿಕೆ; ಧಾವಂತ; ವೇಗವಾಗಿ ಓಡುವಿಕೆ; ಗಾಳಿಯಲ್ಲಿ ಹಾರಾಡುವಿಕೆ.
फर्राटा, पु. ಬೊಂಬು; ಬಾವುಟ ಹಾರುವ ಶಬ್ದ; ವೇಗ.
फर्राना, अक्रि. ಹಾರು, ಹಾರಾಡು.
फर्रार, वि. ಓಡುವವ, ಓಡುಕುಳಿ.
फ़र्राश, पु. ಜಮಖಾನೆ ಹಾಸುವವ; ಗುಡಿಸುವ ಸೇವಕ; ದೇವದಾರು ಮರ
फ़र्राशी, स्त्री. ಜಮಖಾನೆ ಹಾಸುವ ಕೆಲಸ ಅಥವಾ ಉದ್ಯೋಗ. वि. ಕ

ಕೆಲಸಕ್ಕೆ ಸಂಬಂಧಿಸಿದ.

ಫರ್ಖ, वि. ಪ್ರಸನ್ನ; ಸಂತೋಷಿಸುವ; ಭಾಗ್ಯವಂತ.

फ़र्श, पु. ನೆಲ; ನೆಲಗಟ್ಟು, ನೆಲಗಚ್ಚು; ಹಾಸುವ ಬಟ್ಟೆ, ಜಾಜೀಮು; ತಿವಾಸಿ, ಜಮಖಾನೆ. मीर फ़र्श = ರತ್ನಗಂಬಳಿ ಗಳ ಮೇಲೆ ಅಂಚಿನಲ್ಲಿಡುವ ಭಾರದ ಗುಂಡುಗಳು.

फ़र्शख़ाना, पु. ಜಮಖಾನೆಗಳಿಡುವ ಮನೆ.

फ़र्शबंदी, स्त्री. ನೆಲಗಟ್ಟು, ಪರಸ್ಪಂದಿ.

फ़र्शी, वि. ನೆಲಕ್ಕೆ ಸಂಬಂಧಿಸಿದ; ಜಮ ಖಾನೆಯು; ಬುಡ ಚಪ್ಪಟೆಯಾದ. स्त्री. ಒಂದು ಬಗೆ ಚಿಕ್ಕ ಹುಕ್ಕಾ.

फ़र्सूदा, वि. ಉಟ್ಟು ಹಳೆಯದಾದ; ಜರ್ಜರಿತ.

फ़र्हत, स्त्री. ಸಂತೋಷ, ಆನಂದ; ವಿನೋದ.

फलंग, स्त्री. = फलांग.

फल, पु. ಕಾಯಿ, ಹಣ್ಣು, ಫಲ; ಬೆಳೆ, ಫಸಲು; ಫಲಿತಾಂಶ; ಲಾಭ; ಕತ್ತಿಯ ಅಲಗು, ಧಾರೆ.

फलक, पु. ಹಲಗೆ, ಮಣೆ; ತಗಡು; ಪದರ; ಮೇಲ್ಮೈ; ತಳ, ಅಡಿ; ಕಡಿ ತಲೆ, ಗುರಾಣಿ, ಡಾಲು; ಓಲೆ, ಪತ್ರ.

फ़लक, पु. ಆಕಾಶ; ಸ್ವರ್ಗ.

फलकना, अक्रि. ಉಕ್ಕು, ಉಬ್ಬು; ತುಂಬಿ ತುಳುಕು.

फलका, पु. ಗುಳ್ಳೆ, ಹೊಪ್ಪಳೆ.

फलकी, पु. ಗುರಾಣಿಯುವ.

फ़लकी, वि. ಆಕಾಶದ; ಸ್ವರ್ಗದ.

फलठा, पु. ಮೊಳಕೆ; ಚಿಗುರು.

फलत, स्त्री. ಫಲದಾಯಕತ್ವ.

फलद, वि. ಫಲ ಕೊಡುವ, ಫಲ ದಾಯಕ; ಫಲಕಾರಿ.

फलदार, वि. ಫಲವುಳ್ಳ; ಲಾಭಕರ.

फलन, पु. ಹುಟ್ಟುವಳಿ, ಉತ್ಪತ್ತಿ.

फलना, अक्रि. ಫಲಿಸು; ಕಾಯಿಬಿಡು, ಹಣ್ಣುಬಿಡು; ಕಾರ್ಯಸಿದ್ಧಿಯಾಗು; ಮೈಯೆಲ್ಲ ಚಿಕ್ಕ ಕುರುಗಳು ಏಳು, ಚಳೆ; ಮಾಗು. फलना फूलना = ಸುಖಸಂಪನ್ನನಾಗಿ ಬಾಳು.

फलया, पु. ಮೊಗ್ಗು; ಹೂ, ಪುಷ್ಪ.

फ़लसफ़ा, पु. ದರ್ಶನಶಾಸ್ತ್ರ.

फलसा, पु. ಬಾಗಿಲು, ಕದ.

फलहरी, स्त्री. ಹಣ್ಣುಹಂಪಲು.

फलहार, फल्यार, पु. ಫಲಹಾರ.

फ़लाँ, वि. ಇಂಥಿಂಥ, ಫಲಾನ.

फलांग, स्त्री. ನಾಗಾಲೋಟ, ಜಿಗಿತ.

फलांगना, अक्रि. ನೆಗೆ, ಕುಣಿ, ಜಿಗಿ.

फला, वि. ಫಲಕಾರಿ; ಫಲ ಕೊಡುವ. पु. ಬಾಣದ ಅಗ್ರ, ಮೊನೆ.

फलाई, स्त्री. ಒಂದು ಬಗೆ ವಿಮಾನು.

फ़लाकत, स्त्री. ಕೇಡು, ಅನಿಷ್ಟ; ಅವ ಮಾನ; ದುರದೃಷ್ಟ; ದುಸ್ಥಿತಿ.

फ़लाख़न, फ़लाख़्न, स्त्री. ಕವಣೆ.

फलाध्यक्ष, पु. ಹಾಲೆ ಮರ.

फलाना, सक्रि. ಫಲ ಕೊಡಿಸು; ಮಾ ಗಿಸು; ಫಲಕಾರಿಯಾಗಿ ಮಾಡು.

फ़लाना, वि. ಇಂಥಿಂಥ, ಫಲಾನ.

फ़लालैन, पु. ಒಂದು ಬಗೆ ಉಣ್ಣೆ ಬಟ್ಟೆ, "ಫ್ಲಾನಲ್".

फलाहार, पु. ಹಣ್ಣುಗಳ ಭೋಜನ, ಫಲಾಹಾರ.

फलित, वि. ಲಾಭಕರ; ಫಲವುಳ್ಳ.

फलिया, स्त्री. फली का लघु रूप.

फलियाना, अक्रि. ಕಾಯಿಬಿಡು, ಫಲಿಸು

फली, स्त्री. ಬೀಜಕೋಶ, ಕಾಯಿ; ಅವರೆ ಮೊದಲಾದುವುಗಳ ಕಾಯಿ, ಶವಿ; ಕೋಡು, ಕುಣಿಕೆ, ಗೊಣಸು; ಗುರಾಣಿ, ಡಾಲು, ಖೇಡೆಯ.

फलीकश, पु. ಕೊಕ್ಕೆ, ದೋಟಿ.

फ़लीत, पु. = पलीता.

फलूआ, पु. ಗಂಟುಗಳು ಹಾಕಿ ಕಟ್ಟಿದ ಕರೆ, ಅಂಚು.

फ़व्वारा, पु. ಬುಗ್ಗೆ, ಊಟೆ, ಕಾರಂಜಿ; ಧಾರಾಯಂತ್ರ.

फसकड़ा, पु. ಕಾಲುಗಳನ್ನು ಚಾಚಿ ಕೊಂಡು ಕೂಡುವಿಕೆ.

फसकना, अक्रि. ಇಳಿ, ಮುಳುಗು, ಕುಸಿ; ಸಡಿಲು; ಬಿರಿ, ಸೀಳು.

फसकाना, सक्रि. ಕುಸಿಯಿಸು; ಸೀಳು, ಹರಿ; ಸಡಿಲಿಸು.

फसकी, स्त्री. ಮೂಟೆಗೊಂದು ಹಿಡಿ ಧಾನ್ಯದಂತೆ ತೆರುವ ಸಂತೆಯ ಸುಂಕ.

फसड्डी, वि. ಹಿಂದುಳಿದ.

फसना, अक्रि. = फंसना.

फसफसा, वि. ಸಡಿಲವಾದ, ಡೀಲಾದ.

फ़सल, स्त्री. ಋತು, ತಕ್ಕ ಸಮಯ, ಅಮಗ; ಬೆಳೆ, ಬೆಳಸು, ಪೈರು, ಫಸಲು; ಕೊಯ್ಯುವ ಕಾಲ, ಸುಗ್ಗಿ; ಪುಸ್ತಕದ ಒಂದು ಭಾಗ.

फ़सली, वि. ಋತು ಅಥವಾ ಬೆಳೆಗೆ ಸಂಬಂಧಿಸಿದ. पु. ಆರಂಭಕ್ಕೆ ಸಂಬಂಧ ಪಟ್ಟ ವರ್ಷ, ಫಸಲಿ.

फ़साद, पु. ಜಗಳ, ಕಲಹ; ಫಿತೂರಿ, ಒಳಸಂಚು; ದಂಗೆ; ಧಾಂದಲೆ.

फ़सादी, वि. ಫಿತೂರಿ ನಡೆಸುವವ; ದಂಗೆಖೋರ; ಜಗಳಗಂಟ.

फ़साना, पु. = अफ़साना.

फसाना, फसारना, सक्रि.= फंसाना.

फसाव, फसावा, पु. ಸಿಕ್ಕಿಕೊಳ್ಳುವಿಕೆ; ಗೊಂದಲ.

फ़साहत, स्त्री. ಒಳ್ಳೆಯ ನುಡಿ, ವಾಕ್ಚಾತುರ್ಯ; ಭಾಷಣಕಲೆ, ಉಪನ್ಯಾಸಕಲೆ

फ़सील, स्त्री. ಗೋಡೆ, ಪ್ರಾಕಾರ.

फ़सीह, वि. ಚೆನ್ನಾಗಿ ಮಾತನಾಡುವವ, ಸುವಕ್ತಾ, ವಾಗ್ಮಿ; ಸಭ್ಯ, ಶಿಷ್ಟ.

फ़सूँ, पु. ಮಂತ್ರತಂತ್ರ, ಮಾಟ.

फ़स्द, स्त्री. ರಕ್ತನಾಳದ ಒಡಕು; ನರವನ್ನು ಸೀಳಿ ರಕ್ತ ತೆಗೆಯುವಿಕೆ.

फ़स्ल, स्त्री. = फ़सल.

फ़स्साद, पु. ನರಗಳನ್ನು ಸೀಳಿ ರಕ್ತ ತೆಗೆಯುವವ; ಶಸ್ತ್ರ ಚಿಕಿತ್ಸಕ.

फ़स्सादी, स्त्री. ನರವನ್ನು ಸೀಳಿ ರಕ್ತ ತೆಗೆಯುವ ಶಸ್ತ್ರಕ್ರಿಯೆ.

फ़हम, स्त्री. ಬುದ್ಧಿ; ತಿಳಿವಳಿಕೆ; ಜ್ಞಾನ

फ़हमाइश, स्त्री. ತಿಳಿವಳಿಕೆ; ಎಚ್ಚರಿಕೆ; ಆದೇಶ; ಅಪ್ಪಣೆ; ತಾಕೀತು.

फ़हमीद, स्त्री. ತಿಳಿವಳಿಕೆ, ಗ್ರಹಣಶಕ್ತಿ.

फ़हमीदा, वि. ತಿಳಿವಳಿಕಸ್ಥ; ತಿಳಿದವ.

फहरना, अक्रि. ಹಾರಾಡು; ನಿಂಳಿ ರ್ವಾಡು.

फहराना, अक्रि. ಹಾರು; ತೂಗಾಡು; ರೆಕ್ಕೆ ಬಡಿ; ನಿಂಳಿದರ್ಾಡು. सक्रि. ಹಾರಿಸು (ಬಾವುಟ).

फहवा, पु. ರೀತಿ, ಶೈಲಿ; ಅರ್ಥ, ತಾತ್ಪರ್ಯ.

फहश, वि. ಅಶ್ಲೀಲ, ಅಶಿಷ್ಟ.

फ़हीम, फ़हीमा, वि. ತಿಳಿವಳಿಕಸ್ಥ, ಜ್ಞಾನಿ.

फांक, फांकी, स्त्री. ಹೋಳು, ತುಂಡು; ತೊಳೆ; ಬಾಯಿತುಂಬ ಪುರಿ; ಚೂರ್ಣ; ಪುಡಿ.

फांकड़, फांकड़ा, वि. ಚಾಲಾಕಿನವ; ಚುರುಕಿನವ; ಉತ್ಸಾಹಿ; ಠೀವಿಯುವ; ಷೋಕಿಲಾಲ.

फांकना, सक्रि. ಮುಕ್ಕು, ನುಂಗು; ಕೆತ್ತು, ಸೀಳು.

फांग, फांगी, स्त्री. ಒಂದು ಸೊಪ್ಪು.

फांडा, पु. ಧೋತ್ರ, ಲುಂಗಿ.

फांद, स्त्री. ಹಾರುವಿಕೆ, ಜಿಗಿತ. पु. ಸರಗುಣಿಕೆ; ಬಲೆ; ತೊಡಕು; ಸಿಕ್ಕು.

फांदना, अक्रि. ಹಾರು, ಜಿಗಿ. सक्रि. ದಾಟು; ಬಲೆಯಲ್ಲಿ ಹಿಡಿ; ಸಿಕ್ಕಿಸು.

फांदी, स्त्री. ಕಟ್ಟು, ಹೊರೆ.

फांफर, पु. ಹರಕು ಬಟ್ಟೆ; ಚಿಂದಿ; ತೂತು.

फांफी, स्त्री. ತೆಳುವಾದ ಪೊರೆ; ಹೊರಕೆ; ಕಣ್ಣಿನ ಪರೆ.

फांस, स्त्री. ಪಾಶ, ಕಟ್ಟು; ತೊಡಕು, ಬಲೆ, ಕಲ್ಲಿ; ಸಣ್ಣ ಸೀಳು, ಸಿಗುರು.

फांसना, सक्रि. ಸಿಕ್ಕಿಸು; ಬಲೆಯಲ್ಲಿ ಹಿಡಿ; ಕಟ್ಟು.

फांसा, पु. ಸರಗುಣಿಕೆ; ತೊಡಕು.

फांसी, स्त्री. ಸರಗುಣಿಕೆ, ಉರುಲು, ನೇಣು; ಫಾಸಿ ಸಜಾ, ಬಂಕೋಲೆ ಸಜಾ; ಪಾಶಿ, ಶೂಲ.

फ़ाइल, पु. ಮಾಡುವವ, ಕರ್ತ; ಕಾರಕ; ಕರ್ತೃವಾಚಕ ಶಬ್ದ.

फ़ाक़ा, पु. ಉಪವಾಸ, ಲಂಘಣ; ದರ್ದು.

फ़ाक़ाकश, वि. ಬಡತನದಿಂದ ಉಪವಾಸವಿರುವವ, ಹೊಟ್ಟೆಗಿಲ್ಲದವ.

फ़ाक़ाकशी, स्त्री. ಹೊಟ್ಟೆಗಿಲ್ಲದೆ ಉಪವಾಸವಿರುವಿಕೆ; ಹೊಟ್ಟೆಗಿಲ್ಲದೆ ನಿರ್ವಹಿಸುವಿಕೆ, ಉಪವಾಸವನ್ನು ಸಹಿಸುವಿಕೆ.

फ़ाख़्तई, वि. ಪಾರಿವಾಳದ ಬಣ್ಣದ; ಬಾದಾಮಿ ಬಣ್ಣದ.

फ़ाख़्ता, पु. ಪಾರಿವಾಳ, ಬೆಳವ.

फाक, फाग, पु. ಹೋಳಿ ಹಬ್ಬ, ಕಾಮನ ಹಬ್ಬ; ಕಾಮನ ಹಬ್ಬದ ಆಟಪಾಟಗಳು; ಓಕಳಿಯಾಟ; ಗುಲಾಲು ಪುಡಿ.

फागुन, पु. ಫಾಲ್ಗುನ ಮಾಸ.

फ़ाज़िर, वि. ದುಷ್ಟ; ಪೋಲಿ, ಪಾಪಿ; ಲಂಪಟ.

फ़ाज़िल, वि. ಹೆಚ್ಚಾದ; ಮಿಗಿಲಾದ; ಅಧಿಕ. पु. ಪಂಡಿತ; ವಿದ್ಯಾವಂತ; ವ್ಯುತ್ಪನ್ನ.

फाट, पु. ಅಗಲ; ಭಾಗ, ಪಾಲು.

**फाटक**, पु. ಹೆಬ್ಬಾಗಿಲು, ಅಗಸೆ; ದ್ವಾರಪಾಲಕ, ಕಾವಲುಗಾರ; ತಡೆ, ಅಡ್ಡಿ; ಕೋರ್ಟಿನಲ್ಲಿ ವಾದಿ ಪ್ರತಿವಾದಿಗಳು ನಿಂತುಕೊಳ್ಳುವ ಸ್ಥಳ, ಪಂಜರ; ಸರಕಾರಿ ದೊಡ್ಡಿ; ಉಬ್ಬಲು, ಹೊಟ್ಟು. ಗೊಳಲಿ.

**फाटक-दार**, पु. ದ್ವಾರಪಾಲಕ, ಕಾವಲುಗಾರ.

**फाटक-बंदी**, स्त्री. ಸೆರೆ, ಕಾವಲು.

**फाटका**, पु. = सट्टा.

**फाटना**, अक्रि. = फटना.

**फाड़**, पु. ಬಿರುಕು; ಹರಕು; ಸೀಳು.

**फाड़ना**, सक्रि. ಹರಿ, ಸಿಗಿ; ಸೀಳು; ಒಡೆ.

**फाड़ा-फाड़ी**, स्त्री. ಜಗಳ, ಕಚ್ಚಾಟ.

**फ़ातिहा**, **फ़ातेहा**, पु. ಕುರಾನಿನ ಮೊದಲನೆಯ ಅಧ್ಯಾಯ; ಸತ್ತವರ ಆತ್ಮ ಶಾಂತಿಗಾಗಿ ಮಾಡುವ ಪ್ರಾರ್ಥನೆ ದಾನಧರ್ಮ ಮೊದಲಾದುವು. फ़ातिहा पढ़ना = ಸತ್ತವರ ಆತ್ಮ ಶಾಂತಿಗೆ ಅವರ ಸಮಾಧಿಯ ಬಳಿ ಕುರಾನನ್ನು ಪಠಿಸು; ಚರಮಶ್ಲೋಕ ಪಠಿಸು; ನಿರಾಶನಾಗು.

**फ़ानी**, वि. ಅನಿತ್ಯ, ನಶ್ವರ.

**फ़ानूस**, पु. ಗಾಜಿನ ದೀಪದ ಕಂಬ; ಗಾಜಿನ ದೀಪ, ಲಾಂದ್ರ, ಕಂದೀಲು.

**फ़ाम**, पु. ವರ್ಣ, ಬಣ್ಣ, ರಂಗು; ರೂಪ.

**फ़ायदा**, पु. ಲಾಭ, ಫಾಯಿದೆ; ಪ್ರಯೋಜನ; ಹಿತ; ಫಲ, ಫಲಿತಾಂಶ; ಬಡ್ಡಿ.

**फ़ायदामंद**, वि. ಲಾಭಕಾರಿ, ಫಲಕಾರಿ; ಹಿತಕರ, ಪ್ರಯೋಜನಕರ.

**फ़ाया**, पु. ಮುಲಾಮಿನ ಪಟ್ಟಿ, ಪ್ಲಾಸ್ತ್ರಿ.

**फ़ारस**, पु. ಪಾರಸೀಕ, ಪರ್ಶಿಯಾ.

**फ़ारसी**, स्त्री. ಪಾರಸೀಕ ಭಾಷೆ.

**फारा**, पु. ತುಂಡು, ಹೋಳು.

**फ़ारिग़**, वि. ನಿವೃತ್ತ; ಬಿಡುಗಡೆಯಾದ, ಖುಲಾಸೆಯಾದ.

**फ़ारिख़ती**, स्त्री. **फ़ारिग़ख़त**, पु. **फ़ारिग़ख़ती**, स्त्री. ಬಿಡುಗಡೆ ಪತ್ರ, ಪಾರಿಖತ್ತು, ಖುಲಾಸಪತ್ರ, ಖಾಡ ಪತ್ರ.

**फाल**, पु. ನೇಗಿಲಿನ ಮೊಳೆ, ಗುಳ; ತುಂಡು, ಹೋಳು; ಅಡಕೆ ಚೂರು; ಕುಣಿತ, ಜಿಗಿತ; ಹೆಜ್ಜೆ, ದಾಪು.

**फ़ाल**, स्त्री. ಭವಿಷ್ಯ ಹೇಳುವಿಕೆ; ಶಕುನ ಶಾಸ್ತ್ರ.

**फ़ालतू**, वि. ಹೆಚ್ಚಾದ, ಮಿಗಿಲಾದ; ಬೇಕಷ್ಟು ತೆಗೆದುಕೊಂಡ ಮೇಲೆ ಉಳಿದಿರುವ; ಮೇಲುವಾಸಿ.

**फ़ालसई**, वि. ಊದಾಬಣ್ಣದ.

**फ़ालसा**, पु. ಒಂದು ಬಗೆ ಹಣ್ಣು.

**फ़ालिज**, पु. ಪಕ್ಷವಾತ, ಪಾರ್ಶ್ವವಾಯು, ಅರ್ಧಾಂಗವಾಯು; ಲಕ್ವಾ.

**फ़ालूदा**, पु. ಗೋಧಿಯ ತಂಬಿಟ್ಟು.

**फाल्गुन**, पु. ಫಾಲ್ಗುನ ಮಾಸ.

**फाव**, पु. ಕೊಸರು, ಕುಸುರಿ.

**फावड़ा**, पु. ಸಲಿಕೆ, ಮಮಟಿ.

**फावड़ी**, स्त्री. ಸಲಿಕೆ, ಎಲೆ ಗುದ್ದಲಿ; ಸನ್ಯಾಸಿಯ ದಂಡ; ಎರಡು ತುದಿಗಳಲ್ಲೂ ಪಾವಡಿರುವ ದಂಡ ಅಥವಾ ಲಾಠಿ.

**फ़ाश**, वि. ಪ್ರಕಟವಾದ; ಬಯಲಾದ; ಪ್ರಸಿದ್ಧ; ಸ್ಪಷ್ಟ.

फ़ासिद, वि. ನೀಚ; ದುಷ್ಟ; ಪಾಪಿ; ದೋಷಿ; ಅಪರಾಧಿ; ಖೋಡಿ, ಖೂಳ.

फ़ासिला, पु. ದೂರ, ಫಾಸಲೆ; ಅಂತರ; ತೆರಪು.

फ़ाहा, पु = फ़ाया.

फ़ाहिश, वि. ಪ್ರಚಂಡ; ಪೋಲಿ; ಲಂಪಟ; ನಿರ್ಲಜ್ಜ.

फ़ाहिशा, स्त्री. ವ್ಯಭಿಚಾರಿಣಿ; ಸೂಳೆ.

फिंकना, अक्रि. ಎಸೆಯಲ್ಪಡು.

फिंकाना, फिंकवाना, सक्रि. ಬಿಸಾಡಿಸು

फिंक, स्त्री. ಚಾವಟಿಯ ತುದಿ.

फ़िक़रा, पु. ವಾಕ್ಯ; ಅವಧಿ; ಮರಸುವ ಮಾತು, ಠಕ್ಕು; ಗೇಲಿ, ಕುಚೋದ್ಯ.

फ़िक़रा गढ़ना या बनाना = ನೆವ ಹೇಳು, ಸಬೂಬು ಹೇಳು.

फ़िक़राबाज़, पु. ಮೋಸಗಾರ, ಠಕ್ಕ.

फ़िक़राबाज़ी, स्त्री. ಮೋಸಗಾರಿಕೆ, ಠಕ್ಕು.

फिकवाना, फिकाना, सक्रि. ಬಿಸಾಡಿಸು

फिकारना, सक्रि. ತಲೆಯನ್ನು ಬಿಚ್ಚು; ತಲೆಗೂದಲನ್ನು ಬಿಚ್ಚು.

फिकैया, फिकैत, पु. ಭರ್ಜಿ ಎಸೆಯುವವ.

फ़िक्र, स्त्री. ಚಿಂತೆ; ಯೋಚನೆ; ವಿಚಾರ.

फ़िक्रमंद, वि. ಚಿಂತಾಮಗ್ನ; ಚಿಂತಿತ; ಚಿಂತಾಪರ, ವ್ಯಗ್ರ.

फ़िक्रमंदी, स्त्री. ಚಿಂತಾಮಗ್ನತೆ.

फ़िज़ा, स्त्री. ಮೈದಾನ; ಬಯಲು; ವಾತಾವರಣ.

फ़िज़ूँ, वि. ಹೆಚ್ಚು, ಅಧಿಕ.

फ़िज़ूल, वि. = फ़ज़ूल.

फिट, अव्य. ಛೀ, ಛೀ; ಧಿಕ್. स्त्री. ಬೈಗಳು, ನಿಂದೆ.

फिटकार, स्त्री. ಧಿಕ್ಕಾರ, ಬೈಗಳು.

फिटकारना, सक्रि. ಧಿಕ್ಕರಿಸು, ಬೈಯು.

फिटकिरी, स्त्री. ಪಟಿಕ, ಪಟಿಕಾರ.

फिटन, स्त्री. ಕುದುರೆ ಸಾರೋಟ್.

फिटना, अक्रि. ಜಜ್ಜು; ಕಲಸಲ್ಪಡು; (ಸಾಲ) ತೀರು.

फिटाना, सक्रि. ಕಲಸು. ಚಾರಿಸು.

फिट्ट, वि. ತಿರಸ್ಕೃತ, ಧಿಕ್ಕರಿಸಲ್ಪಟ್ಟ.

फ़ितना, पु. ಜಗಳ, ಗಲಾಟೆ; ಫಿತೂರಿ; ದಂಗೆ; ಕಲಹ; ಆಪತ್ತು; ಅತ್ತರ್, ಪನ್ನೀರು. वि. ದುಷ್ಟ; ಗಲಾಟೆ ಖೋರ; ಉಪದ್ರವಿ.

फ़ितर, पु. ಪಾರಣೆ.

फ़ितरत, स्त्री. ಸ್ವಭಾವ; ತಿಳಿವಳಿಕೆ; ಜ್ಞಾನ; ಜಾಣತನ; ತಂತ್ರ, ಒಳಸಂಚು; ಮುಸಲತ್ತು; ಫಿತೂರಿ.

फ़ितरती, वि. ಸಹಜ, ಸ್ವಾಭಾವಿಕ; ಜಾಣ, ಚತುರ; ತಂತ್ರಗಾರ.

फ़ितूर, पु. = फ़तूर.

फ़िदविया, स्त्री. ದಾಸಿ, ಸೇವಕಿ.

फ़िदवी, वि. ಸ್ವಾಮಿಭಕ್ತ; ಭವದೀಯ, ತಮ್ಮ ವಿಧೇಯ. पु. ಸೇವಕ, ದಾಸ.

फ़िदा, पु. ನಿವೇದನ; ಆತ್ಮಾರ್ಪಣೆ; ಭಕ್ತಿ.

फ़िदाई, पु. ಆತ್ಮಾರ್ಪಣೆ ಮಾಡುವವ; ಭಕ್ತ, ಆಸಕ್ತ.

फ़िदिया, पु. ಬಿಡುಗಡೆ ಹಣ, ಒಲು; ದಂಡ.

**फिनाना**, सक्रि. ಕಲಸು, ಬೆರಸು.

**फिनिया**, स्त्री. ಕಿವಿಯ ಒಂದು ಆಭರಣ

**फ़िरंग**, पु. ಯೂರೋಪ್ ಖಂಡ; ಫರಂಗಿ ರೋಗ, ಮೇಹರೋಗ.

**फ़िरंगिस्तान**, पु. ಬಿಳಿ ಜನರ ನಾಡು, ಯೂರೋಪ್.

**फ़िरंगी**, वि. ಫರಂಗಿಯವ. स्त्री. ಒಂದು ಬಗೆ ಕತ್ತಿ.

**फिर**, क्रिवि. ತಿರುಗಿ; ಪುನಃ; ಮತ್ತೆ; ಬಳಿಕ. फिर भी = ಮತ್ತೂ, ಆದಾಗ್ಯೂ.

**फ़िरक़ा**, पु. ಜಾತಿ, ಪಂಗಡ, ಕೋಮು; ಕೂಟ, ಮಂಡಲಿ; ವಾಕ್ಯ.

**फ़िरक़ावार**, वि. ಕೋಮುವಾರು.

**फिरकी**, स्त्री. ನೂಲಿನ ಅರಟೆ, ತಿಕಡಿ; ಕದುರು, ಒಟ್ಟು; ಗಿರುಗಟೆ, ಜೀರು ಬುಗುರಿ.

**फिरत**, पु. ಬಿಸಾಡಿದ ವಸ್ತು, ಕಸ; ತಿರುಗಿ ಬರುವುದಕ್ಕೆ ಕೂಲಿ ಅಥವಾ ಬಾಡಿಗೆ; ತಿರುಗಿ ಕೊಡುವ ಹಣ.

**फिरता**, पु. ತಿರುಗುವಿಕೆ, ಹಿಂತಿರುಗುವುದಕ್ಕೆ ಬಾಡಿಗೆ; ವಿಟನಿಗೆ ವೇಶ್ಯೆ ತಿರುಗಿ ಕೊಡುವ ಹಣ; ಡಾಕ್ಟರನಿಗೆ ಕೊಡುವ ದಲ್ಲಾಳಿ; ಪತ್ರಕ್ಕೆ ಜವಾಬು.

**फिरती**, स्त्री. ತಿರುಗುವಿಕೆ; ವಾಪಸ್ಸು, ಪರತ.

**फिरदौस**, पु. ತೋಟ, ಉದ್ಯಾನ; ಸ್ವರ್ಗ.

**फिरना**, अक्रि. ತಿರುಗು; ಮರಳು; ಗುಡುಗಾಡು, ಅಲೆದಾಡು; ತಿರುಗಿ ಬೀಳು.

**फिरनी**, स्त्री. = फिरकी.

**फ़िरनी**, स्त्री. ಪಾಯಸ, ಪರಮಾನ್ನ.

**फिरवैया**, वि. ತಿರುಗುವವ.

**फिराई**, स्त्री. ತಿರುಗುವಿಕೆ; ವಾಪಸು ಮಾಡುವಿಕೆ; ಪುನಃಸ್ಥಾಪನೆ.

**फ़िराक़**, पु. ವಿಯೋಗ, ವಿರಹ.

**फिरवाना**, **फिराना**, सक्रि. ತಿರು ಗಿಸು, ಸುತ್ತಿಸು; ಹೊರಳಿಸು; ತಿರುವು.

**फ़िरार**, पु. = फ़रार.

**फिराव**, पु. ತಿರುಗುವಿಕೆ, ತಿರುಗಾಟ

**फ़िरासत**, स्त्री. ತೀಕ್ಷ್ಣಬುದ್ಧಿ; ಅರಿವು.

**फ़िरिश्ता**, पु. = फ़रिश्ता.

**फ़िलहाल**, क्रिवि. ಪ್ರಸ್ತುತ, ಹಾಲಿ

**फिल्ली**, स्त्री. ಕಣಕಾಲು, ಮೀನಖಂಡ.

**फिश**, अव्य. ಛೀ!, ಥೂ!.

**फिस**, वि. ನಿಷ್ಪ್ರಯೋಜಕ; ನಿರರ್ಥಕ; ಏನೂ ಆಗದ. टाँय टाँय फिस = ಫಲಿತಾಂಶವೇನೂ ಇಲ್ಲದ್ದು, ಪೊಳ್ಳು ಭರಫರಾಟೆ.

**फिसकना**, **फिसकाना**, अक्रि. ತಿ ಸ್ಸೆನ್ನು.

**फिसड्डी**, वि. ಏನೂ ಮಾಡಲಾಗದವ ಕೈಯಲ್ಲಾಗದವ; ಹಿಂದುಳಿದವ.

**फिसफिसाना**, अक्रि. ಹಿಂಜರಿ, ನಸ ನಸೆ ಮಾಡು.

**फिसलन**, स्त्री. ಜಾರುವಿಕೆ, ಜಾರಿಕೆ; ಕೈತಪ್ಪು.

**फिसलना**, अक्रि. ಜಾರು, ಜಗುಳು ಸರಿ; ನುಣುಚು; ತಪ್ಪು. वि. ಜಾರಿ ಕೆಯ, ಜಾರುವ.

फ़िसलहा, वि. ಜಾರುವ, ಜಾರಿಕೆಯ.
फिसलाना, सक्रि. ಜಾರಿಸು; ಸರಿಸು; ತಪ್ಪಿಸು.
फिसलाव, पु. फिसलाहट, स्त्री. ಜಾರುವಿಕೆ, ಜಾರಿಕೆ.
फ़िहरिस्त, स्त्री. = फ़ेहरिस्त.
फींचना, सक्रि. ಬಟ್ಟೆ ಒಗೆ; ಹಿಂಡು.
फ़ी, अव्य. ಪ್ರತಿಯೊಂದು, ತಲಾ. स्त्री. ಕುಂದು, ದೋಷ; ಸಂಚು.
फीका, वि. ನಿಸ್ಸಾರ, ಸಪ್ಪೆ.
फीकापन, पु. ನೀರಸತ್ವ, ಸಪ್ಪೆತನ.
फ़ीता, पु. ಲಾಡಿ, ನಾಡೆ, ನವಾರ; ಪಟ್ಟಿ.
फ़ीरोज़, वि. ಜಯಶೀಲ, ಜಯಶಾಲಿ; ಭಾಗ್ಯಶಾಲಿ
फ़ीरोज़ा, पु. ಇಂದ್ರನೀಲ ಮಣಿ.
फ़ीरोज़ई, फ़ीरोज़ी, वि. ಇಂದ್ರನೀಲ ವರ್ಣದ.
फ़ील, पु. ಆನೆ, ಗಜ.
फ़ीलख़ाना, पु. ಗಜಶಾಲೆ, ಆನೆ ಕಟ್ಟೋಹಟ್ಟಿ.
फ़ीलपांव, फ़ीलपा, पु. ಆನೆಗಾಲು, ಹುತ್ತುಗಾಲು, ಒರಲುಗಾಲು.
फ़ीलपाया, पु. ಸ್ತಂಭ, ಕಂಬ.
फ़ीलवान, पु. ಆನೆ ನಡೆಸುವವ, ಮಾವಟಿಗ, ಮಾವುತ, ಜೋದ.
फ़ीली, स्त्री. ಕಣಕಾಲು.
फुंकना, अक्रि. ಊದಲ್ಪಡು, ಭಸ್ಮವಾಗು. पु. ಊದುಗೊಳವಿ; ಮೂತ್ರಪಿಂಡ, ಮೂತ್ರಾಶಯ.
फुंकनी, स्त्री. ಊದುಗೊಳವಿ; ತಿದಿ.
फुंकरना, अक्रि. ಫೂತ್ಕಾರಮಾಡು.
फुंकवाना, फुंकाना, सक्रि. फूंकना का प्रे. रूप.
फुंकार, पु. ಬುಸುಗುಟ್ಟುವಿಕೆ, ಫೂತ್ಕಾರ
फुंकारना, अक्रि. ಬುಸುಗುಟ್ಟು, ಬುಸ್ಸೆನ್ನು.
फुंकारी, स्त्री. ಬುಸುಗುಟ್ಟುವಿಕೆ.
फुंगी, स्त्री. ಚಿಗುರು; ಮೊಗ್ಗು; ತೆನೆ.
फुंदना, पु. फुंदिया, स्त्री. ಕುಚ್ಚು, ಗೊಂಚಲು, ಗೊಂಡೆ, ಝುಲ್ಲರಿ.
फुंदी, स्त्री. ಗಂಟು, ಕಟ್ಟು; ಬೊಟ್ಟು, ತಿಲಕ.
फुंसी, स्त्री. ಗುಳ್ಳೆ, ಕುರು.
फुंहार, स्त्री. ಹನಿ, ತುಂತುರು.
फुंहारा, पु. = फूहार.
फुकना, अक्रि. = फुंकना.
फुगाँ, पु. ಅಳು, ವಿಲಾಪ; ಕೂಗಾಟ.
फुचड़ा, पु. ಬಟ್ಟೆಯ ಅಂಚಿನಲ್ಲಿ ನೇಯದೆ ಬಿಟ್ಟಿರುವ ಎಳೆಗಳು.
फुचारा, पु. ಅಸಭ್ಯವಾಗಿ ಅಥವಾ ಅಶ್ಲೀಲವಾಗಿ ಮಾತನಾಡುವವ.
फुज़ूल, वि. = फ़ज़ूल.
फुट, वि. ಹಳೆಯ; ಒಂಟಿ; ವಿಷಮ; ಇಜ್ಜೋಡಿತೆ; ಯಾವುದಕ್ಕೂ ಸೇರದ; ಬೇರೆಯಾದ. पु. ಒಂದು ಅಡಿ, ಫೂಟು.
फुटकर, फुटकल, वि. ವಿಲಕ್ಷಣ, ವಿಷಮ; ಬೇರೆಬೇರೆ, ವಿವಿಧ; ಸಬ್ಲುಂಡ, ಚಿಲ್ಲರೆ.
फुटका, पु. ಗುಳ್ಳೆ, ಹೊಪ್ಪಳೆ.
फुटकी, स्त्री. ಚಿತ್ತು, ಕಲೆ, ಡಾಗು, ಕರೆ.

वि. ಹಳೆಯ.

फुटहा, पु. ಹುರಿದ ಜೋಳ.

फुटेहरा, पु. ಹುರಿಗಡಲೆ.

फुट्टल, फुट्टैल, वि. = फुट.

फुड़वाना, सक्रि. फोड़ना का प्रे. रूप.

फुड़िया, स्त्री. ಕಣ್ಣಿನ ಪರೆಯಲ್ಲಿ ಏಳುವ ಗುಳ್ಳೆ; ಕುರು, ಗುಳ್ಳೆ.

फुतकी, स्त्री. ಒಂದು ಪಕ್ಷಿ (=फुदकी).

फुतूर, पु. = फ़तूर.

फुदकना, अक्रि. ಕುಣಿ; ಜಿಗಿ; ನೆಗೆ; ಕುಣಿದಾಡು.

फुदका, पु. फुदकी, स्त्री. ಕುಣಿತ; ಜಿಗಿತ; ಕುಪ್ಪಳಿಸುವಿಕೆ; ಒಂದು ಪಕ್ಷಿ.

फुनगी, स्त्री. ಚಿಗುರು; ತೆನೆ; ತುದಿ.

फुन्नी, स्त्री. ಕುಚ್ಚು, ಗೊಂಚಲು; ಗಂಟು.

फुप्फुस, पु. ಶ್ವಾಸಕೋಶ, ತೊಳ್ಳೆ.

फुफंदी, स्त्री. ನವಾರ, ನೀವಿ.

फुफकार, पु. ಬುಸುಗುಟ್ಟುವಿಕೆ.

फुफकाना, फुफकारना, अक्रि. ಬುಸು ಗುಟ್ಟು, ಬುಸ್ಸೆನ್ನು.

फुपा, फुप्पा, फुफा, पु. ತಂದೆಯ ಸೋದರಿಯ ಗಂಡ, ಸೋದರತ್ತೆಯ ಗಂಡ.

फुफिया, वि. ಸೋದರತ್ತೆಯಂತೆ ಸಂಬಂಧವುಳ್ಳ. फुफिया सास = ಗಂಡ ಅಥವಾ ಹೆಂಡತಿಯ ಸೋದರತ್ತೆ, ಮಾವನ ಸೋದರಿ.

फुफेरा, वि. ಸೋದರತ್ತೆಯ ಕಡೆಯ ಸಂಬಂಧದ. फुफेरा भाई = ಸೋದರತ್ತೆಯ ಮಗ, ಭಾವ.

फुर, वि. ಸತ್ಯ, ನಿಜ; ಸರಿ. स्त्री. ಪ[illegible] ಪರ ಶಬ್ದ.

फुरती, स्त्री. ತ್ವರೆ, ವೇಗ; ಲಾಘವ[illegible] ಚಳಕ; ಚಟುವಟಿಕೆ, ಲಗುಬಗೆ.

फुरतीला, वि. ವೇಗವಾದ; ಚು[illegible] ಕಾದ; ಲವಲವಿಕೆಯ, ಚಟುವಟಿಕೆಯ[illegible]

फुरना, अक्रि. ಹೊರಡು, ಸ್ಫು[illegible] ಹೊರಬೀಳು; ನಿಜವಾಗು.

फुरफुराना, अक्रि. ಗಾಳಿಗೆ ಅಲುಗಾ[illegible] ಹಾರಾಡು, ಅದರು. सक्रि. [illegible] ಜಾಡಿಸು.

फुरफुरी, फुरहरी, स्त्री. ಅದುರು[illegible] ಕಂಪನ, ನಡುಕ; ರೋಮಾಂಚ.

फुरसत, स्त्री. ವಿರಾಮ, ಸಾವಕಾ[illegible] ಬಿಡುಹೊತ್ತು, ಪುರಸತ್ತು, ಶೀ[illegible]

फुरेरी, स्त्री. ಔಷಧ ಹಚ್ಚಲು ಕ[illegible] ಯಲ್ಲಿ ಹತ್ತಿ ಸುತ್ತಿರುವ ಹೆಂಚು ಕಡ್ಡಿ[illegible] ರೋಮಾಂಚ, ನಿಲುಗೂದಲು; ನಡು[illegible]

फुलका, पु. फुलकी, स्त्री. ಬೊಬ್ಬೆ[illegible] ಚಿಕ್ಕ ಹೊಪ್ಪಳೆ; ತೆಳುವಾದ ಚಪಾ[illegible] ದೋಸೆ, ಗೋಧಿರೊಟ್ಟಿ; ಮೆತ್ತಗಿ[illegible] ನೆಲ. वि. ಉಬ್ಬಿದ, ಬಾತುಕೊ[illegible] ಹಗುರವಾದ.

फुलकारना, सक्रि. ಹರವು, ವಿಸ್ತ[illegible]

फुलकारी, स्त्री. ಹೂವಿನ ಕೆಲ[illegible] ಬುಟ್ಟಾ ಕೆಲಸ. वि. ಹೂಗೆಲಸ ಮಾ[illegible] ಡಿದ, ಬೂಟಾ ಕೆಲಸ ಮಾಡಿ[illegible] ಗೋಟುಕಟ್ಟಿದ, ಅಂಚುಕಟ್ಟಿದ.

फुलचुही, स्त्री. ಒಂದು ಪಕ್ಷಿ.

फुलझड़ी, स्त्री. ಹೂ ಬಾಣ, ಕುಡಿಕೆ ಬಾಣ.

फुलफुला, वि. ರಂಧ್ರಮಯವಾದ; ಬಿರುಕು ಬಿಟ್ಟ; ಹೊಂದಿಕೆಯಿಲ್ಲದ.

फुलवर, पु. ಕಸೂತಿ ಕೆಲಸ ಮಾಡಿದ ಒಂದು ಬಗೆ ತೆಳುವಾದ ಬಟ್ಟೆ.

फुलवा, पु. ಒಂದು ಬಗೆ ಗೋಂದು.

फुलवाड़ी, फुलवारी, स्त्री. ಪುಷ್ಪವನ, ತೋಟ, ಉದ್ಯಾನ; ಮಕ್ಕಳು ಮರಿ.

फुलां, वि. ಇಂಥಿಂಥ, ಫಲಾನ.

फुलाना, सक्रि. ಉಬ್ಬಿಸು, ಉಬ್ಬಿಸು; ಹಿಗ್ಗಿಸು; ಅರಳಿಸು.

फुलाव, पु. फुलावट, स्त्री. ಉಬ್ಬು, ಬೀಗು, ಉಬ್ಬಟೆ.

फुलासरा, पु. ಮುಖಸ್ತುತಿ, ಪುಸಲಾಯಿಸುವಿಕೆ.

फुलिया, पु. ಮೊಳೆಯ ತಲೆ, ಗುಬಟು; ಗುಬ್ಬಿ ಮೊಳೆ; ಮೂಗುತಿ, ಮುರು.

फुलेल, पु. ಹೂಗಳಿಂದ ಪರಿಮಳ ಕೊಂಡಿದ ತೈಲ.

फुलेहरा, पु. ತೋರಣ; ಗೊಂಚಲು.

फुलौरी, स्त्री. ಒಂದು ಬಗೆ ಬೋಂಡ.

फुल्ल, वि. ವಿಕಸಿತವಾದ, ಅರಳಿದ.

फुल्ला, पु. ಕಣ್ಣಿನ ಹೂ, ಕಣ್ಣಿನ ಪರೆ; ಅರಳಿದ ವಸ್ತು, ಉಬ್ಬಿದ ವಸ್ತು; ಅರಳು, ಪುರಿ.

फुल्ली, स्त्री. ಸಣ್ಣ ಹೂವು; ಕಣ್ಣಿನ ಪರೆ, ಕಣ್ಣಿನ ಹೂ; ಮೂಗುತಿ; ಕಿವಿಮುರು.

फुवारा, पु. = फुहार.

फुस, फुसकी, स्त्री. ಮೃದು ಧ್ವನಿ; ಪುಸಪುಸ ಶಬ್ದ.

फुसड़ा, फुसरा, पु. ಹರಕು ಬಟ್ಟೆ, ಚಿಂದಿ; ಗಿಡಗಳ ನಾರು.

फुसकारा, स्त्री. ಬುಸುಗುಟ್ಟುವಿಕೆ.

फुसफुस, स्त्री. ಪಿಸುಪಿಸು ಮಾತು, ಗುಸಗುಸು; ಪಿಸುಗುಟ್ಟುವಿಕೆ; ಸಡಿಲತೆ

फुसका, फुसफुसा, वि. ಬೇಗನೆ ಮುರಿದು ಹೋಗುವ, ಪೆಡಸು; ಬಲವಿಲ್ಲದ

फुसफुसाना, सक्रि. ಪಿಸುಪಿಸು ಮಾತಾಡು, ಪಿಸುಗುಟ್ಟು.

फुसफुसाहट, स्त्री. ಪಿಸುಪಿಸು ಮಾತು.

फुसलाऊ, वि. ಪುಸಲಾಯಿಸುವವ.

फुसलाना, सक्रि. ಪುಸಲಾಯಿಸು; ಗೋರ್ಲ ಮಾಡು; ಬುಲ್ಲವಿಸು.

फुसलाव, फुसलावा, पु. फुसलाहट, स्त्री. ಪುಸಲಾಯಿಸುವಿಕೆ, ಪುಸಲಾವಣೆ; ಬುಲ್ಲವಣೆ.

फुहार, पु. ಹನಿ, ತುಂತುರು, ಸೋನೆ.

फुहारा, वि. ಅಸಭ್ಯ; ಗಮಾರ; ಗಾವೋಡು. पु. ಅಸಭ್ಯವಾಗಿ ಮಾತಾಡುವವ, ಒಡ್ಡೊಡ್ಡಾಗಿ ಮಾತನಾಡುವವ; ಹನಿ, ತುಂತುರು; ಧಾರಾಯಂತ್ರ

फुही, स्त्री. ಹನಿ, ತುಂತುರು.

फूं, स्त्री. ಚೀರುವುದು, ಬುಸ್ಸೆನ್ನುವಿಕೆ.

फूंक, स्त्री. ಊದುವಿಕೆ, ಉಸಿರುವಿಕೆ; ಬೆಂಕಿ ಊದುವಿಕೆ; ಬುಸುಗುಟ್ಟುವಿಕೆ. झाड़ फूंक = ಮಂತ್ರ ಹಾಕುವಿಕೆ.

फूंकना, अक्रि. ಊದಲ್ಪಡು; ಉರಿ, ಸುಡು. सक्रि. ಊದು, ಉರುಬು,

ಉಸಿರು; ಉರಿಸು, ಸುಡು; ಮಂತ್ರ ಹಾಕು; ಶಂಕ ಊದು, ಪೂರಿಸು; ಸಿಕ್ಕಾಪಟ್ಟೆ ಖರ್ಚುಮಾಡು, ದುಂದು ಮಾಡು. फूंक फूंक के पांव धरना = ಬಹಳ ಜಾಗರೂಕತೆಯಿಂದ ನಡೆ, ಬಲು ಹುಷಾರಾಗಿ ವರ್ತಿಸು.

**फूंका**, पु. ಎಲ್ಲ ಹಾಲನ್ನೂ ಕರೆದು ತೆಗೆಯಲು ಹಸುವಿನ ಕೆಚ್ಚಲಿಗೆ ಔಷಧ ತುಂಬಿದ ನಳಿಗೆಯನ್ನಿಟ್ಟು ಊದುವಿಕೆ; ನಳಿಗೆ; ಗುಳ್ಳೆ, ಹೊಪ್ಪಳೆ.

**फूंकारना**, अक्रि. ಬುಸುಗುಟ್ಟು, ಮುಸುಗರಿ.

**फूंद**, स्त्री. = फुंदना.

**फूंस**, पु. = फूस.

**फूकर**, पु. ನಾಜೂಕಿನವ.

**फूट**, स्त्री. ಒಡೆಯುವಿಕೆ; ಬಿರುಕು, ಒಡಕು; ಕಲಹ; ಮತಭೇದ, ಭಿನ್ನಾಭಿಪ್ರಾಯ; ವೈಮನಸ್ಯ; ಬೇರೆಯಾಗುವಿಕೆ; ಕರಬೂಜು ಹಣ್ಣು.

**फूटन**, पु. ಕಲಹ, ಜಗಳ; ಮನಸ್ತಾಪ.

**फूटना**, अक्रि. ಒಡೆ, ಬಿರುಕು ಬಿಡು; ಬಿರಿ; ಮುರಿ; ಚದರಿಹೋಗು, ಅಗಲು; ಹಿಸಿ; ಮೂಡು; ಹೊರಡು; ಅಳು. फूट फूटकर रोना = ಬಿಕ್ಕಿ ಬಿಕ್ಕಿ ಅಳು.

**फूटी**, स्त्री. ಒಡಕು; ಭಿನ್ನಾಭಿಪ್ರಾಯ; ವಿರೋಧ.

**फूफा**, पु. ಸೋದರತ್ತೆಯ ಗಂಡ.

**फूफी**, **फूफू**, स्त्री. ಸೋದರತ್ತೆ.

**फूल**, पु. ಪುಷ್ಪ, ಹೂವು; ಹೂಗೆಲಸ, ಬುಟ್ಟಾಕೆಲಸ; ಕುಚ್ಚು, ಗೊಂಚಲು; ಅಗ್ನಿಕಣ, ಕಿಡಿ; ಕುಷ್ಠದ ಚುಕ್ಕೆ, ಶ್ವೇತಕುಷ್ಠ; ಕಣ್ಣಿನ ಹೂ; ಉತ್ತಮವಾದ ನಾಟಿ ಸೇಂದಿ; ರಜಸ್ವಲೆಯಾಗುವಿಕೆ, ಋತು; ಹೆಂಗಸರ ಬಿಳುಪು ರೋಗ, ಬಿಳಿಸೆರಗು; ಸುಟ್ಟ ಎಲುಬು, ಅಸ್ಥಿ; ಅಸ್ಥಿ ಸಂಚಯನ; ಕಂಚು. स्त्री. ಉಬ್ಬುವಿಕೆ, ಹಿಗ್ಗುವಿಕೆ; ಉಬ್ಬು, ಉಬ್ಬರ; ಹಿಗ್ಗು, ಆನಂದ.

**फूलगोभी**, स्त्री. ಕೋಸು ಹೂ.

**फूलदान**, पु. ಹೂವಿನ ಕುಚ್ಚಿಡುವ ಪಾತ್ರೆ, ಪುಷ್ಪಧಾನಿ.

**फूलदार**, वि. ಹೂಗಳುಳ್ಳ; ಬುಟ್ಟಾ ಕೆಲಸ ಮಾಡಿದ; ಹೂಗೆಲಸ ಮಾಡಿದ.

**फूलना**, अक्रि. ಪುಷ್ಪಿಸು, ಹೂ ಬಿಡು, ಹೂವಾಗು, ಅರಳು; ಉಬ್ಬು, ಬೀಗು, ಹಿಗ್ಗು, ಆನಂದಿಸು; ಸೌಖ್ಯವಾಗಿರು. फूलना फलना = ಹುಲುಸಾಗು, ಏಳಿಗೆಯಾಗು; ಸಮೃದ್ಧಿಹೊಂದು, ಏಳಿಗೆ ಬರು; ಅಭ್ಯುದಯವಾಗು.

**फूला**, वि. ಪುಷ್ಪಿಸಿದ, ಅರಳಿದ; ಉಬ್ಬಿದ; ಹಿಗ್ಗಿದ. फूले न समाना = ಹೊಟ್ಟೆಯಲ್ಲಿ ಹಿಡಿಸದಾಗು; ಹಿಗ್ಗಿ ಹಿಗ್ಗು.

**फूली**, स्त्री. = फुली.

**फूस**, पु. ಒಣ ಹುಲ್ಲು, ಹುಲ್ಲು ಕಡ್ಡಿ, ಕರಡ; ಬಲವಿಲ್ಲದ ವಸ್ತು.

**फूसड़ा**, पु. ಚಿಂದಿ; ಕಸ ಕಡ್ಡಿ.

**फूसी**, स्त्री. ಹೊಟ್ಟು, ಬೂಸ; ಕಸ.

**फूहड़**, **फूहर**, वि. ಅಶಿಕ್ಷಿತ, ಅನಾಗರಿಕ, ಎಗ್ಗ, ಗಾಂಪ, ಗಮಾರ; ಬಂಡ. ಕೆ

ಮುಗ್ಗಲಗೇಡಿ ಹೆಂಗಸು, ಹೊಲಸಿ.

**फूहड़ाई**, स्त्री. **फूहड़पन**, पु. ಅಗಡು ತನ, ಎಗ್ಗತನ; ದಡ್ಡತನ; ಬಂಡತನ; ಅಸಭ್ಯತೆ.

**फूहड़ा**, वि. ಬಂಡ; ನಾಚಿಕೆಗೇಡಿ; ಎಗ್ಗ

**फूहा**, पु. ಹತ್ತಿಯ ತೊಳೆ; ಹಂಜಿ; ಚಿಕ್ಕ ಮಕ್ಕಳಿಗೆ ಹಾಲೂಡಿಸಲು ಉಪಯೋಗಿಸುವ ಕೃತಕ ಮೊಲೆಯ ತುದಿ; ರಬ್ಬರಿನಿಂದ ಮಾಡಿದ ಮೊಲೆ ತೊಟ್ಟು.

**फूहार**, **फूही**, स्त्री. ಸೋನೆ ಮಳೆ.

**फेंक**, स्त्री. ಎಸಿಗೆ, ಒಗೆತ, ಬಿಸಾಡುವಿಕೆ

**फेंकना**, सक्रि. ಎಸೆ, ಒಗೆ; ಬಿಸುಟು; ಬಿಸಾಡು; ಕೆಡವು; ಓಡಿಸು, ಹಾರಿಸು; ಸುರಿ; ಬಿತ್ತು.

**फेंकवाना**, सक्रि. **फेंकना** का प्रे. रूप.

**फेंकाऊ**, वि. ಬಿಸಾಡತಕ್ಕ; ಎಸೆಯುತಕ್ಕ.

**फेंकैत**, **फेंकैत**, वि. ಎಸೆಯುವವ; ಕುಸ್ತಿ ಮಾಡುವವ; ಆಟಗಾರ.

**फेंट**, स्त्री. ನಡು, ಸೊಂಟ; ನಡುಕಟ್ಟು, ಕಮರ್‌ಬಂದು; ಸುತ್ತು, ಮಡಿಕೆ; ಕಲಸುವಿಕೆ, ಟಿಪಾಯಿಸುವಿಕೆ. **फेंट बांधना**=ಟೊಂಕ ಕಟ್ಟು, ಕಟಿಬದ್ಧನಾಗು; ಸಿದ್ಧನಾಗು.

**फेंटना**, सक्रि. ಕಲಸು, ಚಾರಿಸು; ತೇಯು; ಟಿಪಾಯಿಸು.

**फेंटा**, पु. ನಡುಕಟ್ಟು, ನವಾರ; ಚಿಕ್ಕ ರುಮಾಲು, ಪೇಟಾ.

**फेंटी**, स्त्री. ನೂಲಿನ ಕಂಡು, ಕಂಡಿಕೆ.

**फेंदना**, पु. ಸಿಂಬಳ, ಗೊಣ್ಣೆ.

**फेंकरना**, अक्रि. ತಲೆ ಬರಿದಾಗು; ಅಳು, ಗೋಳಿಡು.

**फेन**, **फेना**, पु. ಬುರುಗು, ನೊರೆ, ಸಿಡಿ.

**फेनाना**, सक्रि. ನೊರೆಕಾರು, ನೊರೆಕಕ್ಕು

**फेनिल**, वि. ನೊರೆಯುಳ್ಳ, ಸಿಡಿಯುಳ್ಳ. पु. ಅಂಟವಾಳದ ಕಾಯಿ.

**फेनी**, स्त्री. ಒಂದು ಭಕ್ಷ್ಯ, ಫೇಣಿ.

**फेनुस**, पु. ಗಿಣ್ಣು ಹಾಲು.

**फेफड़ा**, पु. ಶ್ವಾಸಕೋಶ, ಉಸಿರನ ಚೀಲ, ಪುಪ್ಪುಸ.

**फेफड़ी**, स्त्री. ಬತ್ತಿದ ತುಟಿ, ಒಣದುಟಿ

**फेर**, पु. ತಿರುಗುವಿಕೆ; ಹಿಂತಿರುಗುವಿಕೆ, ವಾಪಸು; ಸುತ್ತುವಿಕೆ; ಸುತ್ತು; ಮುರಿಗೆ; ತಿರವು, ಮುಡುಕು; ಮುರುಡಲೆ; ವಕ್ರತೆ; ಬದಲಾವಣೆ, ಮಾರ್ಪಾಟು; ಪಲ್ಲಟ; ಸಂಕಟ, ಪೇಚಾಟ; ದಂದುಗ, ನೆವ; ಯುಕ್ತಿ; ಕಡಮೆ, ನಷ್ಟ; ದೆವ್ವ ಸೋಕು. **हेर फेर**=ಪರಿವರ್ತನೆ, ಬದಲಾವಣೆ.

**फेरना**, सक्रि. ತಿರುಗಿಸು; ಮಗುಚು; ಸುತ್ತಿಸು; ಮುರಿಗೆ ತಿರುವು, ನುಲಿ; ಹಿಂತಿರುಗಿಸು; ವಾಪಸು ಮಾಡು, ಪರತ ಮಾಡು; ಬದಲಾಯಿಸು; ಹೊರಳಿಸು; ಸವರು, ಬಳಿ, ತೊಡಸು; ಕುದುರೆಯನ್ನು ಪಳಗಿಸು.

**फेरफार**, पु. ಬದಲಾವಣೆ, ಪರಿವರ್ತನೆ, ಮಾರ್ಪಾಟು; ಅದಲು ಬದಲು; ಪಲ್ಲಟ; ತಿರುಗಂಚಿ ಮುರಗಂಚಿ, ತಸಕಲು.

**फेरा**, पु. ಸುತ್ತುವಿಕೆ, ಸುತ್ತು; ಸುತ್ತಾಟ; ಪರ್ಯಟನ, ಸಂಚಾರ; ಹಿಂತಿರುಗುವಿಕೆ; ಮಡಿಕೆ, ಪದರು. **फेरा फिरना**

= ಚಕ್ಕರ್ ಲಗಾಯಿಸು, ಚಕ್ಕರ್ ಹೊಡೆ, ಸುತ್ತುವರಿ. फेरा-फेरी = ಪರಿವರ್ತನೆ, ಬದಲಾವಣೆ; ಮುಂದಕ್ಕೂ ಹಿಂದಕ್ಕೂ ಹೋಗುವಿಕೆ.

**फेराना**, सक्रि. = फिराना.

**फेरी**, स्त्री. ಸುತ್ತುವಿಕೆ; ಪ್ರದಕ್ಷಿಣೆ; ಸಂಚಾರ; ಗಸ್ತು; ತಿರಿದುಂಬುವಿಕೆ; ತಿರುಕತನ.

**फेरीदार**, वि. ತಿರುಕ.

**फेरीवाला**, पु. ಮನೆಮನೆಗೂ ಸಾಮಾನುಗಳನ್ನು ಹೊತ್ತು ಮಾರುವವ, ಕೋರಿಸೆಟ್ಟಿ.

**फ़ेल**, पु. ಕ್ರಿಯೆ; ಕಾರ್ಯ; ಕ್ರಿಯಾಪದ.

**फेहरिस्त**, स्त्री. ಸೂಚಿ, ಸೂಚಿಪತ್ರ; ಅನುಕ್ರಮಣಿಕೆ; ತಪ್ಶೀಲು, ಸರಕುಗಳ ಪಟ್ಟಿ; ಯಾದಿ.

**फ़ैज़**, पु. ಹಿತ; ಲಾಭ; ಉಪಕಾರ; ಕೃಪೆ; ಅನುಗ್ರಹ; ಔದಾರ್ಯ, ದಾನ.

**फ़ैयाज़**, पु. = फ़य्याज़.

**फैलना**, अक्रि. ಹರಡು, ಪರವು; ಚಾಚು; ಹಬ್ಬು, ಪಸರು; ವ್ಯಾಪಿಸು; ಪ್ರಚುರವಾಗು; ಹಠಹಿಡಿ, ಚಂಡಿಸು.

**फ़ैलसूफ़**, पु. ವಿದ್ವಾಂಸ; ಜಾಣ; ಠಕ್ಕ, ಮೋಸಗಾರ.

**फ़ैलसूफ़ी**, स्त्री. ಠಕ್ಕು; ಮೋಸ; ಬೂಟಾಟಿಕೆ.

**फैलाना**, सक्रि. ಚಾಚು, ನೀಡು; ಹರಡು, ಹರವು; ಹಬ್ಬಿಸು, ಪಸರಿಸು; ಬಡಾಯಿಸು, ಲಂಬಿಸು; ಚದರಿಸು; ಲೆಕ್ಕಮಾಡು, ಗುಣಿಸು; ಪ್ರಕಟಿಸು; ಪ್ರಚುರಪಡಿಸು.

**फैलाव, फैलावा**, पु. **फैलावट**, स्त्री. ವಿಸ್ತಾರ; ಹರವು; ಪ್ರಚುರತೆ; ಪ್ರಕಟಣೆ; ಹೇರಳ; ಲೆಕ್ಕಾಚಾರ.

**फ़ैसला**, पु. ತೀರ್ಪು, ನಿರ್ಣಯ; ತೀರ್ಮಾನ, ಫೈಸಲು, ನಿಕಾಲೆ; ಮುಗಿತ.

**फोंक**, स्त्री. ಬಾಣದ ಪುಂಖ.

**फोक**, पु. ಹೀದೆ, ಹಿಪ್ಪೆ; ಚರಟ.

**फ़ोकट**, वि. ಉಚಿತವಾಗಿ ಸಿಗುವ, ಬಿಟ್ಟಿ, ಪುಗಸಟ್ಟೆ, ಪುಕ್ಕಟೆ.

**फोकड़**, पु. ಚರಟ; ರಾಡಿ; ಮಷ್ಟು; ಕಸಕಡ್ಡಿ, ತಿಪ್ಪೆ.

**फोकला**, वि. ಶೂನ್ಯ; ಖಾಲಿ; ಟೊಳ್ಳು.

**फोड़ना**, सक्रि. ಒಡೆ, ಮುರಿ; ಭೇದಿಸು; ಸೀಳು; ಒಡಕು ಹುಟ್ಟಿಸು; ಬಯಲಿಗೆ ತರು, ಹುಲುಬಿಸು.

**फोड़नी**, स्त्री. ಸೀಳುವ ಅಥವಾ ಭೇದಿಸುವ ಸಲಕರಣೆ.

**फोड़ा**, पु. ಕುರು, ಗುಳ್ಳೆ; ಬೊಬ್ಬೆ; ಹುಣ್ಣು.

**फोड़िया**, स्त्री. ಗುಳ್ಳೆ, ಕುರು.

**फ़ोता**, पु. ಜಮೀನಿನ ತೆರಿಗೆ, ಕಂದಾಯ; ವರಿ; ವಸೂಲಿ; ತೈಲಿ; ಕೋಶ.

**फ़ोतादार**, पु. ಕೋಶಾಧಿಕಾರಿ; ಖಜಾಂಚಿ; ಸಾಹುಕಾರ.

**फोला**, पु. ಹತ್ತಿಯ ಹಂಜಿ; ಹಂಜಿಬತ್ತಿ, ಪಂಜಿಕೆ; ಬೊಕ್ಕೆ, ಗುಳ್ಳೆ.

**फ़ौक़**, पु. ಶ್ರೇಷ್ಠ; ಉತ್ತಮ; ಉಚ್ಚ.

**फ़ौज**, स्त्री. ತಂಡ, ದಳ; ಪಡೆ, ಸೈನ್ಯ,

ದಂಡು, ಸೇನೆ; ರಾಣುವೆ.

**फ़ौजदार**, पु. ಸೇನಾಪತಿ, ದಳಪತಿ, ದಡೆವಳ.

**फ़ौजदारी**, स्त्री. ಜಗಳ, ಅಳಿದಾಳಿ, ದೊಂಬಿ; "ಕ್ರಿಮಿನಲ್ ಕೋರ್ಟು"; "ಕ್ರಿಮಿನಲ್" ವ್ಯಾಜ್ಯ.

**फ़ौजी**, वि. ಸೇನೆಗೆ ಸಂಬಂಧಪಟ್ಟ, ದಂಡಿನ, ರಾಣುವೆಯ.

**फ़ौत**, स्त्री. ಮೃತ್ಯು, ಸಾವು; ನಷ್ಟ. वि. ಸತ್ತುಹೋದ, ಗತಿಸಿದ.

**फ़ौती**, वि. ಸತ್ತುಹೋದ, ಪೌತಿ.

**फ़ौरन**, क्रिवि. ತಕ್ಷಣ, ಕೂಡಲೆ.

**फ़ौलाद**, पु. ಲೋಹಸಾರ, ಉತ್ತಮ ಜಾತಿಯ ಉಕ್ಕು.

**फ़ौलादी**, वि. ಉಕ್ಕಿನ.

**फ़ौवारा**, पु. = फ़व्वारा.

# ब

**बंक**, वि. ಬಾಗಿದ; ಡೊಂಕಾದ; ವಕ್ರ. पु. ಬಾಗು; ಡೊಂಕು; ವಕ್ರತೆ; ವಕ್ರ ಗೆರೆ, ವಿಶೇಷವಾಗಿ ಈ ವಕ್ರಗೆರೆ ), (ಉದಾ:- ५) ಅಂದರೆ ೫ ರೂಪಾಯಿ); "ಬ್ಯಾಂಕು", ಹುಂಡಿಶಾಲೆ.

**बंका**, वि. ಬಾಗಿದ, ಡೊಂಕಾದ.

**बंकाई**, **बंकुरता**, स्त्री. ವಕ್ರತೆ; ಡೊಂಕು; ಬಾಗು.

**बंग**, स्त्री. ಬಂಗಿ.

**बंगड़ी**, स्त्री. ಕೈ ಬಳೆ, ಕಡಗ.

**बंगला**, पु. ಬಂಗ್ಲೆ; ವಸಂತ ಮಹಲು; ಚಂದ್ರಶಾಲೆ; ಒಂದು ಬಗೆ ವೀಳೆಯ ದೆಲೆ. स्त्री. ಬಂಗಾಳ; ಬಂಗಾಳಿ ಭಾಷೆ.

**बंगा**, पु. ಬಿದಿರಿನ ಕೊಳವೆ; ಬಾವಿಯ ಉಪ್ಪುನೀರು.

**बंगी**, स्त्री. ಬೊಗರಿ.

**बंचना**, अक्रि. ಓದಲ್ಪಡು.

**बंचवाना**, **बंचाना**, सक्रि. ಓದಿಸು.

**बंचाई**, स्त्री. ಓದುವಿಕೆ, ವಾಚನ, ಪಠನ; ಓದುವುದಕ್ಕೆ ಅಥವಾ ವಾಚನಕ್ಕೆ ಕೊಡುವ ರುಸುಂ.

**बंजर**, पु. ಬರಡು ನೆಲ, ಬಂಜರು.

**बंजारा**, पु. ಸ್ಥಳದಿಂದ ಸ್ಥಳಕ್ಕೆ ಹೋಗಿ ದವಸ ಧಾನ್ಯ ಮಾರುವವ, ಬಣಜಿಗ.

**बंजरिया**, स्त्री. बंजारा का स्त्री. रूप.

**बंजारी**, स्त्री. ಬಣಜಿಗನ ಹೆಂಡತಿ, ಬಣ ಜಿಗಿತ್ತಿ; ಒಂದು ಬಗೆ ಗುಡಾರ.

**बंजिन**, स्त्री. ಗ್ರಾಮದ ಹತ್ತಿರವಿರುವ ಜಮೀನು.

**बंझा**, स्त्री ವಂಧ್ಯಾ ಸ್ತ್ರೀ, ಬಂಜೆ.

**बंझोटी**, स्त्री. ಬಂಜೆತನವನ್ನುಂಟು ಮಾಡುವ ಔಷಧ; ಗರ್ಭವನ್ನು ತಡೆವ ಔಷಧ, ಗರ್ಭನಿರೋಧಕ ಔಷಧ.

**बंटना**, अक्रि. ವಿಂಗಡಿಸಲ್ಪಡು; ಹಂಚ ಲ್ಪಡು; ಪಾಲಾಗು, ಬಟವಾಡೆಯಾಗು.

**बंटवाना**, सक्रि. ಹಂಚಿಸು; ಬಟವಾಡೆ ಮಾಡಿಸು; ವಿನಿಯೋಗ ಮಾಡಿಸು.

**बंटवारा**, पु. ಪಾಲು, ಹಿಸ್ಸೆ; ಹಂಚು ವಿಕೆ; ಹಂಚಿಕೆ, ಬಟವಾಡೆ.

**बंटवैया**, **बंटैत**, पु. ವಿಂಗಡಿಸುವವ,

ಪಾಲು ಮಾಡುವವ; ವಿಭಜಿಸುವವ; ಹಂಚುವವ, ಬಟವಾಡೆ ಮಾಡುವವ.

**बंटा**, पु. **बंटी**, स्त्री. ಸಂಪುಟ, ಡಬ್ಬ, ಡಬ್ಬಿ

**बंटाई**, स्त्री. ಹಂಚುವಿಕೆ, ಹಂಚಿಕೆ; ಹಸಿಗೆ; ವಾರದ ಸಾಗುವಳಿ.

**बंटाना**, सक्रि. ಹಂಚು; ಪಾಲುಮಾಡು; ಬಟವಾಡೆ ಮಾಡು; ಭಾಗ ವಹಿಸು. हाथ बंटाना = ಭಾಗವಹಿಸಿ ಸಹಾಯ ಮಾಡು, ಒತ್ತಾಸೆ ಮಾಡು.

**बंडा**, पु. ಒಂದು ಬಗೆ ಶಾವೆಗೆಡ್ಡೆ.

**बंडी**, स्त्री. ಒಳ ಅಂಗಿ, ಬನೀನು.

**बंडेर**, **बंडेरी**, स्त्री. ಛಾವಣಿಯ ಬೆಂಕಟ್ಟಿನ ತೊಲೆ, ಬೆಂತೊಲೆ.

**बंडोहा**, पु. ಸುಳಿಗಾಳಿ; ದೆವ್ವ, ಸೈತಾನ

**बंद**, पु. ಬಂಧ, ಕಟ್ಟು; ಗಂಟು; ಪಟ್ಟಿ; ನವಾರ; ಲಾಳಿ; ಅಣೆಕಟ್ಟು, ಏರಿ, ಕಟ್ಟೆ; ಶರೀರದ ಸಂಧಿ ಸ್ಥಾನ, ಗಣಿಕೆ; ಬಂಧನ; ಸೆರೆ; ಕೈಕೋಳ; ಕಾಗದದ ಉದ್ದವಾದ ಪಟ್ಟಿ. वि. ಕಟ್ಟಲ್ಪಟ್ಟ, ಬದ್ಧ; ಕಟ್ಟಾದ; ಮುಚ್ಚಿದ; ಮುಗಿದ; ಬಂದಾದ; ಖೈದಾದ; ಬಂಧನದಲ್ಲಿರುವ; ಸೆರೆಯಲ್ಲಿರುವ. बंद होना = ಮುಚ್ಚು; ಬಂದಾಗು; ನಿಂತುಹೋಗು; ಮುಗಿ.

**बंदगी**, स्त्री. ಈಶ್ವರ ವಂದನೆ; ಸೇವೆ, ಕೈಂಕರ್ಯ; ದಾಸ್ಯ; ನಮಸ್ಕಾರ; ವಂದನೆ; ಸಲಾಮು.

**बंदगोभी**, स्त्री. ಕೋಸುಗೆಡ್ಡೆ.

**बंदन**, पु. ಮುಖಕ್ಕೆ ಹಚ್ಚಿಕೊಳ್ಳುವ ಒಂದು ಬಗೆ ಚೂರ್ಣ, ಅಂಗಲೇಪನ.

**बंदनवार**, पु. ವಂದನಮಾಲೆ, ತೋರಣ

**बंदना**, अक्रि. ವಂದಿಸು, ನಮಸ್ಕರಿಸು.

**बंदर**, पु. ವಾನರ, ಕಪಿ, ಮಂಗ, ಕೋತಿ; ರೇವು, ಬಂದರು; ನಗರ, ಪಟ್ಟಣ; ದೊಡ್ಡ ಅಂಗಡಿ, ಮಂಡಿ.

**बंदरख़त**, पु. ಮಾಯದಿರುವ ಹುಣ್ಣು, ನಾಡೀ ವ್ರಣ.

**बंदरगाह**, स्त्री. (पु.) ರೇವು, ಬಂದರು

**बंदरिया**, **बंदरी**, स्त्री. ಹೆಣ್ಣು ಕಪಿ, ಹೆಣ್ಣು ಕೋತಿ.

**बंदवान**, पु. ಸೆರೆಮನೆಯ ಅಧಿಕಾರಿ, "ಜೈಲರ್".

**बंदसाल**, पु. ಬಂದೀಖಾನೆ, ಸೆರೆಮನೆ.

**बंदह**, **बंदा**, पु. ಅಡಿಯಾಳು, ಗುಲಾಮ; ದಾಸ, ಸೇವಕ.

**बंदापरवर**, पु. ತನ್ನ ಆಶ್ರಿತರನ್ನು ಕಾಪಾಡುವವನು.

**बंदिया**, स्त्री. ಜಡೆಬಿಲ್ಲೆ.

**बंदिश**, स्त्री. ಕಟ್ಟುವಿಕೆ, ಕಟ್ಟು; ಸುಳ್ಳು ಮಾತು; ಹೂಡುವಿಕೆ, ಹೂಟ; ಹಂಚಿಕೆ, ಯೋಜನೆ, ಹರುವು; ಸಂಚು.

**बंदी**, स्त्री. ಒಂದು ಆಭರಣ; ಚಿಕ್ಕ ಅಂಗಿ; ದಾಸಿ. पु. ವಂದಿ ಮಾಗಧ, ಕೀರ್ತನಕಾರ; ಸೆರೆಯಾಳು, ಬಂದೀವಾನ, ಕೈದಿ.

**बंदीख़ाना**, **बंदीघर**, पु. ಬಂದೀಖಾನೆ ಸೆರೆಮನೆ, ಕಾರಾಗೃಹ.

**बंदीवान**, पु. ಬಂದೀವಾನ, ಕೈದಿ, ಸೆರೆಯಾಳು.

**बंदूक़**, पु. ಬಂದೂಕು, ತುಪಾಕಿ.

**बंदूक़ची**, पु. ತುಪಾಕಿ ಹಾರಿಸುವವ.

बंद्गहा, पु. ಸುಂಟರಗಾಳಿ, ತುಫಾನು.
बंदोइ, स्त्री. ದಾಸಿ, ಸೇವಕಿ.
बंदोबस्त, पु. ಕಟ್ಟು ಕಾವಲು; ಬಂದು ಕಟ್ಟು; ವ್ಯವಸ್ಥೆ; ವಿಲೇವಾರಿ; ಜಮೀನಿನ ಕಂದಾಯದ ನಿರ್ಧಾರ, ಮುಂಗುವಳಿ, ತೀರುವೆ; ಕಂದಾಯವನ್ನು ನಿರ್ಧರಿಸುವ ಸರಕಾರಿ ಇಲಾಖೆ.
बंध, पु. ಬಂಧನ, ಕಟ್ಟು; ಅಣೆಕಟ್ಟು; ಕಟ್ಟೆ, ಏರಿ; ಗ್ರಾಮದ ಎಲ್ಲೆ, ಗಡಿ; ಗಿರವಿ, ಅಡವು, ಒತ್ತೆ.
बंधक, पु. ಅಡವು, ಗಿರವಿ, ಒತ್ತೆ, ದೀಡು; ಈಡು, ಅಡಮಾನ; ಆಳ್ವೊತ್ತೆ, ಓಲು.
बंधन, पु. ಕಟ್ಟುವಿಕೆ; ಕಟ್ಟು; ಬಂಧನ; ತಡೆ; ಸೆರೆ, ಕಾರಾಗೃಹ; ಶರೀರದ ಸಂಧಿ ಸ್ಥಾನ.
बंधना, अक्रि. ಕಟ್ಟಲ್ಪಡು; ಕಟ್ಟು ಬೀಳು; ಬದ್ಧನಾಗು. पु. ಕಟ್ಟುವ ದಾರ, ಪಾಶ.
बंधनी, स्त्री. ಕಟ್ಟು; ಪಾಶ; ಆವರಣ ಚಿಹ್ನೆ, ಕಂಸ.
बंधवाना, सक्रि. बांधना का प्रे. रूप.
बंधाई, स्त्री. ಕಟ್ಟುವಿಕೆ; ಪುಸ್ತಕವನ್ನು ಹೊಲಿದು ರಟ್ಟು ಕಟ್ಟುವಿಕೆ, ಬೈಂಡು ಮಾಡುವಿಕೆ; ಕಟ್ಟುವ ಕೂಲಿ; ಪುಸ್ತಕದ ರಟ್ಟು ಕಟ್ಟುವುದರ ಕೂಲಿ.
बंधान, पु. ನಿಯಮ; ಕಟ್ಟಳೆ; ಕಟ್ಟೆ; ವರ್ಷಾಶನ; ಪೆನ್ಷನ್, ಪಿಂಚಣಿ.
बंधाना, अक्रि. ಧರಿಸು; ಕಟ್ಟಿಸು; ಬಿಗಿಸು; ಬದ್ಧನಾಗಿಸು.
बंधानी, पु. ಕಲ್ಲು ಮೊದಲಾದುವನ್ನು ಹೊರುವವ; ಕೈದಿ, ಬಂದೀವಾನ; ಗುಂಡು ಹಾರಿಸುವವ.
बंधु, बंधेवा, पु. ಬಂಧು, ನೆಂಟ.
बंधुआ, पु. ಬಂದೀವಾನ, ಕೈದಿ.
बंधुक, पु. ಮಧ್ಯಾಹ್ನ ಮಲ್ಲಿಗೆ.
बंधुता, स्त्री. बंधुत्व, पु. ಬಾಂಧವ್ಯ.
बंधूर, पु. ಧಾನ್ಯ ಕೊಳ್ಳುವಿಕೆ.
बंधेज, पु. ಕಟ್ಟಳೆ; ಕಟ್ಟು, ತಡೆ; ಪ್ರತಿಬಂಧ; ಗಟ್ಟಿ, ದೃಢತೆ; ಜಿಪುಣತನ.
बंपुलिस, स्त्री. ಸಾರ್ವಜನಿಕ ಕಕ್ಕಸು.
बंब, पु. ಸಿಡಿಮದ್ದಿನ ಗುಂಡು, ಬಾಂಬು; ಕಂದಾಯದ ಬಾಕಿದಾರ.
बंबा, पु. ಬಾವಿ; ನೀರೆಳೆವ ಯಂತ್ರ, ಜಲೋತ್ಥಾಪಕ, "ಪಂಪು", ಬುಗ್ಗೆ.
बंबाना, अक्रि. "ಅಂಬಾ" ಎಂದು ಕೂಗು (ಹಸುಗಳು).
बंबीठा, पु. ಹುತ್ತ, ವಲ್ಮೀಕ.
बंबू, पु. ಗಾಂಜಾ ಮೊದಲಾದುವನ್ನು ಸೇದಲು ಉಪಯೋಗಿಸುವ ಬೊಂಬಿನ ನಳಿಗೆ; ಬೊಂಬು.
बंस, पु. ವಂಶ; ಬಂಬು.
बंसी, स्त्री. ಪಿಳ್ಳಂಗೋವಿ, ಕೊಳಲು; ಮೀನು ಹಿಡಿಯುವ ಗಾಳ.
बक, पु. ಬಕ, ಕೊಕ್ಕರೆ. स्त्री. ಹರಟೆ, ಒದರಾಟ.
बकचा, पु. ಮೂಟೆ ಕಟ್ಟುವ ಬಟ್ಟೆ; ಚಿಕ್ಕ ಮೂಟೆ, ಭಾಂಗಿ.
बकझक, बकबक, स्त्री. ಲೊಡಲೊಡ ಮಾತಾಡುವಿಕೆ, ಒದರಾಟ, ಹರಟೆ.
बकतर, पु. ಯುದ್ಧಕವಚ, ಚಿಲಕತ್ತು.

बकतरी, वि. ಯುದ್ಧಕವಚ ಧರಿಸಿದವ.
बकना, अक्रि. ವಟವಟ ಮಾತಾಡು, ಒದರಾಡು, ಜರುಚು; ಹರಟು, ಗಳಪು, ಬಡಬಡಿಸು.
बकबकाना, अक्रि. ಹರಟು, ಗಳಪು.
बक़र, पु. ಎತ್ತು; ಹೋರಿ.
बकरा, पु. ಗಂಡಾಡು, ಹೋತ.
बक़रा, स्त्री. ಗೋವು, ಹಸು.
बकरी, स्त्री. ಆಡು, ಮೇಕೆ.
बक़रीद, पु. ಮುಸಲ್ಮಾನರ ಒಂದು ಹಬ್ಬ.
बकला, पु. ತೊಗಟೆ, ಮರದ ಪಟ್ಟೆ, ತಿಗುಡು; ಸಿಪ್ಪೆ.
बकवाद, बकवास, स्त्री. ಸುಮ್ಮನೆ ಮಾತಾಡುವಿಕೆ, ಒದರಾಟ; ಹರಟೆ, ಪಟ್ಟಾಂಗ.
बकवादी, बकवासी, बकवाहा, पु. ಹರಟೆಗಾರ, ಗಳಪ, ವಾಚಾಲ.
बकसा, वि. ಒಗರಾದ, ತಿಕ್ತ.
बकसाहट, स्त्री. ಒಗರು.
बकसुआ, पु. ಕೊಂಡಿ, ಬಕ್ಲೀಸು.
बका, स्त्री. ಅಳುವಿಕೆ; ವಿಲಾಪ.
बकाना, सक्रि. बकना का प्रे. रूप.
बकायन, पु. ಒಂದು ಮರ.
बक़ाया, पु. ಬಾಕಿ, ಶೇಷ, ಉಳಿತಾಯ
बकारा, पु. ಮುಂದೆ ಹೋಗುವವ; ದೂತ; ಪ್ರಯಾಣಿಕ; ಬಾಯಿಂದ ಹೇಳಿ ಕಳುಹಿಸಿದ ವರ್ತಮಾನ.
बकारी, स्त्री. ಬಾಯಿ ಮಾತು.
बकावल, पु. ಅಡಿಗೆಯವ, ಬಾಣಸಿಗ.
बकावली, स्त्री. ಒಂದು ಬಗೆ ಹೂ.
बक्रिया, स्त्री. ಚೂರಿ, ಚಾಕು.
बक़िया, पु. ಬಾಕಿ, ಶೇಷ.
बकुचा, पु. ಮೂಟೆ, ಗಂಟು.
बकुची, स्त्री. ಚಿಕ್ಕ ಮೂಟೆ, ಗಂಟು.
बकुल, पु. ಬಕುಲ ಮರ, ಪಗಡೆ ಮರ, ರಂಜ.
बकैयां, पु. ತೆವಳುವಿಕೆ.
बकोट, स्त्री. ಚಿವುರುವಿಕೆ, ಕೆದಕುವಿಕೆ.
बकोटना, अक्रि. ಚಿವುರು; ಕೆದಕು; ಜಿಗಟು.
बक़ौल, क्रिवि. ವಚನಕ್ಕನುಸಾರವಾಗಿ, ಮಾತಿನ ಮೇರೆಗೆ.
बक्कल, पु. = बकला.
बक़्क़ाल, पु. ಕಿರಾಣಿ ಅಂಗಡಿಯವ, ವರ್ತಕ.
बक़्क़ालिन, स्त्री. बक़्क़ाल का स्त्री. रूप
बक्की, पु. ಹರಟೆಗಾರ, ಗಳಪ, ವಾಚಾಲ. स्त्री. ಒಂದು ಬಗೆ ಭತ್ತ.
बख़, पु. ಪ್ರಪಂಚ, ಜಗತ್ತು.
बखर, पु. ಒಂದು ಬಗೆ ನೇಗಿಲು; ಗೃಹ, ಮನೆ, ಹಟ್ಟಿ; ಅಂಗಳ; ಕೊಟ್ಟಿಗೆ, ರೊಪ್ಪ, ದೊಡ್ಡಿ.
बख़रा, पु. ಭಾಗ, ಪಾಲು, ಹಿಸ್ಸೆ.
बखरिया, पु. ಮನೆಯವ, ಗೃಹಸ್ಥ.
बखरी, स्त्री. ಮನೆ; ಗುಡಿಸಲು, ಹಟ್ಟಿ, ಜೋಪಡಿ; ಹಗೇವು, ಕಣಜ.
बख़री, बख़रैत, पु. ಪಾಲುಗಾರ, ಹಿಸ್ಸೆದಾರ.
बखान, पु. ವರ್ಣನೆ; ವಿವರಣೆ.

**बखानना**, सक्रि. ವರ್ಣಿಸು, ಬಣ್ಣಿಸು; ಪ್ರಶಂಸಿಸು; ಜರೆ, ಏಡಿಸು.
**बखार**, पु. **बखारी**, स्त्री. ಉಗ್ರಾಣ, ಕಣಜ, ಹಗೇವು.
**बखिया**, पु. ಒಂದು ಬಗೆ ಹೊಲಿಗೆ, ಕವುದಿ ಹೊಲಿಗೆ.
**बखियाना**, सक्रि. ಹೊಲಿ, ಕವುದಿಹೊಲಿ
**बखी**, स्त्री. ಕಾಂಕುಳಿನ ಕೆಳಭಾಗ; ಪಾರ್ಶ್ವ, ಮಗ್ಗುಲು.
**बखीर**, स्त्री. ಪರಮಾನ್ನ, ತಯ್ಯಲ್.
**बख़ील**, वि. ಲೋಭಿ, ಕೃಪಣ.
**बख़ीली**, स्त्री. ಜಿಪುಣತನ, ಕಾರ್ಪಣ್ಯ.
**बख़ूबी**, क्रिवि. ಚೆನ್ನಾಗಿ, ಸೊಗಸಾಗಿ.
**बखूर**, पु. ಸುವಾಸನೆ, ಪರಿಮಳ.
**बखेड़ा**, पु. ಜಗಳ; ದೊಂಬಿ; ರಗಳೆ; ಉಪದ್ರವ.
**बखेड़िया**, वि. ಜಗಳಗಂಟ, ತಂಟೆ ಕೋರ; ಉಪದ್ರವಿ.
**बखेर**, स्त्री. ಎಸೆಯುವಿಕೆ; ಚಲ್ಲುವಿಕೆ.
**बखेरना**, सक्रि. ಚಲ್ಲು; ಚದರಿಸು.
**बख़ैर**, क्रिवि. ಕ್ಷೇಮವಾಗಿ, ಕುಶಲವಾಗಿ
**बखोरना**, सक्रि. ಹೂಡು, ಲಗಾಯಿಸು.
**बख़्त**, पु. ಭಾಗ್ಯ, ಅದೃಷ್ಟ.
**बख़्तर**, पु. ಯುದ್ಧಕವಚ, ಚಿಲಕತ್ತು.
**बख़्तावर**, वि. ಅದೃಷ್ಟವಂತ, ಭಾಗ್ಯ ಶಾಲಿ.
**बख़्श**, पु. ದಾನ; ಕೊಡುವಿಕೆ; ಮಾಫಿ.
**बख़्शना**, सक्रि. ದಯಪಾಲಿಸು, ಕರು ಣಿಸು, ಕೊಡು; ಕ್ಷಮಿಸು, ಮನ್ನಿಸು.
**बख़्शवाना**, **बख़्शाना**, सक्रि. बख़्शना का प्रे. रूप.
**बख़्शिश**, स्त्री. ದಾನ, ದತ್ತಿ, ಕೊಡುಗೆ; ಬಹುಮಾನ, ಇನಾಮು; ಮಾಫಿ, ಕ್ಷಮೆ; ಔದಾರ್ಯ.
**बख़्शी**, स्त्री. ಕೊಡುವವ, ದಾತ; ಸಂ ಬಳ ಕೊಡುವ ಅಧಿಕಾರಿ; ಬಕ್ಷಿ.
**बग**, पु. ಕೊಕ್ಕರೆ, ಬಕಪಕ್ಷಿ.
**बगई**, स्त्री. ನಾಯಿ ತೊಣಚಿ.
**बगछुट**, **बगटुट**, क्रिवि. ಸರಸರನೆ, ಬಲು ವೇಗವಾಗಿ; ದುಡುಕಿನಿಂದ, ಅವಿಚಾರವಾಗಿ.
**बगड़ा**, पु. ದುಃಖ, ಕಷ್ಟ; ಠಕ್ಕು, ಮೋಸ.
**बगड़िया**, पु. ಠಕ್ಕ, ಮೋಸಗಾರ.
**बगदना**, अक्रि. ತಿರುಗು; ಬೆನ್ನು ತೋರಿಸಿ ಓಡು; ಹಾಳಾಗು, ಕೆಡು.
**बगदाना**, सक्रि. ತಿರುಗಿಸು; ಉರು ಳಿಸು; ಸದೆ ಬಡಿ; ಹಾಳುಮಾಡು; ಕೆಡಿಸು.
**बगनी**, स्त्री. ಒಂದು ಬಗೆ ಹುಲ್ಲು.
**बगमेल**, पु. ಸಮಸಮ ಮುಂದುವರಿ ಯುವಿಕೆ, ಎಣೆ.
**बग़याती**, स्त्री. ತೋಟಕ್ಕೆ ಅರ್ಹವಾದ ಜಮೀನು, ಬಾಗಾಯಿತು; ತೋಟದ ಫಸಲು; ತೋಟಗಳ ಮೇಲಿನ ತೆರಿಗೆ.
**बगरना**, अक्रि. ಹರಡು, ಚದರು.
**बगराना**, सक्रि. ಚಲ್ಲು, ಚದರಿಸು.
**बग़ल**, स्त्री. ಕಾಂಕುಳು, ಕಕ್ಷ; ತೆಕ್ಕೆ; ಪಾರ್ಶ್ವ, ಪಕ್ಕ; ಮಗ್ಗುಲು, ಬಗಲು, ಬಾಜು; ಅಂಗಿಯ ಕಂಕುಳು ಪಟ್ಟಿ.

बग़ल बजाना = ಹರ್ಷಿಸು, ಸಂತೋಷಪಡು.

**बग़लगीर**, वि. ಪಕ್ಕದಲ್ಲಿರುವವ; ತಬ್ಬಿಕೊಳ್ಳುವವ; ಆಲಿಂಗಿಸುವವ.

**बग़लबंद**, स्त्री. ಒಂದು ಬಗೆ ಗುತ್ತವಾದ ಅಂಗಿ, ಬಗಲಂಗಿ.

**बगला**, पु. ಕೊಕ್ಕರೆ; ನಾರಾಯಣ ಪಕ್ಷಿ. बगला भगत = ಬಕ ವಿಡಂಬನ ಮಾಡುವವ; ಆಷಾಢಭೂತಿ; ಕಪಟ ಭಕ್ತಿಯುವ.

**बगलाना, बगलियाना**, अक्रि. ಪಕ್ಕಕ್ಕೆ ಸರಿ, ಮಗ್ಗುಲಿಗೆ ಹೋಗು. सक्रि. ಪಕ್ಕಕ್ಕೆ ಸರಿಸು, ಮಗ್ಗುಲಿಗೆ ಮಾಡು.

**बग़ली**, वि. ಪಕ್ಕದ, ಬಗಲಿನ, ಮಗ್ಗುಲಿನ. स्त्री. ಸೂಜಿ ದಾರ ಇವುಗಳಿಡುವ ಚೀಲ, ದರ್ಜಿಯುವರ ಸಂಚಿ; ಅಂಗಿಯ ಕಂಕುಳು ಪಟ್ಟಿ.

**बगहंस**, पु. ಕಲಹಂಸ.

**बगार**, पु. ಕೊಟ್ಟಿಗೆ, ರೊಪ್ಪ, ದೊಡ್ಡಿ.

**बगारना**, सक्रि. ಹರಡಿಸು, ಚದರಿಸು.

**बग़ावत**, स्त्री. ದಂಗೆ, ಬಂಡಾಯ, ರಾಜದ್ರೋಹ; ಅತ್ಯಾಚಾರ; ಲೂಟಿ.

**बग़िया, बग़ीचा**, पु. **बग़ीची**, स्त्री. ಉಪವನ, ಉದ್ಯಾನವನ, ನಂದನವನ; ತೋಟ.

**बगुला**, पु. = बगला.

**बगूला**, पु. ಸುಳಿಗಾಳಿ, ಚಕ್ರವಾತ.

**बगेरी**, स्त्री. ಒಂದು ಪಕ್ಷಿ.

**बग़ैर**, क्रिवि. ಅಲ್ಲದೆ, ಹೊರತಾಗಿ, ವಿನಾ, ರಹಿತ.

**बग्घी**, स्त्री. ಒಂದು ಬಗೆ ಕುದುರೆ ಗಾಡಿ, ಪೆಟ್ಟಿಗೆ ಗಾಡಿ; ಸಾರೋಟ್.

**बघनहां**, पु. **बघनहीं**, स्त्री. ಹುಲಿ ನಖ; ಒಂದು ಬಗೆ ಆಯುಧ; ಒಂದು ಆಭರಣ.

**बघार**, पु. ಒಗ್ಗರಣೆ.

**बघारना**, सक्रि. ಒಗ್ಗರಿಸು, ತಾಳಿಸು; ಅಧಿಕಪ್ರಸಂಗ ಮಾಡು.

**बघी**, स्त्री. ಕುರುಡು ನೊಣ.

**बघेरी**, स्त्री. = बगेरी.

**बघेल**, पु. ರಾಜಪೂತರ ಒಂದು ಜಾತಿ.

**बघेला**, पु. ಹುಲಿ ಮರಿ.

**बच**, पु. ವಚೆ, ಬಜೆ, ಉಗ್ರಗಂಧೆ.

**बचकच**, पु. (= कचबच) ಮಕ್ಕಳು ಮರಿ.

**बचका**, पु. ಒಂದು ಪಕ್ವಾರ.

**बचकाना**, वि. ಹುಡುಗರ, ಕಿರಿಯ. पु. ನಾಟ್ಯವಾಡುವ ಹುಡುಗ; ಮಕ್ಕಳ ಜೋಡು.

**बचकानी**, स्त्री. ನಾಟ್ಯವಾಡುವ ಹುಡುಗಿ.

**बचत**, स्त्री. ಉಳಿವು, ಉಳಿದದ್ದು, ಉಳಿತಾಯ; ಶೇಷ, ಬಾಕಿ; ಸಿಲ್ಕು; ಲಾಭ.

**बचती**, स्त्री. ಉಳಿತಾಯ; ಬಾಕಿ; ಮಿಗಿಲು.

**बचन**, पु. ವಚನ, ಮಾತು.

**बचना**, अक्रि. ಬಾಕಿಯಾಗು; ಮಿಗು, ಉಳಿ; ಬದುಕು; ತಪ್ಪಿಸಿಕೊಳ್ಳು; ದೂರವಾಗಿರು. सक्रि. ವಚಿಸು, ಹೇಳು.

**बचपन**, पु. ಹುಡುಗತನ, ಬಾಲ್ಯ;

ಚಿಕ್ಕಂದು, ಹುಡುಗಂದು.

बचवैया, पु. ಕಾಪಾಡುವವ, ರಕ್ಷಕ.

बचाना, सक्रि. ಮಿಗಿಸು; ಉಳಿಸು; ಕಾಪಾಡು, ಕಾಯು; ಬದುಕಿಸು; ತಪ್ಪಿಸು, ಬಚಾಯಿಸು; ಬಚ್ಚು; ದೂರಮಾಡು.

बचापा, बचावा, पु. ಬಿಡುಗಡೆ, ಖುಲಾಸೆ.

बचाव, पु. ಉಳಿಯುವಿಕೆ, ಉಳಿವು, ಬಚಾವು; ಕಾಪು; ರಕ್ಷಣೆ; ಬಿಡುಗಡೆ.

बची-खुची, वि. ಕಳೆದುಳಿದ, ಇದ್ದಬದ್ದ.

बचैया, वि. ಬದುಕುವವ; ಉಳಿಯುವವ

बच्चा, पु. ಮಗು, ಕೂಸು, ಹಸುಳೆ, ಮರಿ

बच्चादान, पु. ಗರ್ಭಾಶಯ.

बच्ची, स्त्री. ಹೆಣ್ಣು ಮಗು, ಮರಿ.

बच्चू, पु. ಮಗುವನ್ನು ಕರೆಯುವ ಮುದ್ದುಮಾತು, "ಮರಿ", "ಪುಟ್ಟಾರಿ"

बच्छ, पु. ವತ್ಸ, ಕಂದ, ಕರು.

बच्छा, बछड़ा, बछरा, पु. ಹಸುವಿನ ಕರು, ಕಂದಿ.

बछड़ी, स्त्री. ಹೆಣ್ಣು ಕರು, ಕಡಸು.

बछना, सक्रि. ಆಯು, ಚುನಾಯಿಸು.

बछनाग, पु. ವತ್ಸನಾಭ, ಬಚನಾಗ.

बछवा, पु. ಕುದುರೆ ಮರಿ.

बछिया, स्त्री. ಹೆಣ್ಣು ಕರು, ಕಡಸು. बछिया का ताऊ = ಎಮ್ಮೆ ತಮ್ಮ, ಅಣ್ಣಪ್ಪ.

बछेड़ा, बछेरा, पु. बछेड़ी, स्त्री. ಕುದುರೆ ಮರಿ.

बछोड़, स्त्री. ಕೇರುವಿಕೆ; ತೂರುವಿಕೆ; ಸಾಣಿಸುವಿಕೆ.

बजंतरी, बजंत्री, बजत्तर, बजत्तरी, पु. ವಾದ್ಯ ಬಾಜಿಸುವವ, ವಾದನಕಾರ

बजट्टी, स्त्री. ಹೆಂಗಸರ ಒಂದು ಆಭರಣ

बजड़ा, पु. ದೋಣಿ, ಓಡ.

बजना, अक्रि. ಶಬ್ದವಾಗು, ಧ್ವನಿಸು; (ಘಂಟೆ) ಬಡಿ, ಮೊಳಗು; ಪ್ರಕಟವಾಗು; ಹಠ ಹಿಡಿ, ಚಂಡಿಸು.

बजनिया, पु. ವಾದನಕಾರ, ವಾದ್ಯ ಬಾಜಿಸುವವ.

बजनी, स्त्री. ಜಗಳ; ದೊಂಬ.

बजबजाना, अक्रि. ಉಕ್ಕು, ಕುದಿ; ಹಳಸು, ಕೊಳೆ.

बजर, बज्जर, वि. ಗಟ್ಟಿಯಾದ, ಬಲುಗಟ್ಟಿಯಾದ; ಕಲ್ಲಿನಂಥ, ವಜ್ರದಂಥ; ಕಷ್ಟತರವಾದ. पु. ವಜ್ರ; ವಜ್ರಾಘಾತ; ಸಿಡಿಲು.

बजरबट्टू, पु. ಒಂದು ಹಣ್ಣು. (ಇದರ ಬೀಜಗಳ ಮಾಲೆಯನ್ನು ಮಕ್ಕಳಿಗೆ ರಕ್ಷೆಯಾಗಿ ಉಪಯೋಗಿಸುತ್ತಾರೆ).

बजरा, पु. ದೋಣಿ, ಓಡ; ಜೋಳ.

बजरी, स्त्री. ಜೋಳದಲ್ಲಿ ಒಂದು ಬಗೆ, ಕಿರುಜೋಳ; ಇಟ್ಟಿಗೆ ಚೂರು, ಜಲ್ಲಿ; ಮರಳು.

बज़ला, पु. ಹಾಸ್ಯ, ವಿನೋದ.

बजवाना, सक्रि. बजाना का प्रे. रूप.

बजवैया, पु. ಬಾರಿಸುವವ.

बजा, वि. ಉಚಿತ, ಯುಕ್ತ, ತಕ್ಕ; ಸರಿ. बजा लाना=ಪರಿಪಾಲಿಸು, ನೆರವೇರಿಸು

बज़ा, पु. ಪಾಪ; ಅಪರಾಧ, ತಪ್ಪು.

बज़ाकार, पु. ತಪ್ಪಿತಸ್ಥ, ಅಪರಾಧಿ;

ಪಾಪಿ.

**बज़ाज़,** पु. ಜವಳಿ ವ್ಯಾಪಾರಿ, ಜವಳಿ ಕಾರ, ದೂಸಿಗ.

**बज़ाज़ा,** पु. ಜವಳಿ ಅಂಗಡಿ, ಜವಳಿ ಪೇಟೆ.

**बज़ाज़िन,** स्त्री. बज़ाज़ का स्त्री. रूप.

**बज़ाज़ी,** स्त्री. ಜವಳಿ ವ್ಯಾಪಾರ.

**बजाना,** सक्रि. ಬಡಿದು ಶಬ್ದಮಾಡು; ಬಾರಿಸು; ಬಾಜಿಸು, ನುಡಿಸು, ವಾದನ ಮಾಡು; ಮೊಳಗಿಸು; ನೆರವೇರಿಸು; ಪಾಲಿಸು; ನಡೆಸು.

**बजाय,** अव्य. ಸ್ಥಾನದಲ್ಲಿ; ಪ್ರತಿಯಾಗಿ, ಬದಲಾಗಿ.

**बजिन्स,** क्रिवि. ಹಾಗೆಯೇ, ತದ್ರೂಪ; ವಿವರವಾಗಿ.

**बजुज़,** क्रिवि. ಇದಲ್ಲದೆ, ಹೊರತಾಗಿ.

**बजुल्ला,** पु. ತೋಳುಬಂದಿ, ಅಂಗದ, ಕೇಯೂರ.

**बजे,** क्रिवि. (ಇಂಥಿಷ್ಟು) ಘಂಟೆಗೆ, ತಾಸಿಗೆ. ३ बजे = ಮೂರು ಘಂಟೆಗೆ.

**बजर,** **बज्र,** पु. ವಜ್ರ; ವಜ್ರಾಘಾತ, ಸಿಡಿಲು. बजर बहरा = ಬಲು ಕೆಪ್ಪ, ಕಿವುಡ ಅಂದರೆ ಕಿವುಡ, ಅತಿ ಕಿವುಡ.

**बज़्ज़ाज़,** पु. = बज़ाज़.

**बज़्म,** स्त्री. ಸಭೆ, ಸದಸ್ಸು; ಪಾನಗೋಷ್ಠಿ

**बझना,** अक्रि. ಸಿಕ್ಕಿಕೊಳ್ಳು, ಸಿಕ್ಕು; ಕಟ್ಟುಬೀಳು.

**बझाना,** सक्रि. ಸಿಕ್ಕಿಸು, ಸಿಕ್ಕಿಬೀಳಿಸು.

**बझाव,** पु. **बझावट,** स्त्री. ಸಿಕ್ಕು, ಗೋಜು, ತೊಡಕು.

**बट,** पु. ವಟ ವೃಕ್ಷ; ವಡೆ; ಗುಂಡುಕಲ್ಲು; ಕವಡೆ; ತೂಕದ ಬಟ್ಟು; ದಾರದ ಸುಲಿಕೆ; ಮುರುಕು; ಹೆಣಿಗೆ; ಚರ್ಮದ ಸುಕ್ಕು, ವಲಿ; ಕರುಳು; ಬಾಟೆ, ಹಾದಿ; ಹಿಸ್ಸೆ, ಪಾಲು; ಜಮೀನಿನ ವಾರ.

**बटई,** स्त्री. ಹೊಸೆಯುವಿಕೆ; ಸರಿಗೆ ಎಳೆಯುವಿಕೆ; ಲಾವ, ಲಾವಕ್ಕಿ.

**बटखरा,** पु. ತೂಕದ ಬಟ್ಟು.

**बटन,** पु. ಹೊಸೆಯುವಿಕೆ, ಸುಲಿಕೆ; ಅಂಗಿಯ ಗುಂಡಿ; ಬಟನು.

**बटना,** सक्रि. ಹೊಸೆ, ಸುಲಿಚು; ತಿರಿಚು, ತಿರುವು; ಹಂಚು; ಸಂಪಾದಿಸು; ಗಳಿಸು. अक्रि. ಹಂಚಲ್ಪಡು; ಅರೆಯಲ್ಪಡು; ಹೊಸೆಯಲ್ಪಡು. पु. ಲೇಪನ, ತೈಲ, ಲೇಪ; ನೂಲು ಹೊಸೆಯುವ ಯಂತ್ರ.

**बटनिया,** पु. ಪಾಲುಗಾರ, ಹಿಸ್ಸೆದಾರ.

**बटपार,** **बटमार,** पु. ದಾರಿ ಬಡಕ, ದಾರಿಗಳ್ಳ.

**बटपारी,** **बटमारी,** स्त्री. ಹಾದಿಗಳ್ಳತನ, ದರೋಡೆ.

**बटला,** पु. ತಪ್ಪಲೆ, ಬೋಸಿ.

**बटली,** **बटलोई,** **बटलोही,** स्त्री. ತಪ್ಪಲೆ, ಬೋಸಿ, ಡಬರಿ.

**बटवाना,** सक्रि. ಹೊಸೆಯಿಸು; ಹಂಚಿಸು; ಪಾಲು ಮಾಡಿಸು.

**बटवार,** **बटवाल,** पु. ರಸ್ತೆಯ ತೆರಿಗೆ ವಸೂಲು ಮಾಡುವವ.

**बटवारा,** पु. = बंटवारा.

**बटा,** पु. ಉಂಡೆ; ಗೆಡ್ಡೆ; ಗುಂಡು; ಹಾದಿಹೋಕ; ಬಿದಿರಿನ ದೆಬ್ಬೆ.

टाई, स्त्री. ದಾರ ಹೊಸೆಯುವುದರ ಕೂಲಿ.

टाऊ, पु. ಹಾದಿಹೋಕ, ಪಥಿಕ; ದಾರಿಬಡಕ.

टाना, अक्रि. ನಿಂತುಹೋಗು, ಬಂದಾಗು. सक्रि. = बंटाना.

टिया, स्त्री. ಗುಂಡುಕಲ್ಲು; ತೂಕದ ಕಲ್ಲು, ಬಟ್ಟು; ಚಿಕ್ಕ ಬಾಟೆ, ಕಾಲುದಾರಿ.

टुआ, पु. ಹಣದ ಚೀಲ, ತೈಲಿ; ದೊಡ್ಡ ಬೋಸಿ, ತಪ್ಪಲೆ.

टुरना, अक्रि. ಮುದುರಿಕೊ; ಸೇರಿಕೊ; ಒಂದಾಗು; ಉಡುಗು, ಸೇದಿಕೊ

टैथ, पु. ಪಾಲುಗಾರ, ಹಿಸ್ಸೆದಾರ.

टेर, स्त्री. ಲಾವಕ್ಕಿ, ಬುರಲಿ ಹಕ್ಕಿ.

टेस, पु. ರಸ್ತೆ, ದಾರಿ.

टोर, पु. ಗುಂಪು; ಹಿಂಡು; ಸಮೂಹ; ರಾಶಿ.

टोरन, पु. ಧಾನ್ಯವನ್ನು ಒಟ್ಟು ಸೇರಿಸುವಿಕೆ; ರಾಶಿ, ಕುಪ್ಪೆ.

बटोरना, सक्रि. ರಾಶಿಮಾಡು; ಒಟ್ಟುಗೂಡಿಸು, ಶೇಖರಿಸು; ಬಾಚು; ಉಡುಗಿಸು.

बटोही, पु. ಹಾದಿಹೋಕ, ಮಾರ್ಗಸ್ಥ.

बट्ट, पु. ಉಂಡೆ, ಗುಂಡು.

बट्टा, पु. ಸೋಡಿ, ಉತ್ತಾರ; ಸೂಟು, ವಟ್ಟ; ಕಸರು; ಕಡಮೆ, ಕೊರಗು; ನಷ್ಟ; ಗುಂಡುಕಲ್ಲು; ಗುಂಡು; ಗಾರಡಿಕಾರನು ಚೀಲದಿಂದ ತೆಗೆದು ಪ್ರದರ್ಶಿಸುವ ಗೋಲಿಗಳು; ನಗನಟ್ಟಿಡುವ ಪೆಟ್ಟಿಗೆ; ಸಂಪುಟ, ಕರಂಡ. बट्टा लगना = ಕುಂದುಬೀಳು; ಕಳಂಕ ಹತ್ತು.

बट्टा-खाता, पु. ಹೋಕು ಬಾಕಿ ಲೆಕ್ಕ.

बट्टा-ढाल, वि. ಸಮತಲವಾದ, ಸಪಾಟ, ನುಣ್ಣ ಸವಾದ.

बट्टी, स्त्री. ಮೇಣದ ಬತ್ತಿ; ಬಟ್ಟು; ಗುಂಡುಕಲ್ಲು; ಗೋಲಿ, ಗುಳಿಗೆ.

बट्टू, पु. ಒಂದು ಬಗೆ ಹುರುಳಿಕಾಯಿ, = बजरबट्टू.

बट्टेबाज़, पु. ಗಾರಡಿಕಾರ, ಜಾಲಗಾರ.

बड़, स्त्री. ಬಡಬಡಿಸುವಿಕೆ, ಒದರಾಟ.

बड़का, वि. ದೊಡ್ಡ.

बड़गांव, पु. ದೊಡ್ಡ ಊರು.

बड़पेटा, वि. ದೊಡ್ಡ ಹೊಟ್ಟೆಯುವ, ಲಂಬೋದರ; ತಿಂಡಿಬಾಕ; ಅತ್ಯಾಶೆಗಾರ.

बड़पना, बड़प्पन, पु. ದೊಡ್ಡತನ; ಹೆಚ್ಚುಗಾರಿಕೆ; ಹಿರಿಮೆ.

बड़बड़, स्त्री. ಲೊಡಲೊಡ ಮಾತು, ಒದರಾಟ; ಜರುಚುವಿಕೆ.

बड़बड़ाना, अक्रि. ಬಡಬಡ ಮಾತಾಡು, ಬಡಬಡಿಸು, ಒಟಗುಟ್ಟು; ಗೊಣಗು.

बड़बड़ाहट, स्त्री. ಒಟಗುಟ್ಟುವಿಕೆ, ಬಡಬಡಿಸುವಿಕೆ.

बड़बड़िया, पु. ಒಟಗುಟ್ಟುವವ.

बड़बेरी, स्त्री. ಕಾಡು ಎಲಚಿ ಹಣ್ಣು.

बड़बोल, बड़बोला, वि ಬಡಬಡಿಸುವವ; ಮಾತುಬಡಕ; ವಾಚಾಳಿ.

बड़भागी, वि. ಭಾಗ್ಯವಂತ.

बड़वार, वि. ದೊಡ್ಡ.

बड़हल, पु. ಒಂದು ಹಣ್ಣು, ಲಕುಚ.

बड़हार, पु. ಮದುವೆಯಾದ ಬಳಿಕ ಬೀಗರ ಔತಣ.

बड़हेला, पु. ಕಾಡು ಹಂದಿ.

बड़ा, पु. ವಡೆ. वि. ದೊಡ್ಡ; ಹಿರಿಯ; ಶ್ರೇಷ್ಠ, ಗುರುತರ. बड़े बूढ़े = ಗುರು ಹಿರಿಯರು. बड़ा दिन = ಕ್ರಿಸ್ತ ಜಯಂತಿ, ಕ್ರಿಸ್‌ಮಸ್.

बड़ाई, स्त्री. ದೊಡ್ಡತನ; ಹಿರಿಮೆ; ಹೆಚ್ಚುಗಾರಿಕೆ; ಮಹತ್ವ; ಹೆಚ್ಚಿಕೆ, ದೊಡ್ಡಸ್ತಿಕೆ; ಬಡಾಯಿ.

बड़ाना, सक्रि. ಒಟಗುಟ್ಟು; ಗೊಣಗು; ಹುಚ್ಚು ಹುಚ್ಚಾಗಿ ಮಾತಾಡು, ಗರ ವಟಿಸು.

बड़ापन, बड़ापा, पु. ದೊಡ್ಡತನ.

बड़ी, स्त्री. ಸಂಡಿಗೆ.

बड़ेरा, पु. बड़ेरी, स्त्री. = बंड़ेरी.

बढ़ई, पु. ಮರಗೆಲಸದವನು, ಬಡಗಿ, ಸುತಾರ, ಆಚಾರಿ.

बढ़ता, पु. बढ़ती, स्त्री. ವೃದ್ಧಿ; ಹೆಚ್ಚು ವಳಿ, ಹೆಚ್ಚಿಕೆ; ಅಭಿವೃದ್ಧಿ, ಪುರೋ ವೃದ್ಧಿ.

बढ़इन, बढ़न, स्त्री. ಬಡಗಿಯ ಹೆಂಡತಿ

बढ़ना, अक्रि. ದೊಡ್ಡದಾಗು; ಬೆಳೆ, ಹೆಚ್ಚು; ವಿಸ್ತರಿಸು; ಉದ್ದವಾಗು; ಮುಂದುವರಿ; ಮೀರು. बढ़ चढ़ना = ಮಿಗಿಲಾಗು, ಮಿಂಚು.

बढ़नी, स्त्री. ಪೊರಕೆ, ಬಲ್ಲುರ್; ಆರಂಬ ಮೊದಲಾದುವಕ್ಕಾಗಿ ಕೊಡುವ ಮುಂಗಡ.

बढ़ा-चढ़ा, वि. ಶ್ರೇಷ್ಠವಾದ, ಉತ್ಕೃಷ್ಟವಾದ.

बढ़ाना, सक्रि. ದೊಡ್ಡದಾಗಿಸು; ಬೆಳಸು; ಹೆಚ್ಚಿಸು; ವಿಸ್ತರಿಸು; ವೃದ್ಧಿಸು; ಮುಂ ದುವರಿಸು; ನೀಡು; ದೀಪ ಆರಿಸು; ಅಂಗಡಿಯನ್ನು ಮುಚ್ಚು; ಮೇಜಿನ ಮೇಲಿನ ತಿಂಡಿಯ ತಟ್ಟೆ ಹಾಸಿದ ಬಟ್ಟೆ ಮೊದಲಾದುವುಗಳನ್ನು ತೆಗೆ.

बढ़ाव, पु. ವೃದ್ಧಿ, ಬೆಳವಣಿಗೆ.

बढ़ावा, पु. ಬಡಾವಣೆ; ಉತ್ತೇಜನ; ಪ್ರೋತ್ಸಾಹ; ಚಿತಾವಣೆ; ಆಸ್ಪುಕ್ತಿ.

बढ़िया, वि. ಬೆಲೆಬಾಳುವ; ಪ್ರಶಸ್ತ ವಾದ, ಮೇಲ್ತರದ, "ಪರಮಾಯಿಷಿ".

बढ़ियल, वि. ಹೆಚ್ಚಿಸುವ, ವೃದ್ಧಿಸುವ.

बढ़ियाल, पु. ಪ್ರೂ, ಪ್ರೀಯ.

बढ़ैया, वि. ಹೆಚ್ಚಿಸುವವ.

बढ़ोतर, पु. बढ़ोतरी, स्त्री. ಅಭ್ಯುದ ಯ; ಲಾಭ; ಬಡ್ಡಿ.

बतंगड़, पु. ಮಾತು ಜೋಡಿಸುವಿಕೆ; ಮಾತಿನ ವಿಸ್ತಾರ; ರಗಳೆ, ಹಗರಣ. बात का बतंगड़ करना = ಚಿಕ್ಕಮಾ ತಿಗೆ ದೊಡ್ಡ ಹಗರಣ ಎಬ್ಬಿಸು, ಅಲ್ಪ ವಿಷಯವನ್ನು ದೊಡ್ಡದಾಗಿ ಮಾಡು.

बत, पु. ಲೆಕ್ಕ ಅಥವಾ ಪಟ್ಟಿಯಲ್ಲಿ ಬೇರೆ ಬೇರೆ ಹೆಸರುಗಳನ್ನು ಬಿಡಿಸಿ ತೋರಿಸಲು ಹಾಕುವ ಗೆರೆಗಳು; ಪತ ಗುಗಳನ್ನು ಹಾಳುಮಾಡುವ ಒಂದು ಹುಳು; ಬಾತು, ಬಾತು ಕೋಳಿ.

बतकहा, वि. ಮಾತುಗಾರ, ಮಾತಾಳಿ.

बतकही, स्त्री. ಮಾತುಕತೆ, ಸಂವಾದ.

बतक्कड़, वि. ಮಾತುಗಾರ, ವಾಚಾಳ;

**बिस्तर**, पु. ಹಾಸಿಗೆ, ಹಾಸು, ಬಿಛಾನ; ವಿಸ್ತಾರ, ಹರವು; ಹರವುವಿಕೆ.

**बिस्तरना**, अक्रि. ಹರಡು, ಹರವು. सक्रि. ಹರವು, ವಿಸ್ತರಿಸು.

**बिस्तर-बंद**, पु. ಹಾಸಿಗೆಯನ್ನು ಕಟ್ಟುವ ಹಗ್ಗ, ಹಾಸಿಗೆಯ ಬಾರು.

**बिस्तारना**, सक्रि. ವಿಸ್ತರಿಸು, ಹರಡಿಸು.

**बिस्तुइया**, स्त्री. ಹಲ್ಲಿ, ಗೌಳಿ.

**बिस्वांसी**, स्त्री. ಜಮೀನಿನ ಒಂದು ಅಳತೆ, (ನೋಡಿ – बीघा).

**बिस्वा**, पु. ಇಪ್ಪತ್ತನೆಯ ಒಂದು ಭಾಗ; बीघा ವಿನ ಇಪ್ಪತ್ತನೆಯ ಒಂದುಭಾಗ, ಒಂದೂಕಾಲು ಗುಂಟೆ.

**बिस्वादार**, पु. ಪಾಲುಗಾರ, ಹಿಸ್ಸೆದಾರ.

**बिस्वास**, पु. ನಂಬಿಕೆ, ನೆಚ್ಚಿಕೆ.

**बिस्वासी**, वि. ನಂಬಿಕೆಯುಳ್ಳ; ನಂಬಿಗಸ್ತ.

**बिहंडना**, सक्रि. ತುಂಡಿಸು, ಒಡೆ, ಮುರಿ.

**बिहंसना**, अक्रि. ನಸುನಗು.

**बिहतर**, वि. = बेहतर.

**बिहन**, पु. ಬೀಜ, ಬೆದೆ.

**बिहनौर**, स्त्री. ಸಸಿಮಡಿ, ಎಕಲು ಗದ್ದೆ; ಪಾಲನಾಕ್ಷೇತ್ರ.

**बिहबूद**, पु. **बिहबूदी**, स्त्री. ಸ್ವಾಸ್ಥ್ಯ, ಆರೋಗ್ಯ; ಒಳ್ಳೆಯದು; ಕ್ಷೇಮ.

**बिहरना**, अक्रि. ವಿಹರಿಸು, ಆನಂದಿಸು. सक्रि. ಸೀಳು, ಬಿರಿ, ವಿದಾರಿಸು.

**बिहरी**, स्त्री. ಚಂದಾ, ವಂತಿಗೆ, ವರ್ಗಣಿ.

**बिहाई**, स्त्री. ಬೇತಾಳ, ಪ್ರೇತ, ದೆವ್ವ.

**बिहान**, पु. ಮುಂಜಾನೆ, ಬೆಳಗ್ಗೆ, ಹೊತ್ತಾರೆ; ಮರುದಿನ.

**बिहाना**, अक्रि. ಕಾಲ ಕಳೆ. सक्रि. ಕಾಲಯಾಪನ ಮಾಡು.

**बिहार**, **बिहाल**, पु. ವಿನೋದ, ವಿಹಾರ; ಆಟ.

**बिहारी**, **बिहाली**, पु. ಆಟಗಾರ; ವಿನೋದ ಪ್ರಿಯ; ಶ್ರೀಕೃಷ್ಣ.

**बिहारना**, अक्रि. ವಿಹರಿಸು, ಆನಂದಿಸು; ರಮಿಸು.

**बिहिश्त**, पु. = बहिश्त.

**बिही**, स्त्री. ಒಂದು ಬಗೆ ಸೀಬೆಹಣ್ಣು.

**बिहोरना**, अक्रि. = बिछुड़ना.

**बींड**, स्त्री. ರಾಶಿ; ಕಂತೆ.

**बींडा**, पु. ಹುಲ್ಲಿನ ಸಿವುಡು, ಸಿಂಬಿ, ಸುರುಳಿ.

**बींडी**, स्त्री. ಹೆಣಿಗೆ, ಹೆರಳು, ಜಡೆ.

**बींधना**, सक्रि. ವೇಧಿಸು, ಚುಚ್ಚು.

**बी**, स्त्री. = बीबी.

**बीअड**, स्त्री. ಸಸಿಮಡಿ, ನಾಟಿಗೆ ಗದ್ದೆ.

**बीग**, पु. **बीगिन**, स्त्री. ತೋಳ.

**बीघा**, पु. ಜಮೀನಿನ ಒಂದು ಅಳತೆ, ೨೫ ಗುಂಟೆ, ಬೀಘೆ. (ಜಮೀನಿನ ಅಳತೆಗಳ ಕೋಷ್ಟಕವನ್ನು ಅನುಬಂಧದಲ್ಲಿ ನೋಡಿ ತಿಳಿಯಬಹುದು).

**बीच**, पु. ಮಧ್ಯ, ನಡು; ಎಡೆ; ಅಂತರ; ಜಗಳ. क्रिवि. ಮಧ್ಯೆ, ನಡುವೆ; ಒಳಗೆ. **बीच बिचाव** = ಮಧ್ಯಸ್ತಿಕೆ, ಪಂಚಾಯಿತು. **बीचों बीच** = ನಟ್ಟನಡುವೆ.

**बीज**, पु. ಬೀಜ, ಬೆದೆ, ಬಿತ್ತ; ಮೂಲ.

बीजक, पु. ಸೂಚಿ, ಪಟ್ಟಿ, ಜಾಬಿತ; ಕೋಷ್ಟಪಟ್ಟಿ; ಕ್ರಯಪಟ್ಟಿ, "ಇನ್ವಾಯ್ಸ್"; ಕಬೀರ್ ದಾಸರ ಪದಗಳ ಸಂಗ್ರಹ.
बीजन, बीजना, पु. ಬೀಸಣಿಗೆ.
बीज-बंद, पु. ಕಾಡುಮೆಂತಯ ಸೊಪ್ಪು
बीजदार, बीजार, वि. ಬೀಜಗಳುಳ್ಳ, ಬಿತ್ತುಗಳುಳ್ಳ.
बीजा, वि. ದ್ವಿತೀಯ, ಎರಡನೆಯ.
बीजी, स्त्री. ಓಟೆ, ಗೊರಟು; ಓಟೆ ಯೊಳಗಿನ ತಿರುಳು; ಮುಂಗುಸಿ, ಕೀರ.
बीजू, वि. ಬೀಜ ಬಿತ್ತಿ ಬೆಳೆಯುವ.
बीझना, सक्रि. ಕೊಂಬಿನಿಂದ ನೆಲವನ್ನು ಅಗೆ, ತೋಡು.
बीट, बीठ, स्त्री. ಹಕ್ಕಿಗಳ ವಿಷ್ಠೆ.
बीटना, अक्रि. ಚದರು, ಚಲ್ಲು.
बीड़ा, पु. ಸಿಂಬಿ, ಸುರುಳಿ.
बीड़, स्त्री. ರೂಪಾಯಿಗಳ ಸುರುಳಿ, ತೋಟಿ.
बीड़ा, पु. ವೀಳೆಯದೆಲೆಯ ಸುರುಳಿ, ಪಟ್ಟೀವೀಳ್ಯ, ಪಾನ್‌ಬೀಡಾ; ಕತ್ತಿಯ ಹಿಡಿ, ಮೋಹಳ. बीड़ा उठाना = ಕಾರ್ಯ ಸಾಧಿಸಲು ಕಂಕಣ ಕಟ್ಟಿಕೊಳ್ಳು, ಟೊಂಕಕಟ್ಟು.
बीड़ी, स्त्री. ವೀಳೆಯದೆಲೆಯ ಸುರುಳಿ; ರೂಪಾಯಿಗಳ ಸುರುಳಿ, ತೋಟಿ; ಹೊಗೆಸುತ್ತು, ಬೀಡಿ; ಹೆಂಗಸರು ತುಟಿಗೆ ಹಚ್ಚಿಕೊಳ್ಳುವ ಕೆಂಪು ಬಣ್ಣ, ತುಟಿಗೆಂಪು; ತಾಂಬೂಲರಾಗ.
बीतना, अक्रि. (ಕಾಲ) ಕಳೆಯು; ಕಳೆದು ಹೋಗು, ಮೀರು; ಗತಿಸು, ಸಲ್ಲು; ಜರುಗು, ಸಾಗು; ಸಂಭವಿಸು, ಘಟಿಸು, ಒದಗು.
बीता, पु. ಗೇಣು.
बीथी, स्त्री. ಬೀದಿ; ಸಾಲು; ಬಯಲಾಟ.
बीन, स्त्री. ಒಂದು ವಾದ್ಯ, ವೀಣೆ.
बीनना, सक्रि. ಆಯು, ಹಕ್ಕಲಾಯು, ಬಾಕಲಾಯು; ಆರಿಸು, ಹೆಕ್ಕು; ಹೆಣೆ, ನೇಯು.
बीना, स्त्री. ಅಸ್ತಿಭಾರ, ಪಾಯ; ಬುಡ, ಮೂಲ; ಕಾರಣ; ಪ್ರಾರಂಭ, ಷುರು, ಮೊದಲು. वि. ಸರಿಯಾದ ದೃಷ್ಟಿಯುಳ್ಳ; ವಿವೇಕಿ; ಜಾಣ.
बीनाई, स्त्री. ದೃಷ್ಟಿ, ನೋಟ.
बीनी, स्त्री. ನಾಸಿಕೆ, ಮೂಗು.
बीफै, पु. ಗುರುವಾರ.
बीबी, स्त्री. ದೊರೆಸಾನಿ, ಕುಲಸ್ತ್ರೀ; ಹೆಂಡತಿ, ಪತ್ನಿ; ಹೆಂಗಸರಿಗೆ ಗೌರವಾರ್ಥದಲ್ಲಿ ಉಪಯೋಗಿಸುವ ಶಬ್ದ; "ಅಮ್ಮಾವರು".
बीम, पु. ಭಯ, ಹೆದರಿಕೆ.
बीमा, पु. ನಷ್ಟವಾದರೆ ಈಡು ಕೊಡಬೇಕೆಂಬ ಹೊಣೆಗಾರಿಕೆ, ಭದ್ರಪಡಿಸುವಿಕೆ; ವಿಮೆ, "ಇನ್‌ಶ್ಯೂರೆನ್ಸ್". जान बीमा = ಜೀವ ವಿಮೆ.
बीमादार, पु. ವಿಮೆದಾರ.
बीमार, वि. ಅಸ್ವಸ್ಥ; ವ್ಯಾಧಿಸ್ಥ, ರೋಗಿ.
बीमारदार, वि. ರೋಗಿಯ ಸೇವೆ ಶುಶ್ರೂಷೆ ಮಾಡುವವ.
बीमारदारी, स्त्री. ರೋಗಿಯ ಸೇವೆ

ಶುಶ್ರೂಷೆ; ರೋಗಿಯ ಉಪಚಾರ.
बीमारी, स्त्री. ರೋಗ, ವ್ಯಾಧಿ, ಬೇನೆ; ಕಾಯಿಲೆ, ಜಡ್ಡು, ಕಸಾರಿಕೆ.
बीया, पु. ಬೀಜ, ಬೆದೆ, ಬಿತ್ತ.
बीर, पु. ಶೂರ; ವೀರ; ಸಹೋದರ, ಸೋದರ. स्त्री. ಕಿವಿಯ ಓಲೆ, ಕರ್ಣಿಕೆ; ವೀರಶೃಂಖಲ, ತೋಡಾ; ಹುಲ್ಲು ಗಾವಲು, ಗೋಮಾಳ.
बीरन, पु. ಜೊತೆಗಾರ, ಸೋದರ.
बीरबहूटी, स्त्री. ಬೆಟ್ಟ ಬೆನಕ, ಒನಕೆ ಹುಳು, ಕಪ್ಪರ ಶುಂಠಿ, ಉಪ್ಪಂಜಿಗ.
बीरा, पु. ಸುತ್ತುವೀಳೆಯ, ಪಟ್ಟೀ ವೀಳ್ಯ, ಬೀಡಾ; ದೇವರ ಪ್ರಸಾದ.
बीरी, स्त्री. ಪಟ್ಟೀ ವೀಳ್ಯ, ಬೀಡಾ; ಕಿವಿಯ ಓಲೆ, ಕರ್ಣಿಕೆ; ಹೆಂಗಸರು ತುಟಿಗೆ ಅಥವಾ ಹಲ್ಲುಗಳಿಗೆ ಹಚ್ಚಿ ಕೊಳ್ಳುವ ಕೆಂಪು ಬಣ್ಣ, ತುಟಿಗೆಂಪು; ತಾಂಬೂಲರಾಗ.
बीवी, स्त्री. ಪತ್ನಿ, ಹೆಂಡತಿ.
बीस, वि. ಇಪ್ಪತ್ತು.
बीसा, पु. ಇಪ್ಪತ್ತು ಉಗುರುಗಳುಳ್ಳ ನಾಯಿ.
बीसी, स्त्री. ಇಪ್ಪತ್ತರಸಮೂಹ; ವಿಂಶತಿ, ಬೀಸಿಗೆ; ಧಾನ್ಯ ಅಳೆಯುವ ಕೊಳಗ.
बीहड़, वि. ತಗ್ಗುಮುಗ್ಗಾದ, ತರಕಲು, ಕರಡು, ಮುರುಡು, ಹಿಗ್ಗುತಗ್ಗಾದ.
बुंद, स्त्री. ನೀರಿನ ತೊಟ್ಟು, ಹನಿ.
बुंदका, पु. बुंदकी, स्त्री. ಬೊಟ್ಟು; ಚಿಕ್ಕಿ; ಹನಿ.
बुंदा, पु. ಬೊಟ್ಟು; ತಿಲಕ; ಲೋಲಕು.
बुंदिया, स्त्री. ಬುಂದೀ (ಭಕ್ಷ್ಯ).
बुआ, स्त्री. ಸೋದರತ್ತೆ.
बुआई, स्त्री. = बोआई.
बुक, स्त्री. ಬಿರುಸು ಮಾಡಿದ ಬಟ್ಟೆ.
बुक़चा, पु. ಮೂಟೆ, ಗಂಟು; ಕೊಡಿಕೆ.
बुक़ची, स्त्री. ಚಿಕ್ಕ ಮೂಟೆ, ಗಂಟು; ಪೊಟ್ಟಣ; ಸೂಜಿ ದಾರವಿಡುವ ದರ್ಜಿಯರ ಚೀಲ.
बुकटा, पु. ಚಿಟಿಕೆ.
बुकना, सक्रि. ಪುಡಿಮಾಡು, ಬೀಸು.
बुकनी, स्त्री. ಪುಡಿ, ಹುಡಿ, ಚೂರ್ಣ.
बुकोटना, सक्रि. ಪರಚು; ಗೂರಾಡು.
बुक्का, पु. ಹಿಡಿ, ಮುಷ್ಟಿ; ಕೊಂಕುಗುದ್ದು; ಅಭ್ರಕಿನ ಜಿನುಗಾದ ಪುಡಿ.
बुक्की, स्त्री. ಹಿಡಿ, ಮುಷ್ಟಿ.
बुख़ार, पु. ಹಬೆ, ಆವಿ, ಉಗೆ; ಕಾವು, ತಾಪ; ಜ್ವರ; ಉದ್ರೇಕ; ಮಂಜು.
बुख़्ल, पु. ಜಿಪುಣತೆ, ಕಾರ್ಪಣ್ಯ; ಸಂಕುಚಿತ ಮನಸ್ಸು.
बुग़ार, पु. ಕುಳಿ, ಹಳ್ಳ; ಆಳವಾದ ಘಾಯ.
बुग़्गा, वि. ಹೆಡ್ಡ, ದಡ್ಡ; ಪೆದ್ದ; ಮುಠ್ಠ; ಬೆಪ್ಪ.
बुग़्ज़, पु. ಮತ್ಸರ, ಮಾತ್ಸರ್ಯ; ದ್ವೇಷ.
बुज़, पु. ಆಡು.
बुज़दिल, वि. ಅಳ್ಳೆದೆಯ, ಪುಕ್ಕ; ಹೇಡಿ.
बुज़दिली, स्त्री. ಪುಕ್ಕತನ, ಅಳ್ಳೆದೆ.
बुज़ुर्ग, वि. ದೊಡ್ಡ, ಹಿರಿಯ. पु. ಹಿರಿಯರು, ವೃದ್ಧರು; ಪೂರ್ವಿಕರು.
बुज़ुर्गी, स्त्री. ಹಿರಿಯತನ, ಹಿರಿಮೆ;

ವಾರ್ಧಕ್ಯ.

ुक्कड़, पु. ಸರ್ವಜ್ಞ; ಪಂಡಿತಂ
ಮನ್ಯ, ಹೆಡ್ಡ.

ुना, अक्रि. ಆರು, ತಣಿ; ಅಡಗು;
ತಣ್ಣಗಾಗು; ನಂದು.

ाई, स्त्री. ಆರಿಸುವಿಕೆ, ತಣಿಸುವಿಕೆ;
ಬುದ್ಧಿವಾದ ಹೇಳುವಿಕೆ; ಹಿತೋಕ್ತಿ.

ाना, सक्रि. ಆರಿಸು, ತಣಿಸು; ಅಡ
ಗಿಸು; ನಂದಿಸು, ಸಮಾಧಾನ ಪಡಿಸು,
ತಿಳಿಸು; ಹೇಳಿಕೊಡು, ಬೋಧಿಸು.
समझाना बुझाना = ಬುದ್ಧಿವಾದ
ಹೇಳು, ಉಪದೇಶಿಸು.

ैल, वि. ಭಾರ ಹೊರುವ.

ौवल, स्त्री. ಒಗಟು, ಒಗಟೆ.

ुड़ाना, अक्रि. ವಟಗುಟ್ಟು, ಬಡ
ಬಡಿಸು, ಗೊಣಗು.

ाना, सक्रि. = डुबाना.

ूढ़ा, वि. ವೃದ್ಧ, ಮುದುಕ.

ूढ़ी, स्त्री. ಮುದುಕಿ, ವೃದ್ಧೆ.

ना, पु. ಕಲ್ಲುಹೂ, ಹಾವಸಿಗೆ.

वा, वि. ವೃದ್ಧ, ಮುದುಕ.

ाई, स्त्री. ವಾರ್ಧಕ್ಯ, ಮುಪ್ಪು.

ाना, अक्रि. ಮುದಿಯಾಗು, ಮು
ಪ್ಪಾಗು.

ापा, पु. बुढ़ौती, स्त्री. ಮುದಿತನ,
ಮುಪ್ಪು, ವಾರ್ಧಕ್ಯ.

ढ़िया, स्त्री. ಮುದುಕಿ, ವೃದ್ಧೆ.

त, पु. ಗುದ್ದು; ಮೂರ್ತಿ, ವಿಗ್ರಹ,
ಪ್ರತಿಮೆ; ಪ್ರಿಯೆ, ಪ್ರೇಯಸಿ, ಪ್ರೇಮಿಕೆ

तख़ाना, पु. ಪ್ರತಿಮೆಯ ಮಂದಿರ.

बुत-तराश, बुत-साज़, वि. ವಿಗ್ರಹ
ಕೆತ್ತುವವ, ಪ್ರತಿಮೆ ಮಾಡುವವ.

बुत-तराशी, बुत-साज़ी, स्त्री. ವಿಗ್ರಹ
ಕೆತ್ತುವ ಕೆಲಸ ಅಥವಾ ಕಲೆ.

बुतना, अक्रि. ಆರು, ತಣಿ, ನಂದು.

बुत-परस्त, वि. ವಿಗ್ರಹಾರಾಧನೆ ಮಾ
ಡುವವ, ಮೂರ್ತಿಪೂಜಕ.

बुत-परस्ती, स्त्री. ವಿಗ್ರಹಾರಾಧನೆ,
ಮೂರ್ತಿ ಪೂಜೆ.

बुतलान, पु. ಹೆಮ್ಮೆ, ಗರ್ವ.

बुताना, अक्रि. ಆರು, ತಣಿ. सक्रि.
ದೀಪ ಆರಿಸು, ತಣಿಸು, ನಂದಿಸು.

बुताम, पु. ಅಂಗಿಯ ಗುಂಡಿ, ಗುಬಟು.

बुत्ता, पु. ಮೋಸ, ಠಕ್ಕು, ದಂದುಗ, ನೆವ.
दम बुत्ता = ಕಪಟ, ಬೂಟಾಟಿಕೆ.

बुद्बुद, पु. ನೀರಿನ ಗುಳ್ಳೆ, ಬೊಬ್ಬುಳಿ;
ಬುದ್ಬುದ; ಗುರುಳೆ.

बुदबुदाना, अक्रि. ವಟಗುಟ್ಟು, ಗೊ
ಣಗು; ಪಿಸುಪಿಸುಮಾತಾಡು.

बुद्धि, स्त्री. ಬುದ್ಧಿ, ಅರಿವು, ವಿವೇಕ.

बुद्धिमत्ता, बुद्धिमानी, स्त्री. ಬುದ್ಧಿ
ವಂತಿಕೆ. ಜಾಣ್ಮೆ.

बुद्धू, वि. ದಡ್ಡ, ಹೆಡ್ಡ; ಮೂರ್ಖ,
ಪೆದ್ದ, ಬೇಕೂಬ; ಬೆಪ್ಪುತಕ್ಕಡಿ.

बुध, पु. ಜ್ಞಾನಿ; ಬುಧಗ್ರಹ; ಜಾಣ್ಮೆ.

बुधवार, पु. ಬುಧವಾರ.

बुन, पु. ಕಾಫಿ ಬೀಜ, ಬೂಂದು;
ಮೂಲ, ಬುಡ.

बुनक्कड़, पु. ನೆಯಿಗೆಯವ.

बुनना, सक्रि. ನೇಯು, ಹೆಣೆ; ಅಲ್ಲು,

ಮೊಡರು.

**बुनाई**, स्त्री. ನೇಯುವಿಕೆ, ಹೆಣೆಯು ವಿಕೆ; ನೇಯುವುದರ ಕೂಲಿ.

**बुनावट**, स्त्री. ನೆಯಿಗೆ; ಹೆಣಿಗೆ.

**बुनियाद**, स्त्री. ಬುಡ, ತಳಪದಿ; ಮೂಲ, ಅಸಲು.

**बुनियादी**, वि. ಮೂಲಭೂತವಾದ.

**बुबुकना**, अक्रि. ಅಬ್ಬರಿಸು, ಅರಚು.

**बुबुकारी**, स्त्री. ಅಬ್ಬರ, ಬೊಬ್ಬೆ, ಅರಚುವಿಕೆ.

**बुयाम**, पु. ಜಾಡಿ.

**बुरकना**, सक्रि. ಚಿಮುಕಿಸು, ತೂರು; ಎರಚು, ತಳಿಯು; ತಕ್ಕಳಿಸು, ಚಿಮ್ಮಿಸು

**बुरक़ा**, पु. ಗೋಷಾ ಹೆಂಗಸರ ಉದ್ದವಾದ ಮುಸುಕು, ಬುರುಕಿ.

**बुरला**, पु. ಕಣಜದ ಹುಳು, ಕಡಜಿಗ.

**बुरहान**, पु. ರುಜುವಾತು.

**बुरा**, वि. ಕೆಟ್ಟ; ನಿಕೃಷ್ಟ. बुरा भला कहना=ಬೈಯು, ಅನ್ನು. बुरा मानना = ಸಿಟ್ಟಾಗು, ಬಿಗಡಾಯಿಸು.

**बुराई**, स्त्री. ಕೆಡಕು; ಅನಿಷ್ಟ; ದುರ್ಗುಣ; ದೋಷ.

**बुरादा**, पु. ಹುಡಿ; ಚಕ್ಕೆ ಪುಡಿ, ರಂಪದ ಧೂಳು.

**बुरूत**, स्त्री. ಮೀಸೆ.

**बुर्ज**, पु. ಕೋಟೆಯ ತೆನೆ, ಕೊತ್ತಳ, ಬುರುಜು; ಗೋಪುರದ ಕಲಶ; ನಕ್ಷತ್ರ ಮಂಡಲ, ರಾಶಿ.

**बुर्जी**, स्त्री. ಚಿಕ್ಕ ಬುರುಜು; ಸಣ್ಣ ಗೋಪುರ.

**बुर्द**, पु. ವರಮಾನ, ಹುಟ್ಟುವಳಿ; ಲಾಭ; ಪಂದ್ಯ, ಪಣ; ಚದುರಂಗದಾಟದಲ್ಲಿ ಎಲ್ಲಾ ಕಾಯಿಗಳೂ ಸತ್ತುಹೋಗುವಿಕೆ.

**बुर्दबार**, वि. ತಾಳ್ಮೆಯುಳ್ಳ, ಸಹಿಷ್ಣು; ನಮ್ರ.

**बुर्दबारी**, स्त्री. ತಾಳ್ಮೆ, ಸಹಿಷ್ಣುತೆ, ಸಹನೆ; ನಮ್ರತೆ.

**बुर्हा**, वि. ದುಷ್ಟ, ಕೆಟ್ಟವ.

**बुलंद**, वि. ಘನವಾದ; ಉಚ್ಚ, ಉನ್ನತ; ಎತ್ತರವಾದ.

**बुलंदी**, स्त्री. ಉಚ್ಚ, ಔನ್ನತ್ಯ; ಘನತೆ.

**बुलबुल**, स्त्री. ಬುಲ್ ಬುಲ್ ಪಕ್ಷಿ.

**बुलबुला**, पु. ಬೊಬ್ಬುಳಿ; ನೀರಿನಗುಳ್ಳೆ.

**बुलवाना**, सक्रि. ಕರೆತಳುಹಿಸು, ಕರೆಯಿಸು; ಹೇಳಿಸು; ಮಾತಾಡಿಸು.

**बुलाक़**, स्त्री. ಬುಲಾಕು.

**बुलाकी**, पु. ಕುದುರೆಯ ಒಂದು ಜಾತಿ.

**बुलाना**, सक्रि. ಕೂಗು, ಕರೆ; ಆಹ್ವಾನಿಸು; ಹೇಳಿಸು, ನುಡಿಯಿಸು.

**बुलावा**, पु. बुलाहट, स्त्री. ಕರೆ; ಆಹ್ವಾನ; ಬುಲಾವು.

**बुल्ला**, पु. ನೀರಿನ ಗುಳ್ಳೆ, ಬೊಬ್ಬುಳಿ.

**बुहतान**, पु. ದೋಷಾರೋಪಣೆ; ದೂರು

**बुहनी**, स्त्री. = बोहनी.

**बुहरी**, स्त्री. ಪುರಿ, ಅರಳು.

**बुहारन**, स्त्री. ಕಸ, ತಿಪ್ಪೆ.

**बुहारना**, सक्रि. ಕಸ ಬಳಿ, ಗುಡಿಸು, ಉಡುಗು.

**बुहारनी**, **बुहारी**, स्त्री. ಪೊರಕೆ, ಬರ್ಲು

बुझारू, पु. ಗುಡಿಸುವವ.
बूंद, पु. = बूट.
बूंद, स्त्री. ತೊಟ್ಟು, ತಟಕು; ಬಿಂದು;
ಕಪಿ, ತುಂತುರು; ಚೀಟಿ ಬಟ್ಟೆ.
बूंदाबूंदी, स्त्री. ತುಂತುರು ಮಳೆ, ಜಿ
ನುಗು ಮಳೆ.
बूंदी, स्त्री. ಬುಂದೀ (ಮಿಠಾಯಿ);
ಕಪಿ, ತುಂತುರು.
बू, स्त्री. ಗಂಧ, ವಾಸನೆ, ನಾತ.
बूआ, स्त्री. ಸೋದರತ್ತೆ; ಅಕ್ಕ. पु.
ಪಕ್ಷಿ ಅಥವಾ ಮೃಗದ ನಖ, ಪಂಜ.
बूकना, सक्रि. ಪುಡಿ ಮಾಡು, ಬೀಸು;
ಚೂರ್ಣಿಸು, ನುರುಕು.
बूका, पु. ಚೂರ್ಣ, ಪುಡಿ.
बूचड़, पु. ಕಟುಕ, ಕಸಾಯಿ.
बूचना, अक्रि. ಬಗ್ಗಿಕೊ, ಕುಕ್ಕರಿಸು,
ಕುಸಿ; ನೃತ್ಯಮಾಡು, ಜಪ್ಪಿಸಿಕೊಳ್ಳು.
बूचा, वि. ಕಿವಿಯಿಲ್ಲದವ, ಕಿವಿಹರಕ.
बूचना, सक्रि. ಮೋಸಮಾಡು, ವಂಚಿಸು
बूज़ना, बूज़िना, पु. ಕಪಿ, ಕೋತಿ.
बूझ, स्त्री. ಬುದ್ಧಿ, ಅರಿವು; ಒಗಟಿ
बूझ बुझौवल = ಪ್ರಹೇಲಿಕೆ, ಒಗಟು.
बूझना, सक्रि. ಅರಿ, ತಿಳಿ; ಗ್ರಹಿಸು.
बूट, पु. ಕಡಲೆಗಿಡ; ಸೊಪ್ಪಿನ ಕಡಲೇ
ಕಾಯಿ.
बूटा, पु. ಗಿಡ, ಬಳ್ಳಿ; ಹೂವಿನ ಕೆಲಸ,
ಕಸೂತಿ, ಬುಟ್ಟಾಕೆಲಸ.
बूटी, स्त्री. ಗಿಡಮೂಲಿಕೆ, ಗಂಧ ಸರಕು;
ಬಂಗಿ; ಹೂವಿನ ಕೆಲಸ, ಬುಟ್ಟಾ ಕೆಲಸ,
ಕಸೂತಿ; ಇಸ್ಪೀಟಿನ ಚೀಟಿನ ಅಥವಾ
ದಾಳದ ಚುಕ್ಕೆಗಳು.
बूटेदार, वि. ಹೂವಿನ ಕೆಲಸಮಾಡಿದ,
ಕಸೂತಿಮಾಡಿದ; ಬುಟ್ಟಾಕೆಲಸದ.
बूड़ना, अक्रि. = डूबना.
बूड़ा, पु. ಜಲ ಪ್ರವಾಹ, ಪೂರ.
बूढ़ी, स्त्री. ಈಟಿಯ ಕೊನೆ, ಮೊನೆ.
बूढ़ा, वि. ಮುದಿ, ವೃದ್ಧ. पु. ಮುದುಕ.
बूढ़ी, स्त्री. ಮುದುಕಿ, ವೃದ್ಧೆ.
बूता, पु. ಬಲ, ಶಕ್ತಿ; ಸಾಮರ್ಥ್ಯ.
बूतीमार, पु. ಕೊಕ್ಕರೆ, ಬಕಪಕ್ಷಿ.
बूदोबाश, पु. ವಾಸಸ್ಥಾನ, ಬೀಡು.
बूबू, स्त्री. ಅಕ್ಕ; ಮಹಿಳೆ.
बूम, पु. ಗೂಬೆ, ಗೂಗೆ; ನೆಲ, ಭೂಮಿ.
बूर, स्त्री. ಉಬ್ಬಲು, ಹೊಟ್ಟು.
बूरा, पु. ಬೂರಾಸಕ್ಕರೆ; ಚೂರ್ಣ.
बूस्तां, पु. ಹೂದೋಟ.
बेग, पु. ಕಪ್ಪೆ.
बेंट, बेंठ, पु. (स्त्री.) ಕತ್ತಿ ಕಠಾರಿಗಳ
ಹಿಡಿಕೆ, ಮೋಹಳ; ಕಾವು, ಹಿಡಿ.
बेंड, स्त्री. ಆನಿಕೆ, ಊರೆ, ಆಧಾರ.
बेंडा, वि. ಸೊಟ್ಟಾದ, ವಕ್ರ.
बेंडी, स्त्री. ಜಡೆಹಾಕಿದ ಕೂದಲು,
ಜಡೆ, ಹೆರಳು; ಕುಕ್ಕೆಯಿಂದ ಮೊಗೆದು
ನೀರು ಹಾಯಿಸುವಿಕೆ.
बेंढ़ना, सक्रि. ಹೆಣೆ, ಅಲ್ಲು, ಮೊಡರು.
बेंत, स्त्री. ಬೆತ್ತ, ಸೆಳೆ.
बेंदा, पु. ಬೊಟ್ಟು, ತಿಲಕ.
बेंदी, स्त्री. ತಿಲಕ, ಬೊಟ್ಟು; ಹಣೆ
ಬೊಟ್ಟು; ಬಿಂದು, ಸೊನ್ನೆ.
बेंवड़ा, पु. ಅಗುಳಿ, ತಾಪಾಳು.

**बे**, अव्य. ಅರೆ, ಲೋ, ಎಲವೋ! ಅಭಾವಾರ್ಥವನ್ನು ಸೂಚಿಸಲು ಶಬ್ದಕ್ಕೆ ಮೊದಲು ಸೇರಿಸುವ ಉಪಸರ್ಗ, ಉದಾ:— बेकार, बेशक, बेहद.

**बे-अंदाज़**, वि ಅಪರಿಮಿತ.

**बेअक़्ल**, वि. ಬುದ್ಧಿಹೀನ, ಮೂರ್ಖ.

**बे-अक़्ली**, स्त्री. ಅವಿವೇಕ, ಅಜ್ಞಾನ.

**बे-अदद**, वि. ಲೆಕ್ಕವಿಲ್ಲದ, ಅಗಣ್ಯ.

**बेअदब**, वि. ಮರ್ಯಾದೆಗೆಟ್ಟ, ಉದ್ಧಟ.

**बेअदबी**, स्त्री. ಉದ್ಧಟತನ; ಅವಮರ್ಯಾದೆ.

**बेअसल**, वि. ಆಧಾರವಿಲ್ಲದ; ಸುಳ್ಳು.

**बेआब**, वि. ಕಾಂತಿಹೀನ; ತುಚ್ಛ.

**बे-इंतज़ामी**, स्त्री. ತಕ್ಕ ಏರ್ಪಾಡಿಲ್ಲದಿರುವಿಕೆ, ಅವ್ಯವಸ್ಥೆ.

**बेइंसाफ़**, वि. ಅನ್ಯಾಯಿ.

**बेइंसाफ़ी**, स्त्री. ಅನ್ಯಾಯ, ಅನೀತಿ.

**बेइज़्ज़त**, वि. ಮರ್ಯಾದೆಗೆಟ್ಟ, ಅಪಮಾನಿತ.

**बेइज़्ज़ती**, स्त्री. ಅವಮಾನ, ಅಗೌರವ.

**बेईमान**, वि. ಅಧರ್ಮಿ; ಅಪ್ರಮಾಣಿಕ; ಕಪಟಿ.

**बेईमानी**, स्त्री. ಅಪ್ರಮಾಣಿಕತೆ; ಮೋಸ

**बे-एतबार**, वि. ನಂಬಲಾಗದ; ನಂಬಿಕೆಗೆ ಯೋಗ್ಯವಲ್ಲದ, ವಿಶ್ವಾಸಾರ್ಹವಲ್ಲದ.

**बेक़दर**, वि. ಗೌರವಹೀನ, ನಗಣ್ಯ.

**बेक़दरी**, स्त्री. ಅಗೌರವ, ಅನಾದರ.

**बेक़रार, बेकल**, वि. ನೆಮ್ಮದಿಯಿಲ್ಲದ, ಹಳವಳಿಸುವ; ಅಶಾಂತ.

**बेक़रारी, बेकली**, स्त्री. ಅಶಾಂತಿ, ಹಳವಂಡ, ಕಳವಳ.

**बेकस**, पु. ಹುಲ್ಲು. वि. ದಿಕ್ಕಿಲ್ಲದ, ವಿಧಿಯಿಲ್ಲದ; ಗತಿಗೆಟ್ಟ, ಅನಾಥ.

**बेकसी**, स्त्री. ವಿವಶತೆ.

**बेक़सूर**, वि. ನಿರಪರಾಧಿ, ನಿರ್ದೋಷಿ.

**बेकहा**, वि. ಹೇಳಿದರೂ ಕೇಳದವನು.

**बे-कही**, वि. ಹೇಳದ, ಅನುಕ್ತ.

**बे-काज**, वि. ಕೆಲಸಕ್ಕೆಬಾರದ, ನಿರರ್ಥಕ.

**बे-क़ानून**, क्रिवि. ಕಾನೂನಿಗೆ ವಿರುದ್ಧವಾಗಿ, ನಿಯಮವಿರೋಧವಾಗಿ

**बेक़ाबू**, वि. ಅಂಕೆಯಿಲ್ಲದ, ವಿವಶ.

**बेकाम**, वि. ಕೆಲಸವಿಲ್ಲದ, ನಿರುದ್ಯೋಗಿ; ಕೆಲಸಕ್ಕೆ ಬಾರದ, ನಿರರ್ಥಕ.

**बेक़ायदगी**, स्त्री. ಅನೀತಿ, ಅಕ್ರಮ; ಅವ್ಯವಸ್ಥೆ.

**बेक़ायदा**, वि. ನಿಯಮ ವಿರುದ್ಧ, ಅಕ್ರಮ; ನಿಯಮವಿಲ್ಲದ, ಅನಿಯಮಿತ.

**बेकार**, वि. ಕೆಲಸವಿಲ್ಲದವ, ನಿರುದ್ಯೋ ಗಿ; ನಿರರ್ಥಕ, ವ್ಯರ್ಥ; ಸೋಮಾರಿ

**बेकारी**, स्त्री. ನಿರುದ್ಯೋಗ; ವ್ಯರ್ಥ

**बेख़**, पु. ಬುಡ; ಬೇರು; ಮೂಲ ಅಸ್ತಿಭಾರ.

**बेखटके**, क्रिवि. ನಿರಾತಂಕವಾಗಿ, ನಿರಾ ಳವಾಗಿ.

**बेख़तर**, वि. ಆಪತ್ತಿಲ್ಲದ, ಅಪಾಯ ವಿಲ್ಲದ; ಭದ್ರ, ಜೋಪಾನವಾದ.

**बेख़बर**, वि. ಅರಿಯದ; ಎಚ್ಚರವಿಲ್ಲ ಅಜಾಗರೂಕ.

**बे-ख़बरी**, स्त्री. ಅಜಾಗರೂಕತೆ; ಪರಾ

लिला, वि. ಅರಳದಿರುವ, ಅವಿಕಸಿತ.
ौफ, वि. ಹೆದರದ, ನಿರ್ಭೀತ.
ौफ़ी, स्त्री. ನಿರ್ಭಯತೆ, ನಿರ್ಭಯ.
, पु. ವೇಗ, ತ್ವರೆ; ಶ್ರೀಮಂತ,
ಸ್ಥ, ಅಮೀರ.
नी, स्त्री. ಶ್ರೀಮಂತನ ಹೆಂಡತಿ.
ग़म, वि. ನಿಶ್ಚಿಂತೆಯಾದ, ನೆಮ್ಮ
ದಿಯ.
म, स्त्री. ರಾಣಿ; ದೊರೆಸಾನಿ.
रज़, वि. ದರ್ದಿಲ್ಲದ, ಅಗತ್ಯವಿಲ್ಲದವ
नगी, स्त्री. ಪರಿಚಯವಿಲ್ಲದಿರುವಿಕೆ,
ಪರಿಚಿತಿ.
ना, वि. ಅಪರಿಚಿತ; ಪರಕೀಯ,
ಯಿ.
ार, स्त्री. ಬಿಟ್ಟಿ, ಆಡಾಣೆ, ಬೇಗಾರಿ;
ತಕ್ಕೆ ಮಾಡುವ ಕೆಲಸ.
ारी, पु. ಬಿಟ್ಟಿ ಕೆಲಸ ಮಾಡುವವ;
ತಕ್ಕೆ ಕೆಲಸ ಮಾಡುವವ.
़, क्रिवि. ಅಕಾಲದಲ್ಲಿ.
नाह, वि. ನಿರ್ದೋಷಿ, ನಿರಪರಾಧಿ.
नाही, स्त्री. ನಿರ್ದೋಷ,ನಿರಪರಾಧ
ौर, क्रिवि. ವಿಚಾರವಿಲ್ಲದೆ.
ना, सक्रि. ಮಾರು, ವಿಕ್ರಯಿಸು.
बेच खाना = ಕಳಕೊಳ್ಳು.
ना-बेची, स्त्री. ಕೊಳ್ಳಾಟ ಮಾರಾಟ.
ारगी, स्त्री. ನಿರ್ಗತಿ; ದೈನ್ಯ; ನಿರಾ
ಶ್ರಯ; ನಿರಾದರಣೆ.
ारा, वि. ನಿರ್ವಾಹವಿಲ್ಲದ, ಯತ್ನ
ಶೂನ್ಯ; ಗತಿಯಿಲ್ಲದ, ದಿಕ್ಕಿಲ್ಲದವ;
ಉಪಾಯ, ನಿರ್ಗತಿಕ, ಬಡಪಾಯಿ.

बेचिराग़, वि. ಹಾಳುಬಿದ್ದ; ಮಕ್ಕಳಿಲ್ಲದ.
बेची, स्त्री. ಹುಂಡಿ ಚೀಟಿಯ ಹಿಂಬದಿಯಲ್ಲಿ ಸಹಿ ಮಾಡುವುದು, ಪೇಚಿ.
बेचू, वि. ಮಾರುವವ.
बेचैन, वि. ನೆಮ್ಮದಿಯಿಲ್ಲದ, ಅಶಾಂತ, ಕಳವಳಗೊಂಡ.
बेचैनी, स्त्री. ಅಶಾಂತಿ, ಕಳವಳ, ಹಳವಂಡ, ಮುಮ್ಮಲ, ದುಗುಡ.
बेचोबा, पु. ಕಂಬವಿಲ್ಲದ ಡೇರೆ, ಗುಡಾರ
बे ज़बान, वि. ಬಾಯಿಲ್ಲದವ, ಮೂಕ.
बेज़रूर, वि. ಅಗತ್ಯವಿಲ್ಲದ, ಅನವಶ್ಯಕ.
बेजा, वि. ಸ್ಥಾನಗೆಟ್ಟ; ಅಸಾಮಯಿಕ; ಅನುಚಿತ, ಹೊಲ್ಲದ, ಕೆಟ್ಟ.
बेजान, वि. ಪ್ರಾಣವಿಲ್ಲದ, ನಿರ್ಜೀವ; ಪ್ರಜ್ಞೆಯಿಲ್ಲದ; ಕಳೆಗುಂದಿದ,ನಿರ್ಬಲ.
बेज़ाब्ता, वि. ನಿಯಮವಿರುದ್ಧ.
बेज़ार, वि. ಸಿಟ್ಟಾದ; ವ್ಯಥಿತ.
बेज़ारी, स्त्री. ಸಿಟ್ಟು, ಕೋಪ.
बेजोड़, वि. ಎಣೆಯಿಲ್ಲದ, ಈಡಿಲ್ಲದ, ಸಾಟಿಯಿಲ್ಲದ, ಅಸದೃಶ.
बेझा, पु. ಲಕ್ಷ್ಯ, ಗುರಿ; ವೇಧ್ಯ.
बेटा, पु. ಮಗ, ಪುತ್ರ.
बेटी, स्त्री. ಮಗಳು, ಪುತ್ರಿ.
बेठन, पु. ಸುತ್ತಿ ಕಟ್ಟುವ ಬಟ್ಟೆ, ತಾಟು, ಕಟ್ಟುವಾಸ; ರಟ್ಟು.
बेठिकाने, बेठौर, वि. ನೆಲೆಗೆಟ್ಟ; ಗೊತ್ತುಗುರಿಯಿಲ್ಲದ; ಅನಿಶ್ಚಿತ, ವ್ಯರ್ಥ.
बेड़, पु. ಗದ್ದೆ ಬದು; ಕಟ್ಟೆ, ಬೇಲಿ.
बेड़ना, सक्रि. = बेढ़ना.

**बेडर**, वि. ನಿರ್ಭಯನಾದ, ನಿರ್ಭೀತ; ಹೆದರಿಕೆಯಿಲ್ಲದವ.

**बेड़ा**, पु. ತೆಪ್ಪ, ಉಡುಪ, ತರಣಿ; ಆಳು, ನೌಕರ; ಸಮೂಹ. बेड़ा पार होना =ಸಂಕಟದಿಂದ ಪಾರಾಗು, ಕಡೆತೇರು.

**बेड़ी**, स्त्री. ಸಂಕೋಲೆ, ಕೈಕೋಳ, ಬೇಡಿ, ಹಾತು ಬೇಡಿ; ನೀರು ಹಾಯಿಸುವ ಮುಕ್ಕರಿ, ಹೆಡಿಗೆ.

**बेडौल**, वि. ಕುರೂಪ, ಅಂದಗೆಟ್ಟ, ವಿಕಾರವಾದ.

**बेढंगा**, वि. ಕ್ರಮತಪ್ಪಿದ; ತಾರುಮಾರು, ಯದ್ವಾತದ್ವಾ; ಅವಲಕ್ಷಣ.

**बेढ़**, पु. ವೇಷ್ಟಿಸುವಿಕೆ, ಮುತ್ತುವಿಕೆ; ನಾಶ, ಹಾಳು.

**बेढ़ई**, स्त्री. ಕರ್ಜಿಕಾಯಿ, ಕರಿಗಡಬು.

**बेढ़ना**, सक्रि. ಬೇಲಿ ಹಾಕು; ವೇಷ್ಟಿಸು, ಆವರಿಸು; ದನಗಳನ್ನು ಸೇರಿಸಿ ಅಟ್ಟು; ದೊಡ್ಡಿಯೊಳಕ್ಕೆ ಸೇರಿಸು.

**बेढब**, वि. ಅಂದಗೆಟ್ಟ, ಅವಲಕ್ಷಣವಾದ. क्रिवि. ಅನುಚಿತವಾಗಿ, ಅವಲಕ್ಷಣವಾಗಿ.

**बेढा**, पु. ಕೈಕಡಗ, ಬಳೆ; ಬೇಲಿ, ಕಟಕಟೆ; ಮನೆಯ ಮುಂದಿನ ಆವರಣ.

**बेत**, स्त्री. ಬೆತ್ತ, ಸೆಳೆ. बेत लगाना= ಛಡಿ ಏಟು ಹೊಡೆ, ಸೆಳೆ.

**बेतकल्लुफ़**, वि. ಶಿಷ್ಟಾಚಾರವನ್ನು ಲಕ್ಷಿಸದವನು; ಯಥಾರ್ಥವಾದಿ; ನಿಷ್ಕಪಟಿ, ಸರಳ. क्रिवि. ಶಿಷ್ಟಾಚಾರವನ್ನು ಲಕ್ಷಿಸದೆ, ಖಡಾಖಡಿ; ನಿಸ್ಸಂಕೋಚವಾಗಿ.

**बेतकान**, क्रिवि. ಆಯಾಸವಿಲ್ಲದೆ.

**बेतना**, अक्रि. ವಿದಿತವಾಗು, ಗೊತ್ತಾಗು.

**बेतमीज़**, वि. ಅವಿವೇಕಿ; ಅಶಿಷ್ಟ.

**बेतरह**, क्रिवि. ಅನುಚಿತವಾಗಿ; ವಿಪರೀತವಾಗಿ; ಹೆಚ್ಚಾಗಿ, ಕಡಿದಾಗಿ.

**बेतरीक़ा**, वि. ನಿಯಮ ವಿರುದ್ಧವಾದ.

**बेतहाशा**, क्रिवि. ಆಲೋಚಿಸದೆ; ದುಡುಂ ಪ್ರವೇಶವಾಗಿ; ಬಲುವೇಗದಿಂದ, ತ್ವರೆಯಿಂದ.

**बेताज**, वि. ಕಿರೀಟವಿಲ್ಲದ.

**बेताब**, वि. ಅಶಕ್ತ, ನಿರ್ಬಲ; ನೆಮ್ಮದಿಯಿಲ್ಲದ; ದಿಗಿಲುಬಿದ್ದ.

**बेतार**, वि. ತಂತಿಯಿಲ್ಲದ. बेतार का तार= ಕಂಬಿಯಿಲ್ಲದ ತಂತಿವಾರ್ತೆ, ತಂತಿಯಿಲ್ಲದ ತಾರು, "ವೈರ್‌ಲೆಸ್".

**बेताल**, पु. ವಂದಿ ಮಾಗಧ; ಭೂತ, ಪ್ರೇತ; ಬೇತಾಳ. वि. (ಸ್ವರ) ಲಯವಿಲ್ಲದ; ಅಪಸ್ವರದ; ಹೊಂದಿಕೆಯಿಲ್ಲದ.

**बेतुका**, वि. ಅಸಂಬದ್ಧ, ಹೊಂದಿಕೆಯಿಲ್ಲದ.

**बेद**, स्त्री. ಬೆತ್ತ, ಸೆಳೆ. बेद-बाफ़= ಬೆತ್ತದ ಕೆಲಸ ಮಾಡುವವ.

**बेदख़ल**, वि. ಪದಚ್ಯುತ, ಬಹಿಷ್ಕೃತ. बे-दख़ल करना = ಸ್ವಾಧೀನವನ್ನು ಬಿಡಿಸು, ಹಿಡುವಳಿಯನ್ನು ಬಿಡಿಸು.

**बेदख़ली**, स्त्री. ಪದಚ್ಯುತಿ, ಬಹಿಷ್ಕರಣ.

**बेदम**, वि. ಪ್ರಾಣವಿಲ್ಲದ, ನಿರ್ಜೀವ; ಸತ್ತುಹೋದ; ಶಿಥಿಲ.

**बेदर्द**, वि. ಕನಿಕರವಿಲ್ಲದವ, ನಿರ್ದಯ, ನಿರ್ದಯಿ.

बेदर्दी, स्त्री. ಕ್ರೌರ್ಯ, ನಿರ್ದಯೆ.

बेदांत, पु. ವೇದಾಂತ. वि. ಹಲ್ಲುಗ ಳಿಲ್ಲದ; ಬೋಡು (ಬಾಯಿ).

बेदाग़, वि. ಕಳಂಕವಿಲ್ಲದ, ನಿರ್ಮಲ; ನಿರ್ದೋಷ; ಪರಿಶುದ್ಧ.

बेदाना, वि. ಬೀಜವಿಲ್ಲದ, ಬಿತ್ತವಿಲ್ಲದ. पु. ಕಾಬೂಲು ದಾಳಿಂಬೆ, ಬೇದಾಣ.

बेदार, वि. ಎಚ್ಚರವಾದ, ಜಾಗರೂಕ.

बेदारी, स्त्री. ಎಚ್ಚರ, ಜಾಗೃತಿ.

बेदिल, वि. ಎದೆಗುಂದಿದ, ಧೈರ್ಯಗೆಟ್ಟ; ಹೃದಯವಿಲ್ಲದ; ಕಲ್ಲೆದೆಯ, ಕ್ರೂರ.

बेदिली, स्त्री. ಅಧೈರ್ಯ; ನಿರಾಶೆ; ಅತ್ಯಾಚಾರ.

बेदीन, वि. ಅಧರ್ಮಿ; ನಾಸ್ತಿಕ; ದುಷ್ಟ, ದುರುಳ.

बेध, पु. ರಂಧ್ರ, ದ್ವಾರ.

बेधड़क, क्रिवि. ನಿಸ್ಸಂಕೋಚವಾಗಿ, ಧಾರಾಳವಾಗಿ, ನಿಸ್ಸೂರಾಗಿ; ನಿರ್ಭಯವಾಗಿ; ನಿಶ್ಚಿಂತೆಯಾಗಿ. वि. ಸಂಕೋಚವಿಲ್ಲದ, ನಿರ್ಭೀತ.

बेधना, सक्रि. ತೂತುಕೊರೆ, ತೋಡು.

बेधिया, पु. ತೂತು ಕೊರೆಯುವವ; ಅಂಕುಶ.

बेन, पु. ವೇಣು, ಕೊಳಲು.

बेनज़ीर, वि. ಅನುಪಮ, ಈಡಿಲ್ಲದ.

बेनवा, वि. ಬಡ, ನಿರ್ಧನ; ಬಡವ, ದೀನ.

बे-नवाई, स्त्री. ದಾರಿದ್ರ್ಯ, ಬಡತನ; ದುಷ್ಟತನ.

बेनसीब, वि. ಅದೃಷ್ಟವಿಲ್ಲದ, ಭಾಗ್ಯಹೀನ.

बेना, पु. ಬೀಸಣಿಗೆ; ಹೆಂಗಸರ ಒಂದು ಆಭರಣ, ಹಣೆಬೊಟ್ಟು.

बेनाम, वि. ಹೆಸರಿಲ್ಲದ, ಅನಾಮಧೇಯ; ನಿರ್ನಾಮ.

बेनिया, स्त्री. ಸಣ್ಣ ಬೀಸಣಿಗೆ.

बेनी, स्त्री. ವೇಣಿ, ಹೆರಳು, ಜಡೆ; ಬಾಗಿಲಿನ ಬಿರಡೆ, ಅಗುಳಿ.

बेपरदा, वि. ಮರೆಯಿಲ್ಲದ, ಆವರಣವಿಲ್ಲದ; ನಗ್ನ; ಬುರುಕಿಯಿಲ್ಲದ; ನಾಚಿಕೆಯಿಲ್ಲದ.

बेपरवा, बेपरवाह, वि. ಲಕ್ಷ್ಯವಿಲ್ಲದವ; ಧಾರಾಳ; ಸ್ವೇಚ್ಛಾಚಾರಿ.

बेपारिन, स्त्री. बेपारी का स्त्री. रूप.

बेपारी, पु. ವ್ಯಾಪಾರಿ, ವರ್ತಕ.

बेपीर, वि. ನಿರ್ದಯ, ಕ್ರೂರ.

बेपेंदी, वि. ಬುಡವಿಲ್ಲದ, ಅಂಡಿಲ್ಲದ. बेपेंदी का लोटा = ಅಂಡಿಲ್ಲದ ಚೊಂಬು; ಚಂಚಲಚಿತ್ತದವನು.

बे-फ़ायदगी, स्त्री. ವಿಫಲತೆ; ನಿರರ್ಥಕತೆ

बेफ़ायदा, वि. ಪ್ರಯೋಜನವಿಲ್ಲದ, ವ್ಯರ್ಥ, ನಿರರ್ಥಕ; ವಿಫಲ.

बेफ़िक्र, वि. ಯೋಚಿಸದ; ನಿಶ್ಚಿಂತ.

बेफ़िक्री, स्त्री. ನಿಶ್ಚಿಂತೆ.

बेबस, वि. ವಿವಶ, ಅಸಮರ್ಥ.

बेबसी, स्त्री. ವಿವಶತೆ, ಅಸಮರ್ಥತೆ.

बेबाक, वि. ಭಯವಿಲ್ಲದ, ನಿರ್ಭೀತ.

बेबाक़, वि. ಸಂದಾಯವಾದ, ನಿಶ್ಶೇಷವಾದ, ಬೇಬಾಕಾದ, ತೀರಿದ.

बेबाक़ी, स्त्री. ಸಂದಾಯ, ಋಣ

ಮುಕ್ತಿ, ತೀರಿಕೆ.

**बे-बुलाया**, वि. ಆಹ್ವಾನವಿಲ್ಲದೆ ಬಂದವ, ಕರೆಯುದವ.

**बेभाव**, वि. ಲೆಕ್ಕವಿಲ್ಲದ, ಅಪಾರ. बेभाव की पड़ना = ಚೆನ್ನಾಗಿ ಏಟು ಬೀಳು.

**बेमज़ा**, वि. ರುಚಿಯಲ್ಲದ, ಸಪ್ಪೆ; ಸ್ವಾರಸ್ಯವಿಲ್ಲದ.

**बेमन**, क्रिवि. ಮನಸ್ಸಿಲ್ಲದೆ, ದಂಡಕ್ಕೆ.

**बेमानी**, वि. ಅರ್ಥವಿಲ್ಲದ; ಅಪಾರ್ಥಕ; ನಿರರ್ಥಕ.

**बेमालूम**, क्रिवि. ತಿಳಿಯದ ಹಾಗೆ; ಗುಮ್ಮನೆ, ಸದ್ದಿಲ್ಲದೆ. वि. ತಿಳಿಯದ, ಅಪ್ರತೀತ.

**बेमुरव्वत**, वि. ಸೌಜನ್ಯವಿಲ್ಲದ, ನಿರ್ದಾಕ್ಷಿಣ್ಯವಾದ; ಪರಾಙ್ಮುಖ.

**बेमुरव्वती**, स्त्री. ಸೌಜನ್ಯವಿಲ್ಲದಿರುವಿಕೆ, ನಿರ್ದಾಕ್ಷಿಣ್ಯ.

**बेमेल**, वि. ಸೇರಿಕೆಯಿಲ್ಲದ, ಹೊಂದಿಕೆಯಿಲ್ಲದ; ಅಸಂಗತ, ಅಸಂಬದ್ಧ; ಈಡಿಲ್ಲದ, ಎಣೆಯಿಲ್ಲದ.

**बेमौक़ा**, वि. ಸಮಯತಪ್ಪಿದ, ಅಕಾಲದ. पु. ಅಕಾಲ, ಅವೇಳೆ.

**बेमौसिम**, वि. ಕಾಲತಪ್ಪಿದ, ಅಕಾಲದ

**बेर**, पु. ಬೋರೆಹಣ್ಣು, ಎಲಚಿ, ಬದರಿ. स्त्री. ವೇಳೆ, ಹೊತ್ತು, ಕಾಲ.

**बेरजी**, स्त्री. ಕಾಡು ಎಲಚಿ ಹಣ್ಣು.

**बेरस**, वि. ರಸವಿಲ್ಲದ, ನೀರಸ, ಸಪ್ಪೆ.

**बेरहम**, वि. ಕನಿಕರವಿಲ್ಲದ, ನಿರ್ದಯ.

**बे-रहमी**, स्त्री. ನಿರ್ದಯತೆ, ಕಾಠಿಣ್ಯ.

**बेरा**, पु. ವೇಳೆ, ಹೊತ್ತು.

**बेरी**, स्त्री. ವೇಳೆ, ಹೊತ್ತು; ಎಲಚಿಹಣ್ಣು, ಬೋರೆಹಣ್ಣು.

**बेरुख़**, **बेरुख़े**, वि. ವಿಮುಖ, ಕುಪಿತ.

**बेरुख़ाई**, स्त्री. ವಿಮುಖತೆ.

**बेरून**, क्रिवि. ಹೊರಗಡೆ, ಹೊರಗೆ.

**बेरूनी**, वि. ಹೊರಗಡೆಯ, ಬಾಹ್ಯ.

**बेरेशा**, वि. ನಾರಿಲ್ಲದ.

**बेरोक**, **बेरोकटोक**, क्रिवि. ತಪ್ಪು ತಡೆಯಿಲ್ಲದೆ, ಅಡ್ಡಿಯಿಲ್ಲದೆ; ನಿರ್ವಿಘ್ನವಾಗಿ; ನಿಸ್ಸೂರಾಗಿ.

**बेर्रा**, पु. ಎರೆಯುಪ್ಪು, ರೊಟ್ಟಿ, ವಡೆ.

**बेल**, पु. ಬಿಲ್ವಮರ; ಗುದ್ದಲಿ, ಪಿಕಾಸಿ, ಸಲಿಕೆ; ರಸ್ತೆಯಲ್ಲಿ ಗುರುತಿಗಾಗಿ ಹಾಕಿದ ಸುಣ್ಣದ ನೀರಿನ ಗೆರೆ. स्त्री. ಬಳ್ಳಿ, ಲತೆ, ಹಂಬು; ಸಂತಾನ, ಸಂತತಿ; ಬಟ್ಟೆ ಅಥವಾ ಗೋಡೆಯ ಮೇಲೆ ಹೂಬಿಸಿ ಕೆಲಸ, ಬುಟ್ಟಾ ಕೆಲಸ; ದೋಣಿ ನಡೆಸುವ ಹುಟ್ಟು, ಒಲ್ಲೆ; ಲಾಳಿ, ನಾಡೆ; ಹಬ್ಬಗಳಲ್ಲಿ ನರ್ತಕಿಯರಿಗೆ ಕೊಡುವ ಹಣ, ಇನಾಮು.

**बेलक**, पु. ಸಣ್ಣ ಗುದ್ದಲಿ; ಅಂಬಿನ ತುದಿ, ಮೊನೆ.

**बेलचा**, पु. ಗುದ್ದಲಿ, ಪಿಕಾಸಿ, ಸಲಿಕೆ.

**बेलदार**, पु. ಗುದ್ದಲಿ ಕೆಲಸ ಮಾಡುವವನು, ಮಣ್ಣೊಡ್ಡ.

**बेलन**, पु. ಉರುಳುವ ದಿಂಡು, ಉರುಳಿಕ, ಉರುಳೆ, ಉರಣೆ; ಗಾಣದ ಕಣೆ; ಲಟ್ಟಣಿಗೆ, ಲತ್ತಿಗುಣಿ; ಗುಂಡುಕಲ್ಲು; ವರ್ತುಲ ಸ್ತಂಭ; ಮರದ ಕೊಂಡೆ.

बेलना, सक्रि. ಲಟ್ಟಿಸು; ಪದರು ಪದ ರಾಗಿ ಮಾಡು; ಹರಪ್ಪು; ನೀರೆರಚು; ಕಾಳುಮಾಡು. पु. ಲಟ್ಟಣಿಗೆ, ಲತ್ತಿ ಗೆಣೆ; ಹತ್ತಿಬೀಜ ಬಿಡಿಸುವ ಯಂತ್ರ.

बेलनी, स्त्री. ಲಟ್ಟಣಿಗೆ, ಲತ್ತಿಗಣೆ; ಹತ್ತಿಬೀಜಬಿಡಿಸುವ ಯಂತ್ರ, ಕಿರಕು ರಾಟೆ; ಚಿಕ್ಕ ಕೊಂಬೆ

बेलबूटा, पु. ಗಿಡ ಬಳ್ಳಿಗಳು; ಕಸೂತಿಯ ಹೂ ಗಿಡಗಳು, ಬುಟ್ಟಾ ಕೆಲಸ.

बेलहरा, पु. ಒಂದು ಬಗೆ ಬಟ್ಟೆ; ವೀಳೆಯದೆಲೆ ಇಡುವ ಬುಟ್ಟಿ.

बेलहरी, स्त्री. ವಿಳ್ಯದೆಲೆಯ ಬುಟ್ಟಿ.

बेला, पु. ವೇಳೆ, ಸಮಯ, ಹೊತ್ತು; ಬಟ್ಟಲು, ಕುಡಿಕೆ; ಮಲ್ಲಿಗೆ ಹೂ; ಒಂದು ಬಗೆ ಪಿಟೀಲು, ಕಾಮಾಕ್ಷಿ.

बेलाग, वि. ಅಲಾಯಿದಾ; ಶುದ್ಧ.

बेली, पु. ಸಂಗಾತಿ, ಜೊತೆಗಾರ.

बेलुत्फ़, वि. ಸ್ವಾರಸ್ಯವಿಲ್ಲದ, ನೀರಸ.

बेदिली, वि. ಎದೆಗುಂದಿದ, ಧೈರ್ಯಗುಂದಿದ.

बेवसोस, वि. ಯಥಾರ್ಥ, ಸಾಚಾ.

बेवक़ूफ़, वि. ಜ್ಞಾನವಿಲ್ಲದವ, ಮೂರ್ಖ; ದಡ್ಡ, ಅವಿವೇಕಿ, ಬೇಕೂಬ.

बेवक़ूफ़ी, स्त्री. ಮೂರ್ಖತನ, ದಡ್ಡತನ, ಅವಿವೇಕ.

बेवक़्त, क्रिवि. ಅವೇಳೆಯಲ್ಲಿ.

बेवफ़ा, वि. ಕರ್ತವ್ಯಭ್ರಷ್ಟ; ವಿಶ್ವಾಸಘಾತಕ, ದ್ರೋಹಿ.

बेवफ़ाई, स्त्री. ವಿಶ್ವಾಸಘಾತ, ದ್ರೋಹ.

बेवरा, पु. = ब्योरा.

बेवा, स्त्री. ವಿಧವೆ, ವಿತಂತು; ರಂಡೆ.

बेश, वि. ಅಧಿಕ; ಹೆಚ್ಚು; ಶ್ರೇಷ್ಠ.

बे-शऊर, वि. ಕೆಲಸ ತಿಳಿಯದವ, ದಡ್ಡ; ಒರಟ, ಒಡ್ಡ.

बेशक, क्रिवि. ನಿಸ್ಸಂದೇಹವಾಗಿ, ಖಂಡಿತ

बेशक़ीमत, बेशक़ीमती, बेशबहा, वि. ಹೆಚ್ಚುಬೆಲೆಯುಳ್ಳ, ಹಿರಿಯ ಬೆಲೆಯ, ಬಹುಮೂಲ್ಯವಾದ.

बेशर्म, वि. ನಾಚಿಕೆಗೆಟ್ಟವ, ನಾಣಿಲಿ.

बेशर्मी, स्त्री. ನಾಚಿಕೆಗೇಡಿತನ, ನಾಣಿಲಿತನ.

बेशह, बेशा, पु. ಅಡವಿ, ಕಾಡು.

बेशी, स्त्री. ಆಧಿಕ್ಯ, ಹೆಚ್ಚು.

बेशुमार, वि. ಲೆಕ್ಕವಿಲ್ಲದ, ಅಗಣಿತ.

बेसन, पु. ಕಡಲೆಹಿಟ್ಟು.

बेसनी, वि. ಕಡಲೆಹಿಟ್ಟಿನ. स्त्री. ಕಡಲೆ ಹಿಟ್ಟಿನ ರೊಟ್ಟಿ.

बेसनौटी, स्त्री. ಕಡಲೆ ಹಿಟ್ಟಿನ ರೊಟ್ಟಿ.

बे-सबब, क्रिवि. ನಿಷ್ಕಾರಣ, ಅಕಾರಣ.

बेसब्र, बेसबरा, वि. ತಾಳ್ಮೆಯಿಲ್ಲದ, ಆತುರಪಡುವ.

बे-सबरी, स्त्री. ಅವಸರ, ಆತುರ.

बेसर, पु. ಹೇಸರಗತ್ತೆ, ಅಶ್ವತರ; ಮೂಗುತಿ, ಬೇಸರಿ.

बेसरा, वि. ಠಾವಿಲ್ಲದ, ಆಶ್ರಯವಿಲ್ಲದ. पु. ಒಂದು ಬಗೆ ಗಿಡಗ.

बेसवा, स्त्री. ವೇಶ್ಯೆ, ಸೂಳೆ.

बेसहारा, वि. ಆಶ್ರಯವಿಲ್ಲದವ, ಅನಾಶ್ರಿತ.

बेसाहना, सक्रि. ಕೊಂಡುಕೊಳ್ಳು.

**बेसाहनी**, स्त्री. ಕೊಂಡುಕೊಳ್ಳುವಿಕೆ.
**बेसाहा**, पु. ಕೊಂಡದ್ದು, ಸರಕು.
**बे-सिफ़ारिश**, क्रिवि. ಶಿಫಾರಸುಇಲ್ಲದೆ.
**बे-सिलसिले**, वि. ಕ್ರಮರಹಿತ.
**बेसुध**, वि. ಅರಿವಿಲ್ಲದ; ಪ್ರಜ್ಞೆಯಿಲ್ಲದ, ಎಚ್ಚರ ತಪ್ಪಿದ.
**बेसुर, बसुरा**, वि. ಅಪಸ್ವರದ.
**बे-सूद**, क्रिवि. ಬಡ್ಡಿಯಿಲ್ಲದ; ಲಾಭವಿಲ್ಲದ; ಪ್ರಯೋಜನವಿಲ್ಲದ.
**बेह**, पु. ರಂಧ್ರ, ದ್ವಾರ. वि. ಒಳ್ಳೆಯ; ಉತ್ತಮ; ಶ್ರೇಷ್ಠ.
**बेहड़**, वि. = वीहड़.
**बेहतर**, वि. ಹೆಚ್ಚು ಒಳ್ಳೆಯ, ಉತ್ತಮತರ; ವಾಸಿ, ಲೇಸು. ಅವ್ಯ. ಒಳ್ಳೆಯದು, ಒಳ್ಳೆಯದಾಯಿತು!
**बेहतरी**, स्त्री. ಒಳ್ಳೆಯದು; ಹಿತ; ಕ್ಷೇಮ.
**बेहतरीन**, वि. ಎಲ್ಲಕ್ಕಿಂತ ಹೆಚ್ಚು ಒಳ್ಳೆಯದಾದ, ಸರ್ವೋತ್ತಮ.
**बेहद, बेहद्द**, वि. ಮೇರೆಯಿಲ್ಲದ, ಅಪರಿಮಿತ; ಅಪಾರ, ಮಿತಿಯಿಲ್ಲದ; ಅಗಣಿತ.
**बेहन**, पु. ಸಸಿ, ಅಗೆ, ನೇಜಿ.
**बेहना**, पु. ಅರಳೆ ಎಕ್ಕುವವ, ಪಿಂಜಾರ.
**बेहबूद**, स्त्री. ಒಳ್ಳೆಯದು, ಹಿತ.
**बेहया**, वि. ಲಜ್ಜೆಯಿಲ್ಲದವ, ನಾಚಿಕೆಗೇಡಿ.
**बेहयाई**, स्त्री. ನಿರ್ಲಜ್ಜೆ, ನಾಚಿಕೆಗೇಡಿತನ.
**बेहर, बेहरा**, वि. ಬೇರೆಯಾದ, ವಿಭಿನ್ನ.
**बेहराना**, अक्रि. ಹರಿ, ಹಿಸಿ, ಸೀಳು.
**बेहरी**, स्त्री. ಚಂದಾ ವಸೂಲಿ, ವರ್ಗಣಿ; ಕಿಸ್ತು; ಪುದುವಟ್ಟು.
**बेहला**, पु. ಹಣದ ಚೀಲ, ತೈಲಿ.
**बेहाल**, वि. ದೆಸೆಗೆಟ್ಟ, ವ್ಯಾಕುಲಪಡುವ.
**बेहाली**, स्त्री. ದುಸ್ಥಿತಿ; ವ್ಯಾಕುಲತೆ.
**बे-हिसाब**, वि. ಲೆಕ್ಕವಿಲ್ಲದ.
**बे-हुरमत**, वि. ಮಾನವಿಲ್ಲದ, ಮರ್ಯಾದೆಯಿಲ್ಲದ.
**बेहूदगी**, स्त्री. ಅಸಭ್ಯತೆ; ಒರಟುತನ.
**बेहूदा**, वि. ಅಸಭ್ಯ, ಒಡ್ಡು, ಒರಟು; ಗಾವೋದು; ದಡ್ಡ.
**बेहैफ़**, क्रिवि. ನಿಶ್ಚಿಂತೆಯಾಗಿ, ಹಾಯಾಗಿ.
**बेहोश**, वि. ಪ್ರಜ್ಞೆಯಿಲ್ಲದ, ಜ್ಞಾನತಪ್ಪಿದ, ಮೈಮರೆತ; ಮೂರ್ಛೆ ಹೋದ.
**बेहोशी**, स्त्री. ಜ್ಞಾನ ತಪ್ಪುವಿಕೆ, ಮೂರ್ಛೆ; ಮರವೆ, ಹಮ್ಮುದ, ಜೊಂಗು.
**बैंगन**, पु. ಬದನೇಕಾಯಿ.
**बैंगनी, बैंजनी**, वि. ಬದನೇಕಾಯಿ ಬಣ್ಣದ, ರಕ್ತನೀಲ, ಜಾಂಬಳಿ, ಊದಾ.
**बै**, स्त्री. ನೆಯಿಗೆಯವರ ಕುಂಚ, ಕುಂಚಿಗೆ; ಮಾರಾಟ, ಬಿಕರಿ.
**बैज़**, पु. ಮೊಟ್ಟೆ, ತತ್ತಿ; ಅಂಡ; ಅಂಡಕೋಶ; ಸರಕಾರದ ಕಾಗದ ಪತ್ರಗಳಿಗೆ ಹಾಕುವ ಠಸ್ಸೆ, ಮೊಹರು.
**बैज़ा**, पु. ಸೂರ್ಯ; ಶ್ವೇತವರ್ಣ, ಬಿಳುಪು; ಮೊಟ್ಟೆ, ತತ್ತಿ; ಅಂಡ; ಅಂಡಕೋಶ.
**बैज़ाना**, पु. ಸರಕಾರಿ ಕಾಗದಪತ್ರಗಳಿಗೆ ಠಸ್ಸೆ ಹಾಕಲು ಕೊಡುವ ರುಸುಂ.
**बैठक**, स्त्री. ಕುಳಿತುಕೊಳ್ಳುವ ಸ್ಥಳ, ಹಜಾರ, ಪಡಸಾಲೆ; ವೇದಿಕೆ, ಜಗಲಿ; ಪೀಠ, ಮಂದಾಸನ; ಸಭೆಯು ಕೂಡು

ವಿಕೆ, ಸದಸ್ಯರ ಕೂಟ, ಅಧಿವೇಶನ; ಕುಳಿತುಕೊಳ್ಳುವಿಕೆ; ಊಟುಂ ಬೈಸು, ಬೈಸಿಗೆ.

बैठक-ख़ाना, बैठका, पु. ಕುಳಿತು ಕೊಳ್ಳುವ ಕೋಣೆ, ಸದರು, ದಿವಾನ ಖಾನೆ, ಬೈಠಕಖಾನೆ.

बैठकी, स्त्री. ಕುಳಿತು ಏಳುವಿಕೆ, ಬೈಸಿಗೆ; ಊಟು ಬೈಸು, ಆಸನ; ಆಧಾರ; ದೀಪಾಧಾರ, ಸಮೆ.

बैठन, स्त्री. ಕುಳಿತುಕೊಳ್ಳುವಿಕೆ, ಕೂತುವಳಿ; ಆಸನ.

बैठना, अक्रि. ಕೂತುಕೊ; ಸ್ಥಾಪಿತವಾಗು; ತಗಲು; ತಳ ಸೇರು, ಕುಸಿ; ಕುದುರು; (ಖರ್ಚು) ಬೀಳು, ಕೆಲಸವಿಲ್ಲದೆ ಕೂತಿರು, ಬಿದ್ದಿರು; ಉಪಪತ್ನಿಯಂತೆ ಒಬ್ಬನಲ್ಲಿ ವಾಸವಾಗಿರು; ಮೊಟ್ಟೆಗೆ ಕಾವು ಕೊಡಲು ಕೂರು.

बैठवां, वि. ಸಮವಾದ, ಚಪ್ಪಟೆಯಾದ.

बैठवाना, सक्रि. बैठना का प्रे. रूप.

बैठा, पु. ದೋಣಿಯ ಹುಟ್ಟು, ಜಳವೆ.

बैठाई, स्त्री. ಕೂಡುವಿಕೆ, ಅಧ್ಯಾಸನ.

बैठाना, बैठारना, बैठालना, सक्रि. ಕುಳ್ಳಿರಿಸು, ಕೂರಿಸು; ಸ್ಥಾಪಿಸು; ನೆಡು, ನಾಟು; ಇರಿಸು, ಮಡಗು; ಒಬ್ಬಳನ್ನು ಇಟ್ಟುಕೊಳ್ಳು.

बैढ़ना, सक्रि. ದನಗಳನ್ನು ದೊಡ್ಡಿಯೊಳಕ್ಕೆ ಸೇರಿಸು.

बैत, स्त्री. ಶ್ಲೋಕ, ದ್ವಿಪದಿ; ಕವನ. पु. ಗೃಹ, ಆಲಯ.

बैतरा, पु. ಒಂದು ಬಗೆ ಶುಂಠಿ.

बैद, बैद्य, पु. ವೈದ್ಯ, ಚಿಕಿತ್ಸಕ.

बैदक, बैदगी, स्त्री. ವೈದ್ಯನ ಕೆಲಸ ಅಥವಾ ಕಸಬು, ವೈದ್ಯಗಾರಿಕೆ.

बैदाई, स्त्री. ವೈದ್ಯನ ಕೆಲಸ, ವೈದ್ಯನ ವೃತ್ತಿ; ವೈದ್ಯನ ರುಸುಂ.

बैदिन, स्त्री. बैद का स्त्री. रूप.

बैन, पु. ವಾಣಿ, ಮಾತು. क्रिवि. ನಡುವೆ, ಮಧ್ಯೆ.

बैना, पु. ಮದುವೆ ಮುಂಜಿಗಳಲ್ಲಿ ನೆಂಟರಿಷ್ಟರಿಗೆ ಕಳುಹಿಸುವ ತಿಂಡಿ ಮೊದಲಾದುವು; ಬಾಗಿನ, ಉಡುಗೊರೆ.

बैर, पु. ವೈರ, ವಿರೋಧ; ಹಗೆತನ; ವೈಮನಸ್ಯ. बैर काढ़ना या निकालना = ಹಗೆ ತೀರಿಸಿಕೊಳ್ಳು, ಸೇಡು ತೀರಿಸು

बैरक़, पु. ಬಾವುಟ, ಧ್ವಜ.

बैरागन, बैरागिन, स्त्री. ಬೈರಾಗಿಣಿ, ತುದಿಯಲ್ಲಿ ಡೊಂಕಾದ ಸನ್ಯಾಸಿಗಳ ದಂಡ.

बैरागा, पु. ಸನ್ಯಾಸಿಗಳ ದಂಡ, ತುದಿಯಲ್ಲಿ ಡೊಂಕಾದ ಕೋಲು.

बैरागी, पु. ಬೈರಾಗಿ, ವಿರಕ್ತ.

बैरन, बैरिन, स्त्री. बैरी, पु. ಶತ್ರು, ವಿರೋಧಿ.

बैल, पु. ಎತ್ತು; ಹೋರಿ; ಹೆಡ್ಡ.

बैस, पु. ವಯಸ್ಸು, ಪ್ರಾಯ; ಕ್ಷತ್ರಿಯರ ಒಂದು ಜಾತಿ; ವೈಶ್ಯ ಜಾತಿ.

बैसक, पु. ಕಾಡಿನಲ್ಲಿ ದನಕರುಗಳನ್ನು ಮೇಯಿಸುವ ಸ್ಥಳ, ಹುಲ್ಲುಗಾವಲು; ಮೃತಪ್ರಾಯವಾದ ಪ್ರಾಣಿ; ಬಡಕಲು ದನ.

**बैसना**, अक्रि. ಕುಳಿತುಕೊ, ಕೂರು.
**बैसर**, स्त्री. ನೆಯಿಗೆಯುವರ ಕುಂಚ, ಕುಂಚಿಗೆ.
**बैसांड, बैसांडू**, वि. ಸೋಮಾರಿ, ಶೋಂಭೇರಿ, ಅಲಸ.
**बैसाख**, पु. ವೈಶಾಖ.
**बैसाखा**, पु. ಕುಂಟರ ಆನಿಕೆ ಕೋಲು, ಕಂಕುಳು ಕೋಲು; ಊರೆಗೋಲು.
**बैसाखी**, स्त्री. ವೈಶಾಖಮಾಸದ ಬೆಳೆ, ಹಯನು ಬೆಳೆ; ಕುಂಟರು ನಡೆಯುವಾಗ ಕಂಕುಳಲ್ಲಿಟ್ಟುಕೊಳ್ಳುವ ಆನಿಕೆ ಕೋಲು, ಕುಂಟುಗೋಲು, ಕಂಕುಳು ಕೋಲು.
**बोँका**, पु. ಹಾರುವ ಮಿಡತೆ.
**बोँगा**, वि. ದಡ್ಡ, ಮಂಕ, ಪೆದ್ದ.
**बोँडी**, स्त्री. = बौंडी.
**बोआई**, स्त्री. ಬೀಜ ಬಿತ್ತುವಿಕೆ, ಬಿತ್ತನೆ; ಬೀಜ ಬಿತ್ತಲು ಕೊಡುವ ಕೂಲಿ.
**बोआना**, अक्रि. ನಾತ ಹೊಡೆ, ನಾರು. सक्रि. ಬೀಜ ಬಿತ್ತಿಸು.
**बोआरा**, पु. ಬಿತ್ತನೆಯ ಕಾಲ.
**बोइया**, स्त्री. ಸಣ್ಣ ಮುಕ್ಕರಿ, ಗೂಡೆ.
**बोक, बोकरा**, पु. = बकरा.
**बोका**, पु. ಮುಕ್ಕರಿ, ಹೆಡಿಗೆ.
**बोच**, पु. ಮೊಸಳೆ, ನೆಗಳು.
**बोचा**, पु. ಡೋಲಿ, ಮೇನ.
**बोज**, पु. ಕುದುರೆಯು ಒಂದು ಜಾತಿ.
**बोज़ना**, पु. = बूज़िना.
**बोज़ा**, पु. ಒಂದು ಬಗೆ ಹೆಂಡ.
**बोझ**, पु. ಭಾರ, ಹೊರೆ, ವಜನು.
**बोझना**, सक्रि. ಹೇರು, ಹೊರಿಸು.
**बोझल, बोझिल, बोझैल**, वि. ಭಾರವಾದ, ತೂಕವುಳ್ಳ; ಭಾರಿ, ದಿಣ್ಣ; ಹೊರೆಯಾದ.
**बोझा**, पु. ಭಾರ, ಹೊರೆ.
**बोझिया**, पु. ಭಾರ ಹೊರುವವ, ಹೊರೆಯಾಳು.
**बोट**, पु. ಮಿಡಿತೆ.
**बोटा**, पु. ಮರದ ದಿಮ್ಮಿ, ನಾಟ.
**बोटी**, स्त्री. ಮಾಂಸದ ತುಂಡು, ಕಂತೆ, ಬಾಡು.
**बोड़ना**, सक्रि. = डुबाना.
**बोड़ा**, पु. ಹೆಬ್ಬಾವು, ಅಜಗರ; ಒಂದು ಬಗೆ ಅವರೆಕಾಯಿ.
**बोड़ी**, स्त्री. ಕವಡೆ; ಕಾಸು, ಚಿಕ್ಕಾಸು; ಕಾಯಿ, ಬೀಜಕೋಶ, ಕಮಿ.
**बोत**, पु. ಕುದುರೆಯು ಒಂದು ಜಾತಿ
**बोतल**, स्त्री. ಸೀಸೆ, ಕುಪ್ಪಿ, ಬುದ್ದಲಿ, ಬಾಟಲಿ.
**बोताम**, पु. = बुताम.
**बोतू**, पु. ಆಡು, ಹೋತ.
**बोदली**, स्त्री. ಏಬ್ರಾಸಿ ಹೆಂಗಸು.
**बोदा**, वि. ಧೈರ್ಯವಿಲ್ಲದವ; ಬಲವಿಲ್ಲದ, ಪೆಡಸು; ತಿಳಿಗೇಡಿ; ಸೋಮಾರಿ.
**बोध**, पु. ಜ್ಞಾನ, ತಿಳಿವಳಿಕೆ; ಆಶ್ವಾಸನ.
**बोधना**, सक्रि. ಬೋಧಿಸು; ಪ್ರಸನ್ನಯಿಸು.
**बोना**, सक्रि. ಬೀಜ ಚೆಲ್ಲು, ಬೀಜಗಾಣಿಸು, ಬಿತ್ತು, ಬೀರು.
**बोनी**, स्त्री. ಬಿತ್ತನೆಯ ಕಾಲ; ಬಿತ್ತನೆ.

बोबा, पु. बोबी, स्त्री. ಮೊಲೆ, ಸ್ತನ, ಚೂಚುಕ; ಮನೆಯ ಮುಟ್ಟು, ಸಾಮಾನು, ಸರಂಜಾಮು.
बोय, स्त्री. ಗಂಧ, ವಾಸನೆ.
बोर, पु. ಚಿನ್ನ ಅಥವಾ ಬೆಳ್ಳಿಯ ಗುಂಡಿ, ಗುಬುಟು; ಮುಳುಗುವಿಕೆ, ನಿಮಜ್ಜನ. वि. ಆಳವಾದ.
बोरना, सक्रि. ಮುಳುಗಿಸು, ಅದ್ದು; ಬಣ್ಣದಲ್ಲಿ ಅದ್ದು, ಬಣ್ಣ ಕೊಡು.
बोरसी, स्त्री. ಅಗ್ಗಿಷ್ಟಿಕೆ, ಕುಂಪಟಿ.
बोरा, पु. ಗೋಣಿ ಚೀಲ, ಗೋಣಿ, ಕುಣಿಕಿಲು; ಮುಳುಗುವಿಕೆ, ಗೋತ.
बोरिया, पु. ಚಾಪೆ; ಹಾಸಿಗೆ. बोरिया बधना उठाना = ಗಂಟು ಮೂಟೆ ಕಟ್ಟಿಕೊಂಡು ಹೊರಡು.
बोरी, स्त्री. ಗೋಣಿ, ಗೋಣಿ ಚೀಲ.
बोरो, पु. ಕಾಮನ ಬಿಲ್ಲು; ಒಂದು ಬಗೆ ಅಕ್ಕಿ.
बोल, पु. ರಕ್ತಬೋಳ, ಗಂಧರಸ; ಮೂತ್ರ, ಉಚ್ಚೆ; ಮಾತು, ನುಡಿ; ವಚನ, ಕಥನ; ಗೀತ, ಹಾಡು; ಹಾಡಿನ ಚರಣ; ವಾದ್ಯಗಳ ಧ್ವನಿ; ಗೇಲಿ, ಕೊರಚಾಟ. बोलबाला = ಮೇಲುಗೈ, ಪ್ರಾಬಲ್ಯ; ಮಾನ್ಯತೆ, ಮನ್ನಣೆ; ವೃದ್ಧಿ, ಇಜಾಫೆ.
बोलचाल, स्त्री. ಮಾತುಕತೆ; ಆಡು ಮಾತು, ನುಡಿವಳಿ; ಸರಸ, ಚಕ್ಕಂದ.
बोलता, वि. ಮಾತಾಡುವವ, ವಾಚಾಲ. पु. ವಾಕ್‌ಶಕ್ತಿ; ಆತ್ಮ, ಜೀವ.
बोलनहारा, पु. ಆತ್ಮ.
बोलना, सक्रि. ಮಾತಾಡು, ಸಂಭಾಷಿಸು; ಹೇಳು, ಅನ್ನು; ಉಲಿಯು, ಕೀಚು ಕೀಚೆನ್ನು, ಕೂಗು. बोलना चालना = ಮಾತುಕತೆ ಆಡು.
बोलवाना, सक्रि. ಮಾತಾಡಿಸು, ನುಡಿಸು
बोलसर, पु. ಒಂದು ಜಾತಿ ಕುದುರೆ; ಬಕುಳ ವೃಕ್ಷ, ರಂಜ.
बोलाचाली, स्त्री. = बोलचाल.
बोली, स्त्री. ಧ್ವನಿ, ಶಬ್ದ; ವಾಣಿ, ವಚನ; ಮಾತು, ಭಾಷೆ; ಗೇಲಿ, ಪರಿಹಾಸ, ಲೇವಡಿ; ಹರಾಜಿ(ಲಿಲಾವಿ)ನಲ್ಲಿ ಇಂತಿಷ್ಟು ಬೆಲೆಗೆಂದು ಕೇಳುವಿಕೆ ಅಥವಾ ಹೇಳುವಿಕೆ, ಬೆಲೆ ಕೂಗುವಿಕೆ, ಚಡಸವಾಲು, ವಾರು. बोली ठोली = ಎಗತಾಳೆ, ಕೊರಚಾಟ. बोली बोलना = ಗೇಲಿ ಮಾಡು, ಪರಿಹಾಸ ಮಾಡು; ಬೆಲೆ ಕೂಗು, ವಾರು ಕರೆ; ಹರಾಜು ಹಾಕು, ಲಿಲಾವು ಮಾಡು.
बोवना, सक्रि. ಬೀಜ ಚೆಲ್ಲು, ಬಿತ್ತು.
बोवाना, सक्रि. = बोआना.
बोसा, पु. ಚುಂಬನ, ಮುತ್ತು, ಉಮ್ಮ.
बोसीदगी, स्त्री. ಕೊಳೆತುಹೋಗುವಿಕೆ, ಹಳಸುವಿಕೆ.
बोसीदा, वि. ಕೊಳೆತ, ಹಳಸಿದ.
बोस्तां, पु. ಹೂದೋಟ, ಪುಷ್ಪವಾಟಿಕೆ.
बोह, स्त्री. ಮುಳುಗುವಿಕೆ, ಗೋತ.
बोहनी, स्त्री. ದಿವಸದ ಮೊದಲನೆಯ ಮಾರಾಟ, ಬೋಣಿ, ಬೋಣಿಗೆ.
बोहरा, पु. ಹಣದ ಲೇವಾದೇವಿ ಮಾಡುವವನು, ಸರಾಫ.

**बोहारी**, स्त्री. = बुहारी.
**बौंड**, स्त्री. ಬಳ್ಳಿ, ಲತೆ, ಹಂಬು.
**बौंडना**, अक्रि. ಬಳ್ಳಿವರಿ, ಹಂಬು.
**बौंडियाना**, सक्रि. ಹೊಸೆ, ತಿರಿಚು. अक्रि. ವಕ್ರವಕ್ರವಾಗಿ ಓಡು, ಡೊಂಕುಡೊಂಕಾಗಿ ಹರಿದುಹೋಗು.
**बौंडी**, स्त्री. ಮಿಡಿಗಾಯಿ, ಪೂಮಿಡಿ, ಹೀಚು; ಬೀಜಕೋಶ, ಶಮಿ; ಬಿಡಿಗಾಸು, ಚಿಕ್ಕಾಸು, ದಮ್ಮಡಿ.
**बौंदा**, पु. ಧಾನ್ಯದ ಹೊಡೆ, ತೆನೆ.
**बौआना**, अक्रि. ಹುಚ್ಚುಹುಚ್ಚಾಗಿ ಹರಟು, ಜರಚು, ಕನವರಿಸು.
**बौखल**, वि. ಹುಚ್ಚ; ಮಂಕ, ಮರುಳ.
**बौखलाना**, अक्रि. ಭ್ರಾಂತನಾಗು; ಮರುಳಾಗು.
**बौछाड़**, **बौछार**, स्त्री. ಗಾಳಿಯ ಹೊಡೆತಕ್ಕೆ ಒಳಗೆ ಬೀಳುವ ಮಳೆ, ಇರಿಚಲು; ಮಳೆಯಂತೆ ಸುರಿಯುವಿಕೆ; ಗೇಲಿ, ಪರಿಹಾಸ.
**बौड़हा**, वि. ಹುಚ್ಚ, ಮರುಳ, ಬೆಪ್ಪ.
**बौना**, पु. ಕುಳ್ಳ, ಗಿಡ್ಡ, ಗುಜ್ಜಾರಿ.
**बौनी**, स्त्री. ಕುಳ್ಳಿ, ಗಿಡ್ಡಿ.
**बौर**, पु. ಮಾವಿನ ಹೀಚು; ಹೂ; ಬಳ್ಳಿ.
**बौरना**, अक्रि. ಹೀಚು ಬಿಡು.
**बौरहा**, **बौरा**, वि. ಹುಚ್ಚ, ಮರುಳ.
**बौराना**, अक्रि. ಹುಚ್ಚು ಹಿಡಿ, ಮಂಕಾಗು; ಹೂ ಬಿಡು; ಅರಳು. सक्रि. ಹುಚ್ಚು ಹಿಡಿಸು.
**बौहड़ना**, अक्रि. ತಿರುಗಿ ಬರು, ಹಿಂತಿರುಗು.
**बौहित**, पु. ಹಡಗು, ಜಹಜು.
**ब्याज**, पु. ಬಡ್ಡಿ, ಚುಂಗಡಿ.
**ब्याजख़ोर**, पु. ಬಡ್ಡಿಗೆ ಹಣ ಕೊಡುವವ, ಕುಸೀದಗಾರ.
**ब्याजू**, वि. ಬಡ್ಡಿಗೆ ಹಾಕಿದ(ಹಣ); ಅಸಲು.
**ब्यान**, पु. ಮರಿ ಹಾಕುವಿಕೆ, ಈತ.
**ब्याना**, सक्रि. ಮರಿ ಹಾಕು, ಈನು. पु. ಸಂಚಕಾರ, ಚಂಡವಾಳ.
**ब्यारी**, **ब्यालू**, स्त्री. ರಾತ್ರಿಯೂಟ.
**ब्याह**, पु. ವಿವಾಹ, ಲಗ್ನ, ಮದುವೆ.
**ब्याहता**, **ब्याहा**, वि. ಮದುವೆ ಮಾಡಿಕೊಂಡ, ಮದುವೆಯಾದ.
**ब्याहना**, सक्रि. ಮದುವೆಯಾಗು; ಮದುವೆ ಮಾಡಿಕೊಳ್ಳು; ಮದುವೆ ಮಾಡಿಸು.
**ब्योंचना**, अक्रि. ನರ ಹೊರಳು, ಉಳುಕು ಹಿಡಿ.
**ब्योंडा**, पु. = पटैला.
**ब्योंत**, स्त्री. ತರಹ, ರೀತಿ, ಪರಿಮ; ಆಕೃತಿ; ಅಂಗಿ ಹೊಲಿಯಲು ಬಟ್ಟೆಯನ್ನು ಕತ್ತರಿಸುವಿಕೆ.
**ब्योंतना**, सक्रि. ಬಟ್ಟೆಯನ್ನು ಕತ್ತರಿಸು.
**ब्योरन**, स्त्री. ತಲೆ ಬಾಚುವಿಕೆ; ಬಾಚಿಕೊಳ್ಳುವ ತರಹ.
**ब्योरना**, सक्रि. ಬಾಚು, ಹಿಕ್ಕು.
**ब्योरा**, पु. ವಿವರ, ಮಾಹಿತಿ, ತಪಶೀಲು; ಪರುಟವಣೆ, ವೃತ್ತಾಂತ; ವ್ಯತ್ಯಾಸ; ಭೇದ.
**ब्योरेवार**, क्रिवि. ವಿವರವಾಗಿ; ಸ್ಪಷ್ಟ

...ागी.

...ोहर, पु. ಬಡ್ಡಿಗೆ ಹಣ ಕೊಡುವಿಕೆ, ...ೇವಾದೇವಿ.

...त, पु. ಮಥುರಾ ಪಟ್ಟಣದ ಸುತ್ತಲೂ ...ರುವ ದೇಶ; ಈ ದೇಶದ ಭಾಷೆ, ವ್ರಜ ಭಾಷೆ.

**व्रत**, पु. ವ್ರತ, ನೋಂಪಿ.

**व्राह्मण**, पु. ಬ್ರಾಹ್ಮಣ, ಹಾರವ.

**व्राह्मणी**, स्त्री. ಬ್ರಾಹ್ಮಣಸ್ತ್ರೀ, ಹಾರವಗಿತ್ತಿ.

## भ

...ग, पु. ಒಡೆಯುವಿಕೆ, ಭಂಗ; ಬಂಗಿ ...ೊಪ್ಪು, ಡೊಂಕು. वि. ಒಡೆದ, ...ಂಗಪಡಿಸಿದ.

...गड़, वि. ಬಂಗಿ ಸೇದುವವ.

...ना, अक्रि. ಭಂಗವಾಗು, ಮುರಿ. ...क्रि. ಭಂಗಮಾಡು, ಮುರಿಸು.

...रा, पु. ಒಂದು ಬಗೆ ಬಟ್ಟೆ.

...ार, पु. ಹೊಂಡ, ಕುಣಿ, ಹಳ್ಳ; ಕಸಕಡ್ಡಿ.

...गन, **भंगिन**, **भंगिनी**, स्त्री. **भंगी** ...का स्त्री. रूप.

...गी, पु. ಬಂಗಿ ಸೇದುವವ; ಬೀದಿ ...ಳಿಯುವವ, ತೋಟಿ, ಝಾಡಮಾಲಿ, ...ಂಗಿ, ಜಲಗಾರ, ಒಡ್ಡ. स्त्री. ವಿಭ...ಜನೆ, ವಿಂಗಡಿಸುವಿಕೆ; ಮೋಸ; ಭಾವ...ಭಂಗಿ, ಅಂಗವಿನ್ಯಾಸ.

...गेड़ी, **भंगेरा**, **भंगेरी**, पु. ಬಂಗಿ ...ಸೇದುವವ ಅಥವಾ ಮಾರುವವ.

...जना, अक्रि. ಒಡೆ; ಮುರಿ, ಚಿಲ್ಲರೆ ...ಯಾಗು; ಮುರಿಸಲ್ಪಡು; ತಿರುಗು.

...जाई, स्त्री. ಮಡಿಸುವಿಕೆ; ರೂಪಾಯಿಗೆ ...ಚಿಲ್ಲರೆ ಮುರಿಸುವಿಕೆ; ಮಡಿಸುವುದಕ್ಕೆ ...ಕೂಲಿ; ರೂಪಾಯಿ ಮುರಿಸಲು ವಟ್ಟ.

**भंजाना**, सक्रि. ಒಡೆ, ಮುರಿ; ಚಿಲ್ಲರೆ ಮಾಡು, ಮುರಿಸು; ತಿರುಗಿಸು, ಮಡಿಸು

**भंटा**, पु. ಬದನೆಕಾಯಿ.

**भंड**, पु. ವಿದೂಷಕ, ಸಬ್ಬವಕಾರ.

**भंडताल**, **भंडतिल्ला**, पु. ಚಪ್ಪಾಳೆ ತಟ್ಟುತ್ತಾ ಮಾಡುವ ನರ್ತನ.

**भंडना**, सक्रि. ಒಡೆ, ಮುರಿ; ಕೆಡಿಸು.

**भंडफोड़**, पु. = **भंडाफोड़**.

**भंडरिया**, पु. ಹಸ್ತ ಸಾಮುದ್ರಿಕೆ ಹೇಳುವವ. स्त्री. ಗೋಡೆಯಲ್ಲಿನ ಅಲಮಾರು ಅಥವಾ ಗೂಡು. वि. ಕಪಟಿ, ಠಕ್ಕ; ದುರುಳ.

**भंडसार**, **भंडसाल**, स्त्री. ಹಗೇವು, ಕಣಜ; ಅಂಬಾರಖಾನೆ, ಉಗ್ರಾಣ.

**भंडा**, पु. ಭಾಂಡ, ಮಡಕೆ, ಗಡಿಗೆ, ಗುಡಾಣ; ಗುಟ್ಟು. **भंडा फूटना** = ಗುಟ್ಟು ರಟ್ಟಾಗು, ರಹಸ್ಯಬಯಲಾಗು.

**भंडाफोड़**, पु. ಗುಟ್ಟು ರಟ್ಟಾಗುವಿಕೆ, ರಹಸ್ಯವನ್ನು ಬಯಲಿಗೆ ತರುವುದು.

**भंड़ाना**, सक्रि. ಉಪದ್ರವ ಮಾಡು, ಸತಾಯಿಸು.

**भंडार**, पु. ಭಂಡಾರ, ಕೋಠಿ.

**भंडारा**, पु. ಸಂತರ್ಪಣೆ, ಸಮಾರಾಧನೆ.

**भंडारी**, पु. ಭಂಡಾರಿ, ಉಗ್ರಾಣಿಕ.

**भंडेरिया, भंडेला**, पु. ಹಾಸ್ಯಗಾರ, ವಿದೂಷಕ, ವಿಕಟಕವಿ, ಸಬ್ಬವಕಾರ.

**भंडेलन**, स्त्री. भंडेला का स्त्री. रूप.

**भंडैती**, स्त्री. ವಿಕಟವಿನೋದ, ಸಬ್ಬವ, ಪರಿಹಾಸ.

**भंडोआ**, पु. ಅಶ್ಲೀಲಗೀತ, ಬಂಡು ಪದ, ಜಾವಳಿ.

**भंपाना**, सक्रि. भांपना का प्रे. रूप.

**भंभाना**, अक्रि. ಹಸುವಿನಂತೆ ಕೂಗು.

**भंभीरी**, स्त्री. ಪಾತರಗಿತ್ತಿ ಹುಳು, ಪತಂಗದ ಹುಳು, ಬಣ್ಣದ ಚಿಟ್ಟೆ.

**भंभोरना**, सक्रि. ಕಡಿ, ಕಚ್ಚು.

**भंवर**, पु. ಭ್ರಮರ, ತುಂಬಿ; ತಿರುಗಣಿ ಮಡು, ಜಲಾವರ್ತ, ಸುಳಿ.

**भंवरकली**, स्त्री. ತಿರುಗಣಿ, ತಿರುಪು; ತಿರುಪು ಹೂ; ಕುತ್ತಿಗೆ ಪಟ್ಟಿ; ನೇಣು, ಕೊರಳ ಹುರಿ.

**भंवरजाल**, पु. ಸಂಸಾರ ಪಾಶ; ತಾಪ ತ್ರಯ; ಫಜೀತಿ.

**भंवरभीख**, स्त्री. ಮಾಧುರಿಕ.

**भंवरी**, स्त्री. ಜಲಾವರ್ತ, ಸುಳಿ; ಕೂದಲಿನ ಸುಳಿ; ಸುತ್ತುವಿಕೆ, ಸುಳಿದಾಟ; ಪ್ರದಕ್ಷಿಣೆ, ಸಪ್ತಪದಿ; ಬೀದಿ ತಿರುಗಿ ಮಾರಾಟ ಮಾಡುವಿಕೆ.

**भंसना**, अक्रि. ನೀರಿನಲ್ಲಿ ಬೀಳು.

**भंसार**, पु. ಅಗ್ಗಿಷ್ಟಿಗೆ.

**भइया**, पु. ಸಹೋದರ, ಸೋದರ.

**भई**, क्रि. होना का भूत. रूप.

**भकसा**, वि. ಒಗರಾದ, ಕಟು.

**भकसी**, स्त्री. ನೆಲಮಾಳಿಗೆಯಲ್ಲಿರುವ ಸೆರೆಮನೆ.

**भकाऊं**, पु. ಬೂಚಿ, ಗೊಗ್ಗಯ್ಯ, ಗುಮ್ಮ.

**भकुआ**, वि. ದಡ್ಡ, ಮೂರ್ಖ, ಪೆಚ್ಚು.

**भकुआना**, अक्रि. ಪೆಚ್ಚು ಬೀಳು, ಮಂಕಾಗು. सक्रि. ಪೆಚ್ಚು ಬೀಳಿಸು.

**भकोसना**, सक्रि. ಮುಕ್ಕಿ ತಿನ್ನು, ಗಿಡಿ.

**भक्त**, पु. ಉಪಾಸನೆ ಮಾಡುವವ; ಭಕ್ತ; ಸಾಧು.

**भक्ति**, स्त्री. ಭಕ್ತಿ, ಶ್ರದ್ಧೆ.

**भखना**, सक्रि. ಭಕ್ಷಿಸು, ತಿನ್ನು.

**भगई**, स्त्री. ಕೌಪೀನ, ಲಂಗೋಟಿ.

**भगत**, पु. ಭಕ್ತ; ಜೋಗಿ, ದಾಸಯ್ಯ; ವೇಷ, ಸೋಗು.

**भगताई**, स्त्री. ಭಕ್ತಿ, ಶ್ರದ್ಧೆ.

**भगतिन**, स्त्री. ಭಕ್ತಳು; ಜೋಗಿತಿ; ನಾಯಕಸಾನಿ, ದೇವದಾಸಿ.

**भगतिया**, पु. ನಾಯಕಸಾನಿಯ ಜಾತಿಯವ; ನರ್ತನಗಾರ; ಮೇಳಗಾರ.

**भगदड़, भगदर**, स्त्री. ಪಲಾಯನ, ಓಟ; ಶತ್ರುಭಯದಿಂದ ಊರನ್ನು ಖಾಲಿಮಾಡಿ ಬೇರೆ ಸ್ಥಳಕ್ಕೆ ಓಡುವಿಕೆ, ಊರನ್ನು ಖಾಲಿ ಮಾಡುವಿಕೆ.

**भगना**, अक्रि. ಓಡು, ದೌಡು ಬಿಡು.

**भगल**, पु. ಮೋಸ; ಠಕ್ಕು; ಜಾಲ.

**भगली**, वि. ಠಕ್ಕಿನ; ಮೋಸದ; ಮೋಸಗಾರ; ಜಾಲಗಾರ.

**भगवां**, वि. ಕಾವಿ ಬಣ್ಣದ. पु. ಕಾವಿ ವಸ್ತ್ರ, ಕಾವಿ ಶಾಟಿ.

**भगलिया**, पु. ಠಕ್ಕಿನವ, ಜಾಲಗಾರ.

भगाड़, पु. ಭಾವಿಯ ಇಳುಕಲು, ಭಾವಿಯ ಒಳದು.
भगाना, सक्रि. ಓಡಿಸು; ಅಟ್ಟು, ತರುಬು, ತೊಲಗಿಸು.
भगैत, भगोड़ा, भगौहाँ, भग्गू, वि. ಓಡುವವ, ಓಡುಕುಳಿ; ಪಲಾಯನ ಮಾಡುವವ, ಪಲಾಯಿತ.
भगोना, पु. ದೊಡ್ಡ ಡಬರಿ; ಅರಕಂಚಿಟ್ಟಿ
भगोनी, स्त्री. ಸಣ್ಣ ಡಬರಿ.
भग्गा, वि. ಓಡುವವ, ಓಡುಕುಳಿ; ಪಲಾಯಿತ; ಅಳ್ಳೆದೆಯವ, ಪುಕ್ಕ.
भग्नावशेष, पु. ಹಾಳುಕೊಂಪೆ, ಹಾಳು.
भचक, स्त्री. ಕುಂಟುತನ, ಕುಂಟು. वि. ಬೆಚ್ಚಿಬಿದ್ದ, ಬೆರಗಾದ, ಚಕಿತನಾದ, ಸ್ತಬ್ಧ.
भचकना, अक्रि. ಕುಂಟುತ್ತ ನಡೆ, ಕುಂಟು; ಬೆಚ್ಚಿ ಬೀಳು, ಬೆರಗಾಗು, ಚಕಿತನಾಗು, ದಿಗಿಲುಭುಗಿಲಾಗು.
भजन, पु. ಭಜನೆ, ಸ್ತೋತ್ರ.
भजना, सक्रि. ಭಜಿಸು, ಸ್ತುತಿಸು; ಜಪಿಸು. अक्रि. ಓಡಿಹೋಗು; ತಲಪು
भजनीक, वि. ಭಜನೆ ಮಾಡುವವ, ಭಜಿಸುವವ.
भजाना, सक्रि. ಓಡಿಸು, ಅಟ್ಟು. अक्रि. ಓಡು.
भजियाउर, स्त्री. ಒಂದು ಕಲಸನ್ನ.
भट, पु. ಯೋಧ, ಭಟ. स्त्री. ಕುಲಿಮೆ; ಭಟ್ಟಿ; ಆವಿಗೆ.
भटई, स्त्री. ವಂದಿ ಮಾಗಧರ ವೃತ್ತಿ, ಹೊಗಳುಭಟ್ಟನ ಕೆಲಸ; ಹೊಗಳಿಕೆ, ಕೈವಾರ.
भटकटाई, भटकटैया, स्त्री. ಒಂದು ಮುಳ್ಳು ಗಿಡ.
भटकना, अक्रि. ಅಲೆ, ಅಲೆದಾಡು; ತಿರಿ, ತೊಳಲು; ದಾರಿ ತಪ್ಪು, ಹೊಲಬು ತಪ್ಪು.
भटका, वि. ದಾರಿ ತಪ್ಪಿದ.
भटकाना, सक्रि. ಅಲೆದಾಡಿಸು; ದಾರಿ ತಪ್ಪಿಸು; ಹೊಲಬು ತಪ್ಪಿಸು.
भटकावा, पु. ಅಲೆದಾಟ, ಅಲೆತ.
भटकैया, पु. ಅಲೆಯುವವ, ತಿರುಕ.
भटनास, स्त्री. ಒಂದು ತರಕಾರಿ.
भटभेरा, पु. ಜಟಾಪಟಿ, ಜಗಳ; ಢಿಕ್ಕಿ; ಸಮಾಗಮ.
भटा, पु. ಬದನೇಕಾಯಿ.
भट्ट, स्त्री. ಮಹಿಳೆ, ಅಮ್ಮಾವರು.
भट्ठा, पु. ಭಟ್ಟಿ; ಆವಿಗೆ; ಇಟ್ಟಿಗೆಗೂಡು.
भट्ठी, स्त्री. ಒಲೆ, ಕುಲಿಮೆ; ಭಟ್ಟಿ; ಭಟ್ಟಿ ಇಳಿಸುವ ಸ್ಥಳ, ಭಟ್ಟಿ ಕಾರಖಾನೆ.
भठियाना, अक्रि. ನೀರು ಕಡಮೆಯಾಗು, ನೀರು ಇಳಿದುಹೋಗು; ಇಂಗು.
भठियार-खाना, पु. ಪ್ರಯಾಣಿಕರಿಗೆ ಊಟ ಹಾಕುವ ಸ್ಥಳ, ಭೋಜನಶಾಲೆ, ಖಾನಾವಳಿ.
भठियारा, पु. ಛತ್ರದವ, ಭೋಜನಶಾಲೆಯವ; ಅಡಿಗೆಯವ.
भठियारिन, भठियारी, स्त्री. ಅಡಿಗೆಯವಳು, ಬೋನಗಿತ್ತಿ, ಅಡುಗೂಲಜ್ಜಿ
भठियाला, स्त्री. ಸೆಳೆತ, ಹೊಯಿಲು.
भडंबा, पु. ಆಡಂಬರ.

**भड़क**, स्त्री. ಹೊಳಪು, ಕಾಂತಿ; ಠೀವಿ, ಆಡಂಬರ; ಸೊಬಗು; ಅಂಜಿಕೆ, ಭಿಡೆ; ಉರಿ, ಜ್ವಾಲೆ.

**भड़कदार**, वि. ಆಡಂಬರದ, ಠೀವಿಯ.

**भड़कना**, अक्रि. ಜ್ವಲಿಸು, ಹೊಳೆ; ಬೆಚ್ಚು, ಬೆದರು; ರೇಗು, ಕೆರಳು.

**भड़काना**, सक्रि. ಉರಿಸು; ಹುರಿದುಂಬಿಸು; ಬೆದರಿಸು; ರೇಗಿಸು.

**भड़की**, स्त्री. ಬೆದರಿಕೆ, ಅಂಜಿಕೆ.

**भड़कीला**, वि. ಹೊಳೆಯುವ, ಥಳಥಳಿಸುವ; ಮೆರೆಯುವ, ಠೀವಿಯ.

**भड़कैल**, वि. ಅಂಜುವ, ಬೆಚ್ಚುವ; ಪಳಗಿಸದ, ವನ್ಯ.

**भड़भड़**, स्त्री. ಸಂದಣಿ, ಗದ್ದಲ.

**भड़भड़ाना**, अक्रि. ಗದ್ದಲಮಾಡು; ಛಟಛಟವೆನ್ನು; ಬಾತುಕೊ, ಉಬ್ಬು.

**भड़भड़ाहट**, स्त्री. ಬಾವು, ಬೀಗು.

**भड़भड़िया**, वि. ಗದ್ದಲ ಮಾಡುವವ; ಮಾತುಗಾರ; ನಿಷ್ಕಪಟ.

**भड़भांड**, पु. ಒಂದು ಮುಳ್ಳು ಗಿಡ.

**भड़भूंजन**, स्त्री. भड़भूंजा का स्त्री.रूप

**भड़भूंजा**, पु. ಕಾಳು ಹುರಿಯುವವ.

**भड़रिया**, पु. ಮಂತ್ರವಾದಿ.

**भड़ाका**, पु. ಸ್ಫೋಟನ, ಸಿಡಿತ.

**भड़ाभड़**, क्रिवि. ಛಟಛಟ ಶಬ್ದ ಮಾಡುತ್ತಾ.

**भड़िहा**, पु. ಕಳ್ಳ, ಚೋರ.

**भड़ुआ**, पु. ಲುಚ್ಚ, ಲಂಡ; ಭಡವ, ಕುಂಟಣಿಗ; ಹಿಮ್ಮೇಳದವ.

**भड़ैत**, वि. ಬಾಡಿಗೆದಾರ.

**भडेरिया, भड्डर, भड्डरी**, पु. ಹಸ್ತ ಸಾಮುದ್ರಿಕ ಹೇಳುವವ.

**भतार**, पु. ಭರ್ತ, ಗಂಡ, ಪತಿ.

**भतीजा**, पु. ಸಹೋದರನ ಮಗ.

**भतीजी**, स्त्री. ಸಹೋದರನ ಮಗಳು.

**भत्ता**, पु. ದಿನ ಭತ್ಯ, ಪಡಿ.

**भद, भदभद**, पु. ದಪದಪ ಶಬ್ದ.

**भदई**, स्त्री. ಭಾದ್ರಪದ ಮಾಸದಲ್ಲಿ ಕೊಯ್ಲಿಗೆ ಬರುವ ಬೆಳೆ.

**भदभदाना**, अक्रि. ಬಡಬಡ ಶಬ್ದ ಮಾಡು.

**भदभदाहट**, स्त्री. ಬಡಬಡ ಶಬ್ದ.

**भदाक, भदाका**, पु. ಬಡಬಡ ಶಬ್ದ, ಧಡಾಲೆನ್ನುವ ಶಬ್ದ.

**भदेसल, भदेसी**, वि. ಕುರೂಪಿ; ಕೊಬ್ಬಿದ.

**भद्दा**, वि. ಕುರೂಪ, ವಿಕಾರವಾದ; ಅಭಾಸವಾದ, ಅಂದಗೆಟ್ಟ; ಬೆಪ್ಪ.

**भनक**, स्त्री. ಗೊಣಗಾಟ; ಗುಜುಗುಜು ಮಾತು.

**भनभनाना**, अक्रि. ವಟಗುಟ್ಟು, ಗೊಣಗುಟ್ಟು; ಝೇಂಕರಿಸು, ಗುಯಿಗುಟ್ಟು.

**भनभनाहट**, स्त्री. ಝೇಂಕಾರ, ಗೊಣಗುಟ್ಟು.

**भपाड़ा**, पु. ಮೋಸ, ದಗ, ದಗಲು.

**भपारा**, पु. ಉಗಿ, ಹಬೆ, ಆವಿ.

**भपोला**, पु. ಗುಳ್ಳೆ, ಬೊಬ್ಬೆ.

**भबक**, स्त्री. ನಾತದ ಹೊಡೆತ; ಬೆಂಕಿಯ ಜ್ವಾಲೆ, ಉರಿ; ಸಿಡಿತ.

भड़कना, अक्रि. ಉರಿ; ಕುದಿ, ಉಕ್ಕು; ಬೆದರಿ, ಹೆಸಿ; ರೇಗು, ಕನಲು; (ಕುದುರೆ ಮುಂತಾದುವು) ಜೋರಿನಿಂದ ಓಡು.
भड़का, पु. ಬಕಯಂತ್ರ, ಭಟ್ಟಿ; ತಿದಿಯಿಂದ ಬೀಸುವ ಗಾಳಿ.
भड़काना, सक्रि. ಹೊತ್ತಿಸು, ಉರಿಸು; ರೇಗಿಸು; ಕುದುರೆಯನ್ನು ಓಡಿಸು.
भड़की, स्त्री. ಕೋತಿ ಅಥವಾ ಬಳ್ಳು ಬೆದರಿ ಕೋಪದಲ್ಲಿ ಮಾಡುವ ಶಬ್ದ; ಬೆದರಿಕೆ, ಗದರಿಸುವಿಕೆ. गीदड़ भबकी, बंदर भबकी = ಗೊಡ್ಡು ಬೆದರಿಕೆ.
भड़्डु, स्त्री ಸಂದಣಿ, ಗದ್ದಲ, ದೊಂದುಳಿ
भबकना, अक्रि. = भबकना.
भबकी, स्त्री. = भबकी.
भभर, स्त्री. ಭಯ, ದಿಗಿಲು, ಗಾಬರಿ.
भभरना, अक्रि. ಭಯಪಡು, ಅಂಜು.
भभाना, अक्रि. ಉಬ್ಬು; ಬೀಗು.
भभूका, पु. ಜ್ವಾಲೆ, ಉರಿ; ಸಿಡಿತ. वि. ಕಾದು ಕೆಂಪಗಾದ; ಹೊಳೆಯುವ
भभूत, स्त्री. ವಿಭೂತಿ, ಭಸ್ಮ.
भय, पु. ಭಯ, ಅಂಜಿಕೆ; ದಿಗಿಲು.
भयवाद, पु. ಬಂಧು ಬಳಗ.
भया, क्रि. होना का भूत रूप.
भयापा, पु. ಭ್ರಾತೃತ್ವ.
भयंकर, भयानक, भयावना, भयावह, वि. ಭಯಂಕರ, ಭೀಕರ, ಭಯ ಜನಕ; ಘೋರ; ಕರಾಳ.
भयाहू, स्त्री. ತಮ್ಮನ ಹೆಂಡತಿ, ನಾದಿನಿ.
भर, वि. ಪೂರ್ಣ, ಪೂರ್ತ; ಪೂರಾ, ತುಂಬು; ಇಡೀ, ಸಮಸ್ತ. क्रिवि. ಆದ ಮಟ್ಟಿಗೆ, ಆದಷ್ಟು. भर आना = ಭರ್ತಿಯಾಗು, ತುಂಬು. भर पाना = ಪೂರ್ತಿ ಹಣವನ್ನು ಪಡೆಕೊಳ್ಳು. भर पेट = ಹೊಟ್ಟೆ ತುಂಬ भर सक = ಶಕ್ಯವಿದ್ದಷ್ಟು, ಕೈಯಲ್ಲಾದಷ್ಟು, ಕೂಡಿದ ಮಟ್ಟಿಗೆ.
भरक, पु. ವೃಕ್ಷವಾಟಿಕೆ, ತೋಪು.
भरकम, वि. ಭಾರಿ; ಗುರುತರವಾದ; ಮಹತ್ವದ.
भरकाना, सक्रि. ಸುಣ್ಣವನ್ನು ನೀರಿನಲ್ಲಿ ಹಾಕಿ ಅರಳಿಸು.
भरण, पु. ಪೋಷಣೆ, ಆರೈಕೆ.
भरत, पु. ಒಂದು ಮಿಶ್ರ ಲೋಹ, ಕಾಂಸ್ಯ, ಕಂಚು; ಕಂಚುಗಾರ.
भरता, पु. ಬದನೆಕಾಯನ್ನು ಸೀಳಿ ಮಸಾಲೆ ತುಂಬಿ ಮಾಡಿದ ಪಲ್ಯ, ತಾಳದ; ಬಜ್ಜಿ, ಮೊಸರು ಬಜ್ಜಿ.
भरतार, पु. ಭರ್ತ, ಪತಿ, ಗಂಡ.
भरती, स्त्री. ಪೂರ್ತಿ; ತುಂಬುವಿಕೆ; ಭರ್ತಿ ಮಾಡುವಿಕೆ, ಭರ್ತಿ; ಸೈನ್ಯಕ್ಕೆ ಸೇರಿಸುವಿಕೆ.
भरदार, पु. ಹಡಗಿನಲ್ಲಿರುವ ಸರಕುಗಳನ್ನು ನೋಡಿಕೊಳ್ಳುವ ಗುಮಾಸ್ತ.
भरना, सक्रि. ಪೂರ್ತಿಮಾಡು; ತುಂಬು, ಭರ್ತಿಮಾಡು; ಕಾಗದ ಅಥವಾ ಪುಸ್ತಕದಲ್ಲಿ ಬರೆದಿಡು, ಭರಾಯಿಸು; ಹೇರು; ಮದ್ದು ತುಂಬು, ಬಾರು ಮಾಡು; ಪೂರೈಸು, ತೀರಿಸು; ಸೈರಿಸು, ಅನುಭವಿಸು; ನಿರ್ವಹಿಸು; ಗಾಯವನ್ನು ಮಾಯಿಸು. अक्रि. ಪೂರ್ತಿಯಾಗು;

ತೀರು; ತುಂಬು, ನೆರೆ; ಭರ್ತಿಯಾಗು; ಬಾರುಮಾಡಲ್ಪಡು; ಸಂದಾಯವಾಗು; ಗಾಯ ಮಾಯು; ಮೈ ತುಂಬು. पु. ತುಂಬುವಿಕೆ, ಭರ್ತಿ; ಸಾಲ, ಕಡ; ಲಂಚ.

**भरनी,** स्त्री. ನೆಯಿಗೆಯ ಹೊಕ್ಕು, ಅಡ್ಡೆಳೆ; ದಾರದ ಕಡ್ಡಿ, ಲಾಳಿ; ತುಂಬುವಿಕೆ.

**भरपाई,** क्रिवि. ಪೂರ್ತಿಯಾಗಿ ಹಣ ಪಡೆದುಕೊಳ್ಳುವಿಕೆ, ಸಂದಾಯ; ಸಂದಾಯದ ರಸೀತಿ, ಪಾವತಿ.

**भरपूर, भरपूरन,** वि. ಪರಿಪೂರ್ಣ, ಪೂರಿತ, ತುಂಬಿದ; ತುಂಬಿ ಸೂಸುವ. क्रिवि. ಪೂರ್ಣವಾಗಿ.

**भरभराना,** अक्रि. ರೋಮಾಂಚವಾಗು, ಗಾಬರಿಪಡು; ಉಬ್ಬು, ಬೀಗು.

**भरभरिया,** वि. ಗಾಬರಿ ಬೀಳುವವ.

**भरभरी,** स्त्री. ಬಾವು, ಬೀಗು.

**भरम,** पु. ಭ್ರಮೆ, ಭ್ರಾಂತಿ; ಸಂಶಯ; ಗುಟ್ಟು; ಮಾನ್ಯತೆ, ಪ್ರತಿಪತ್ತಿ.

**भरमना,** अक्रि. ಭ್ರಮಿಸು, ತೊಳಲು, ಅಲೆದಾಡು.

**भरमाना,** सक्रि. ಭ್ರಾಂತಗೊಳಿಸು, ತೊಳಲಿಸು; ಅಲೆದಾಡಿಸು. अक्रि. ಭ್ರಮಿಸು; ಡಂಗು ಬೀಳು.

**भरमार,** स्त्री. ಹೇರಳ, ದಂಡಿ, ವಿಪರೀತ, ಹೇರಾಸಿ ಮಾರಾಸಿ, ಪುಷ್ಕಲ.

**भरमीला,** वि. ಸಂದೇಹಾಸ್ಪದವಾದ; ಸಂಶಯದ.

**भरवाना,** सक्रि. भरना का प्रे. रूप.

**भरसक,** क्रिवि. ಕೈಲಾದ ಮಟ್ಟಿಗೆ, ಆದಷ್ಟು, ಯಥಾಶಕ್ತಿ.

**भरसाईं, भरसारी,** स्त्री. ಒಲೆ, ಭಟ್ಟಿ.

**भरा,** वि. ಪೂರಿತ; ತುಂಬಿದ; ನೆರೆದ. भरापूरा = ಅದೃಷ್ಟವಂತ; ಸಮೃದ್ಧ; ಸಂಪನ್ನ; ಸ್ವಸ್ಥ.

**भराई,** स्त्री. ತುಂಬುವಿಕೆ; ಭರ್ತಿ ಮಾಡುವಿಕೆ; ಭರಾವಣೆ; ತುಂಬುವುದಕ್ಕೆ ಅಥವಾ ಹೇರುವುದಕ್ಕೆ ಕೊಡುವ ಕೂಲಿ.

**भराना,** सक्रि. ತುಂಬಿಸು; ಭರ್ತಿ ಮಾಡು; (ಹಕ್ಕಿಯ ಮರಿಗೆ) ಗುಟುಕು ಕೊಡು.

**भराव,** पु. ತುಂಬುವಿಕೆ; ಭರ್ತಿ; ನೆರಿಕೆ.

**भरावट,** स्त्री. ತುಂಬುವಿಕೆ, ಭರ್ತಿ.

**भरी,** स्त्री. ಒಂದು ರೂಪಾಯಿನ ತೂಕ.

**भरुहाना,** अक्रि. ಗರ್ವಿಸು, ಹೆಮ್ಮೆಪಡು. सक्रि. ಮರುಳುಗೊಳಿಸು; ಪ್ರೇರಿಸು; ಚಿತಾವಣೆ ಮಾಡು.

**भरेठा,** पु. ಕಮಾನು ಕಟ್ಟಲು ಇಟ್ಟಿಗೆ ತುಂಬಿಸುವ ಚೌಕಟ್ಟು; ದಾರವಂದದ ಪಟ್ಟಿ, ಕಮಾನಿನ ಆಣೆಕಲ್ಲು.

**भरैया,** वि. ತುಂಬುವವ; ರಕ್ಷಿಸುವವ.

**भरोठा,** पु. ಭಾರ, ಹೊರೆ.

**भरोसा,** पु. ಆಶ್ರಯ, ಆಸರೆ; ಅವಲಂಬನ; ಭರವಸೆ; ನೆಚ್ಚಿಕೆ, ನಂಬಿಕೆ.

**भरौती,** स्त्री. ಬಿಡುಗಡೆ, ವಿಮುಕ್ತಿ.

**भर्रा,** पु. ಭಯ, ಗಾಬರಿ, ದಿಗಿಲು.

**भर्राटा,** पु. ಭರಭರ ಶಬ್ದ; ಗಡಿಬಿಡಿ.

**भर्राना,** अक्रि. ಭರಭರ ಶಬ್ದವಾಗು.

**भल,** वि. ಒಳ್ಳೆಯ, ಶುಭ.

**भलका,** पु. ಮುಂಜಾನೆ, ನಸುಕು.

भलमनसत, भलमनसाहत, भलमनसी, स्त्री. ಸೌಜನ್ಯ; ಒಳ್ಳೆತನ; ಸಜ್ಜನತೆ; ದಾಕ್ಷಿಣ್ಯ.

भलमानस, भलमानुस, पु. ಗೌರವಸ್ಥ, ಸದ್ಗೃಹಸ್ಥ.

भला, वि. ಒಳ್ಳೆಯ; ಮೇಲುತರದ, ಉತ್ತಮ; ಶುಭ; ದಯಾಲು. अव्य. ಒಳ್ಳೆಯದು; ಭಲಾ, ಸೈ. पु. ಒಳ್ಳೆಯದು, ಹಿತ. भला चंगा = ಒಳ್ಳೆಯ ಸ್ಥಿತಿಯ; ಸ್ವಸ್ಥವಾದ. भला बुरा = ಸಾಧಕ ಬಾಧಕ, ಹಿತಾಹಿತ. भला बुरा कहना = ಬೈಯು, ಅನ್ನು. भला मानस = ಶೀಲವಂತ, ಸದ್ಗೃಹಸ್ಥ, ಕುಲೀನ.

भलाई, स्त्री. ಒಳ್ಳೆಯತನ; ಒಳ್ಳೆಯದು, ಒಳ್ಳಿತು; ಕ್ಷೇಮ; ಹಿತ.

भले, क्रिवि. ಚೆನ್ನಾಗಿ; ಪೂರ್ಣವಾಗಿ; ಉತ್ತಮವಾಗಿ. अव्य. ಭಲಾ, ಭಳಿರೆ, ಶಹಬಾ !

भलुआ, पु. ಗಂಡುಗೊಡಲಿ, ಪರಶು.

भवन, पु. ಸೌಧ, ಭವನ; ಮಂದಿರ.

भवां, स्त्री. ಸುತ್ತು, ಸುತ್ತಾಟ.

भवांना, सक्रि. ಸುತ್ತಿಸು, ತಿರುಗಿಸು.

भवितव्य, पु. ಕರ್ಮಗತಿ, ವಿಧಿ.

भवितव्यता, स्त्री. ಭವಿಷ್ಯ, ಆಗಾಮಿ; ವಿಧಿ, ಅದೃಷ್ಟ.

भसकना, अक्रि. ಬೀಳು; ಉದುರು; ಹಿಚಿಗಟ್ಟಿ ತಿನ್ನು, ಗಿಡಿ, ಮುಕ್ಕು.

भसक्कड़, वि. ತಿಂಡಿಬಾಕ, ಹೊಟ್ಟೆಬಾಕ.

भसना, अक्रि. ಮುಳುಗಾಡು, ಈಜು.

भसभसा, वि. ಸಡಿಲಾದ, ಡೀಲಾದ; ಬಲವಿಲ್ಲದ, ನಿತ್ರಾಣ; ಮೆದುವಾದ, ಮೃದು.

भसम, पु. ಭಸ್ಮ, ಬೂದಿ.

भसमा, पु. ನರೆಗೂದಲನ್ನು ಕಪ್ಪಗೆ ಮಾಡುವ ಮದ್ದು, ಕೇಶಕಲ್ಪ.

भसान, पु. ಗಣಪತಿಯ ವಿಗ್ರಹ ಮೊದಲಾದುವನ್ನು ಹೊಳೆಯ ನೀರಿನಲ್ಲಿ ತೇಲಿಸಿಬಿಡುವಿಕೆ.

भसाना, सक्रि. ಗಣಪತಿಯ ವಿಗ್ರಹ ಮೊದಲಾದುವನ್ನು ಹೊಳೆಯಲ್ಲಿ ತೇಲಿಸಿ ಬಿಡು, ತೇಲಾಡಿಸು; ಈಜಾಡಿಸು.

भसींड, स्त्री. ತಾವರೆಯ ಬೇರು; ತಾವರೆಯ ದಂಟು, ಮೃಣಾಲ.

भसुर, पु. ಗಂಡನ ಅಣ್ಣ, ಮೈದುನ, ಭಾವ.

भस्म, पु. ಬೂದಿ, ಭಸ್ಮ.

भहराना, अक्रि. ಓಲಾಡು; ನಡುಗು; ತೂರಾಡು, ಮುರಿದು ಬೀಳು.

भांग, स्त्री. ಬಂಗಿಸೊಪ್ಪು, ಬಂಗಿ.

भांज, स्त्री. ಮಡಿಸುವಿಕೆ, ಮಡಿಪು; ನುಲಿಚುವಿಕೆ; ಚಿಲ್ಲರೆ ಮುರಿಸುವುದಕ್ಕೆ ಕೊಡುವ ವಟ್ಟ.

भांजना, सक्रि. ಹೊಸೆ, ನುಲಿಚು; ಮುರಿಗೆ ತಿರುವು, ತಿರುಗಿಸು; ಕಡೆಚಲು ಹಿಡಿ; ಮಡಿಸು; ಚಿಲ್ಲರೆ ಮುರಿಸು.

भांजी, स्त्री. ಚಾಡಿ, ದೂರು, ಕೊಂಡೆಯ; ಅಡ್ಡಿ, ತಡೆ.

भांजीख़ोर, वि. ಚಾಡಿಖೋರ, ಪಿಶುನ.

भांटा, पु. ಬದನೆಯಕಾಯಿ.

भांड, पु. ವಿದೂಷಕ, ಸಬ್ಬವಕಾರ,

ಕೋಡಂಗಿ; ಮಡಕೆ, ಗಡಿಗೆ, ಭಾಂಡ.

**भांडना,** अक्रि. ಅಲೆದಾಡು, ತಿರಿ. सक्रि. ದೂರು, ದೂಷಿಸು, ಹಳಿ.

**भांडा,** पु. ಪಾತ್ರೆ, ಭಾಂಡೆ. भांडे भरना = ಪಶ್ಚಾತ್ತಾಪ ಪಡು.

**भांडार,** पु. ಭಂಡಾರ, ಕೋಠಿ; ಖಜಾನೆ.

**भांडिन,** स्त्री. ನಟಿ, ಪಾತರಗಿತ್ತಿ; ಹಾಸ್ಯಗಾತಿ.

**भांडैती,** स्त्री. ವೇಷ, ನಟನೆ; ನಕಲಿ.

**भांत, भांति,** स्त्री. ರೀತಿ, ತರಹ; ವಿಧ, ಪರಿ, ತೆರ; ಮಾದರಿ. भांति भांति = ವಿಧವಿಧ, ಪರಿಪರಿ, ವಿವಿಧ.

**भांपना,** सक्रि. ತಿಳಿದುಕೊಳ್ಳು, ಅರಿತುಕೊಳ್ಳು; ಊಹಿಸು.

**भांयँ भांयँ,** पु. ಶೂನ್ಯವಾಗಿರುವಿಕೆ, ಬಿವರ್ ಎನ್ನುವಿಕೆ, ಬಿಕೋ ಎನ್ನುವಿಕೆ

**भांवना,** सक्रि. ಕೆತ್ತು; ಕಡೆಚಲು ಹಿಡಿ; ರೂಪುಗೊಳಿಸು.

**भांवर, भांवरी,** स्त्री. ಪರ್ಯಟನೆ; ಪ್ರದಕ್ಷಿಣೆ; ಸುತ್ತಾಟ; ಪರಿಚಲನೆ.

**भाई,** पु. ಸಹೋದರ, ಸೋದರ. भाई दूज = ಕಾರ್ತಿಕ ಶುಕ್ಲ ದ್ವಿತೀಯೆ.

**भाईचारा,** पु. **भाईबंदी,** स्त्री. ಸೋದರಭಾವ, ಭ್ರಾತೃಭಾವ, ಬಾಂಧವ್ಯ.

**भाईबंद,** पु. ಸೋದರರು; ನೆಂಟರು; ಬಂಧು ಬಳಗ.

**भाकसी,** स्त्री. ಆವಿಗೆ, ಕುಲಿಮೆ.

**भाखना,** सक्रि. ಹೇಳು, ಮಾತಾಡು; ಕರೆ

**भाखा,** स्त्री. ಭಾಷೆ; ಹಿಂದೀ ಭಾಷೆ.

**भाग,** पु. ಭಾಗ, ಪಾಲು, ಹಿಸ್ಸೆ; ವಿಭಾಗ; ಭಾಗಾಕಾರ; ವಿಧಿ; ಭಾಗ್ಯ, ಅದೃಷ್ಟ. भाग में आना = ಪಾಲಿಗೆ ಬೀಳು. भाग जागना = ಪುಣ್ಯೋದಯವಾಗು; ಅದೃಷ್ಟ ಖುಲಾಯಿಸು.

**भागड़,** स्त्री. ಓಡಿಹೋಗುವಿಕೆ; ವಲಸೆ ಹೋಗುವಿಕೆ; ಪಲಾಯನ.

**भागना,** अक्रि. ಓಡಿಹೋಗು; ಪಲಾಯನ ಮಾಡು; ತಪ್ಪಿಸಿಕೊಳ್ಳು.

**भागव,** पु. ವೈಶ್ಯರ ಒಂದು ಒಳಜಾತಿ.

**भागवान,** वि. ಭಾಗ್ಯವಾನ್, ಅದೃಷ್ಟವಂತ, ಪುಣ್ಯವಂತ; ಹಣವಂತ.

**भागवानी,** स्त्री. ಭಾಗ್ಯ, ಅದೃಷ್ಟ.

**भागसी,** स्त्री. ಕಾರಾಗೃಹ, ಸೆರೆಮನೆ.

**भागाभाग,** पु. ಓಟ, ದೌಡು.

**भागा,** क्रिवि. ಓಡುತ್ತಾ. भागा भागा = ಓಡೋಡುತ್ತಾ. भागा ले जाना ಜೊತೆಗೆ ಓಡಿಸಿಕೊಂಡು ಹೋಗು; ಪರಸ್ತ್ರೀಯೊಡನೆ ಪಲಾಯನ ಮಾಡು.

**भागी,** वि. ಭಾಗಸ್ಥ, ಪಾಲುಗಾರ; ಭಾಗ್ಯವಂತ.

**भागू,** वि. ಓಡಿಹೋದವ; ಓಡುಕುಳಿ.

**भाग्य,** पु. ಭಾಗ್ಯ, ಅದೃಷ್ಟ.

**भाजना,** अक्रि. ಓಡು, ಪಲಾಯನ ಮಾಡು.

**भाजी,** स्त्री. ಕಾಯಿಪಲ್ಯ, ಹಸುರುವಾಣಿ, ತರಕಾರಿ, ಸೊಪ್ಪು; ಪಲ್ಯ; ಹಬ್ಬ ಹರಿದಿನಗಳಲ್ಲಿ ಇಷ್ಟಮಿತ್ರರಿಗೆ ಹಂಚುವ ತಿಂಡಿ ಮೊದಲಾದುವು.

**भाट,** पु. ಚಾರಣ; ಸ್ತುತಿಪಾಠಕ; ಹೊಗಳು ಭಟ್ಟ.

भाटन, भाटिन, स्त्री. भाट का स्त्री. रूप

भाटा, पु. ಸೆಳೆತ, ಪೊಯಿಲು; ಇಳಿತ; ಸಮುದ್ರದ ಇಳಿತ, ಇಳಿಗೆ.

भाड़, पु. ಹುರಿಯುವ ಒಲೆ, ಭಟ್ಟಿ; ಆವಿಗೆ. भाड़ में जाना = ಮಣ್ಣು ಗೂಡು, ಹಾಳಾಗು.

भाड़ा, पु. ಬಾಡಿಗೆ, ನೋರು, ಹಾಸಲು.

भाड़ैती, पु. ಬಾಡಿಗೆದಾರ.

भात, पु. ಅನ್ನ; ಮದುವೆಯಲ್ಲಿ ಅನ್ನ ಉಣ್ಣು ಓದಿಸಿಕೊಡುವ ಒಂದು ಶಾಸ್ತ್ರ, ಅನ್ನಶಾಸ್ತ್ರ.

भाथा, पु. ಬತ್ತಳಿಕೆ; ತಿದಿ, ತಿತ್ತಿ.

भाथी, स्त्री. ತಿದಿ, ತಿತ್ತಿ.

भादों, पु. ಭಾದ್ರಪದ ಮಾಸ.

भान, पु. ಭಾವನೆ, ಭಾಸ; ತೋಚುವಿಕೆ; ಜ್ಞಾನ. भान होना = ಭಾಸವಾಗು; ಕಂಡುಬರು, ತೋರು.

भानजा, पु. ಸೋದರಿಯ ಮಗ, ಸೋದರಳಿಯ.

भानजी, स्त्री. ಸೋದರಿಯ ಮಗಳು, ಸೋದರ ಸೊಸೆ.

भानना, सक्रि. ಒಡೆ; ಮುರಿ; ತಿಳಿ.

भानमता, पु. ಗಾರಡಿಗಾರ, ಡೊಂಬರವ

भानमती, स्त्री. ನಟಿ; ಗಾರಡಿಗಾತಿ, ಡೊಂಬರಗಿತ್ತಿ.

भाना, अक्रि. ಸರಿದೋರು; ಒಪ್ಪು; ಸರಿಬೀಳು; ಪಸಂದಾಗು सक्रि. ಹೊಳಪಿಸು, ಬೆಳಗಿಸು.

भाप, भाफ, स्त्री. ಬಾಷ್ಪ, ಹಬೆ, ಆವಿ, ಉಗಿ.

भाभी, स्त्री. ಅಣ್ಣನ ಹೆಂಡತಿ, ಅತ್ತಿಗೆ, ವಯಿನಿ, ವೈನಿ.

भार, पु. ಭಾರ, ಹೊರೆ; ವಜನು; ೨೦ ಪಂಚೇರಿನ ತೂಕ.

भारी, वि. ಭಾರವಾದ; ದಿಣ್ಣ, ಘನ; ಭಾರಿಯಾದ; ಗುರುತರ; ದೊಡ್ಡ; ದಪ್ಪ. भारी भरकम = ಬಲುದೊಡ್ಡ, ತೂಕವಾದ; ಮಹತ್ವದ.

भारीपन, पु. ಘನತೆ, ದೊಡ್ಡತನ.

भाल, पु. ಹಣೆ; ಅದೃಷ್ಟ; ಕರಡಿ; ಅಂಬಿನ ತುದಿ, ಮೊನೆ; ಈಟಿ, ಬರ್ಚಿ; ಭರ್ಜಿ.

भालना, सक्रि. ನೋಡು, ವಿಚಾರಿಸು. देखना भालना = ನೋಡಿಕೊಳ್ಳು, ಪರಾಂಬರಿಸು.

भाला, पु. ಈಟಿ, ಭಲ್ಲೆ, ಭರ್ಜಿ, ಸಬಳ.

भालाबरदार, भालैत, पु. ಸಬಳಿಗ, ಈಟಿಯುವ, ಬರ್ಚಿಯುವ.

भाली, स्त्री. ಶೂಲ, ಈಟಿ, ಭರ್ಜಿ.

भालुक, भालू, पु. ಕರಡಿ, ಭಲ್ಲೂಕ.

भाव, पु. ಭಾವ; ಇರವು; ಭಾವನೆ; ಕಿಮ್ಮತ್ತು, ಬೆಲೆ; ಧಾರಣೆ; ಮನೋಭಾವ; ಹಾವಭಾವ, ಅಭಿನಯ. भाव ताव = ಧಾರಣೆ.

भावज, स्त्री. ಅಣ್ಣನ ಹೆಂಡತಿ, ಅತ್ತಿಗೆ, ವಯಿನಿ, ವೈನಿ.

भावता, वि. ಪಸಂದಾದ, ಒಪ್ಪುವ; ಮೆಚ್ಚುಕೆಯ; ಪ್ರಿಯ.

भावना, स्त्री. ಭಾವನೆ, ಕಲ್ಪನೆ; ವಿಚಾರ. अक्रि. ಒಪ್ಪು, ಪಸಂದಾಗು.

भावली, स्त्री. ಬೆಳೆಯ ಹಂಚಿಕೆ,

ಹಸಿಗೆ; ವಾರದ ಸಾಗುವಳಿ.

**भावी,** स्त्री. ಭವಿಷ್ಯ; ಅದೃಷ್ಟ.

**भावुक,** वि. ಭಾವಜ್ಞ, ಭಾವುಕ.

**भावै,** अव्य. ಇಷ್ಟಪಟ್ಟರೆ, ಬೇಕಾದರೆ.

**भाषा,** स्त्री. ಭಾಷೆ, ಮಾತು; ಹಿಂದೀ ಭಾಷೆ.

**भाषी,** वि. ಭಾಷೆಯನ್ನು ಆಡುವವ.

**भासना,** अक्रि. ಭಾಸವಾಗು; ತೋರು; ಹೊಳೆಯು.

**भिंगाना, भिंजाना,** सक्रि. ನೆನೆಸು.

**भिंडी,** स्त्री. ಬೆಂಡೇಕಾಯಿ.

**भिक्षा, भिच्छा,** स्त्री. ಭಿಕ್ಷೆ, ತಿರುಪೆ.

**भिखमंगा,** पु. ಭಿಕ್ಷುಕ, ತಿರುಕ.

**भिखमंगी,** स्त्री. ಭಿಕ್ಷೆ ಬೇಡುವಿಕೆ.

**भिखमंगिन, भिखारिणी, भिखारिन,** स्त्री. ಭಿಕ್ಷುಕಿ, ಭಿಕಾರಿಣಿ.

**भिखारी,** पु. ಭಿಕ್ಷುಕ, ಭಿಕ್ಷೆಗಾರ, ಭಿಕಾರಿ, ತಿರುಕ.

**भिगवाना, भिगाना, भिगोना,** सक्रि. ತೋಯಿಸು, ನೆನೆಸು, ಉನಿಯುಹಾಕು

**भिजवाना,** सक्रि. ಕಳುಹಿಸಿಕೊಡು, ರವಾನೆ ಮಾಡಿಸು.

**भिजाना,** सक्रि. ತೋಯಿಸು, ನೆನೆಸು; ಕಳುಹಿಸಿಕೊಡು

**भिटनी,** स्त्री. ಮೊಲೆತುದಿ, ಕುಚಾಗ್ರ.

**भिटाई,** स्त्री. ಉಡುಗೊರೆ, ಕಾಣಿಕೆ.

**भिडंत,** स्त्री. ಎದುರಿಸುವಿಕೆ; ಜಟಾಪಟಿ, ಜಗಳ; ಹೆಣಗಾಟ.

**भिड़,** स्त्री. ಕಣಜದ ಹುಳು, ಕಡಜ.

**भिड़ना,** अक्रि. ಸೇರು, ಕಲೆ; ಜಂಟಿ ಬೀಳು, ತೆಕ್ಕೆ ಮುಕ್ಕಿ ಬೀಳು; ಹೋರಾಡು, ಎದುರಿಸು.

**भिड़ा,** पु. ತೋಳ.

**भिड़ाना,** सक्रि. ಸೇರಿಸು; ಜಂಟಿ ಮಾಡು; ತೆಕ್ಕೆ ಬೀಳಿಸು; ಪೋಟಿ ಕೊಡು; ಜಗಳಕ್ಕೆ ಬಿಡು; ಢಿಕ್ಕಿ ಹೊಡಿಸು.

**भित, भित्ती,** स्त्री. ಗೋಡೆ, ಭಿತ್ತಿ.

**भितल्ला,** पु. ಒಳಮಡಿಕೆ; ಒಳವಸ್ತ್ರ, ಅಸ್ತರು.

**भिदना,** अक्रि ಸೇರು, ಮಿಳಿತವಾಗು; ತೂತು ಬೀಳು; ಘಾಯ ಹೊಂದು

**भिनकना,** अक्रि. ಗುಂಯಿಗುಟ್ಟು, ಝೇಂಕರಿಸು; ಮೊರೆ; ಮುಸುರು; ಚಿಟ್ಟು ಹಿಡಿ, ರೋಸು.

**भिननाना,** अक्रि. ತಲೆಚಿಟ್ಟು ಹಿಡಿ, ತಲೆ ತಿರುಗು.

**भिनभिनाना,** अक्रि. ಗುಂಯಿಗುಟ್ಟು; ಝೇಂಕರಿಸು.

**भिनभिनाहट,** स्त्री. ಗುಂಯಿಗುಟ್ಟುವಿಕೆ, ಝೇಂಕಾರ, ಮೊರೆತ.

**भिनसार,** पु. ಪ್ರಾತಃಕಾಲ, ನಸುಕು.

**भिन्न,** वि. ಬೇರೆಯಾದ, ಭಿನ್ನವಾದ; ಭಿನ್ನ, ಅಪೂರ್ಣ (ಸಂಖ್ಯೆ).

**भिन्नता,** स्त्री. ಬೇರೆ, ವ್ಯತ್ಯಾಸ.

**भिलनी,** स्त्री. भील का स्त्री. रूप.

**भिलावाँ,** पु. ಕೇರು ಬೀಜ, ಭಲ್ಲಾತಕ, ಅಗ್ನಿಮುಖಿ.

**भिल्ल,** पु. ಭೀಲರು, ಬೇಡರು.

**भिश्ती,** पु. ನೀರು ಹೊರುವವ, ಜಲವಾಹಕ.

**भींगना**, अक्रि. ಒದ್ದೆಯಾಗು, ನೆನೆ.
**भींचना**, सक्रि. ಎಳೆ, ಬಿಗಿ; ಹಿಂಡು; ಅಮುಕು; (ಕಣ್ಣು) ಮುಚ್ಚು.
**भींजना**, अक्रि. ಒದ್ದೆಯಾಗು, ನೆನೆ; ಆಟಿಕೊಳ್ಳು; ಸ್ನಾನಮಾಡು.
**भी**, अव्य. ಕೂಡ, ಸಹ, ಸುದಾ.
**भीक**, **भीख**, स्त्री. ಭಿಕ್ಷೆ, ತಿರುಪೆ.
**भीगना**, **भीजना**, अक्रि. ಒದ್ದೆಯಾಗು, ನೆನೆ. रात भीगना = ಚಲ್ಲಾಟ ಮತ್ತು ವಿನೋದದಲ್ಲಿ ರಾತ್ರಿಯನ್ನು ಕಳೆ
**भीट**, पु. ಕೆರೆಯ ಏರಿ, ಕಟ್ಟೆ.
**भीटा**, पु. ಎತ್ತರವಾದ ನೆಲ, ದಿಣ್ಣೆ; ಏರಿ; ಮಕ್ಕಿ ಗದ್ದೆ; ವೀಳೆಯದೆಲೆಯ ತೋಟ; ಪಾಳು ಬಿದ್ದ ಮನೆ, ಹಾಳು ಕೊಂಪೆ; ಕಾಡು ಮೃಗಗಳ ಇಕ್ಕೆ. ಗುಹೆ.
**भीड़**, स्त्री. ಗುಂಪು, ದಟ್ಟಣೆ, ಸಂದಣಿ; ಬಿಂಗುಳಿ; ಒತ್ತರಿಕೆ, ತೊಂದರೆ; ಸಂಕಟ; ಇಕ್ಕಟ್ಟು.
**भीड़ना**, सक्रि. ಹಚ್ಚು; ಸವರು; ತಿಕ್ಕು.
**भीड़भड़क्का**, पु. **भीड़भाड़**, स्त्री. ಗುಂಪು, ತಿಂತಿಣಿ; ನೂಕುನುಗ್ಗು.
**भीड़ा**, वि. ಇಕ್ಕಟ್ಟಾದ.
**भीत**, स्त्री. ಗೋಡೆ; ತೆರೆ, ಪರದೆ; ಪಾಳು, ಪಾಳು ಬಿದ್ದ ಮನೆ. वि. ಭಯಪಡುವ, ಅಂಜುವ.
**भीतर**, क्रिवि. ಒಳಗೆ, ಒಳಗಡೆ. पु. ಒಳಭಾಗ; ಅಂತಃಪುರ; ಅಂತಃಕರಣ.
**भीतरिया**, पु. ಮನೆಯೊಳಗಿನವ; ಮನೆಯ ಪೂಜಾರಿ; ಅಡಿಗೆಯವ; ಒಳಸಂಚುಗಾರ.
**भीतरी**, वि. ಒಳಗಿನ; ಒಳಗಡೆಯ; ಅಂತರ್ಯದ.
**भीती**, स्त्री. ಭೀತಿ, ಹೆದರಿಕೆ.
**भीनना**, अक्रि. ಸೇರು, ಮಿಳಿತವಾಗು.
**भीना**, पु. ಅಕ್ಕನ ಗಂಡ, ಭಾವ. वि. ತಣ್ಣಗಾದ, ತಂಪಾದ.
**भीरु**, वि. ಅಂಜುಕುಳಿ, ಪುಕ್ಕ, ಹಂದೆ; ಅಳ್ಳೆದೆಯವ, ಪಿರಿಕಿ.
**भीरुता**, स्त्री. ಪುಕ್ಕತನ, ಅಳ್ಳೆದೆ.
**भील**, पु. ಭಿಲ್ಲರು, ಬೇಡರು.
**भीलनी**, स्त्री. भील का स्त्री. रूप.
**भुंजाना**, सक्रि. ಚಿಲ್ಲರೆ ಮಾಡಿಸು, ಮುರಿಸು, ಪಟಾಯಿಸು.
**भुंडली**, स्त्री. ಕಂಬಳಿ ಹುಳು.
**भुआ**, पु. ಚೂರು, ತುಣುಕು; ನೊರೆ.
**भुइँहरा**, **भुइंघरा**, पु. ನೆಲಮಾಳಿಗೆ.
**भुकड़ी**, स्त्री. ಮುಗ್ಗಲು, ಬೂಜು.
**भुकना**, अक्रि. ತೂತು ಬೀಳು; ಛೇದಿಸಲ್ಪಡು.
**भुक्खड़**, वि. ಹಸಿದವ; ಹೊಟ್ಟೆಬಾಕ.
**भुखमरा**, वि. ಹಸಿವಿನಿಂದ ಸಾಯುವ.
**भुगतना**, सक्रि. ಭೋಗಿಸು, ಅನುಭವಿಸು; ಸಹಿಸು, ತಾಳು. अक्रि. ಪೂರೈಯಾಗು; ತೀರು, ಮುಗಿ; ಪೂರೈಸು.
**भुगतान**, पु. ತೀರುವೆ, ತೀರಿಕೆ; ಚುಕ್ತಾಯ, ಸಂದಾಯ.
**भुगताना**, सक्रि. ಮುಗಿಸು; ಪೂರೈಸು, ತೀರಿಸು; ಚುಕಾಯಿಸು, ಸಲ್ಲಿಸು; ಅನುಭವಿಸಗೊಡು; ಕಷ್ಟ ಕೊಡು;

ಶಿಕ್ಷೆ ಮಾಡು.
**भुगना**, पु. ಒಂದು ಬಗೆ ಚಿಟ್ಟೆ.
**भुग्गा**, वि. ದಡ್ಡ, ಬೆಪ್ಪ, ಮಂಕ.
**भुच**, वि. ಗಾಂಪ, ಒರಟ.
**भुचकना**, अक्रि. ಬೆಚ್ಚು, ಬೆರಗಾಗು.
**भुचकाना**, सक्रि. ವಿಸ್ಮಯ ಪಡಿಸು.
**भुचड़**, वि. ದಡ್ಡ, ಬೆಪ್ಪುತಕ್ಕಡಿ.
**भुज**, पु. ತೋಳು; ತೋಳುಬಂದಿ; ಸರಳ ರೇಖಾಕೃತಿಯ ಒಂದು ಪಾರ್ಶ್ವದ ರೇಖೆ, ಬಾಹು (ರೇಖಾಗಣಿತ).
**भुजना**, पु. ಅರಳು; ಪುರಿ, ಬುರುಗಲು.
**भुजबंद**, पु. ತೋಳುಬಂದಿ, ವಂಕಿ.
**भुजा**, स्त्री. ಬಾಹು, ತೋಳು.
**भुजाली**, स्त्री. ದೊಡ್ಡ ಚೂರಿ, ಕುಡುಗೋಲು; ಈಟಿ, ಭರ್ಜಿ, ಬರ್ಛಿ.
**भुजिया**, पु. ಕುದುಪಲಕ್ಕಿ; ಪಲ್ಯ, ತಾಳದ.
**भुजैटा**, **भुजैल**, पु. ಒಂದು ಪಕ್ಷಿ.
**भुजौना**, पु. ಅರಳು; ಪುರಿ, ಮಂಡಕ್ಕಿ; ಹುರಿಯುವುದರ ಕೂಲಿ; ಚಿಲ್ಲರೆ ಮುರಿಸುವುದಕ್ಕೆ ಕೊಡುವ ವಟ್ಟ.
**भुट्टा**, पु. ಜೋಳದ ತೆನೆ, ಹೊಡೆ; ಮುಸುಕಿನ ಜೋಳ, ಮಕ್ಕೆ ಜೋಳ; ತೆನೆ, ಜೊಂಪೆ. वि. ಪುಟ್ಟ, ಪುಟಾಣಿ.
**भुतना**, पु. **भुतनी**, स्त्री. ಮರಿ ಪಿಶಾಚಿ, ಪ್ರೇತ, ಹೇಡೆ.
**भुतियाना**, अक्रि. ಪಿಶಾಚಿಯಂತೆ ಆಡು
**भुनक्कड़**, वि. ಕಾಳು ಹುರಿಯುವವ.
**भुनगा**, पु. ಗುಂಗಾಡು, ಚಿಗಟ. वि. ಅಶಕ್ತ, ನಿರ್ಬಲ.
**भुनना**, अक्रि. ಹುರಿಯಲ್ಪಡು; ಸುಡು; ಗಾರು, ಕಮರು; ನಾಣ್ಯ ಮುರಿಸಲ್ಪಡು, ಮುರಿ. सक्रि. ಹುರಿ; ಸುಡು, ಗಾರಿಸು; ಚಿಲ್ಲರೆ ಮಾಡಿಸು, ಮುರಿಸು.
**भुनभुनाना**, अक्रि. ಗುಂಯಿಗುಟ್ಟು, ಗೊಣಗು, ವಟಗುಟ್ಟು, ಬಡಬಡಿಸು.
**भुनवाना**, सक्रि. भुनाना का प्रे. रूप; भूनना का प्रे. रूप.
**भुनाई**, स्त्री. ಕಾಳು ಹುರಿಯುವಿಕೆ; ಕಾಳು ಹುರಿಯಲು ಕೂಲಿ; ಮಾಂಸ ಸುಡುವುದಕ್ಕೆ ಕೊಡುವ ಕೂಲಿ; ಚಿಲ್ಲರೆ ಮುರಿಸಲು ಕೊಡುವ ತರಗು, ವಟ್ಟ.
**भुनाना**, सक्रि. ಚಿಲ್ಲರೆ ಮಾಡಿಸು, ಮುರಿಸು, ಮಾರುವೆ ಮಾಡು, ವಟಾಯಿಸು; ಕಾಳು ಹುರಿಯಿಸು, ಕಮರಿಸು
**भुरकना**, अक्रि. ಒಣಗು, ಬತ್ತು, ಗಾರು; ಮರೆತುಬಿಡು. सक्रि. ಚಿಮುಕಿಸು, ತಕ್ಕಳಿಸು, ಎರಚು.
**भुरकाना**, सक्रि. ಹುಡಿಮಾಡು, ನುರುಕು; ಚಿಮುಕಿಸು, ತಕ್ಕಳಿಸು; ತೂರು, ಎರಚು; ಮರೆಸು.
**भुरकुस**, पु. ಚೂರ್ಣ, ಪುಡಿ, ಹುಡಿ; ಹೊಟ್ಟು. भुरकुस निकालना = ನುರುಕು; ಸಣ್ಣಿಸು, ಚೆನ್ನಾಗಿ ಹೊಡೆಸದೆ ಬಡಿ.
**भुरता**, पु. ನುಜ್ಜುಗುಜ್ಜು; ತಾಳದ, ಪಲ್ಯ; ಭಜ್ಜಿ.
**भुरभुरा**, वि. ತರಿತರಿಯಾದ, ಗರಗು; ನುಗ್ಗಾದ, ನುರಿತ; ಮರಳು ಮರಳಾದ.
**भुरभुराना**, सक्रि. ಪುಡಿ ಎರಚು, ಚಿಮು

…सु; ತೂರು, ತಕ್ಕಳಿಸು.

…रवाना, भुराना, सक्रि. ಮರೆಸು; …ಮರುಳುಗೊಳಿಸು, ಪುಸಲಾಯಿಸು.

…क्कड़, वि. ಮರೆಯುವವ, ಮರಕುಳಿ.

…वाना, सक्रि. ಮರೆಸು; ಮರುಳು …ೊಳಿಸು, ಟೊಣೆಯು; ಮಾತು …ರೆಸು; ದಾರಿ ತಪ್ಪಿಸು.

…सना, अक्रि. ಸುಡು; ಹುರಪಳಿಸು, …ಯು; ಕಮರು. सक्रि. ಸೀಯಿಸು, …ಡು; ಕಂದಿಸು.

…ाऊ, वि. ಮರೆಸುವವ, ಠಕ್ಕ.

…ाना, सक्रि. ಮರುಳುಗೊಳಿಸು; …ಾರಿ ತಪ್ಪಿಸು; ಮಾತು ಮರೆಸು. …क्रि. ಮರುಳಾಗು; ಮರೆ; ತೊಳಲು.

…ावट, स्त्री. ಮರವೆ, ವಿಸ್ಮರಣ.

…ावा, पु. ಮೋಸ, ಠಕ್ಕು. ಡೊಳ್ಳಾಸ; …ಾತು ಮರೆಸುವಿಕೆ; ಮರೆಸುವ …ಾತು. भुलावा देना = ಮಾತು …ರೆಸು; ಮೋಸಮಾಡು.

…ैया, वि. ಮರೆಸುವವ.

…ड़, वि. = भुलक्कड़.

…आ, पु. ಹತ್ತಿ, ಅರಳೆ; ಚೂರು.

…ाल, पु. ರಾಜನು, ದೊರೆ.

…स, पु. ಸಿಪ್ಪೆ; ಹೊಟ್ಟು; ಬೂಸ.

…सेरा, भुसौंडा, पु. ಹೊಟ್ಟು ಬೂಸ …ಮೊದಲಾದುವುಗಳಿಡುವ ಸ್ಥಳ.

…कना, अक्रि. ಬೊಗಳು, ಗುರುಗುಟ್ಟು.

…चाल, भूकंप, पु. ಭೂಕಂಪ.

…जना, सक्रि. ಸುಡು, ಹುರಿ, ಗಾ…ರಿಸು; ಅನುಭವಿಸು.

भूंजा, पु. ಹುರಿಗಾಳು; ಅರಳು; ಬುರುಗಲು; ಕಾಳು ಹುರಿಯುವವ.

भूंजी, स्त्री. ಹುರಿಗಾಳು; ಅರಳು.

भूंसना, अक्रि. ಬೊಗಳು.

भूई, स्त्री. ತುಣುಕು, ಚೂರು.

भूक, भूख, स्त्री. ಹಸಿವು, ಕ್ಷುಧೆ; ಗೀಳು. भूख लगना = ಹೊಟ್ಟೆ ಹಸಿ. भूखों मरना = ಹೊಟ್ಟೆಗಿಲ್ಲದೆ ಸಾಯು.

भूखा, वि. ಹಸಿದ, ಬುಭುಕ್ಷಿತ.

भूत, वि. ಕಳೆದುಹೋದ, ಗತ. पु. ಭೂತ, ಪ್ರೇತ, ದೆವ್ವ; ಭೂತಕಾಲ.

भूतना, पु. ಸಣ್ಣ ಭೂತ, ಮರಿ ಪಿಶಾಚಿ.

भूतनी, स्त्री. ಹೆಣ್ಣು ಪಿಶಾಚಿ.

भूतहा, वि. ಭೂತಗಳ, ಪೈಶಾಚಿಕ; ಘೋರ; ಭೂತಸಂಚಾರವಿರುವ(ಮನೆ)

भूनना, सक्रि. ಹುರಿ; ಸುಡು, ಕಮರಿಸು; ಕರಿ, ಗಾರಿಸು.

भूना, पु. ಹುರಿಗಾಳು; ಅರಳು.

भूप, भूपाल, पु. ರಾಜ, ದೊರೆ, ಅರಸ.

भूभल, पु. ಬಿಸಿ ಬೂದಿ; ಕಾಸಿದ ಮಳಲು, ಮುಮ್ಮುರಿ.

भूमि, स्त्री. ಪೃಥ್ವಿ, ಭೂಮಿ; ನೆಲ; ಜಮೀನು.

भूमिका, स्त्री. ಭೂಮಿಕೆ, ಪೀಠಿಕೆ, ಮುನ್ನುಡಿ.

भूमिया, पु. ಭೂಮಿವಾಳ, ಭೂಸ್ವಾಮಿ, ಜಮೀನುದಾರ.

भूमिहर, पु. ಆರಂಬಗಾರ, ರೈತ.

भूर, स्त्री. ಮರಳು ನೆಲ; ಔದಾರ್ಯ; ದಾನ ಧರ್ಮ.

**भूरा**, पु. ಕಂದು ಬಣ್ಣ, ಕಂದಿ; ಬೂರಾ ಸಕ್ಕರೆ. वि. ಕಂದುಬಣ್ಣದ, ಕಪೀಶ.

**भूल**, स्त्री. ವಿಸ್ಮರಣ, ಮರವು; ತಪ್ಪು, ದೋಷ; ತಪ್ಪಿತ, ಸ್ಖಾಲಿತ್ಯ. भूलचूक = ತಪ್ಪುನೆಪ್ಪು. भूल चूक कर = ಅಪ್ಪಿತಪ್ಪಿ. भूलचूक लेनीदेनी = ತಪ್ಪುನೆಪ್ಪುಗಳನ್ನು ಬಿಟ್ಟು.

**भूलना**, सक्रि. ಮರೆ, ಮರೆತುಬಿಡು; ತಪ್ಪುಮಾಡು, ತಪ್ಪು. अक्रि. ಮರೆತು ಹೋಗು, ತಪ್ಪಾಗು; ಮುಗ್ಧನಾಗು.

**भूलभुलैयां**, स्त्री. ಸುತ್ತುಸುತ್ತಾದ ದುರ್ಘಟವಾದ ಪ್ರದೇಶ, ಚಕ್ರ ಬಂಧ; ಗೋಜಲು, ಸಿಕ್ಕು.

**भूला-भटका**, वि. ದಾರಿ ತಪ್ಪಿದ.

**भूसा**, पु. ಜೋಳದ ಕಡ್ಡಿ, ಹುಲ್ಲು; ಬಯಿ, ಬೂಸ.

**भूसी**, स्त्री. ಉಬ್ಬಲು, ಕೊಬ್ಬೊಟ್ಟು, ಗೊಳಲೆ, ಹೊಟ್ಟು.

**भेंगा**, वि. ಮೆಳ್ಳೆಗಣ್ಣಿನವ, ಮಾಲು ಗಣ್ಣಿನವ, ಕೋಸುಗಣ್ಣ.

**भेंट**, स्त्री. ಭೇಟಿ, ಭೆಟ್ಟಿ, ಸಂದರ್ಶನ; ಸಂಧಿಸುವಿಕೆ; ಅರ್ಪಣೆ, ಕಾಣಿಕೆ; ಉಪ್ಪಾಯನ, ಉಡುಗೊರೆ; ಸಂಭಾವನೆ. भेंट अंकवार = ಅಲಿಂಗನ; ಮಿಲನ.

**भेंटना**, सक्रि. ಭೇಟಿ ಕೊಡು; ಭೇಟಿ ಮಾಡು, ಸಂದರ್ಶಿಸು; ತಬ್ಬಿಕೊಳ್ಳು.

**भेक**, पु. ಕಪ್ಪೆ.

**भेख**, पु. ವೇಷ, ಸೋಗು.

**भेजना**, सक्रि. ಕಳುಹು, ಕಳುಹಿಸು, ರವಾನಿಸು; ಅಟ್ಟು.

**भेजवाना**, सक्रि. भेजना का प्रे. रूप.

**भेजा**, पु. ಮಿದುಳು, ಮೇದಸ್ಸು, ಮಸ್ತಿಷ್ಕ. भेजा खाना या चाटना = ಸುಮ್ಮನೆ ಚರ್ಚೆ ಮಾಡಿ ಪೀಡಿಸು.

**भेड़, भेड़ी**, स्त्री. ಕುರಿ.

**भेड़ना**, सक्रि. ಮುಚ್ಚು, ಬಂದುಮಾಡು.

**भेड़ा**, पु. ಕುರಿ, ಟಗರು.

**भेड़िया**, स्त्री. ತೋಳ, ವೃಕ. वि. ಕುರಿಯಂತಹ. भेड़िया धसान = ನುಗ್ಗುವ ಗುಂಪು; ಕುರಿಗಳಂತೆ ಕಣ್ಣು ಮುಚ್ಚಿಕೊಂಡು ಅನುಸರಿಸುವಿಕೆ.

**भेद**, पु. ತೂತು ಕೊರೆಯುವಿಕೆ, ಭೇದಿಸುವಿಕೆ; ರಹಸ್ಯ, ಮರ್ಮ, ಗುಟ್ಟು; ಭೇದ, ವ್ಯತ್ಯಾಸ; ವಿಧ, ಬಗೆ.

**भेदक**, वि. ಭೇದಿಸುವವ; ಒಡಕು ಹುಟ್ಟಿಸುವವ; ಭೇದಿಯ (ಔಷಧ), ವಿರೇಚಕ.

**भेदड़ी**, स्त्री. ಕಾಯಿಸಿ ಗಟ್ಟಿ ಮಾಡಿಸಿದ ಹಾಲು, ಹಾಲುಗಿಣ್ಣು.

**भेदन**, पु. ಭೇದಿಸುವಿಕೆ, ಚುಚ್ಚುವಿಕೆ.

**भेदना**, सक्रि. ಭೇದಿಸು, ಛೇದಿಸು.

**भेदिया**, पु. ಗುಪ್ತಚಾರ, ಬೇಹುಗಾರ, ಪಾಳತಿಗಾರ, ಸಂಚುಗಾರ.

**भेदी**, पु. ಗೂಢಚಾರ. वि. ಭೇದಿಸುವವ

**भेदीसार**, पु. ಬೈರಿಗೆ, ಹಿಡಿಸರಳು.

**भेदू**, पु. ರಹಸ್ಯವನ್ನರಿತವ; ಗುಟ್ಟಾಗಿಡುವವ.

**भेन**, स्त्री. ಸಹೋದರಿ.

**भेना**, सक्रि. ಅದ್ದು, ನೆನಸು.

**भेरी**, स्त्री. ಭೇರಿ, ನಗಾರಿ.

भेला, ಪು. ಎದುರಿಸುವಿಕೆ, ಭೇಟಿ, ಮುದ್ದೆ, ತೆರಳೆ; ಬೆಲ್ಲದ ಅಚ್ಚು.

भेली, ಸ್ತ್ರೀ. ಉಂಡೆ, ಮುದ್ದೆ; ಬೆಲ್ಲದ ಅಚ್ಚು.

भेव, ಪು. ಮರ್ಮ, ಗುಟ್ಟು; ಸ್ವಭಾವ, ಸಹಜಗುಣ; ಬಾರಿ, ಸರದಿ.

भेवना, ಸಕ್ರಿ. ಅದ್ದು, ನೆನಸು.

भेवा, ವಿ. ನೆನೆದ, ಒದ್ದೆಯಾದ.

भेष, भेस, ಪು. ವೇಷ, ಸೋಗು.

भैंस, ಸ್ತ್ರೀ. ಎಮ್ಮೆ; ಒಂದು ಮೀನು.

भैंसा, ಪು. ಎಮ್ಮೆ ಹೋರಿ, ಕೋಣ.

भैंसादाद, भैंसियादाद, ಪು. ಒಂದು ಬಗೆ ದದ್ದು.

भैचक, ವಿ. ಕಕ್ಕಬಿಕ್ಕಾದ, ಚಕಿತ.

भैड़ा, ಪು. ಕುಂಟೆ, ಹಲುಬೆ.

भैया, ಪು. ಭ್ರಾತಾ, ಸೋದರ.

भैयाचारी, ಸ್ತ್ರೀ. भैयापा, ಪು. ಸೋದರ ಭಾವ; ಮೈತ್ರಿ.

भैरो, ಪು. ಉದಯರಾಗ, ಉಪ್ಪವಡ.

भैहू, ಸ್ತ್ರೀ. ತಮ್ಮನ ಹೆಂಡತಿ, ನಾದಿನಿ.

भोंक, ಪು. ಚುಚ್ಚುವಿಕೆ, ತಿವಿತ

भोंकड़ा, ವಿ. ದಪ್ಪ, ದಡುವು.

भोंकना, ಸಕ್ರಿ. ಚುಚ್ಚು, ತಿವಿ, ಇರಿ.

भोंका-भोंकी, ಸ್ತ್ರೀ. ಪರಸ್ಪರ ಇರಿಯುವಿಕೆ, ತಿವಿದಾಟ.

भोंवरा, ಪು. ಗವಿ, ಕಂದರ.

भोंडर, ಪು. ಅಭ್ರಕ; ಬಿಂಗಾರ.

भोंडा, ವಿ. ಅಂದಗೆಟ್ಟ, ಕುರೂಪ, ಘೋರ

भोंथरा, भोंथा, ವಿ. ಮಂದವುತಿ.

भोंदू, ವಿ. ನಿಷ್ಕಪಟಿ, ಯಥಾರ್ಥ; ಭೋಳೆ; ದಡ್ಡ, ಪೆದ್ದ, ಬೆಪ್ಪ.

भोंपू, ಪು. ಕಹಳೆ, ತುತ್ತೂರಿ.

भोई, ಪು. ಪಲ್ಲಕ್ಕಿ ಹೊರುವವ, ಬೋಯಿ, ಹಮಾಲ; ಬಿಳೀ ಬೆಕ್ಕು.

भोकस, ಪು. ಮಂತ್ರವಾದಿ; ಮಾಟಗಾರ.

भोकार, ಸ್ತ್ರೀ. ವಿಲಾಪ, ಅಳುವು.

भोग, ಪು. ಭೋಗ, ಸುಖ; ಭೋಜನ; ನೈವೇದ್ಯ; ಬೈಗಳು. भोग लगाना = ಊಟ ಮಾಡು; ಊಟ ಹಾಕು; ನೈವೇದ್ಯ ಮಾಡು. भोग सुनाना = ಬೈಯು, ಅನ್ನು.

भोगना, ಅಕ್ರಿ. ಭೋಗಿಸು; ಅನುಭವಿಸು; ಸಹಿಸು.

भोगबंधक, ಪು. ಅಡಮಾನ, ಭೋಗ್ಯ.

भोगली, ಸ್ತ್ರೀ. ಮೂಗುತಿ; ಕಿವಿಯ ಓಲೆ; ತಿರುಪು.

भोगवना, ಅಕ್ರಿ. ಭೋಗಿಸು.

भोगवाना, ಸಕ್ರಿ. भोगाना, ಸಕ್ರಿ. भोगना का प्रे. रूप.

भोगा, ಪು. ಮೋಸ, ಠಕ್ಕು; ದ್ರೋಹ.

भोगी, ವಿ. ಆನಂದಿಸುವವ; ಭೋಗಿಸುವವ, ಭೋಗಿ; ಕುಶಾಲು(ಮನುಷ್ಯ).

भोज, ಪು. ಭೋಜನ; ಔತಣ, ಮೇಜವಾನಿ; ಭೋಜನ ಪದಾರ್ಥ.

भोजन, ಪು. ಭೋಜನ, ಆರೋಗಣೆ, ಊಟ.

भोजविद्या, ಸ್ತ್ರೀ. ಇಂದ್ರಜಾಲ.

भोट, ಪು. ಭೂತಾನ ದೇಶ.

भोटिया, ವಿ. ಭೂತಾನ ದೇಶದ.

भोडर, भोडल, ಪು. ಅಭ್ರಕ, ಬಿಂ

ಗಾರ, ಅಭ್ರಕದ ಪುಡಿ.

**भोता**, वि. ದಡ್ಡ, ಮಂಕ.

**भोती**, स्त्री. ಕೆಲಸ; ದಾವಂತ, ಧಾವತಿ.

**भोना**, सक्रि. ಸೇರು; ಅಂಟಿಕೊಳ್ಳು; ಗಂಟುಬೀಳು.

**भोपा**, पु. ಕಹಳೆ, ತುತ್ತೂರಿ; ಜೋಗಿ.

**भोमीरा**, पु. ಪ್ರವಾಳ, ಹವಳ.

**भोर**, पु. ಬೆಳಗಿನ ಜಾವ, ಪ್ರಾತಃಕಾಲ. भोर होना = ಬೆಳಕು ಹರಿ; ಮುಗಿ, ಪೂರೈಸು; ಚೆನ್ನಾಗಿ ಏಟು ತಿನ್ನು.

**भोरा**, वि. = **भोला**.

**भोराई**, स्त्री. ಸರಳಸ್ವಭಾವ.

**भोराना**, अक्रि. ಮರುಳಾಗು. सक्रि. ಮರುಳುಗೊಳಿಸು.

**भोला**, वि. ಸರಳ, ನಿಷ್ಕಪಟ; ಸಾಧು, ಭೋಳೆ. भोला भाला = ಭೋಳೆ ಸ್ವಭಾವದ; ನಿಚ್ಚಟವಾದ, ಸಾಧುವಾದ; ಪೆದ್ದ, ಕಿಸವಾಯಿ.

**भोलापन**, पु. ನಿಷ್ಕಾಪಟ್ಯ, ನಿಚ್ಚಟ; ಸರಳ ಸ್ವಭಾವ.

**भौं**, स्त्री. = **भौंह**.

**भौंकना**, अक्रि. ಬೊಗಳು, ಪಟಗುಟ್ಟು.

**भौंचक्का**, वि. ಕಕ್ಕುಬಿಕ್ಕಾದ, ಬೆರಗಾದ; ಚಕಿತನಾದ, ಸ್ತಂಭೀಭೂತನಾದ.

**भौंचक्कापन**, पु. ಬೆರಗು, ಬೇಳುವೆ, ವಿಸ್ಮಯ, ದಿಗ್ಭ್ರಮೆ.

**भौंचाल**, पु. ಭೂಕಂಪ.

**भौंतुवा**, पु. ನೀರಿನಮೇಲೆ ಸುಳಿದಾಡುವ ಜಲಜಂತು; ಗಾಣದ ಎತ್ತು.

**भौंर**, पु. ತುಂಬಿ; ಜಲಾವರ್ತ, ಸುಳಿ.

**भौंरा**, पु. ತುಂಬಿ, ಭ್ರಮರ, ಹೆದ್ದುಂಬಿ; ಒಂದು ಆಟದ ಸಾಮಾನು, ಆಟಿಗೆ; ಉಯ್ಯಾಲೆಯ ದೂಲ; ಕುರುಬನ ನಾಯಿ; ನೆಲಮಾಳಿಗೆಯಲ್ಲಿರುವ ಸೆರೆಮನೆ, ನೆಲಮನೆ; ಹಗೇವು.

**भौंराना**, सक्रि. ಪ್ರದಕ್ಷಿಣೆ ಮಾಡಿಸು; ಸುತ್ತಿಸು. अक्रि. ತಿರುಗು, ಸುಳಿದಾಡು.

**भौंरियाना**, अक्रि. ತಿರುಗು, ಸುಳಿದಾಡು

**भौंरी**, स्त्री. ತುಂಬಿ; ಕುದುರೆಯ ಸುಳಿ; ನೀರಿನ ಸುಳಿ, ತಿರುಗಣೆ ಮಡು; ಪ್ರದಕ್ಷಿಣೆ; ಕೆಂಡದಲ್ಲಿ ಸುಟ್ಟ ರೊಟ್ಟಿ.

**भौंह**, स्त्री. ಹುಬ್ಬು, ಬಿಲ್ಲಿ, ಭ್ರೂ. भौंह चढ़ाना = ಹುಬ್ಬು ಗಂಟಿಕ್ಕು, ಸಿಂಡರಿಸು; ಕಿನಿಸು, ಕೆರಳು, ರೇಗು.

**भौ**, पु. ಭಯ, ಹೆದರಿಕೆ.

**भौचक**, **भौचक्का**, वि. ಬೆಚ್ಚಿಬಿದ್ದ, ಬೆರಗಾದ, ಕಕ್ಕುಬಿಕ್ಕಾದ; ಚಕಿತ.

**भौज**, **भौजाई**, **भौजी**, स्त्री. ಅಣ್ಣನ ಹೆಂಡತಿ, ಅತ್ತಿಗೆ, ವಯಿನಿ, ವೈನಿ.

**भौना**, अक्रि. ತಿರುಗು, ಸುತ್ತಾಡು.

**भौनास**, पु. ಆನೆ ಕಟ್ಟುವ ಗೂಟ.

**भौलिया**, स्त्री. ಒಂದು ಬಗೆ ನೌಕ.

**भौसा**, पु. ಸಂದಣಿ, ದೊಂಬಿ, ಗಲಾಟೆ.

**भ्रम**, पु. ಸಂದೇಹ; ಭ್ರಾಂತಿ.

**भ्रमण**, पु. ಸಂಚಾರ, ತಿರುಗಾಟ.

**भ्रमना**, अक्रि. ಅಲೆದಾಡು, ತೊಳಲು; ದಾರಿ ತಪ್ಪು; ಭ್ರಮಿಸು.

**भ्रमाना**, सक्रि. ಸುತ್ತಿಸು; ಮರುಳುಗೊಳಿಸು.

**भ्रू**, स्त्री. ಭ್ರೂ, ಹುಬ್ಬು, ಬಿಲ್ಲಿ.

# म

**मंग**, स्त्री. ಬೈತಲೆ.

**मंगता**, पु. ಯಾಚಕ, ಭಿಕ್ಷುಕ.

**मंगन**, पु. ಬೇಡುವಿಕೆ, ಬೇಡಿಕೆ; ಭಿಕ್ಷುಕ. स्त्री. ಎರವಲು; ಸಾಲ, ಕಡ.

**मंगनी**, स्त्री. ಎರವಲು, ಎರವು, ಕಡ; ನಿಶ್ಚಿತಾರ್ಥ, ವೀಳೆಯಶಾಸ್ತ್ರ, ವಾಚಾದತ್ತ. मंगनी करना = ವಾಚಾದತ್ತ ಮಾಡು.

**मंगरा**, पु. ಬೆಂಕಟ್ಟು, ಮೊಗಡು.

**मंगल**, पु. ಮಂಗಳ, ಶುಭ; ಮಂಗಳವಾರ.

**मंगवाना**, सक्रि. मंगाना का प्रे. रूप.

**मंगाना**, सक्रि. ದೊರಕಿಸಿಕೊ, ತರಿಸಿಕೊ; ವಾಚಾದತ್ತ ಮಾಡಿಸು.

**मंगूला**, पु. ಕುಚ್ಚು, ಗೊಂಡೆ.

**मंगूस**, पु. ಮುಂಗುಸಿ, ಕೀರ.

**मंगेतर**, वि. ವಾಚಾದತ್ತ ಮಾಡಲ್ಪಟ್ಟ; ವರಿಸಲ್ಪಟ್ಟ.

**मंगौड़ी**, स्त्री. ಬೇಳೆ ಹಿಟ್ಟಿನ ಉಂಡೆ.

**मंच**, **मंचक**, पु. **मंचिया**, स्त्री. ಮಂಚ, ಪಲಂಗ; ಮಂದಾಸನ; ಪೀಠ, ವೇದಿಕೆ.

**मंजन**, पु. ಹಲ್ಲುಪುಡಿ, ದಂತಮಂಜನ.

**मंजना**, अक्रि. ಸ್ವಚ್ಛವಾಗು, ಚೊಕ್ಕಟವಾಗು; ಸಭ್ಯನಾಗು; ತರಪೇತಾಗು; ಪಳಗು.

**मंजनीक**, पु. ಸಣ್ಣ ಕವಣೆ.

**मंजाना**, सक्रि. ಸ್ವಚ್ಛವಾಗಿಸು, ಬೆಳಗು; ಸಂಸ್ಕರಿಸು; ತಿದ್ದು, ಪಳಗಿಸು.

**मंजार**, पु. ಹೂವು; ಬೆಕ್ಕು.

**मंज़िल**, स्त्री. ಯಾತ್ರೆಯಲ್ಲಿ ತಂಗುವ ಸ್ಥಳ, ಮೆಟ್ಟು; ಒಂದು ದಿವಸದ ಪಯಣ, ಮಜಲು; ತಲಪಬೇಕಾದ ಸ್ಥಳ, ಗಮ್ಯಸ್ಥಾನ; ಮಹಡಿ, ಮಾಡಿ, ಉಪ್ಪರಿಗೆ; ಅಂತಸ್ತು, ಇಯತ್ತೆ; ಅಶ್ವಿನಿ ಮೊದಲಾದ ನಕ್ಷತ್ರಗಳು.

**मंजीर**, पु. ಕಾಲಂದುಗೆ, ರುಳಿ.

**मंजीरा**, पु. ಕಂಸತಾಳ, ಝಲ್ಲರಿ.

**मंजूर**, वि. ನೋಡಿದ; ಒಪ್ಪಿತವಾದ, ಸ್ವೀಕೃತವಾದ; ಅಂಗೀಕೃತ, ಮಂಜೂರಾದ.

**मंजूरी**, स्त्री. ಒಪ್ಪಿಗೆ, ಅಂಗೀಕಾರ; ಮಂಜೂರು, ಮಂಜೂರಾತಿ.

**मंझ**, पु. ಮಧ್ಯ, ನಡು.

**मंझधार**, स्त्री. ನಡುಹೊಳೆ.

**मंझला**, वि. ಮಧ್ಯಮ, ನಡುವಣ; ಎಡತರ, ನಡುಕಲ; ಎಡಚಿಲ್.

**मंझा**, वि. ಮಧ್ಯದ, ನಡುವಣ. पु. ನಡು, ಟೊಂಕ; ನಡುಗಡ್ಡೆ.

**मंझार**, क्रिवि. ಮಧ್ಯೆ, ನಡುವೆ.

**मंझियार**, वि. ಮಧ್ಯದ, ನಡುವಣ.

**मंझोला**, वि. ಮಧ್ಯಮ; ಎಡತರ, ನಡುತರ.

**मंझोली**, स्त्री. ಪ್ರಯಾಣದ ಸಣ್ಣ ಬಂಡಿ.

**मंटप**, पु. ಮಂಟಪ, ಚಪ್ಪರ.

**मंड**, पु. ಅಂಬಲಿ, ಗಂಜಿ; ದೊರೆ.

**मंडन**, पु. ಭೂಷಣ, ಅಲಂಕಾರ; ಸಮರ್ಥನೆ, ಪುಷ್ಟಿ.

**मंडप**, पु. ಮಂಟಪ, ಚೌಪಳಿಗೆ; ಮಂದಾಸನ; ಚಪ್ಪರ, ಹಂದರ.

**मंडरना**, अक्रि. ಕವಿದುಕೊಳ್ಳು.

**मंडरा**, पु. ಮಂಡಲ; ಬಳೆ; ಕಪಿಲೆಯ ಚಕ್ಕಳದ ಬಳೆ.

**मंडराना**, **मंडलाना**, अक्रि. ಕವಿದುಕೊಳ್ಳು; ಮಂಡಲಿಸು, ಸುಳಿದಾಡು, ಹಾವರುಹಾಕು; ಚಕ್ಕರುಲಗಾಯಿಸು, ಸುತ್ತುಹಾಕು; ಸುತ್ತಾಡು.

**मंडल**, पु. ಮಂಡಲ, ವರ್ತುಲ; ಪರಿಧಿ; ವಟಾರ; ಕೂಟ, ಸಭೆ.

**मंडलिया**, पु. ಲಾಗ ಹೊಡೆಯುವ ಪಾರಿವಾಳ, ಗಿರೇಬಾಜ.

**मंडली**, स्त्री. ಕೂಟ,ಸಮಾಜ; ಮಂಡಲಿ

**मंडवा**, पु. ಚಪ್ಪರ, ಲತಾಮಂಟಪ; ಒಂದು ಧಾನ್ಯ.

**मंडा**, पु. ಒಂದು ಪಣ್ಯಾರ.

**मंडार**, पु. ಮುಕ್ಕರಿ, ಗೂಡೆ, ಕುಕ್ಕೆ.

**मंडियाना**, अक्रि. ಗಂಜಿ ಬಳಿ.

**मंडी**, स्त्री. ಗಡಂಗು, ಮಂಡಿ; ಮಳಿಗೆ, ಹಸರ, ಭಂಡಸಾಲೆ.

**मंडुआ**, पु. ಒಂದು ಧಾನ್ಯ.

**मंडूर**, पु. ತುಕ್ಕು.

**मंढ़वाना**, सक्रि. ಮುಚ್ಚಿಸು, ಹೊದಿಸು.

**मंढा**, पु. ಜೋಪಡಿ, ಗುಡಿಸಲು; ಮದುವೆಯ ಚಪ್ಪರ, ಹಂದರು.

**मंढाना**, सक्रि. ಗಂಜಿಸವರು, ಗಂಜಿಬಳಿ

**मंत**, पु. ಪರ್ಯಾಲೋಚನೆ, ಮಂತಣ.

**मंतक़**, पु. ವಾದ, ತರ್ಕ; ಚರ್ಚೆ.

**मंतक़ी**, वि. ವಾದಮಾಡುವ, ವಾದದ. पु. ತರ್ಕಶಾಸ್ತ್ರ ಬಲ್ಲವ, ತಾರ್ಕಿಕ.

**मंतव्य**, पु. ಅಭಿಪ್ರಾಯ, ವಿಚಾರ, ಸಿದ್ಧಾಂತ.

**मंतर**, **मंत्र**, पु. ಮಂತ್ರ; ಅಭಿಚಾರ, ಶೂನ್ಯ;ಮಂತಣ,ಮಂತ್ರಾಲೋಚನೆ. मंत्र जंत्र = ಮಾಟ ಮಂತ್ರ, ಯಂತ್ರ ತಂತ್ರ. मंत्र जगाना, फूंकना या मारना = ಮಂತ್ರ ಹಾಕು.

**मंत्रणा**, स्त्री. ಪರ್ಯಾಲೋಚನೆ, ಮಂತಣ, ಸಲಹೆ

**मंत्रिणी**, स्त्री. मंत्री का स्त्री. रूप.

**मंत्रित्व**, पु. ಮಂತ್ರಿ ಅಥವಾ ಕಾರ್ಯ ದರ್ಶಿಯ ಪದವಿ, ಮಂತ್ರಿತನ.

**मंत्री**, पु. ಸಲಹೆ ಕೊಡುವವ, ಮಂತ್ರಿ ಸಚಿವ, ಅಮಾತ್ಯ; ಕಾರ್ಯದರ್ಶಿ.

**मंथन**, पु. ಮಥಿಸುವಿಕೆ, ಕಡೆಯುವಿಕೆ ಕಡೆಗೋಲು, ಮಂತು.

**मंथना**, सक्रि. ಮಥಿಸು, ಕಡೆ.

**मंथनी**, स्त्री. ಮೊಸರು ಕಡೆವ ಪಾತ್ರೆ

**मंथर**, वि. ಮಂದವಾದ, ಜಡ್ಡು. पु. ಒಂದು ಬಗೆ ಜ್ವರ; ಮಂತು.

**मंथरता**, स्त्री. ಮಂದಗತಿ; ನಿಧಾನಗ ನಿಧಾನ.

**मंद**, वि. ಮಂದ; ಕುಗ್ಗಿದ; ಬೆಲೆತಗ್ಗಿ ಸಡಿಲವಾದ; ಆಲಸ್ಯವುಳ್ಳ; ನಿಧಾ ವಾದ;ಮಂದಮತಿ,ದಡ್ಡ प्रत्य. ಉ ವ, -ವಂತ. ಉದಾ:- अक़्ल-मंद.

**मंदल**, पु. ಮರದ ಮೋಟು, ಬೊ

मंदा, वि. ನಿಧಾನವಾದ; ಮಂದವಾದ; ತಗ್ಗಿದ; ತಗ್ಗಿದ.
मंदिर, पु. ಗೃಹ; ಮಂದಿರ; ದೇವಸ್ಥಾನ.
मंदी, स्त्री. ತಗ್ಗುವಿಕೆ; ವ್ಯಾಪಾರದ ಮಂದತ್ವ; ಮಂದಿ.
मंदील, पु. ಜರಿ ರುಮಾಲು, ಪೇಟ.
मंशा, पु. = मन्शा.
मंसब, पु. = मन्सब.
मंसूख, वि. = मन्सूख.
मआनी, पु. ಅರ್ಥ, ತಾತ್ಪರ್ಯ.
मआश, स्त्री. ಜೀವನೋಪಾಯ, ವೃತ್ತಿ
मकई, स्त्री. ಮುಸುಕಿನ ಜೋಳ.
मकड़ा, मकड़ी, पु. ಸೆಲದಿ, ಜೇಡನ ಹುಳು, ಜಾಡ.
मकड़ाना, अक्रि. ಕೊಂಕಿ ನಡೆ, ನಿಗ್ಗು ಜಗ್ಗಾಗಿ ನಡೆ, ಜಗ್ಗು ಹಾಕುತ್ತ ನಡೆ.
मक़तब, पु. ಪಾಠಶಾಲೆ, ವಿದ್ಯಾಲಯ.
मक़तूब, वि. ಬರೆದ, ಲಿಖಿತ; ಅಂಟಿಸಿದ, ಹೊಲಿದ. पु. ಲೇಖ, ಪತ್ರ.
मक़तूल, वि. ಕೊಲ್ಲಲ್ಪಟ್ಟವ, ಆಹತ.
मक़दूर, पु. ಸಾಮರ್ಥ್ಯ, ಶಕ್ತಿ, ವಶ.
मकना, पु. ಹೊದಿಕೆ, ದುಪಟಿ.
मक़ना-तीस, पु. ಸೂಜಿಕಲ್ಲು.
मक़फ़ूल, वि. ಗಿರವಿ ಇಟ್ಟ, ಅಡವಿಟ್ಟ, ಒತ್ತೆಯಿಟ್ಟ, ದೀಡಿಟ್ಟ.
मक़बरा, पु. ಗೋರಿ, ಸಮಾಧಿ; ಸಮಾಧಿ ಮಂಟಪ, ದೂಪೆ.
मक़बूज़ा, वि. ಕೈವಶವಾದ, ಸ್ವಾಧೀನವಾದ.
मक़बूल, वि. ಅಂಗೀಕರಿಸಿದ, ಒಪ್ಪಿದ; ಪಸಂದಾದ, ಮೆಚ್ಚಿನ. पु. ಆರಿಸಿ ತೆಗೆದ ಮನುಷ್ಯ; ನಂಬಿಗಸ್ತನಾದ ಜೊತೆಗಾರ; ಪ್ರೇಮಿಕೆ.
मक़बूलियत, स्त्री. ಒಪ್ಪಿಕೆಯಾಗುವಿಕೆ, ಪಸಂದಾಗುವಿಕೆ; ಒಪ್ಪಿಕೆ.
मकर, पु. ಮೊಸಳೆ; ಮೋಸ, ಕಪಟ; ಠಕ್ಕು; ಥಳುಕು.
मकरतार, पु. ಸರಿಗೆ, ಜರತಾರಿ.
मकरा, पु. ಸೆಲದಿ, ಜಾಡ; ರಾಗಿ.
मकरी, स्त्री. ಹೆಣ್ಣು ಮೊಸಳೆ; ಕವಣೆ.
मक़रूज़, वि. ಕತ್ತರಿಸಿದ; ಸಾಲಕೊಟ್ಟ; ಋಣಬಾಧೆಗೆ ಒಳಗಾದ; ಸಾಲಗಾರ, ಋಣಿ.
मकरूह, वि ಅಪವಿತ್ರ; ಕೆಟ್ಟ; ಹೊಲಸು.
मकलूब, वि. ವ್ಯತ್ಯಸ್ತವಾದ, ತಿರುಗಿಸಿದ
मक़सद, पु. ಮನೋರಥ, ಅಭಿಪ್ರಾಯ, ಉದ್ದೇಶ.
मक़सदवर, वि. ಉದ್ದೇಶ ಪೂರ್ತಿಯಾದವ, ಸಫಲ ಮನೋರಥ.
मक़सूद, वि. ಉದ್ದಿಷ್ಟ, ಲಕ್ಷ್ಯ.
मक़सूम, पु. ಪಾಲು, ಭಾಗ; ಭಾಗ. ವಿಧಿ; ಭಾಜ್ಯ (ಗಣಿತ).
मकाई, स्त्री. ಮಕ್ಕೆ ಜೋಳ, ಮುಸುಕಿನ ಜೋಳ, ಗೋಂಜೋಳ.
मकान, पु. ಮನೆ, ಗೃಹ; ವಾಸಸ್ಥಾನ, ನಿವಾಸ, ಬೀಡು.
मकानदार, पु. ಮನೆಯ ಒಡೆಯ, ಮನೆಯ ಸ್ವಂತಗಾರ; ಕಾವಲುಗಾರ.
मकुनी, मकूनी, स्त्री. ಕಡಲೆ ಹಿಟ್ಟಿನ ರೊಟ್ಟಿ ಅಥವಾ ಕಡುಬು.

मक़्ला, स्त्री. ಹೇಳಿಕೆ, ಗಾದೆ, ಸಾಮತಿ, ಉದ್ಧೃತವಾಕ್ಯ.
मको, पु. ಬುಡ್ಡೆ ಹಣ್ಣು.
मकोड़ा, पु. ದೊಡ್ಡ ಇರುವೆ; ಹುಳು, ಕೀಟ. कीड़े मकोड़े= ಹುಳ ಹುಪ್ಪಡಿ.
मकोय, पु. ಕಾಕಿ ಗಿಡ, ಕಾರೆಹಣ್ಣು.
मक्का, पु. ಮುಕ್ಕೆ ಜೋಳ, ಮುಸುಕಿನ ಜೋಳ, ಗೋಂಜೋಳ; ಮಕ್ಕಾ ಪಟ್ಟಣ.
मक्कार, वि. ಠಕ್ಕು; ಮೋಸಗಾರ; ಕಪಟಿ.
मक्कारी, स्त्री. ಮೋಸ, ಬೂಟಾಟಿಕೆ; ಕಪಟ, ಠಕ್ಕು.
मक्खन, पु. ಬೆಣ್ಣೆ, ನವನೀತ.
मक्खनिया, पु. ಬೆಣ್ಣೆ ಮಾರುವವ.
मक्खी, मखी, स्त्री. ನೊಣ; ಜೇನು ನೊಣ; ತುಪಾಕಿಯ ಚೂಟಿ, ಕಣ್ಣು ಚೂಟಿ. मक्खी मारना = ನೊಣ ಹೊಡಿ; ಕೆಲಸವಿಲ್ಲದೆ ಕೂತಿರು; ವೃಥಾ ಕಾಲಕಳೆ.
मक्खीचूस, पु. ಪರಮಲೋಭಿ, ಅತಿ ಜಿಪುಣ.
मक्खीमार, पु. ಗಲೀಜು ಮನುಷ್ಯ, ಹೊಲಸಿನವ; ಸೋಮಾರಿ, ಶೋಂಘೇರಿ; ಮುಕ್ಕಿಕಾಮುಕ್ಕಿ ಬರೆಯುವವ.
मक्र, पु. ಒಳಸಂಚು; ಮೋಸ, ಠಕ್ಕು; ನೆಪ, ವ್ಯಾಜ.
मख़्ज़न, पु. ಭಂಡಾರ, ಉಗ್ರಾಣ; ಖಜಾನೆ; ಶಬ್ದಕೋಶ, ಸಂಗ್ರಹ.
मखतूल, पु. ಕರಿಯ ರೇಶ್ಮೆ.
मख़्दूम, पु. ಒಡೆಯ, ಸ್ವಾಮಿ; ಪೂಜ್ಯ ವ್ಯಕ್ತಿ, ಮುಹಮ್ಮದೀಯ ಧರ್ಮಾಧಿಕಾರಿ.
मखन, पु. ಬೆಣ್ಣೆ.
मखना, पु. ದಂತವಿಲ್ಲದ ಆನೆ; ಕೊಂಕುಗುರಿಲ್ಲದ ಹುಂಜ.
मखनिया, वि. ಬೆಣ್ಣೆ ತೆಗೆದ. पु. ಬೆಣ್ಣೆ ತೆಗೆಯುವವ ಅಥವಾ ಮಾರುವವ.
मख़मल, पु. ಒಂದು ಬಗೆ ನಯವಾದ ಬಟ್ಟೆ, ಮುಖಮಲ್ಲು.
मख़मली, वि. ಮುಖಮಲ್ಲಿನ; ಮುಖಮಲ್ಲಿನಂತಹ; ಬಲು ನಯವಾದ.
मख़मसा, पु. ಬಿಕ್ಕಟ್ಟು, ಸಂದುಕಟ್ಟು.
मख़मूर, वि. ಮತ್ತನಾದ, ಅಮಲೇರಿದ
मख़रज, पु. ಹೊರಡುವ ಜಾಗ, ಉದ್ಗಮ ಸ್ಥಾನ; ವ್ಯುತ್ಪತ್ತಿ, ನಿರುಕ್ತಿ; ಹೇಳುವಿಕೆ, ಉಕ್ತಿ; ಖರ್ಚು, ವ್ಯಯ.
मख़लसी, स्त्री. ಭದ್ರತೆ, ಜೋಪಾನ; ಸ್ವಾತಂತ್ರ್ಯ; ಬಿಡುಗಡೆ.
मख़्लूक़, वि. ರಚಿತವಾದ; ಸೃಷ್ಟಿಸಲ್ಪಟ್ಟ, ಸೃಷ್ಟ. स्त्री. ಸೃಷ್ಟಿತ ವಸ್ತು; ಜೀವರಾಶಿ; ಪ್ರಪಂಚ.
मख़्लूत, वि. ಕಲೆತ, ಮಿಶ್ರಿತ, ಬೆರೆತ.
मख़सूस, वि. ವಿಶಿಷ್ಟ; ಸರಿ; ಖಾಸಗಿ.
मखाना, पु. = ताल-मखाना.
मख़ारिज़, पु. ಖರ್ಚು, ಮುಟ್ಟುವಳಿ.
मख़्न, पु. ಚಿಗಟ, ಚಿಕ್ಕಾಡು.
मख़ोना, पु. ಒಂದು ಬಗೆ ಬಟ್ಟೆ.
मख़ोल, पु. ನಗಚಾಟಿಕೆ, ಗೇಲಿ.
मख़्फ़ी, वि. ಗುಟ್ಟಾದ, ಗುಪ್ತ.
मग, पु. ದಾರಿ, ಮಾರ್ಗ.

…ज, पु. = मग़ज.

…ज, पु. ಹೆಸರು ಬೇಳೆ ಲಾಡು.

…न, वि. ಮಗ್ನ, ಮುಳುಗಿದ, ತಲ್ಲೀನ

…रत, स्त्री. ಕ್ಷಮಾಪಣೆ, ಮಾಫು.

…र, वि. ದಿವಂಗತ, ಸ್ವರ್ಗೀಯ.

…न, वि. ದುಃಖಾಕ್ರಾಂತ; ಶೋ…ಕಾರ್ತ, ದುಃಖಿತ.

…र, पु. ಮೊಸಳೆ, ನೆಗಳು, ಚೊರ.

…र. ಆದರೆ, ಪರಂತು. अगर मगर …ना = ತರ್ಕ ವಿತರ್ಕ ಮಾಡು, …ದು ಮುಂದು ನೋಡು.

…मच्छ, पु. ಮೊಸಳೆ; ಕುದುರೆ …ಸುವ ನೆಗಳು, ಚೊರ.

…मस्त, वि. ಉಲ್ಲಾಸವುಳ್ಳ, ಕುಶಾ…ಲ.

…र, वि. ಗರ್ವವುಳ್ಳವ, ದುರಹಂ…ರಿ; ಸಿಡುಕ; ಹಟಮಾರಿ, ಚಂಡಿ.

…राई, मगराही, स्त्री. ಗರ್ವ; ದುರ…ಂಕಾರ; ಹಟ, ಜಿದ್ದು.

…रिब, पु. ಪಶ್ಚಿಮ, ಪಡುವಲು; …ರ್ಯಾಸ್ತ.

…रिबी, वि. ಪಶ್ಚಿಮದ, ಪಡುವಣ.

…गी, स्त्री. ಛಾವಣಿಯ ಬೆಂಕಟ್ಟು, …ಂಗಡು; ಹೆಂಚು.

…रूर, वि. ಗರ್ವಿಷ್ಠ, ಗರ್ವವುಳ್ಳ; …ಹಂಕಾರಿ.

…री, स्त्री. ಗರ್ವ; ದುರಹಂಕಾರ; …ಕ್ಕು.

…लूब, वि. ಜಯಿಸಲ್ಪಟ್ಟ, ವಿಜಿತ.

…न, स्त्री. ನೊಣ.

मगसिर, पु. ಮಾರ್ಗಶಿರ ಮಾಸ.

मग़ज़, पु. ಮಿದುಳು, ಮಸ್ತಿಷ್ಕ, ಮೇದಸ್ಸು; ಬುರುಡೆ; ನೆಣ, ಮಜ್ಜೆ, ಕೊಬ್ಬು; ಸೊಕ್ಕು; ದುಮ್ಮು, ಕಸುರಿ, ತಿರುಳು. मग़ज़ खाना = ಪೀಡಿಸು, ಕಾಡು. मग़ज पचाना या खाली करना = ಹುಚ್ಚು, ಹುಚ್ಚಾಗಿ ಹರಟು, ಬುರುಡೆ ಹೊಡೆ.

मग़ज़पच्ची, स्त्री. ಮಿದುಳು ಖರ್ಚು ಮಾಡಿ ಬಹಳ ಯೋಚಿಸುವಿಕೆ.

मग़ज़रोशन, पु. "ಜ್ಞಾನಚೂರ್ಣ", ನಶ್ಯ, ನಾಸಿ ಪುಡಿ.

मग़ज़ी, वि. ಮಿದುಳು ಸಂಬಂಧವಾದ. पु. ಅಂಚು, ಗೋಟು, ಕರೆ.

मचक, स्त्री. ಒತ್ತಡ, ದುಡಿತ, ಅಳುಕುವಿಕೆ; ಕೀಲುನೋವು.

मचकना, अक्रि. ನೋವಾಗು; ದುಡಿ; ಅಳುಕು, ಕಿರ್ರೆನ್ನು, ಕಿರುಗುಟ್ಟು. सक्रि. ಒತ್ತರಿಸು, ಜಗ್ಗಿಸು, ಕಿರುಗುಟ್ಟಿಸು.

मचका, पु. ವ್ಯಾಪಾರದ ಮಂದ.

मचकाना, सक्रि. ಬಳುಕಿಸು; ಜಗ್ಗಿಸು; ರೆಪ್ಪೆ ಬಡಿ.

मचना, अक्रि. ಆಗು, ಮೂಡು, ಮಸಗು; (ಗಲಾಟೆ) ಏಳು, ಹತ್ತಿಕೊಳ್ಳು; ಕಿರುಗುಟ್ಟು.

मचमच, स्त्री. ಮಂಚದ ಕಿರುಗುಟ್ಟುವ ಶಬ್ದ.

मचमचाना, अक्रि. ಕಿರ್ರೆನ್ನು, ಕಿರುಗುಟ್ಟು.

मचल, स्त्री. ಛಲ, ಮೊಂಡಾಟ, ಚಂಡಿತನ

**मचलना**, अक्रि. ಛಲ ಹಿಡಿ, ಮೊಂಡ ಬೀಳು; ಚಂಡಿಸು, ಹಟ ಹಿಡಿ; ಸಿಡುಗುಟ್ಟು; ಅವಿಧೇಯನಾಗು.

**मचला**, वि. ಛಲವಾದಿ, ಚಂಡಿಖೋರ; ಮೊಂಡ, ಹಟಮಾರಿ; ಸಿಡುಕುಮೋರೆಯವ; ಅರಿಯದವನಂತೆ ನಟಿಸುವವ

**मचलाई**, स्त्री. **मचलापन**, पु. ಹಟ ಹಿಡಿಯುವಿಕೆ, ಛಲ, ಮೊಂಡಾಟ; ಸಿಡುಕು.

**मचलाना**, अक्रि. ಓಕರಿಸು, ಉಬ್ಬಳಿಸು, ಕಕ್ಕಸ ಪಡು; ತಿಳಯದವನಂತೆ ನಟಿಸು; ಛಲ ಹಿಡಿ, ಚಂಡಿಸು. सक्रि. ಹಟ ಹಿಡಿಸು; ಮೊಂಡ ಬೀಳಿಸು.

**मचलाहट**, स्त्री. ಛಲ, ಹಟ, ಮೊಂಡಾಟ; ದುರಾಗ್ರಹ.

**मचलाहा**, वि. ಹಟಮಾರಿ, ಮೊಂಡ.

**मचवा**, पु. ದೋಣಿ, ಓಡ.

**मचवाना**, सक्रि. ಎಬ್ಬಿಸು, ಹತ್ತಿಸು.

**मचान**, पु. ಅಟ್ಟ, ಮಂಚಿಕೆ; ಮಂಚ; ಸಾರಕಟ್ಟು, ಸಾರವೆ.

**मचाना**, सक्रि. (ಗಲಾಟೆ) ಮಾಡು, ಎಬ್ಬಿಸು, ಮೂಡಿಸು.

**मचामच**, वि. ಅಡಚಿ ತುಂಬಿದ.

**मचिया**, स्त्री. ಸಣ್ಣ ಮಂಚ; ಕಾಲಟ್ಟ.

**मचियाव**, पु. ಜೇನುತುಪ್ಪ.

**मचोड़ना**, सक्रि. ನುಲಿಚು, ಹೊಸೆ.

**मच्छ**, पु. ಮೀನು; ಮತ್ಸ್ಯ.

**मच्छड़**, **मच्छर**, पु. ಸೊಳ್ಳೆ, ಮಶಕ. मच्छड़ की झूल = ಬಹಳ ಸಣ್ಣ ಅಥವಾ ಅಲ್ಪ ವಸ್ತು.

**मच्छड़दानी**, स्त्री. ಸೊಳ್ಳೆಗಳನ್ನು ಹಿಡಿಯುವ ಬೋನು ಅಥವಾ ಬಲೆ.

**मच्छी**, स्त्री. ಮೀನು, ಮತ್ಸ್ಯ;ಚುಂಬನ

**मच्छीभवन**, पु. ವಿಧವಿಧವಾದಮೀನುಗಳಿಟ್ಟಿರುವ ಸ್ಥಳ, ಮತ್ಸ್ಯಾಲಯ, ಮೀನುಬಂಗಲೆ, "ಮೀನುಕಾಲೇಜು"

**मछंदर**, पु. ಕೋತಿ, ಕಪಿ; ಇಲಿ; ಫಕೀರ, ದಾಸಯ್ಯ; ಮಂಕ.

**मछ**, पु. ದೊಡ್ಡ ಮೀನು.

**मछरंगा**, पु. ಮೀಂಚುಳ್ಳಿ, ಲಕುಮುಕಿ ಹಕ್ಕಿ.

**मछरांद**, स्त्री. ಮೀನಿನ ನಾತ.

**मछली**, स्त्री. ಮತ್ಸ್ಯ, ಮೀನು; ಲೋಲಾಕು.

**मछवा**, **मछुआ**, **मछेरा**, पु. ಬೆಸ್ತ, ಮೀನುಗಾರ, ಅಂಬಿಗ, ಮೊಗೇರ, ಗಂಗೆಮಗ.

**मज**, वि. ಹಣ್ಣಾದ, ಮಾಗಿದ.

**मज़कूर**, वि. ಹೇಳಿದ, ಪೂರ್ವೋಕ್ತ. पु. ಪ್ರಸ್ತಾಪ, ವಿವರಣೆ, ಮಜಕೂರು.

**मज़कूरा**, वि. ಮೇಲೆ ಹೇಳಿದ, ಉಪರೋಕ್ತ, ಮಜಕೂರು, ಸದರಿ.

**मज़कूरी**, पु. ಕೋರ್ಟಿನ ಸಮ್ಮನ್ಸು ಅಥವಾ ಸರಕಾರದ ಆಜ್ಞಾಪತ್ರವನ್ನು ಜಾರಿ ಮಾಡುವವ.

**मज़दूर**, पु. ಕೆಲಸಗಾರ; ಕಾಮಾಟಿ; ಕೂಲಿಗಾರ; ಶ್ರಮಜೀವಿ, ಜೀತಗಾರ.

**मज़दूरनी**, **मज़दूरिन**, स्त्री. ಕೂಲಿಯವಳು, ಹೆಣ್ಣಾಳು.

**मज़दूरी**, स्त्री. ಕೂಲಿ ಕೆಲಸ, ಜೀತ;

...ರಿ, ಮಜೂರಿ, ರುಸುಂ.
..., ಪು. ಉನ್ಮತ್ತ; ಹುಚ್ಚ; "ಲೈಲಾ" ...ಬ ರಮಣಿಯು ಮೇಲಿನ ಪ್ರೇಮ ...ದ ಹುಚ್ಚು ಹಿಡಿದ ಒಬ್ಬ ಅರಬ್ಬಿ ...ವಕ; ಪ್ರೇಮೋನ್ಮತ್ತ; ಪ್ರೇಮಾ... ಪ್ರೇಮಿ; ಒಂದು ಮರ. वि. ...ಇಲ್ಲದವ, ನಿತ್ರಾಣಿ.

...त, वि. ದೃಢವಾದ, ಗಟ್ಟಿ; ಬಲ... ಮಜಬೂತು, ಬಲವತ್ತರ.

...ती, स्री. ದೃಢತೆ, ಸ್ಥೈರ್ಯ; ..., ಕಸುವು, ಪುಷ್ಟಿ.

...र, वि. ನಿರ್ಬಂಧಕ್ಕೊಳಪಟ್ಟ; ...ತ್ತಾಯದ, ಕಡ್ಡಾಯದ; ನಿರ್ವಾಹ ...ದ. मजबूर करना = ನಿರ್ಬಂ...ಸು, ಬಲವಂತ ಮಾಡು.

...रन्, क्रिवि. ನಿರ್ಬಂಧದಿಂದ, ಬಲ...ಂತದಿಂದ; ನಿರ್ವಾಹವಿಲ್ಲದೆ.

...री, स्री. ನಿರ್ಬಂಧ, ಒತ್ತಾಯ, ...ಡ್ಡಾಯ; ವಿವಶತೆ.

...मा, पु. ಗುಂಪು; ಕೂಟ, ಸಭೆ; ರಾಶಿ.

...मूआ, वि. ಒಟ್ಟಾದ, ಒಟ್ಟುಗೂಡಿದ. ... ಸಮೂಹ, ಗಣ, ಸಮುದಾಯ; ...ತ್ತ; ನಿಯಮಾವಳಿ, ಕಾನೂನು, ...ಯಿದೆ; ಪರಿಮಳದ್ರವ್ಯ.

...मून, पु. ಸಂಗತಿ, ಪ್ರಸ್ತಾಪವಿಷ...ಯ, ಪ್ರಕರಣ; ತಾತ್ಪರ್ಯ, ಆಶಯ; ...ಬಂಧದ ವಸ್ತು, ಪ್ರಬಂಧ, ಲೇಖನ.

...रूआ, वि. ಕೃಷಿ ಮಾಡಿದ, ಸಾಗು...ವಳಿ (ಜಮೀನು).

...रूब, वि. ಗುಣ್ಯ (ಸಂಖ್ಯೆ).

मजरूह, वि. ಘಾಯ ಹೊಂದಿದ.

मजलिस, स्री. ಸಭೆ, ಸದಸ್ಸು; ಪರಿಷತ್ತು, ಸಮಾಜ; ಮೇಳ, ನಟನ ಸಭೆ, ಕಛೇರಿ, ಸದರು.

मजलिसी, वि. ಸದಸ್ಯ, ಪಾರಿಷದ; ಸಭ್ಯ, ನಾಗರೀಕ.

मज़लूम, वि. ದಬ್ಬಾಳಿಕೆಗೆ ಅಥವಾ ಅತ್ಯಾಚಾರಕ್ಕೆ ಗುರಿಯಾದವ; ದಲಿತ.

मज़हब, पु. ಧರ್ಮ, ಮತ, ಮತಾಚಾರ

मज़हबी, वि. ಮತ ಸಂಬಂಧವಾದ, ಧಾರ್ಮಿಕ, ಮತಾಚಾರದ. पु. ಒಡ್ಡ, ಬಂಗಿ, ಝಾಡಮಾಲಿ.

मज़ा, पु. ರುಚಿ, ಸವಿ, ಸ್ವಾರಸ್ಯ; ಸುಖಾನುಭವ, ಮಜಾ; ಸಂತೋಷ, ಆನಂದ; ತಮಾಷೆ.

मज़ाक़, पु. ಆಸ್ವಾದನ, ರುಚಿ, ಸವಿ, ಸ್ವಾರಸ್ಯ; ಹಾಸ್ಯ, ನಗಚಾಟಿಕೆ, ಗೇಲಿ; ವಿನೋದ, ತಮಾಷೆ.

मज़ाक़न्, क्रिवि. ವಿನೋದಕ್ಕೆ, ತಮಾಷೆಗೆ.

मज़ाक़िया, वि. ಹಾಸ್ಯಗಾರ, ವಿನೋದಗಾರ.

मजाज़, वि. ಅಧಿಕಾರ ಯುಕ್ತ; ಅಧಿಕಾರಿ. पु. ಅಧಿಕಾರ, ಹಕ್ಕು; ರೂಪಕ, ಲಕ್ಷಣೆ.

मज़ाजन्, क्रिवि. ಲಕ್ಷಣೆಯಿಂದ.

मजाज़ी, वि. ಲಾಕ್ಷಣಿಕ; ಮಾಯೆಯ, ಅನಿತ್ಯ.

मज़ामीन, पु मज़मून का ब. रूप.

मज़ार, पु. ಗೋರಿ, ಸಮಾಧಿ; ಶವ

ವನ್ನು ಹೂಳುವ ಸ್ಥಳ, ಶವಾಗಾರ.

**मजाल**, स्त्री. ಸ್ಥಳ, ಇಂಬು; ಅವಕಾಶ; ಶಕ್ತಿ, ಬಲ, ಸಾಮರ್ಥ್ಯ.

**मजीठ**, स्त्री. ಕೆಂಪು ಬಣ್ಣ ತೆಗೆಯುವ ಒಂದು ಗಿಡ, ಮಂಜಿಷ್ಟೆ, ರಕ್ತಾಂಗಿ, ಇಷ್ಟಮಧುಕ.

**मजीठी**, वि. ಮಂಜಿಷ್ಟೆಯ, ಕೆಂಪು.

**मजीत**, वि. ಹಳೆಯ; ಅಗ್ಗವಾದ.

**मजीद**, वि. ಪೂಜ್ಯ; ಗಣ್ಯ, ಮಾನ್ಯ, ಶ್ರೇಷ್ಠ.

**मज़ीद**, पु. ವೃದ್ಧಿ, ಆಧಿಕ್ಯ. वि. ವೃದ್ಧಿಯಾದ, ಅಧಿಕ.

**मजीर**, स्त्री. ಗೊನೆ, ಗೊಂಚಲು.

**मजीरा**, पु. ಕಂಸತಾಳ, ಕೈತಾಳ, ಝುಲ್ಲರಿ.

**मजूर**, पु. = मज़दूर.

**मजूरी**, स्त्री. = मज़दूरी.

**मजूस**, पु. ಅಗ್ನಿಪೂಜಕ, ಪಾರ್ಸಿ.

**मज़ेदार**, वि. ರುಚಿರ, ಸವಿಯಾದ; ಸ್ವಾರಸ್ಯವಾದ; ಸುಖಪ್ರದ, ಆನಂದಕರ; ಹಾಸ್ಯಕರವಾದ, ತಮಾಷೆಯ.

**मज़ेदारी**, स्त्री. ರುಚಿ, ಸವಿ; ಸ್ವಾರಸ್ಯ, ಆನಂದ; ವಿನೋದ.

**मज्जा**, स्त्री. ನೆಣ, ಕೆಚ್ಚು; ಮಜ್ಜೆ, ಮೇದಸ್ಸು; ಕೊಬ್ಬು, ಚರಬಿ.

**मझ**, पु. ನಡುವೆ, ಮಧ್ಯ.

**मझधार**, स्त्री. ನಡು ಹೊಳೆ.

**मझला**, वि. ಮಧ್ಯದ, ನಡುವಣ; ನಡುಕಲ; ಮಧ್ಯಸ್ಥ.

**मझाना**, सक्रि. ತುರುಕು, ನುಸುಳಿಸು. अक्रि. ಪ್ರವೇಶಿಸು, ನುಸುಳು.

**मझार**, पु. ನಡು, ಮಧ್ಯ.

**मझारी**, क्रिवि. ನಡುವೆ, ಮಧ್ಯೆ.

**मझियाना**, अक्रि. ನಡುವೆ ಹೋಗು.

**मझोला**, वि. ಮಧ್ಯಮ, ಎಡತರ, ನಡುತರ.

**मझोली**, स्त्री. ಚಿಕ್ಕ ಗಾಡಿ, ಬಂಡಿ.

**मट**, पु. ಮಡಕೆ, ಗಡಿಗೆ.

**मटक**, **मटकन**, स्त्री. ಒಯ್ಯಾರದ ನಡಿಗೆ; ಒಯ್ಯಾರ, ಬೆಡಗು.

**मटकना**, अक्रि. ಜಗ್ಗು ಹಾಕುತ್ತಾ ನಡೆ, ನಿಕ್ಕುಳಿಸು; ಬಳುಕು; ಒಯ್ಯಾರಮಾಡು; ಕಣ್ಣುಹೊಡೆ. पु. ಮಡಕೆ, ಕುಡಿಕೆ.

**मटकनि**, स्त्री. ಕುಲುಕು, ಕುಣಿತ, ಒಯ್ಯಾರ, ಬೆಡಗು.

**मटका**, पु. ಮಡಕೆ, ಘಟ.

**मटकाना**, सक्रि. ಮೈಯನ್ನು ಬಳುಕಿಸು, ಹಾವಭಾವ ತೋರಿಸು, ಬೆಡಗು ತೋರು; ಜಗ್ಗು ಹಾಕುತ್ತಾ ನಡೆಸು; ಕಣ್ಣು ಮಿಳಕಿಸು.

**मटकी**, स्त्री. ಸಣ್ಣ ಮಡಕೆ, ಕುಡಿಕೆ; ಆಟದ ಸಾಮಾನು; ಆಟಿಗೆ, ಕುಡಿಕೆ ಸಾಮಾನು; ಒಯ್ಯಾರ, ಬೆಡಗು; ಕಣ್ಣು ಹೊಡೆಯುವಿಕೆ.

**मटकीला**, वि. ಬಳುಕುವ; ಒಯ್ಯಾರದ.

**मटकोठा**, पु. ಮಣ್ಣಿನ ಮನೆ.

**मटकौअल**, स्त्री. ಮೈಯನ್ನು ಬಳುಕಿಸುವಿಕೆ, ಹಾವಭಾವ, ಬೆಡಗು.

**मटक्को**, स्त्री. ಒಯ್ಯಾರದ ನಡಿಗೆಯ

[illegible], ಬೆಡಗಿನವಳು.

**मटमैला**, वि. ಮಣ್ಣಿನ; ಮಣ್ಣಿನ ಬಣ್ಣದ, ಬಾಕಿ, ಮುಸಕು ಬಣ್ಣದ.

**मटर**, पु. ಬಟಾಣಿ, ವಟಾಣಿಕಾಳು, ಬಟ್ಟಿಗಡಲೆ.

**मटरगश्त**, पु. ವಿರಾಮವಾಗಿ ತಿರುಗಾಡುವಿಕೆ, ಅಡ್ಡಾಟ, ವಿಹಾರ, ಗಾಳಿಸವಾರಿ.

**मटरा**, पु. ಒಂದು ಬಗೆ ಬಟಾಣಿ; ಒಂದು ಬಗೆ ರೇಷ್ಮೆ ಬಟ್ಟೆ.

**मटरी**, स्त्री. ಬಟಾಣಿ.

**मटियल**, वि. ಮಣ್ಣಿನ; ಮಣ್ಣಿನಿಂದಾದ; ಮಣ್ಣಿನ ಬಣ್ಣದ. पु. ಮಣ್ಣಿನ ಕುಳಿ.

**मटिया**, वि. ಮಣ್ಣಿನ; ಮಣ್ಣುಳ್ಳ. मटिया फूस = ನಿಶ್ಶಕ್ತ, ಬಲಹೀನ. मटिया मेट = ಮಣ್ಣುಗೂಡಿದ, ಮಣ್ಣುಪಾಲಾದ, ಹಾಳು. मटिया मेट करना = ಮಣ್ಣು ಮುಕ್ಕಿಸು, ನೆಲಸಮ ಮಾಡು, ಗುಂಡಾಂತರ ಮಾಡು, ಹಾಳ್ಗೆಡಿಸು.

**मटियाना**, सक्रि. ಮಣ್ಣು ಹಾಕಿ ಉಜ್ಜು, ತೊಳೆ; ಮಣ್ಣು ಸವರು, ಮಣ್ಣು ಮೆತ್ತು; ಕಂಡೂ ಕಾಣದಂತಿರು, ಲಕ್ಷ್ಯ ಕೊಡದಿರು. अक्रि. ಮಣ್ಣಾಗು.

**मटियारा**, वि. ಮಣ್ಣಿನಿಂದಾದ; ಮಣ್ಣಿನ. पु. ಜೇಡಿಮಣ್ಣಿನ ಭೂಮಿ.

**मटियाला**, वि. = मटमैला.

**मटुका**, पु. ಮಡಕೆ, ಕುಡಿಕೆ.

**मट्टी**, स्त्री. ಮಣ್ಣು, ಮಟ್ಟಿ.

**मट्ठड़, मट्ठर**, वि. ಮಂದ, ನಿಧಾನವಾದ; ತಾಮಸದ, ಆಲಸ್ಯದ.

**मट्ठा, मठा**, पु. ಮಜ್ಜಿಗೆ, ಅಳೆ, ತಕ್ರ.

**मठ**, पु. ಮಠ, ಆಶ್ರಮ. मठ मारना = ಹಾಳು ಮಾಡು, ಕೆಡಿಸು.

**मठधारी**, पु. ಮಠಾಧಿಪತಿ, ಮಹಂತ.

**मट्ठी, मठरी**, स्त्री. ಸೀ ದೋಸೆ.

**मठिया, मठी**, स्त्री. ಚಿಕ್ಕ ಮಠ; ಕುಟಿ; ಕಡಗ, ಬಳೆ.

**मठोरा**, स्त्री. ಮೊಸರಿನ ಪಾತ್ರೆ; ಬಾನೆ.

**मठौता**, पु. ಮಣ್ಣಿನ ತೊಟ್ಟಿ.

**मड़ई**, स्त्री. ಚಿಕ್ಕ ಮಂಟಪ, ಚಪ್ಪರ.

**मड़क**, स्त्री. ಒಳಗುಟ್ಟು, ಮರ್ಮ.

**मड़वा**, पु. ಚಪ್ಪರ, ಲತಾಮಂಟಪ.

**मड़ाड़**, पु. ಹೊಂಡ, ಕೊಳ.

**मड़ियाना**, सक्रि. ಗಂಜಿ ಬಳಿ.

**मड़ुआ**, पु. ಒಂದು ಧಾನ್ಯ.

**मड़ैया**, स्त्री. ಗುಡಿಸಲು, ಜೋಪಡಿ.

**मढ़**, वि. ಚಂಡಿಖೋರ, ಮೊಂಡ.

**मढ़न**, पु. ಗವಸಣಿಗೆ, ಅಸ್ತರು; ಮದ್ದಲೆಗೆ ಹೊದಿಸುವ ಚರ್ಮ.

**मढ़ना**, सक्रि. ಗವಸಣಿಗೆ ಹಾಕು, ವೇಷ್ಟಿಸು; ಮದ್ದಲೆಗೆ ಚರ್ಮ ಬಿಗಿದುಕಟ್ಟು; ರಟ್ಟು ಕಟ್ಟು; ಮಡಾಯಿಸು, ತಲೆಗೆ ಕಟ್ಟು. अक्रि. ಮೂಡು, ಏಳು.

**मढ़वाना, मढ़ाना**, सक्रि. मढ़ना का प्रे. रूप.

**मढ़ा**, पु. ಗುಡಿಸಲು, ಪರ್ಣಕುಟಿ.

**मढ़ाई**, स्त्री. ಗವಸಣಿಗೆ ಹಾಕುವಿಕೆ; ಮದ್ದಲೆಗೆ ಚರ್ಮ ಕಟ್ಟುವಿಕೆ, ಮಡಾ

ಯಿಸುವಿಕೆ; ಈ ಕೆಲಸಗಳ ಕೂಲಿ.

**मढ़ी**, स्त्री. ಕುಟಿ, ಗುಡಿಸಲು, ಜೋಪಡಿ

**मत**, पु. ವಿಚಾರ; ಸಿದ್ಧಾಂತ, ತತ್ತ್ವ; ಧರ್ಮ; ಅಭಿಪ್ರಾಯ, ಆಶಯ; ಮತ, ಒಪ್ಪಿತ, "ಓಟು"; ಮದ, ಅಮಲು. स्त्री. ರೀತಿ, ವಿಧ; ಮತಿ, ಅರಿವು; ತಿಳಿವಳಿಕೆ. क्रिवि. ಬೇಡ, ಕೂಡದು.

**मतदाता**, पु. ಒಪ್ಪಿತ(=ಓಟು) ಕೊಡುವವ, "ಓಟರು", ಒಪ್ಪಿತಕಾರ, ಮತದಾತರು.

**मतया**, पु. ಒಂದು ಬಗೆ ಕಬ್ಬು. अक्रि. ಮತ್ತನಾಗು.

**मतबख़**, पु. ಅಡಿಗೆ ಮನೆ.

**मतबा**, पु. ಮುದ್ರಣಾಲಯ, ಅಚ್ಚು ಕೊಟ, ಛಾಪಖಾನೆ.

**मतबूआ**, वि. ಚುನಾಯಿಸಿದ; ಆಯ್ದ; ಮೆಚ್ಚಿಸಿದ; ಮುದ್ರಿತ, ಅಚ್ಚಾದ.

**मतराना**, सक्रि. ಒಡಂಬಡಿಸು, ಒಪ್ಪಿಸು; ಒಪ್ಪುಗೊಳಿಸು, ಬುಜ್ಜಯಿಸು.

**मतरूक**, वि. ಬಿಟ್ಟ, ತೊರೆದ, ತ್ಯಕ್ತ.

**मतलब**, पु. ಪ್ರಶ್ನೆ, ಬೇಡಿಕೆ; ಅಭಿಪ್ರಾಯ, ತಾತ್ಪರ್ಯ, ಆಶಯ; ಅರ್ಥ; ಸ್ವಾರ್ಥ; ಸ್ವಾರ್ಥಲಾಭ; ಗೊಡವೆ, ಸಂಬಂಧ; ಉದ್ದೇಶ, ಸಲುವು. मतलब का यार=ಸ್ವಾರ್ಥಿ, ಸ್ವಾರ್ಥಪರ.

**मतलबी**, वि. ಸ್ವಾರ್ಥಪರ, ಗತ್ತುಗಾರ

**मतला**, पु. ನಕ್ಷತ್ರಗಳು ಉದಯವಾಗುವ ದಿಕ್ಕು, ಮೂಡಲು, ಪೂರ್ವ; ಗಜಲಿನ ಮೊದಲನೆಯ ಎರಡು ಚರಣ.

**मतलाना**, सक्रि. ಓಕರಿಸು, ಉಬ್ಬಳಿಸು.

**मतलाहट, मतली**, स्त्री. ಓಕರಿಕೆ, ಉಬ್ಬಳಿಕೆ.

**मतलूब**, वि. ಬೇಕಾದ; ಕೋರಿದ; ಉದ್ದಿಷ್ಟ. पु. ಆಶಯ, ಉದ್ದೇಶ.

**मतवाला**, वि. ಮದ ಹಿಡಿದವ, ಅಮಲೇರಿದ, ಮತ್ತನಾದ. पु. ದುರ್ಗದ ಮೇಲಿಂದ ಶತ್ರುಗಳ ಮೇಲೆ ಎಸೆಯುವ ದೊಡ್ಡ ಕಲ್ಲು; ಒಂದು ಆಟದ ಸಾಮಾನು, ಆಟಿಗೆ.

**मता**, पु. ಅಭಿಪ್ರಾಯ, ಸಮ್ಮತಿ. स्त्री. ಅಭಿವೃದ್ಧಿ; ಆಧಿಕ್ಯ, ಪುಷ್ಕಲ; ಸೌಖ್ಯ ಪಡೆಯುವಿಕೆ; ಸಾಮಾನು, ಸರಕು.

**मतानत**, स्त्री. ದೃಢತೆ, ಘನತೆ; ಕೋಟೆ.

**मतारी**, स्त्री. ತಾಯಿ, ಅಮ್ಮ.

**मतालबा**, पु. ಬಾಧ್ಯತೆ, ಹಕ್ಕು.

**मति**, स्त्री. ಬುದ್ಧಿ, ಅರಿವು; ಒಪ್ಪಿತ; ಸಮ್ಮತಿ.

**मतीन**, वि. ದೃಢವಾದ, ಗಟ್ಟಿ.

**मतीरा**, पु. ಕಲ್ಲಂಗಡಿ ಹಣ್ಣು.

**मतीस**, पु. ಒಂದು ವಾದ್ಯ.

**मतेई**, स्त्री. ಮಲತಾಯಿ, ಬಲತಾಯಿ.

**मत्त**, वि. ಮತ್ತನಾದ, ಮದಿಸಿದ, ಅಮಲೇರಿದ; ಹುಚ್ಚು ಹಿಡಿದ.

**मत्तता**, स्त्री. ಉನ್ಮಾದ, ಮಸ್ತಿ.

**मत्था**, पु. ಹಣೆ.

**मथन**, पु. ಕಡೆಯುವಿಕೆ, ಮಥನ.

**मथना**, सक्रि. ಕಡೆ, ಮಥಿಸು; ನಾದು, ರುಬ್ಬು; ಮಸಗು; ನಾಶಮಾಡು; ಮನನ ಮಾಡು, ಚಿಂತನೆ ಮಾಡು.

**मथनियां**, स्त्री. ಮೊಸರಿನ ಗಡಿಗೆ.

**मथनी**, ಖ್ರೀ. ಮೊಸರು ಕಡೆವ ಮಡಕೆ, ಮಂತಣಿ; ಕಡೆಯುವಿಕೆ, ಮಂಥನ; ಕಡೆಗೋಲು, ಮಂತದಂಡ, ಮಂತು.

**मथानी**, ಖ್ರೀ. ಮಂಥದಂಡ, ಕಡೆಗೋಲು, ಮಂತು.

**मथौट**, ಪು. ತಲೆತಿರಿಗೆ, ತಲೆಗಂದಾಯ.

**मथौरा**, ಪು. ಕೊಡೆ, ಸತ್ತಿಗೆ; ಉಜ್ಜುಗೊರಡು, ಹತ್ತಡಿ.

**मद**, ಪು. ಆನಂದ, ಉಲ್ಲಾಸ; ಮದ್ಯ, ಸೇಂದಿ; ಅಮಲು, ಮತ್ತು; ಮದ, ಸೊಕ್ಕು. ಖ್ರೀ. (मद्द) ಇಲಾಖೆ, ವಿಭಾಗ, ಖಾತೆ; ಬಾಬ್ತು, ಮಂಜಕೂರು.

**मदक**, ಖ್ರೀ. ಚಿಲಿಮೆಯಲ್ಲಿಟ್ಟು ಸೇದಲು ಉಪಯೋಗಿಸುವ ಅಫೀಮಿನ ಗುಳಿಗೆ; ಅಫೀಮು ಬೆರಸಿದ ಗುಡಾಕು.

**मदकची**, **मदकबाज़**, **मदकी**, ಪು. ಮದಕ ಸೇದುವವ.

**मदख़ल**, ಪು. ಒಳಕ್ಕೆ ಹೋಗುವಿಕೆ, ಹೊಗುವಿಕೆ, ಪ್ರವೇಶ; ವರಮಾನ; ಆಯ; ಬರುವ ದಾರಿ; ಬಾಗಿಲು, ದ್ವಾರ, ಪ್ರವೇಶಿಸುವ ಹೊತ್ತು.

**मदख़ूल**, ವಿ. ಒಳಹೊಕ್ಕ, ಪ್ರವಿಷ್ಟ.

**मदख़ूला**, ಖ್ರೀ. ಪ್ರವೇಶಿಸಲ್ಪಡುವ ವಸ್ತು; ಭಗದ್ವಾರ, ಯೋನಿ; ಇಟ್ಟುಕೊಂಡವಳು, ಉಪಪತ್ನಿ.

**मदद**, ಖ್ರೀ. ಸಹಾಯ, ಒತ್ತಾಸೆ, ನೆರವು, ಸಹಕಾರ; ಒತ್ತಾಳು, ಚಂಗೂಲಿ; ಕೂಲಿ, ಮಜೂರಿ.

**मददगार**, ಪು. ಒತ್ತಾಸೆಗಾರ, ಸಹಾಯಗಾರ, ಸಹಾಯಕ.

**मदन**, ಪು. ಮನ್ಮಥ; ಕಾಮ; ನಗರ, ಪಟ್ಟಣ; ರಾಜನಗರ.

**मदफ़न**, ಪು. ಶವಗಳನ್ನು ಹೂಳುವ ಸ್ಥಳ

**मदफ़ून**, ವಿ. ಹೂತಿಟ್ಟ; ಮುಚ್ಚಿಟ್ಟ; ನೆಲದೊಳಗಿನ; ಬಿದ್ದಿರುವ.

**मदमत्त**, **मदमस्त**, ವಿ. ಮತ್ತೇರಿದ, ಮದಿಸಿದ, ಅಮಲೇರಿದ.

**मदरसा**, ಪು. ಪಾಠಶಾಲೆ, ವಿದ್ಯಾಲಯ.

**मदरसाना**, ವಿ. ವಿದ್ಯಾಲಯದ; ಪಾಠಶಾಲೆಯ.

**मदह**, ಖ್ರೀ. ಪ್ರಶಂಸೆ, ಹೊಗಳಿಕೆ.

**मदहोश**, ವಿ. ಮದಿಸಿದ, ಅಮಲೇರಿದ.

**मदाख़िल**, ಖ್ರೀ. ಪ್ರವೇಶ; ವರಮಾನ.

**मदाख़िलत**, ಖ್ರೀ. ಹಸ್ತಕ್ಷೇಪ; ಹಿಡುವಳಿ, ಸ್ವಾಧೀನ.

**मदार**, ಪು. ಎಕ್ಕದ ಗಿಡ; ಆನೆ; ಠಕ್ಕ; ದಾರಿ, ಮಾರ್ಗ; ಆಸ್ಥೆ; ತಿರುಗುವ ಅಥವಾ ಹಿಂತಿರುಗುವ ಸ್ಥಳ; ನಡು, ಮಧ್ಯ, ಕೇಂದ್ರ; ಪರಿಧಿ; ಅಚ್ಚು, ಅಚ್ಚುಮರ; ಆಧಾರ, ಆಶ್ರಯ. दार मदार = ಆಶ್ರಯ, ಬೆಂಬಲ.

**मदारिन**, ಖ್ರೀ. मदारी का ಖ್ರೀ. ರೂಪ.

**मदारिया**, **मदारी**, ಪು. ಕೋತಿ ಅಥವಾ ಕರಡಿ ಆಡಿಸುವವ; ಗಾರಡಿಗಾರ; ಡೊಂಬ; ಫಕೀರ.

**मदिया**, ಖ್ರೀ. ಸ್ತ್ರೀ ಜಾತಿ.

**मदिरा**, ಖ್ರೀ. ಮದ್ಯ, ಸೇಂದಿ.

**मद्द**, ಖ್ರೀ. ಹರಡುವಿಕೆ, ಹರವು, ವಿಸ್ತಾರ; ಬೆಳೆಸುವಿಕೆ, ವಿಳಂಬ; ಪೂರ, ನೆರೆ. मद्दे-नज़र = ದೃಷ್ಟಿಯ ಹರವು; ಕ್ಷಿತಿಜ;

ಕೃಪಾದೃಷ್ಟಿ, ಕಟಾಕ್ಷ; ಪ್ರೋತ್ಸಾಹ; ಕಣ್ಣಿನಮುಂದೆ; ದೃಷ್ಟಿಯಲ್ಲಿ. मद्दे-नज़र रखना = ದೃಷ್ಟಿಯಲ್ಲಿಡು, ಗಣನೆಗೆ ತಂದುಕೊಳ್ಳು.

**मद्दा**, वि. ಅಗ್ಗವಾದ.

**मद्दाह**, पु. ಪ್ರಶಂಸಿಸುವವ, ಹೊಗಳುವವ.

**मद्दाही**, स्त्री. ಪ್ರಶಂಸೆ, ಹೊಗಳಿಕೆ.

**मद्दे**, क्रिवि. ಬಾಬ್ತು, ಸಲುವಾಗಿ; ಬಗ್ಗೆ.

**मद्धम**, वि. ಮಂದ, ಬಲು ನಿಧಾನ; ನಡುತರ, ಎಡತರ; ಹಿಂದುಳಿದ. मद्धम पड़ जाना = ಮಂದ ಬೀಳು; ಕಳೆಗುಂದು; ಬಾಡು; ಹಿಂದುಳಿ; ಮೂಲೆಗೆ ಬೀಳು.

**मद्य**, पु. ಸೇಂದಿ, ಹೆಂಡ.

**मद्यनिषेध**, पु. ಮದ್ಯಪಾನ ನಿರೋಧ.

**मधायंद**, स्त्री. ವಾಸನೆ, ನಾತ.

**मधु**, पु. ಜೇನುತುಪ್ಪ; ಮಾಧುರ್ಯ.

**मधुमक्खी**, स्त्री. ಜೇನು ನೊಣ.

**मधुर**, वि. ಮಧುರವಾದ, ಸಿಹಿಯಾದ; ಇಂಪಾದ.

**मधुरता**, स्त्री. ಮಾಧುರ್ಯ, ಇಂಪು.

**मधुरिमा**, स्त्री. ಸಿಹಿ, ಸವಿ; ಸೌಂದರ್ಯ

**मध्य**, पु. ಮಧ್ಯ, ನಡು.

**मध्यस्थ**, पु. ಮಧ್ಯಸ್ಥಗಾರ.

**मध्यस्थता**, स्त्री. ಮಧ್ಯಸ್ಥಿಕೆ.

**मध्ये**, क्रिवि. ನಡುವೆ, ಮಧ್ಯೆ; ಸಲುವಾಗಿ, ಬಾಬ್ತು, ಬಗ್ಗೆ.

**मन**, पु. ಮನಸ್ಸು, ಚಿತ್ತ; ಅಭಿಲಾಷೆ, ಇಚ್ಛೆ; ನಿಯತ್ತು; ೪೦ ಸೇರಿನ ತೂಕ, ಮಣ. मन अटकना या उलझना = ಮನಸ್ಸೋಲಿ, ಮೋಹಗೊಳ್ಳು, ಪ್ರೀತಿ ಹುಟ್ಟು. मन के लड्डू खाना = ಮನದೊಳಗೆ ಮಂಡಿಗೆ ಮಾಡಿಕೊಳ್ಳು, ಮನೋರಾಜ್ಯ ಮಾಡು. मन चलना = ಇಚ್ಛಿಸು, ಬಯಸು. मन मारना = ಮನವನ್ನು ಅಡಗಿಸು, ನಿಗ್ರಹಿಸು; ತಾಳು. मन ललचाना = ಬಯಸು, ಕೊಸರು, ಹಾತೊರೆ.

**मनई**, पु. ಮನುಷ್ಯ, ಮನುಜ.

**मनकना**, अक्रि. ಅಲುಗಾಡು, ಬಳುಕು

**मनका**, पु. ಮಣಿ, ತುಲಸಿ ಮಣಿ; ರುದ್ರಾಕ್ಷಿ; ಹೆಗ್ಗತ್ತಿನ ಮಣಿ, ಹೆಡಕು. मनका ढलना = ಗೋಣು ಮುರಿದು ಬೀಳು; ಮರಣ ಕಂಠಗತವಾಗು.

**मनकूला**, वि. ಚಲನಾತ್ಮಕ, ಚರ, ಜಂಗಮ (ಸೊತ್ತು).

**मनकूहा**, स्त्री. ಮದುವೆಯಾದವಳು, ಧರ್ಮಪತ್ನಿ, ಹೆಂಡತಿ.

**मन-गढंत**, वि. ಕಲ್ಪನೆಯ, ಕಪೋಲಕಲ್ಪಿತ. पु. ಕಲ್ಪಿತ ಪ್ರಸಂಗ, ಕಪೋಲಕಲ್ಪನೆ, ಕಠಟು ಪುರಾಣ.

**मनगढ़ा**, वि. ಬಲಿಷ್ಠ, ಬಲಯುತ.

**मनघटा**, पु. ಬಾವಿಯ ಕೈಪಿಡಿ ಗೋ[illegible]

**मनचला**, वि. ಸಾಹಸಿ; ಧೀರ; ಉತ್ಸು[illegible]

**मनचली**, स्त्री. ಉತ್ಸುಕತೆ, ಮ[illegible] ವರ್ಜಿ; ಧೀರತೆ; ಹುಚ್ಚು, ಪೈತ್ಯ.

**मनचाहा**, **मनचीता**, वि. ಇಚ್ಛಿ[illegible] ಅಪೇಕ್ಷಿಸಿದ, ವಾಂಛಿತ, ಹಾರೈ[illegible]

**मनचाही**, स्त्री. ಹಟ, ಮುಷ್ಕರ.

**मनज़र**, पु. ಮುಖ; ದೃಶ್ಯ, ನೋಟ.
**मनत**, स्त्री. ಒಪ್ಪಿಕೆ, ಅಂಗೀಕಾರ.
**मनन**, पु. ಮನನ, ಧ್ಯಾನ, ಚಿಂತನೆ.
**मननाना**, अक्रि. ಝೇಂಕರಿಸು, ಮೊರೆ
**मनभाता, मनभाया, मनभावता, मनभावन**, वि. ಮನ ಒಪ್ಪಿದ, ಪಸಂದಾದ; ರಮ್ಯ; ಮೆಚ್ಚಿನ; ಇನಿಯ.
**मनमानता, मनमाना**, वि. ಇಷ್ಟಪಡುವ, ಮನಸ್ಸು ಮೆಚ್ಚಿದ, ಪಸಂದಾದ, ಯಥೇಚ್ಛೆಯಾದ, ಮನಸ್ವಿ.
**मनमानी**, स्त्री. ಮನಸ್ಸಿನ ಇಚ್ಛೆ.
**मनमारा**, वि. ದುಃಖಿತ, ವ್ಯಥಿತ.
**मनमुटाव**, पु. ಮನಸ್ತಾಪ, ವೈಮನಸ್ಯ
**मनमोदक**, पु. ಮನೋರಾಜ್ಯ.
**मनमोहन**, वि. ಮನಸ್ಸನ್ನೆಳೆಯುವ, ಮನ ಮೋಹಕ, ಚಿತ್ತಾಕರ್ಷಕ; ಪ್ರಿಯ, ಮುದ್ದು.
**मनमौज**, स्त्री. ಸ್ವೇಚ್ಛಾಚಾರ, ನಿರಂಕುಶತ್ವ.
**मनमौजी**, वि. ತನ್ನಿಷ್ಟದಂತೆ ನಡೆಯುವವ, ಸ್ವೆಚ್ಛಾಚಾರಿ, ಸ್ವಚ್ಛಂದ; ವಿನೋದಪ್ರಿಯ, ಕುಶಾಲಿನವ.
**मनवाना**, सक्रि. **मनाना** का प्रे. रूप.
**मनशा**, स्त्री. = **मन्शा**.
**मनसना**, सक्रि. ಮನಸ್ಸು ಮಾಡು, ಸಂಕಲ್ಪ ಮಾಡು.
**मनसब**, पु. = **मन्सब**.
**मनसाना**, सक्रि. ಮನಸ್ಸು ಮಾಡಿಸು, ಸಂಕಲ್ಪ ಮಾಡಿಸು. अक्रि. ಉಲ್ಲಾಸಪಡು, ಹರ್ಷಿಸು.
**मनसूबा**, पु. = **मन्सूबा**.
**मनस्ताप**, पु. ಮನೋವ್ಯಥೆ; ಪಶ್ಚಾತ್ತಾಪ.
**मनहाई**, स्त्री. ನಿಷೇಧ, ನಿರೋಧ.
**मनहारी**, वि. ಮನಮೋಹಕ.
**मनहू**, क्रिवि. = **मानो**.
**मनहूस**, वि. ಅಶುಭ, ಅಮಂಗಲ; ಅವಲಕ್ಷಣವಾದ; ಕಳೆಗುಂದಿದ, ಅದೃಷ್ಟಹೀನ.
**मनहूसियत, मनहूसी**, स्त्री. ಅಶುಭ; ಅಮಂಗಳ; ಅವಲಕ್ಷಣ; ದುರದೃಷ್ಟ.
**मना**, वि. ಮನ್ನಾ ಮಾಡಿದ, ನಿಷಿದ್ಧಪಡಿಸಿದ, ನಿರೋಧಿಸಿದ, ವರ್ಜಿತ. **मना करना** = ನಿಷೇಧಿಸು, ಮನ್ನಾ ಮಾಡು, ತಡೆ, ನಿರೋಧಿಸು.
**मनाक, मनाग**, वि. ಸ್ವಲ್ಪ, ಕೊಂಚ.
**मनादी**, स्त्री. = **मुनादी**.
**मनाना**, सक्रि. ಒಪ್ಪಿಸು, ಸಮಜಾಯಿಸು; ಸಮಾಧಾನ ಹೇಳು; ನಂಬಿಸು, ಅನುನಯಿಸು; ಒಪ್ಪುಗೊಳಿಸು, ಒಡಂಬಡಿಸು; ಮೆಚ್ಚಿಸು; ಸ್ತುತಿಸು, ಕೊಂಡಾಡು; ಯೋಚಿಸು, ಚಿಂತಿಸು.
**मनाही**, स्त्री. ನಿಷೇಧ, ತಡೆ, ನಿರೋಧ.
**मनिया**, स्त्री. ಮಣಿ, ತುಳಸಿ ಮಣಿ; ಜಪಮಾಲೆ; ಕಂಠಿ.
**मनिहार**, पु. ಬಳೆ ಮಾಡುವವ ಅಥವಾ ಮಾರುವವ, ಬಳೆಗಾರ.
**मनिहारिन**, स्त्री. **मनिहार** का स्त्री. रूप.
**मनिहारी**, स्त्री. ಬಳೆಗಾರನ ಕೆಲಸ, ಬಳೆಗಾರಿಕೆ; ಬಳೆಗಾತಿ.

**मनी,** स्त्री. ರೇತಸ್ಸು, ವೀರ್ಯ; ಅಹಂಕಾರ, ಅಹಂಭಾವ.
**मनुष्य,** पु. ಮನುಷ್ಯ, ಮಾನವ, ಮಂದಿ.
**मनुहार,** वि. ವಶೀಕರಿಸುವ, ಒಲಿಸಿಕೊಳ್ಳುವ, ಮನೋಹರ. स्त्री. ಒಲಿಸಿಕೊಳ್ಳುವಿಕೆ, ಅನುನಯ; ನಂಬಿಸುವಿಕೆ, ಸಂತೈಸುವಿಕೆ; ಪ್ರೀತಿ, ಅಭಿಮಾನ.
**मनो,** क्रिवि. = **मानो.**
**मनोकामना,** स्त्री. ಇಚ್ಛೆ, ಹಾರೈಕೆ.
**मनोनीत,** वि. ಪಸಂದಾದ, ವರಯಿಸಿದ; ಆರಿಸಿದ, ಚುನಾಯಿಸಿದ. मनोनीत करना = ಚುನಾಯಿಸು.
**मनोरथ,** पु. ಇಷ್ಟ, ಮನೋರಥ; ಬಯಕೆ; ಹಾರೈಕೆ.
**मनोरा,** पु. ಕಾರ್ತಿಕ ಮಾಸದಲ್ಲಾಗುವ ದೀಪೋತ್ಸವ, ದೀಪಾವಳಿ.
**मनोरमा, मनोहर,** वि. ಸುಂದರ; ರಮ್ಯವಾದ; ಸೊಬಗಿನ.
**मनोहरता,** स्त्री. ಸೊಬಗು, ರಮ್ಯತೆ.
**मनौआ,** पु. ಸವಿ ಮಾತಿನಿಂದ ನಂಬಿಸುವಿಕೆ, ಮನವೊಲಿಸುವಿಕೆ, ಅನುನಯ ವಿನಯ.
**मनौती,** स्त्री. ಹೊಣೆ, ಒಪ್ಪಿಕೆ; ಹರಕೆ.
**मनौवल,** स्त्री. ವೈಮನಸ್ಯ, ಮನಸ್ತಾಪ.
**मन्नत,** स्त्री. ಒಪ್ಪಿಕೆ, ಸ್ವೀಕೃತಿ; ವಾಗ್ದಾನ; ಹರಕೆ, ಪ್ರಾರ್ಥನೆ; ವ್ರತ. मन्नत मानना = ಹರಕೆ ಹೊರು.
**मन्शा,** स्त्री. ಇಚ್ಛೆ, ಅಭಿಲಾಷೆ; ಅಭಿಪ್ರಾಯ; ಆಶಯ; ಭಾವ, ಇಂಗಿತ.
**मन्सब,** पु. ಪದ, ಪದವಿ; ಹುದ್ದೆ, ಅಂತಸ್ತು; ಕೆಲಸ, ಉದ್ಯೋಗ.
**मन्सबदार,** वि. ಪದವೀಧರ; ಹುದ್ದೇದಾರ, ಉದ್ಯೋಗಸ್ಥ; ಅಧಿಕಾರಿ.
**मन्सूख़,** वि. ತೆಗೆದುಹಾಕಿದ, ತಳ್ಳಿಪಡಿಯಾದ; ವಜಾ ಮಾಡಿದ, ರದ್ದು.
**मन्सूख़ी,** स्त्री. ತೆಗೆದುಹಾಕೋಣ, ತಳ್ಳುಪಡಿ; ವಜಾ, ರದ್ದು.
**मन्सूब,** वि. ಸೇರಿದ; ಸಂಬಂಧಿಸಿದ; ಸಂಬಂಧಪಟ್ಟ; ಅನ್ವಯಿಸುವ; ನೇಮಕವಾದ, ನಿಯುಕ್ತ.
**मन्सूबा,** पु. ಯುಕ್ತಿ, ಹಂಚಿಕೆ, ಹೂಟ; ನಿರ್ಧಾರ, ನಿಶ್ಚಯ, ಸಂಕಲ್ಪ.
**मपत,** स्त्री. ಅಳೆಯುವಿಕೆ, ಅಳತೆ.
**मपना,** अक्रि. ಅಳೆಯಲ್ಪಡು, ಅಳೆ.
**मपवाना, मपाना,** सक्रि. ಅಳಸು, ಅಳತೆ ಮಾಡಿಸು.
**मपान,** पु. ಅಳತೆ, ಪ್ರಮಾಣ.
**मफ़ऊल, मफ़्ल,** वि. ಕೆಲಸ ಮಾಡಲ್ಪಟ್ಟ. पु. ಕರ್ಮ (ಪದ).
**मफ़्तून,** वि. ಮುಗ್ಧ, ಅನುರಕ್ತ; ಕಾಮೋನ್ಮತ್ತ.
**ममता,** स्त्री. ವಾತ್ಸಲ್ಯ, ಅಕ್ಕರೆ; ಅಭಿಮಾನ, ಮಮತೆ.
**ममाई,** स्त्री. ಸೂಲಗಿತ್ತಿಯ ಕೆಲಸ.
**ममानी,** स्त्री. ಸೋದರಮಾವನ ಹೆಂಡತಿ
**ममिया,** वि. ಸೋದರ ಮಾವನ; ಸೋದರಮಾವನಂತೆ ಸಂಬಂಧವುಳ್ಳ. ममिया ससुर = ಗಂಡ ಅಥವಾ ಹೆಂಡತಿಯ ಸೋದರಮಾವ, ಮಾವನ ಭಾವಮೈದ.

मसियाना, अक्रि. ಕುರಿಯಂತೆ ಅರ ಚು, ಬೆಕ್ಕರಿಸು.
मसीरा, पु. ಕಣ್ಣಿನ ಔಷಧದ ಮೂಲಿಕೆ.
मसेरा, वि. ಸೋದರಮಾವನ; ಸೋದರ ಮಾವನ ಕಡೆಯ ಸಂಬಂಧದ. ममेरा भाई = ಸೋದರಮಾವನ ಮಗ.
ममोला, पु. ಖಂಜರೀಟ, ಗವುಜುಪಕ್ಕಿ, ದಾಸರಿ ಪಕ್ಕಿ.
मय, स्त्री. ಹೆಂಡ, ಸಾರಾಯಿ, ಸೇಂದಿ.
मय, अव्य. ಸಹಿತ, ಸಹ, ಸಮೇತ, ನಿಶಿ.
मयकश, वि. ಹೆಂಡಕುಡುಕ.
मयकशी, स्त्री. ಮದ್ಯಪಾನ.
मयख़ाना, पु. ಹೆಂಡದಂಗಡಿ, ಪಡಖಾನೆ
मयस्सर, वि. ಸಿಕ್ಕಿದ, ದೊರೆತ; ಲಬ್ಧ; ಪ್ರಾಪ್ತ, ಸಿಗುವ; ಲಭ್ಯ. मयस्सर होना = ಪ್ರಾಪ್ತವಾಗು, ಸಿಗು, ದೊರಕು.
मया, स्त्री. ದಯೆ, ಕನಿಕರ, ಎರಕ.
मयारी, स्त्री. ಉಯ್ಯಾಲೆಯ ದೂಲ.
मयी, स्त्री. ಹಲುಬೆ, ಕುಂಟೆ; ಏಣಿ.
मयूर, पु. मयूरी, स्त्री. ನವಿಲು.
मय्यत, स्त्री. ಹೆಣ, ಶವ.
मरक, पु. ಸೋಂಕುರೋಗ, ಮಾರಿ.
मरकचा, पु. ಛಾವಣಿಯ ಬೆಂಕಟ್ಟು.
मरकज़, पु. ಮಧ್ಯಬಿಂದು, ಕೇಂದ್ರ; ನಾಭಿ, ಮಧ್ಯ; ಕೇಂದ್ರಸ್ಥಾನ.
मरकना, अक्रि. ನಜ್ಜುಗುಜ್ಜಾಗು, ನಜ್ಜುಗು, ನೆಗ್ಗು; ತಿರಿಚಿಕೊಳ್ಳು.
मरकाना, सक्रि. ಜಜ್ಜು, ಚೆಚ್ಚು; ತಿರಿಚು.
मरक़ूम, मरक़ूमा, वि. ಬರೆದ, ಲಿಖಿತ, "ಮರ್ಕುಂ".

मरकहा, मरखना, मरखहा, वि. ಹೊಡೆಯುವ ಅಥವಾ ಬಡಿಯುವ ಸ್ವಭಾವವುಳ್ಳ; ಕೊಂಬುಗಳಿಂದ ಇರಿಯುವ (ದನ), ಇರಕುಳಿ.
मरगल, पु. ಹುರಿದ (ಮಾನು).
मरग़ूब, वि. ರುಚಿಕರ; ಸುಂದರ; ಉತ್ತಮ.
मरग़ोल, मरग़ोला, पु. ಗುಂಗುರು ಗೂದಲು, ಸುಳಿಗೂದಲು; ಸ್ವರಕಂಪನ, ಆಲುಗು, ಪಲುಕು.
मरघट, पु. ಸುಡುಗಾಡು, ಮಸಣ.
मरज़, पु. = मर्ज़.
मरजादा, पु. ಮರ್ಯಾದೆ, ಮಾನ; ಗೌರವ.
मरजिया, वि. ಸತ್ತು ಬದುಕಿದವ, ಮೃತಪ್ರಾಯನಾದ. पु. ಸಮುದ್ರದಲ್ಲಿ ಮುಳುಗುವವ.
मरज़ी, स्त्री. = मर्ज़ी.
मरण, पु. ಮರಣ, ಸಾವು.
मरदना, सक्रि. ನಾದು, ಮರ್ದಿಸು; ಉಜ್ಜು, ತಿಕ್ಕು.
मरदनिया, पु. ಮರ್ದಿಸುವವ, ಮೈ ತಿಕ್ಕುವವ, ಎಣ್ಣೆ ಒತ್ತುವವ.
मरदूआ, पु. ಮನುಷ್ಯ.
मरदूद, वि. ತಿರಸ್ಕೃತ, ನೀಚ; ಜಾತಿಗೆಟ್ಟವ, ಜಾತಿಭ್ರಷ್ಟ; ಅಧರ್ಮಿ.
मरनहार, मरनहारा, वि. ಸಾಯುವವ; ನಶಿಸುವ, ನಶ್ವರ.
मरना, अक्रि. ಸಾಯು, ಹತನಾಗು, ಮಡಿ; ನಾಶವಾಗು, ಅಳಿ. मर कटना,

मर मिटना = ಕೊಂದಾಡಿ ಸಾಯು; ಸಾಯು, ಮಡಿ. मर पचना = ಸತ್ತು ಸುಣ್ಣವಾಗು.

**मरनी**, ಸ್ತ್ರೀ. ಮೃತ್ಯು, ಸಾವು; ಮೃತ್ಯು ಶೋಕ; ಗಾಸಿ.

**मरफ़ा**, ಪು. ಡೋಲು, ಭೇರಿ.

**मरभुक्खा**, **मरभूखा**, ವಿ. ಹೊಟ್ಟೆಗಿಲ್ಲದೆ ಸಾಯುವವ, ಹೊಟ್ಟೆಗಿಲ್ಲದವ; ಅತ್ಯಾಶೆಯುವ, ಆಶಾತುರ; ಹೊಟ್ಟೆಬಾಕ, ತಿಂಡಿಬಾಕ.

**मरमर**, ಪು. ಅಮೃತಶಿಲೆ, ಹಾಲುಗಲ್ಲು. ಸಂಗಮಾರ ಕಲ್ಲು. ಸ್ತ್ರೀ. (ಪು.) ಮರಮರ ಶಬ್ದ, ಮೊರೆತ.

**मरमराना**, ಅಕ್ರಿ. ಮರಮರ ಶಬ್ದ ಮಾಡು, ಚಟಚಟ ಅನ್ನು, ಮೊರೆ.

**मरम्मत**, ಸ್ತ್ರೀ. ಮುರಿದು ಹೋದುದನ್ನು ಸರಿಪಡಿಸುವಿಕೆ, ಕೆಟ್ಟುಹೋದುದನ್ನು ನೇರ್ಪಡಿಸುವಿಕೆ; ಜೀರ್ಣೋದ್ಧಾರ, ಮರಮ್ಮತ್ತು; ದಾಗುದೂಜಿ, ರಿಪೇರಿ; ಸುಧಾರಣೆ, ತಿದ್ದುವಿಕೆ.

**मरम्मती**, ವಿ. ಮರಮ್ಮತ್ತು ಮಾಡಿದ, ಸರಿಪಡಿಸಿದ; ಮರಮ್ಮತ್ತು ಆಗಬೇಕಾದ; ಹರಿಮುರಿಯಾದ; ಕೆಟ್ಟಿರುವ.

**मरवाना**, ಸಕ್ರಿ. ಸಾಯಿಸು; ಕೊಲ್ಲಿಸು; ಹೊಡೆಸು; ವ್ಯಾಜ್ಯವನ್ನು ತಳ್ಳುಪಡಿ ಮಾಡು.

**मरसा**, ಪು. ಒಂದು ಸೊಪ್ಪು.

**मरसिया**, ಸ್ತ್ರೀ. ಶೋಕಗೀತೆ, ಅಳಲು ಹಾಡು, ಸಾವು ಹಾಡು; ಗೋಳು.

**मरहट**, ಸ್ತ್ರೀ. ಕಾಡುಕೆಸರು, ವನಮುದ್ಗ.

**मरहटा**, **मरहठा**, ಪು. ಮಹಾರಾಷ್ಟ್ರದವ, ಮರಾಠಿಯವ, ಆರೆಯವ

**मरहठिन**, ಸ್ತ್ರೀ. ಮರಾಠಿಯವಳು.

**मरहठी**, ವಿ. ಮಹಾರಾಷ್ಟ್ರದ, ಮರಾಠಿಯ. ಸ್ತ್ರೀ. ಮರಾಠಿ ಭಾಷೆ, ಆರೆ ಭಾಷೆ. मरहठी घिसघिस = ಗಲಿಬಿಲಿ; ಹಾವಳಿ, ಅಧ್ವಾನ.

**मरहम**, ಪು. ಲೇಪ; ಮುಲಾಮು; ಔಷಧದ ಪಟ್ಟು. मरहम पट्टी = ಮುಲಾಮು ಪಟ್ಟಿ, "ಪ್ಲಾಸ್ತ್ರಿ"; ಘಾಯಕ್ಕೆ ಮುಲಾಮು ಹಚ್ಚಿ ಕಟ್ಟುವಿಕೆ; ಸರಿಪಡಿಸುವಿಕೆ, ದಾಗುದೂಜಿ, ರಿಪೇರಿ, ಮರಮ್ಮತ್ತು.

**मरहमत**, ಸ್ತ್ರೀ. ದಯೆ, ಕೃಪೆ. मरहमत करना = ದಯಪಾಲಿಸು, ಕೊಡು.

**मरहला**, ಪು. ಯಾತ್ರೆಯಲ್ಲಿ ತಂಗುವ ಸ್ಥಳ, ಟಪ್ಪೆ, ಮಜಲು; ಪಾಳೆಯ, ಮೊಕ್ಕಾಂ; ಮಹಡಿ, ಅಂತಸ್ತು; ದರ್ಜೆ; ತೋಪುಖಾನೆ, ಬತ್ತೇರಿ.

**मरहून**, ವಿ. ಅಡವಿಟ್ಟ, ದೀಡಿಟ್ಟ.

**मरहूम**, ವಿ. ಭಗವಂತನ ಕೃಪೆಗೆ ಪಾತ್ರನಾದವ, ದೈವಾನುಗ್ರಹ ಪಡೆದವ; ದಿವಂಗತ, ಸ್ವರ್ಗೀಯ.

**मरात**, ಸ್ತ್ರೀ. ಹೆಂಗಸು, ಸ್ತ್ರೀ.

**मरातिब**, ಪು. ಪದ, ದರ್ಜೆ; ಅವಸ್ಥಾನ; ಅಂತಸ್ತು; ಮಹಡಿ; ಬಾವುಟ, ಧ್ವಜ.

**मराना**, ಸಕ್ರಿ. ಕೊಲ್ಲಿಸು, ಸಾಯಿಸು.

**मरायल**, ವಿ. ಏಟು ತಿಂದವ, ಪೆಟ್ಟು ತಿಂದವ. ಪು. ಪೆಟ್ಟು; ಹಾನಿ; ನಷ್ಟ.

**मराल**, ಪು. ಹಂಸ; ಬಾತು.

रियम, स्त्री. ಕನ್ಯೆ, ಕುಮಾರಿ.
रियल, वि. ಅರ್ಧ ಸತ್ತ; ನಿರ್ಜೀವ;
ನಿರ್ಬಲ, ಬಡಕಲ; ಸೋಮಾರಿ, ಆಲಸ.
री, स्त्री. ಸೋಕು ರೋಗ, ಮಾರಿ;
ರೋಗ; ಅರಿಷ್ಟ, ಈತಿಬಾಧೆ.
रीख़, पु. ಅಂಗಾರಕ, ಕುಜ.
रीज़, वि. ಕಾಯಿಲೆಯಾದ, ರೋಗ
ಗ್ರಸ್ತ; ವ್ಯಾಧಿಸ್ಥ, ರೋಗಿ.
रु, पु. ಮರುಭೂಮಿ, ಮರಳುಗಾಡು.
रुआ, पु. ಮರುಗ, ಮರುವಕ;
ಹಾವಣಿಯ ಬೆಂಕಟ್ಟಿನ ತೊಲೆ, ಬೆಂ
ತೊಲೆ; ಉಯ್ಯಾಲೆಯ ದೂಲ.
रुभूमि, स्त्री. मरुस्थल, पु. ಮರು
ಭೂಮಿ, ಮಳಲುಗಾಡು.
रोड़, पु. ಹೊಸೆಯುವಿಕೆ, ತಿರುವು
ಕೆ; ಸುತ್ತು, ತಿರುವು; ಮುರಿಗೆ,
ಮುರುಕು; ನುಲಿಕೆ; ಹೊಟ್ಟೆ ಕಡತ,
ಹೊಟ್ಟೆ ನುಲಿ; ಮುರುಕು, ಹುರಿ;
ಸೆಡತ, ಬಿಗುಮಾನ; ಸೆಡಕು, ಜಂಭ.
रोड़ना, सक्रि. ತಿರುಗಿಸು, ತಿರುವು;
ತಿರುಚು, ಮುರಿಚು, ಮುರಿ; ಹುರಿ
ಮಾಡು, ಹೊಸೆ; ನುಲಿ, ಹಿಂಡು;
ಡೊಂಬಲಿಸು, ಹಾತೊರೆ; ನುಂಗು.
रोड़फली, स्त्री. ಹೊಟ್ಟೆ ಕಡತಕ್ಕೆ
ಔಷಧವಾಗುವ ಒಂದು ಬಿತ್ತ.
रोड़ा, पु. ಮುರಿಗೆ, ತಿರುವು ಮುರುವು;
ನುಲಿ; ಹೊಟ್ಟೆ ಕಡತ. ಹೊಟ್ಟೆ ನುಲಿ.
रोड़ी, स्त्री. ಮುರಿಗೆ; ತಿರುವು ಮು
ರುವು. मरोड़ी करना = ಎಳದಾಡು.
रोड़, स्त्री. ಪ್ರೀತಿ; ಮರುಕ, ಕನಿಕರ.

मरोही, वि. ಕೃಪಾಲು, ದಯಾಲು.
मर्ग, पु. ಸ್ವರ್ಗಯಾತ್ರೆ, ಮರಣ.
मर्ज़, पु. ವ್ಯಾಧಿ, ರೋಗ, ಬೇನೆ;
ಮಂದ, ಜಾಡ್ಯ; ದುರಭ್ಯಾಸ, ಚಟ,
ದುರ್ವ್ಯಸನ.
मर्ज़ी, स्त्री. ಇಚ್ಛೆ, ಇಷ್ಟ; ಖುಷಿ,
ಮರ್ಜಿ, ಚಿತ್ತ.
मर्तबा, पु. ಪದವಿ, ಹುದ್ದೆ; ಅಂತಸ್ತು,
ದರ್ಜೆ; ತಡವೆ, ಸಾರಿ; ವೇಳೆ, ಸಂದರ್ಭ.
मर्तबान, पु. ಮಣ್ಣಿನ ಬರಣಿ, ಜಾಡಿ.
मर्द, पु. ಪುರುಷ, ಗಂಡಸು; ವೀರ;
ಗಂಡು; ಗಂಡ.
मर्दकार, वि. ವೀರಪುರುಷ, ಆಕೆವಾಳ.
मर्दक, पु. ಸಣ್ಣ ಮನುಷ್ಯ; ನೀಚ, ಲುಚ್ಚ.
मर्दन, पु. ಉಜ್ಜುವಿಕೆ, ಮರ್ದನ.
मर्दानगी, मर्दी, स्त्री. ಗಂಡಸುತನ,
ಪೌರುಷ; ಶೌರ್ಯ, ಸಾಹಸ.
मर्दाना, वि. ಪುರುಷನ, ಗಂಡು; ವೀರ,
ಸಾಹಸಿ; ಮನೆಯಲ್ಲಿ ಗಂಡಸರಿರುವ
ಸ್ಥಳ, ಗಂಡಸರು ಇರುವ ನಿಟ್ಟು.
मर्दानी, स्त्री. ವೀರನಾರಿ; ಧೀರಳು;
ಗಂಡುಬೀರಿ.
मर्दुम, पु. ಮನುಷ್ಯ; ಮಂದಿ, ಜನ;
ಪುರುಷ, ನರ. मर्दुम शुमारी = ಖಾ
ನೇಶುಮಾರಿ, ಜನಗಣತಿ, ಜನಸಂಖ್ಯೆ.
मर्दुमक, स्त्री. ಕಣ್ಣುಪಾಪೆ, ಕನೀನಿಕೆ.
मर्दुमी, स्त्री. ಗಂಡಸುತನ, ಪೌರುಷ;
ಮನುಷ್ಯತನ; ಔದಾರ್ಯ; ಸೌಜನ್ಯ.
मर्म, पु. ರಹಸ್ಯ, ಗುಟ್ಟು; ಗೂಢಾರ್ಥ;
ಗುಪ್ತಸ್ಥಾನ; ಪ್ರಾಣಸ್ಥಾನ, ಹೃದಯ.

**मर्म-भेदी, मर्म-स्पर्शी**, वि. ಹೃದಯವನ್ನು ಚುಚ್ಚುವ, ಹೃದಯವಿದಾರಕ.

**मर्याद**, स्त्री. ಮರ್ಯಾದೆ; ರೀತಿ, ಸಂಪ್ರದಾಯ; ಬೀಗರ ಔತಣ.

**मर्यादा**, स्त्री. ಮರ್ಯಾದೆ, ಗೌರವ; ಮಾನ, ಮಟ್ಟು; ಮೇರೆ, ಗಡಿ; ದಡ; ಧರ್ಮ.

**मलंग**, पु. ಮಹಮ್ಮದೀಯ ಸಂತ, ಯೋಗಿ; ದಾಂಡಿಗ, ದಡಿಯ.

**मलंगी**, पु. ತೊರೆಯ, ಉಪ್ಪಲಿಗ. स्त्री. ಒನಪುಗಾರ್ತಿ, ಬಿನ್ನಾಣಗಿತ್ತಿ.

**मल**, पु. ಮಲ; ಮೈಲಿಗೆ, ಕೊಳಕು.

**मलऊन**, वि. ಶಾಪಗ್ರಸ್ತ, ಪಾಪಿ; ಭ್ರಷ್ಟ.

**मलक**, पु. ದೇವದೂತ, ದೇವತೆ.

**मलकना**, अक्रि. ಜಗ್ಗು ಹಾಕುತ್ತ ನಡೆ.

**मलका**, पु. ತೀಕ್ಷ್ಣಬುದ್ಧಿ, ಮತಿ, ಪ್ರತಿಭೆ. स्त्री. ರಾಣಿ, ಪಟ್ಟದರಸಿ.

**मलख़**, पु. ಮಿಡಿತೆ, ಶಲಭ.

**मलखंभ, मलखम**, पु. ಗಾಣದ ಕಣೆ; ಕಸರತ್ತು ಮಾಡಲು ನೆಟ್ಟಿರುವ ಕಂಬ; ಕಂಬದ ಮೇಲೆ ಹತ್ತಿ ಇಳಿದು ಮಾಡುವ ಕಸರತ್ತು.

**मलगजा**, वि. ಜಜ್ಜಿದ, ನಜ್ಜುಗುಜ್ಜಾದ; ಬಜ್ಜಿಯಾದ. पु. ಬದನೇಕಾಯಿ ಬೋಂಡ, ಬಜ್ಜಿ.

**मलगोवा**, पु. ಕರುಳುಗಳು; ಹುಣ್ಣಿನಿಂದ ಬಸಿಯುವ ಕೊಳೆನೀರು, ಲಸಿಕೆ; ಮಲ, ಕೊಳೆ; ಕಸಕಡ್ಡಿ; ಒಂದು ವ್ಯಂಜನ.

**मलती**, स्त्री. ಓಕರಿಕೆ, ಉಬ್ಬಳಿಕೆ.

**मलन**, पु. ಉಜ್ಜುವಿಕೆ; ಹಿಸುಕುವಿಕೆ.

**मलना**, सक्रि. ತಿಕ್ಕು, ಉಜ್ಜು; ಸೀಟು, ಒರಸು; ಹಿಸುಕು; ನೀವು, ಮಾಲೀಸು ಮಾಡು; ಹೊಸಗು, ಹಿಂಡು. दलना मलना = ಉಜ್ಜು; ಇಡಿ, ಅರೆದು ಪುಡಿ ಮಾಡು.

**मलबा**, पु. ಕಸಕಡ್ಡಿ, ತಿಪ್ಪೆ; ಇಡಿದ ಗೋಡೆಯ ಇಟ್ಟಿಗೆ ಮಣ್ಣು ಆದಿ.

**मलबूस**, वि. ಧರಿಸಿದ. पु. ವಸ್ತ್ರ, ಬಟ್ಟೆ.

**मलमल**, स्त्री. ಮಲ್ಲುಬಟ್ಟೆ, ಮಲ್ಮಲ್.

**मलमला**, वि. ಉಪ್ಪಾದ, ಕ್ಷಾರ; ದುಃಖಪಡುವ; ಪಶ್ಚಾತ್ತಾಪ ಪಡುವ.

**मलमलाना**, सक्रि. ತಿರುಗಿ ತಿರುಗಿ ಆಲಿಂಗನ ಮಾಡು, ತಬ್ಬಿಕೊಳ್ಳು; ಪಶ್ಚಾತ್ತಾಪ ಪಡು.

**मलमेट**, वि. = मलियामेट.

**मलवाई**, स्त्री. ಉಜ್ಜುವುದಕ್ಕೆ ಅಥವಾ ನೀವುವುದಕ್ಕೆ ಕೊಡುವ ಕೂಲಿ.

**मलवाना**, सक्रि. मलना का प्रे. रूप.

**मलवैया**, पु. ಉಜ್ಜುವವ, ತಿಕ್ಕುವವ, ಒರೆಸುವವ.

**मलहम**, पु. = मरहम.

**मलाई**, स्त्री. ಹಾಲಿನ ಕೆನೆ, ಮಲಾಯಿ; ಸಾರ; ಉಜ್ಜುವಿಕೆ, ತಿಕ್ಕುವಿಕೆ; ಕುದುರೆಯ ಕೂದಲನ್ನು ಉಜ್ಜುವಿಕೆ, ಮಾಲೀಸು; ಉಜ್ಜುವುದರ ಕೂಲಿ.

**मलाका**, स्त्री. ಕಾಮುಕಿ, ಒನಪುಗಾತಿ.

**मलाना**, सक्रि. ಉಜ್ಜಿಸು, ತಿಕ್ಕಿಸು; ಹುಡಿ ಮಾಡಿಸು, ಬೀಸಿಸು.

**मलामत**, स्त्री. ತೆಗಳುವಿಕೆ, ಜರಿಯು

ಪಿಕೆ; ನಿಂದೆ; ದೋಷಾರೋಪಣೆ; ನಿಕೃಷ್ಟಾಂಶ. लानत मलामत = ಜರೆದಾಟ, ನಿಂದೆ.

[illegible]लामती, वि. ನಿಂದ್ಯ, ನಿಕೃಷ್ಟ.

[illegible]लार, पु. ಮಳೆಗಾಲದಲ್ಲಿಹಾಡುವಗೀತ. मलार गाना = ಹರ್ಷಚಿತ್ತನಾಗಿಹಾಡು

[illegible]लाल, पु. ಆಯಾಸ, ದಣಿವು; ದುಃಖ; ವಿಷಾದ, ವ್ಯಸನ; ಬೇಸರು, ಚಿಟ್ಟು.

[illegible]लावरोध, पु. ಮಲಬಂಧ, ಮಲ ಕಟ್ಟುವುದು, ಮಲಬದ್ಧತೆ.

[illegible]लाहत, स्त्री. ಅಂದ, ಲಾವಣ್ಯ.

[illegible]लिक, पु. ರಾಜನು; ಅಧಿಪತಿ.

[illegible]लिका, स्त्री. ಪಟ್ಟದರಸಿ, ರಾಣಿ.

[illegible]लिन, वि. ಕೊಳೆಯಾದ, ಮಲಿನ.

[illegible]लिनता, स्त्री. ಕೊಳಕು, ಮಾಲಿನ್ಯ.

[illegible]लिनाना, अक्रि. ಕೊಳಕಾಗು, ಮಲಿನವಾಗು.

[illegible]लिया, स्त्री. ಎಣ್ಣೆಯುಬಟ್ಟಲು, ಕುಡಿಕೆ.

[illegible]लियामेट, वि. ಹಾಳಾದ, ಮಣ್ಣುಪಾಲಾದ, ಪಾಳು.

[illegible]लीदा, पु. ತುಪ್ಪ ಅಥವಾ ಹಾಲು ಸಕ್ಕರೆ ಬೆರಸಿದ ಪೂರಿಯ ಚೂರು, ಮಾಲೀದಿ; ನಯವಾದ ಉಣ್ಣೆ ಬಟ್ಟೆ. [illegible]. ಉಜ್ಜಿದ, ತಿಕ್ಕಿದ.

[illegible]लीन, वि. ಕೊಳೆಯಾದ, ಮಲಿನ.

[illegible]लीह, वि. ಉಪ್ಪಾದ; ಲಾವಣ್ಯವುಳ್ಳ.

[illegible]क, वि. ಚೆಲುವಾದ, ಸುಂದರ.

[illegible], वि. ಶೋಕಿಸುವ, ದುಃಖಿತ.

[illegible]ज, वि. ಐದು ವರ್ಷದ; ಹತ್ತು ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನ; ವಯಸ್ಸಾದ, ವೃದ್ಧ.

मलैया, पु. ಮಣ್ಣಿನ ಗಡಿಗೆ, ಕುಡಿಕೆ.

मलोला, पु. ದುಃಖ. ವ್ಯಥೆ; ವ್ಯಸನ; ಕಷ್ಟ; ಬಯಕೆ, ಗೀಳು.

मल्ल, पु. ಮಲ್ಲ, ಜಟ್ಟಿ, ಪೈಲವಾನ.

मल्लार, पु. = मलार.

मल्लाह, पु. ಅಂಬಿಗ, ದೋಣಿಕಾರ, ನಾವಿಕ, ಮಾಲೀಮು; ತೊರೆಯ, ಉಪ್ಪಾರ.

मल्लाहिन, स्त्री. मल्लाह का स्त्री. रूप.

मल्लाही, वि. ಅಂಬಿಗನ, ನಾವಿಕರ. स्त्री. ನಾವಿಕನ ಕೆಲಸ; ದೋಣಿ ಬಾಡಿಗೆ, ನೋರು, ತರಪಣ್ಯ.

मलहाना, मलहारना, सक्रि. ತುಟಿ ಚಪ್ಪರಿಸು, ಮುದ್ದಾಡು, ಲಲ್ಲೆಗೈಯು.

मवाजिब, पु. ನಿಶ್ಚಿತಕಾಲದಲ್ಲಿ ದೊರೆಯುವ ನಿಯಮಿತವಾದ ಮೊಬಲಗು; ಸಂಬಳ, ತಲಬು.

मवाद, पु. ತತ್ವಗಳು, ಸಾರ; ಗಲೀಜು; ಕೀವು.

मवास, पु. ಆಶ್ರಯಸ್ಥಾನ, ಆಶ್ರಯ; ಕೋಟೆ, ದುರ್ಗ.

मवाशी, मवेशी, स्त्री. ದನಕರು, ಚತುಷ್ಪದಿ, ಕಾಲ್ನಡೆ, ದನಗಂಟೆ, ಗೋಕಾಯಿ, ಜಾನುವಾರು.

मवेशीख़ाना, पु. ಕೊಟ್ಟಿಗೆ, ಹಟ್ಟಿ, ದೊಡ್ಡಿ, ರೊಪ್ಪ.

मशक, पु. ಮಶಕ, ಸೊಳ್ಳೆ. स्त्री. ನೀರು ತುಂಬುವ ಚರ್ಮದ ಚೀಲ, ಬುದ್ದಲಿ, ಪಕಾಲಿ. मशक हो जाना

=ಸಂತೋಷದಿಂದ ಹಿಗ್ಗು, ಉಬ್ಬು.

**मशक्कत**, ಸ್ತ್ರೀ. ಕಷ್ಟ, ಪಾಡು; ಪರಿಶ್ರಮ; ಪರಿಪಾಟಲೆ; ಧಾವತಿ, ಮೆಹನತ್ತು.

**मशगला**, पु. ವಿನೋದ, ಮನೋರಂಜನ.

**मशगूल**, वि. ಕಾರ್ಯನಿರತ; ತಲ್ಲೀನ, ನಿಮಗ್ನ.

**मशरिक़**, पु. ಪೂರ್ವ, ಮೂಡಲು.

**मशरिक़ी**, वि. ಪೂರ್ವದ, ಮೂಡಣ.

**मशरू**, पु. ಒಂದು ಬಗೆ ರೇಷ್ಮೆ ಬಟ್ಟೆ.

**मशरूह**, वि. ವ್ಯಾಖ್ಯಾನ ಮಾಡಿದ, ವಿವರಿಸಿದ; ಮೇಲೆ ಹೇಳಿದ, ಉಪರೋಕ್ತ.

**मशवरा**, **मशविरा**, पु. ಮಂತ್ರಾಲೋಚನೆ, ಮಂತಣ; ಮಸಲತ್ತು, ಫಿತೂರಿ.

**मशहरी**, स्त्री. = **मसहरी**.

**मशहूर**, वि. ವಿಖ್ಯಾತ, ಪ್ರಸಿದ್ಧ; ಪ್ರಕಟವಾದ, ಪ್ರಕಟಿಸಿದ

**मशाल**, पु. ದೀವಟಿಗೆ, ಹಿಲಾಲು, ಪಂಜು, ಕಕ್ಕಡ, ಮಷಾಲು.

**मशालचिन**, स्त्री. **मशालची** का स्त्री. रूप.

**मशालची**, पु. ಪಂಜುಗಾರ, ದೀವಟಿಗ.

**मशीन**, पु. ಯಂತ್ರ, ಯಂತ್ರೋಪಕರಣ.

**मशीयत**, स्त्री. ಬಯಕೆ; ಇಚ್ಛೆ; ಇಷ್ಟ.

**मशूर**, वि. ಮರುಳಾದ, ವಶೀಭೂತ.

**मश्क**, स्त्री. ನೀರು ತುಂಬುವ ಚರ್ಮದ ಚೀಲ, ಬುದ್ದಲಿ, ಪಕಾಲಿ; ಈಜು ಬುರುಡೆ.

**मश्क़**, पु. ಹೊಡೆಯುವಿಕೆ, ಬಡಿಯುವಿಕೆ; ಪರಿಯುವಿಕೆ, ಸೀಳುವಿಕೆ; ಬರೆಯುವಿಕೆ, ಲೇಖನ; ಮಾದರಿ, ನಮೂನೆ; ಅಭ್ಯಾಸ, ಪಾಠ, ರೂಢಿ.

**मश्शाक़**, वि. ಅಭ್ಯಾಸವುಳ್ಳವ; ದಕ್ಷ, ನಿಷ್ಣಾತ.

**मश्शाक़ी**, स्त्री. ಅಭ್ಯಾಸ, ಬಳಕೆ.

**मश्शाता**, **मश्शाती**, स्त्री. ಕೂದಲು ಬಾಚುವವಳು, ಚೇಟಿ, ತೊತ್ತು; ಮದುವೆ ಮಾಡಿಸುವ ಮಧ್ಯಸ್ಥಗಾತಿ.

**मष्ट**, स्त्री. ನಿಶ್ಶಬ್ದತೆ, ಮೌನ. मष्ट मारना=ಸುಮ್ಮನಿರು, ಮೌನತಾಳು.

**मस**, पु. ಸ್ಪರ್ಶ. पु. ಮೀಸೆ ಮೂಡಿಯುವ ಮೊದಲು ತುಟಿಯ ಮೇಲಿರುವ ಕೂದಲು, ಎಳೆ ಮೀಸೆ, ಮೊಗರು ಮೀಸೆ, ಚಿಗುರು ಮೀಸೆ. मसें भींगना या भींजना = ಮೊಗರು ಮೀಸೆ ಹೊರಡು; ಪ್ರಾಯಕ್ಕೆ ಬರು.

**मसक**, पु. ಮಶಕ, ಸೊಳ್ಳೆ. स्त्री. ಸೀಳುವಿಕೆ, ಹರಿಯುವಿಕೆ; ಮುರಿಯುವಿಕೆ.

**मसकना**, अक्रि. ಹರಿ, ಸೀಳು, ಹಿಸಿ, ಬಿರಿ. सक्रि. ಹರಿ. ಸೀಳು; ತುಂಡಿಸು; ಒತ್ತು.

**मसक़ला**, पु. ಸಾಣೆ ಕಲ್ಲು; ಸಾಣೆ; ಸಾಣೆ ಹಿಡಿಯುವಿಕೆ.

**मसका**, पु. ಬೆಣ್ಣೆ; ಸುಣ್ಣ; ಸರಕು; ಸೀಳು; ಬಿರುಕು.

**मसकाना**, सक्रि. ಹರಿ, ಸೀಳು, ಸಿ...

**मसकोरा**, पु. ನಿದ್ರಿಸುವಾಗ ಮಗ್ಗಲು ಬದಲಾಯಿಸುವಿಕೆ. मसकोरा मार...

...ಗಲು ಬದಲಾಯಿಸು.

...रा, पु. ಹಾಸ್ಯಗಾರ, ವಿದೂಷಕ, ...ಕಾರ, ನಕಲಿಯವ.

...पन, पु. मसखरी, स्त्री. ...ತಮಾಷೆ, ನಕಲಿ, ಪರಿಹಾಸ.

...द, स्त्री. ಪ್ರಾರ್ಥನೆಯ ಸ್ಥಳ, ...ಪಳ್ಳಿ, ಮಶೀದೆ, ದರಗ.

...र, पु. ಮೂಲಸ್ಥಾನ, ಉದ್ಗಮ; ...ಧಾತು; ಕ್ರಿಯಾಪದದ ...ರೂಪ.

...द, स्त्री. ದೊಡ್ಡ ದಿಂಬು, ಲೋಡು, ...; ಮೆತ್ತೆಯ ಕುರ್ಚಿ, ಪಲ್ಲಂಗ; ..., ಗಾದಿ, ಪಟ್ಟವಣೆ; ಆಧಾರ.

...नशीन, वि. ಸಿಂಹಾಸನಾ... ಪಟ್ಟವನ್ನೇರಿದವ. पु. ದೊರೆ, ...

...दी, वि. ಸಿಂಹಾಸನದ.

...ती, स्त्री ಒಂದು ಬಗೆ ಕವನ.

..., सक्रि. = मसलना.

...ना, अक्रि. ಹೆದರಿಕೆಯಿಂದ ...ಅಭಿಪ್ರಾಯಗಳನ್ನು ಮುಚ್ಚಿಟ್ಟು ...ಬಲ್ಲದಂಥ ಮಾತನಾಡು.

..., पु. ಧಕ್ಕಾಮುಕ್ಕಿ, ನುಗ್ಗಾಟ

..., पु. ಪ್ರಯೋಗ, ಬಳಕೆ, ಉಪ...; ಖರ್ಚು; ಬೆಲೆ.

..., पु. ಕೆಳಕ್ಕೆ ತಳ್ಳುವಿಕೆ.

..., वि. ಕದ್ದ, ಕಳುವಿನ (ಮಾಲು)

..., वि. ಬದಲಾಯಿಸಿದ; ಖ... ..., ಬಳಸಿದ; ನಿರತ, ತಲ್ಲೀನ, ...

मसरूर, वि. ಪ್ರಸನ್ನ, ಹರ್ಷಿತ.

मसरूरी, स्त्री. ಪ್ರಸನ್ನತೆ, ಹರ್ಷಚಿತ್ತ.

मसल, स्त्री. ಕತೆ; ಹೇಳಿಕೆ; ಗಾದೆ, ಸಾಮತಿ; ಲೋಕೋಕ್ತಿ; ದೃಷ್ಟಾಂತ; ಸ್ಥಾನ; ವಿಭಾಗ.

मसलन्, क्रिवि. ಉದಾಹರಣೆಗಾಗಿ, ದೃಷ್ಟಾಂತಕ್ಕೆ, ಉದಾಹರಣಾರ್ಥ; ಮಸಲಾ.

मसलना, सक्रि. ತಿಕ್ಕು, ಹೊಸಗು; ಹಿಂಡು, ಹಿಸಕು; ನಾದು, ಮರ್ದಿಸು.

मसलहत, स्त्री. ಒಳ್ಳೆಯದು, ಕ್ಷೇಮ; ಒಳ್ಳೆಯ ಉಪಾಯ, ಯುಕ್ತಿ; ಸಲಹೆ; ಮಸಲತ್ತು.

मसला, पु. ಪ್ರತೀತಿ, ಮತ; ಸೂಕ್ತಿ; ವಿಚಾರಣೀಯ ವಿಷಯ, ಸಮಸ್ಯೆ.

मसलूब, वि. ಹಿಡಿಯಲ್ಪಟ್ಟ; ಕಸಿದು ಕೊಳ್ಳಲ್ಪಟ್ಟ; ಲೂಟಿಮಾಡಿದ; ಶೂಲಕ್ಕೇರಿಸಿದ.

मसविदा, पु. ಕರಡು ಬರವಣಿಗೆ, ಕರಡು ಪ್ರತಿ, ಚಿತ್ತು ನಕಲು; ಕಾಯಿದೆಯ ಕರಡು, ಮಸೂದೆ; ಉಪಾಯ, ಹಂಚಿಕೆ, ಯುಕ್ತಿ.

मसहरी, स्त्री. ಸೊಳ್ಳೆ ಪರದೆ, ಸೊಳ್ಳೆ ತೆರೆ; ಸೊಳ್ಳೆ ಪರದೆ ಕಟ್ಟಿದ ಮಂಚ.

मसा, पु. ಸೊಳ್ಳೆ; ನರೋಲಿ, ಹಾಲುಣ್ಣೆ

मसान, पु. ಶ್ಮಶಾನ, ಮಸಣ, ಸುಡುಗಾಡು; ಪಿಶಾಚಿ, ದೆವ್ವ; ಕೈಕಾಲು ಸೆಳತ

मसाना, पु. ಮೂತ್ರಕೋಶ, ಉಚ್ಚೆಚೀಲ, ವಸ್ತಿ.

मसानिया, पु. ಶ್ಮಶಾನ ರಕ್ಷಕ; ದೆವ್ವ

ಬಿಡಿಸುವವ.

**मसानी**, स्त्री. ಪಿಶಾಚಿನಿ.

**मसार**, पु. ಮರಕತ, ಪಚ್ಚೆ.

**मसालह, मसाला**, पु. ಸಾಮಗ್ರಿ, ಸೋಪಸ್ಕರ, ಸಾಧನ; ಕಾರಣ ಸಾಮಗ್ರಿ. ಘಟಕಪದಾರ್ಥ; ಸಂಬಾರದ ಸಾಮಾನು, ಗರಂ ಮಸಾಲೆ, ಗಂಧ ಸರಕು; ಎಣ್ಣೆ, ತೈಲ; ಬಾಣಬಿರುಸು.

**मसालेदार**, वि. ಸಂಬಾರದ; ಕಾರ.

**मसि, मसी**, स्त्री. ಮಸಿ, ಶಾಯಿ; ಕಾಡಿಕಪ್ಪು.

**मसिदानी**, स्त्री. ಮಸಿ ಬುರುಡೆ, ಶಾಯಿ ಕುಡಿಕೆ.

**मसियाना**, अक्रि. ತುಂಬು, ನೆರೆ.

**मसीद**, स्त्री. = मसजिद.

**मसीन**, पु. ಒಂದು ಬಗೆ ಹುರುಳಿ.

**मसीना**, पु. ಅಗಸೆ ಬೀಜ; ಜೋಳ.

**मसीह, मसीहा**, पु. ಏಸು ಕ್ರಿಸ್ತನು.

**मसीही**, वि. ಕ್ರಿಸ್ತನ, ಕ್ರೈಸ್ತ.

**मसू**, स्त्री. ಕಷ್ಟ, ತೊಂದರೆ.

**मसूड़ा**, पु. ವಸಡು, ಒಸಡಿ, ಇಗರು.

**मसूर**, पु. **मसूरा**, स्त्री. ಒಂದು ಬಗೆ ಬೇಳೆ, ಚಣಗಿ, ಚನ್ನಂಗಿ ಬೇಳೆ.

**मसूरिका, मसूरी**, स्त्री. ಮಸೂರಿಕೆ, ಸಿಡುಬು.

**मसूस, मसूसन, मसोसन**, स्त्री. ವ್ಯಥೆ; ಮರುಕ; ಸಂತಾಪ.

**मसूसना, मसोसना**, सक्रि. ಹಿಂಡು, ಹಿಸುಕು; ನುಲಿ, ತಿರಿಚು; ಅಡಗಿಸಿಡು. अक्रि. ವ್ಯಥೆಪಡು, ದುಃಖಿಸು, ಮರುಗು, ಕೊರಗು; ನೊಂದುಕೊಳ್ಳು.

**मसेवरा**, पु. ಮಾಂಸದ ವ್ಯಂಜನ.

**मसौदा**, पु. = मसविदा.

**मस्त**, वि. ಮದಿಸಿದ, ಅಮಲೇರಿದ, ಮತ್ತ; ಬೆದೆಗೊಂಡ; ಸೊಕ್ಕಿದ; ಸಂತಸದ ಲಿನ, ಉಲ್ಲಾಸವುಳ್ಳ.

**मस्तक**, पु. ತಲೆ, ಮಸ್ತಕ; ಹಣೆ; ನೆತ್ತಿ.

**मस्तगी**, स्त्री. ಗೋಂದು, ಹಗಿನ.

**मस्ताना**, वि. ಮದೋನ್ಮತ್ತ, ಮದಿಸಿದ; ಮದದ, ಮತ್ತ; ಬೆದೆಗೊಂಡ. अक्रि. ಮತ್ತನಾಗು, ಮದಹತ್ತು; ಸೊಕ್ಕು ಹತ್ತು; ಶೀಟಿ ಹತ್ತು; ಬೆದೆಗೊಳ್ಳು. सक्रि. ಬೆದೆಗೊಳಿಸು.

**मस्ती**, स्त्री. ಮದ, ಮತ್ತು; ಸೊಕ್ಕು ಮಸ್ತಿ, ಬೆದೆ, ಕಾಮೋದ್ದೀಪನೆ.

**मस्तूद**, वि. ಅದೃಷ್ಟವಂತ; ಸುಖಿ.

**मस्तूर**, वि. ಬರೆದ, ಲಿಖಿತ; ವರ್ಣಿಸಿದ; ಮೇಲೆ ಹೇಳಿದ, ಸದರಿ; ಗುಪ್ತ, ಮುಚ್ಚಿದ. स्त्री. ಮುಚ್ಚುಮರೆ, ಗುಪ್ತತೆ; ಸತೀತ್ವ; ಸಂಕೋಚ, ನಾಚಿಕೆ.

**मस्तूरात**, स्त्री. ಮಹಿಳೆಯರು, ಹೆಂಗಳೆಯರು.

**मस्तूल**, पु. ಹಡಗಿನ ಪಟಸ್ತಂಭ, ಕೂವೆ ಮರ.

**महंगा**, वि. ಬೆಲೆಯೇರಿದ, ತಗ್ಗಾದ, ತುಟ್ಟಿ, ದುಬಾರಿ.

**महंगाई, महंगी**, स्त्री. ಬೆಲೆಯೇರು ವಿಕೆ, ತಗ್ಗು, ತುಟ್ಟಿ; ಗೊಟ್ಟು, ಬಿಕ್ಕಟ್ಟು ತತ್ವಾರ, ದುರ್ಭಿಕ್ಷ.

**महंत**, पु. ಮಠಾಧಿಪತಿ, ಮಹಂತ.

...ी, स्त्री. ಮಠದ ಅಧಿಕಾರಿಣಿ,
...ಗಿತ್ತಿ.
...ई, स्त्री. ಮಠಾಧಿಪತಿಯ ಕೆಲಸ
... ಪದವಿ.
...क, स्त्री. ಸುಗಂಧ, ಪರಿಮಳ, ಕಂಪು,
..., ಸುವಾಸನೆ.
...दार, वि. ಸುವಾಸನೆಯುಳ್ಳ.
...ना, अक्रि. ಪರಿಮಳಿಸು, ಮಗ
...ಿಸು.
...मा, पु. ನ್ಯಾಯಸ್ಥಾನ, ಕಛೇರಿ;
..., ಶಾಖೆ, ಖಾತೆ, ಇಲಾಖೆ.
...र, स्त्री. ಸುವಾಸನೆ, ಪರಿಮಳ.
...ना, सक्रि. ಸುಗಂಧ ಕೊಡು.
...ला, वि. ಪರಿಮಳವುಳ್ಳ.
...म, वि. ಆಳಲ್ಪಟ್ಟ, ಶಾಸಿತ.
..., वि. ಶುದ್ಧ, ಬರಿಯ, ಮಾತ್ರ.
...वी, स्त्री. ಇಂದುಮುಖಿ.
...र, पु. ನಿರೂಪ; ಇಸ್ತಿಹಾರು
...; ವರದಿ; ಮನವಿ, ಮಹಜರು.
...ज़, वि. ಸಂತುಷ್ಟ, ಹರ್ಷಿತ.
...ा, पु. ಮುಖಂಡ; ಗೌಡ, ಹೆಗ್ಗಡೆ;
...ಕನ, ಶಾನುಭೋಗ. स्त्री. ಮ
...
...ाब, पु. ಚಂದ್ರ; ಚಂದ್ರಿಕೆ, ಬೆಳ
...ಗಳು; ಹಗಲುಬತ್ತಿ, ಮತಾಪು.
...बी, वि. ಚಂದ್ರನ; ಬೆಳದಿಂಗ
...; ಚಂದ್ರನಂತಹ. स्त्री. ಹಗಲು
..., ಮತಾಪು; ಚಂದ್ರಶಾಲೆ, ವಿಹಾರ
...; ಚಕ್ಕೋತದ ಹಣ್ಣು.
...ती, स्त्री. ತಾಯಿ, ಅಮ್ಮ, ಅವ್ವ.

**महती**, स्त्री. ಮಹತ್ವ, ಹಿರಿಮೆ.
**महतो**, पु. = महता.
**महत्व**, पु. ಮಹತ್ವ, ಶ್ರೇಷ್ಠತೆ.
**महदूद**, वि. ಮೇರೆಹಾಕಿದ, ಪರಿಮಿತ; ಅರ್ಥನಿರ್ಣಯ ಮಾಡಿದ.
**महना**, सक्रि. ಕಡೆ, ಮಥಿಸು.
**महफ़िल**, स्त्री. ಸಭೆ, ಸದಸ್ಸು; ನಟನ ಸಭೆ, ಸದರು; ನಾಟ್ಯರಂಗ.
**महफ़ूज़**, वि. ಸುರಕ್ಷಿತವಾದ, ಭದ್ರ; ವಿನಾಯಿತಿ ಮಾಡಿದ; ಬಾಯಿಪಾಠ ಮಾಡಿದ, ಕಂಠಪಾಠ ಮಾಡಿದ.
**महबत**, स्त्री. = मुहब्बत.
**महबूब**, पु. ಪ್ರಿಯ, ಇನಿಯ.
**महबूबा**, पु. ಪ್ರಿಯೆ, ಇನಿಯಳು; ಸುಂದರಿ, ಚೆಲುವೆ.
**महबूबाना**, वि. ಪ್ರಿಯಳಂತಹ, ಪ್ರೇಮಿಕೆಯಂತಹ. पु. ಪ್ರೇಮಿಕೆ; ಪ್ರೇಮಿ.
**महबूबियत, महबूबी**, स्त्री. ಲಾವಣ್ಯ; ಸೊಬಗು; ರಮಣೀಯತೆ.
**महबूस**, वि. ಬಂದಾದ, ಮುಚ್ಚಿದ; ಬಂಧನದಲ್ಲಿರುವವ; ಸೆರೆಯಾಳು, ಕೈದಿ
**महमंत**, वि. ಮದ ಹಿಡಿದ, ಮತ್ತ.
**महमह**, क्रिवि. ಮಗಮಗಿಸುತ್ತ.
**महमहा**, वि. ಮಗಮಗಿಸುವ, ಸುಗಂಧಿತ
**महमहाना**, अक्रि. ಪರಿಮಳಿಸು, ಮಗಮಗಿಸು.
**महमूद**, वि. ಪ್ರಶಂಸಿತ; ಪ್ರಶಂಸನೀಯ
**महमेज़**, स्त्री. ಕುದುರೆಸವಾರರ ಹಿಮ್ಮಡಿ ಮುಳ್ಳು, ಮುಳ್ಳುಸಂಟಿಕ, ಮಮ್ರೋಜು
**महर**, पु. ಸ್ತ್ರೀಧನ, ತೆರವು; ಹೆಗ್ಗಡೆ,

ಜಮೀನುದಾರ, ಜಹಗೀರುಧ್ದಾರ.

**महरम**, पु. ಮಿತ್ರ, ಸಖ; ಅಂತರಂಗ ಮಿತ್ರ, ಆಪ್ತ; (ಮುಹಮ್ಮದೀಯ) ಸ್ತ್ರೀಯರನ್ನು ಬುರುಕಿಯಿಲ್ಲದಿರುವಾಗ ನೋಡತಕ್ಕ ನಿಕಟ ಸಂಬಂಧದ ಗಂಡಸರು, (ತಂದೆ, ಚಿಕ್ಕಪ್ಪ, ಸೋದರ ಮಾವ, ಅಣ್ಣ ಮೊದಲಾದವರು); ಗುಟ್ಟನ್ನರಿತವ, ಮರ್ಮಜ್ಞ. स्त्री. ಸ್ತನಗಳನ್ನು ಮುಚ್ಚುವ (ಬಟ್ಟಲಿನ ಆಕಾರಕ್ಕೆ ಹೊಲಿದ) ರವಿಕೆಯ ಭಾಗ; ರವಿಕೆ, ಕುಪ್ಪಸ.

**महरा**, पु. ಮುಖಂಡ; ಪಲ್ಲಕ್ಕಿ ಹೊರುವವ, ಬೋಯಿ, ಹಮಾಲ.

**महराज**, पु. ಮಹಾರಾಜ, ದೊರೆ.

**महराना**, पु. ಜಮೀನುದಾರನ ನಿವಾಸ.

**महराब**, पु. = मेहराब.

**महरि**, स्त्री. ದೊರೆಸಾನಿ; ಯಜಮಾನಿ, ಒಡತಿ; ಒಂದು ಪಕ್ಷಿ.

**महरी**, स्त्री. महरा का स्त्री. रूप.

**महरूम**, वि. ಇಲ್ಲದಿರುವ, ತಪ್ಪಿಸಿದ; ನಿಷೇಧಿಸಿದ; ರಹಿತ, ಅಭಾವದಲ್ಲಿರುವ; ನಿರ್ಭಾಗ್ಯ. महरूम रखना = ಇಲ್ಲದಂತೆ ಮಾಡು, ತಪ್ಪಿಸು.

**महरेटा**, पु. ಶ್ರೀಕೃಷ್ಣ.

**महरेटी**, स्त्री. ಕೃಷ್ಣಪ್ರಿಯೆ, ರಾಧೆ.

**महल**, पु. ಮನೆ, ಗೃಹ; ಅರಮನೆ, ಮಹಲು; ಸೌಧ, ಭವನ, ಹರ್ಮ್ಯ; ಅಂತಃಪುರ, ರಾಣಿವಾಸ; ರಾಣಿ, ಅರಸಿ; ಸಂದರ್ಭ, ಸಮಯ.

**महलसरा**, पु. ರಾಣಿವಾಸ, ಅಂತಃಪುರ; ಅಂತಃಪುರದ ಸೇವಕ.

**महली**, वि. ಅಂತಃಪುರದ. पु. ಅಂತಃಪುರದ ಸೇವಕ; ನಪುಂಸಕ, ಕೊಜ್ಜ

**महल्ला**, पु. ನಗರದ ಒಂದು ಭಾಗ, ಮೊಹಲ್ಲ, ಕೇರಿ, "ವಾರ್ಡ್"; ಸೈನ್ಯ ಪರೀಕ್ಷೆ, ಅನೀಕದರ್ಶನ.

**महल्लादार**, पु. ಕೇರಿಯ ಮುಖ್ಯಸ್ಥ ಝಾಡಮಾಲಿ, ಹಲಾಲಖೋರ.

**महशर**, पु. ಸಭೆ; ದೇವರ ಮುಂದೆ ಕರ್ಮ ವಿಚಾರಣೆಯ ದಿನ; ಪ್ರಳಯ.

**महसिल**, वि. ವಸೂಲು ಮಾಡುವವ

**महसूर**, वि. ಮುತ್ತಲ್ಪಟ್ಟ, ಆವೃತ.

**महसूल**, पु. ತೆರಿಗೆ, ವರಿ, ಕರ; ಸಿದ್ಧಾಯ, ಕಂದಾಯ; ಸುಂಕ, ಹಾಸಲು; ನೋರು.

**महसूलदार**, वि. ಕಂದಾಯ ತೆರುವವ

**महसूली**, वि. ತೆರಿಗೆ ಅಥವಾ ಹಾಸಲು ಕೊಡಬೇಕಾದ; ಕಂದಾಯ ಕೊಡತಕ್ಕ (ಜಮೀನು).

**महसूस**, वि. ಮನಗಂಡ, ಮುಟ್ಟಿದ; ಭಾವಗತ; ವೇದ್ಯ, ವಿದಿತ. महसूस करना = ಮನಗಾಣು, ತಿಳಿ; ಅನುಭವಿಸು.

**महा**, वि. ದೊಡ್ಡ; ಭಾರಿ; ಶ್ರೇಷ್ಠ. पु. ಮಜ್ಜಿಗೆ, ಅಳೆ, ತಕ್ರ.

**महाकंद**, पु. ಬೆಳ್ಳುಳ್ಳಿ; ಕುಂಟಿಗೆಡ್ಡೆ.

**महाई**, स्त्री. ಮಥಿಸುವುದರ ಕೂಲಿ.

**महाजन**, पु. ದೊಡ್ಡ ಮನುಷ್ಯ; ಧನವಂತ; ಲೇವಾದೇವಿ ಮಾಡುವವ ಸಾಹುಕಾರ; ವರ್ತಕ, ವ್ಯಾಪಾರಸ್ಥ.

…जनी, स्त्री. ಹಣಕಾಸಿನ ವ್ಯಾಪಾರ; …ವಾದೇವಿ; ಸಾಹುಕಾರತನ; ಒಂದು …ತೆ ಮೋಡಿ ಅಕ್ಷರ.

…त्मा, पु. ಮಹಾತ್ಮ, ಮಹಾಪುರುಷ.

…नता, पु. ಸನ್ಮಾನ್ಯ, ಬ್ರಹ್ಮಶ್ರೀ.

…नाई, स्त्री. ದೊಡ್ಡಮ್ಮ, ಸಿಡುಬು.

…मारी, स्त्री. ಸೋಂಕುರೋಗ, …ಟುಜಾಡ್ಯ, ಮಾರಿ.

…र, स्त्री. ಒಂಟೆಯ ಮೂಗುದಾರ; …ಮು.

…रत, स्त्री. ಅಭ್ಯಾಸ; ನೈಪುಣ್ಯ.

…राज, पु. ದೊಡ್ಡ ರಾಜ, ಮಹಾ…; ಅರಸ, ಧೊರೆ; ಬ್ರಾಹ್ಮಣರಿಗೆ …ವಾರ್ಥದ ಶಬ್ದ; ಅಡಿಗೆ ಮಾ…ವ ಬ್ರಾಹ್ಮಣ.

…राणा, पु. ರಾಜಪುತ್ರ ರಾಜರ …ದು.

…रानी, स्त्री. ಮಹಾರಾಣಿ, ಅರಸಿ.

…ल, पु. ಮೊಹಲ್ಲ, ಪೇಟೆ, ಕೇರಿ; …ಯ ಒಂದು ವಿಭಾಗ, ಮಾಗಣೆ, …ಕಾಲು; ಪಾಲು, ಹಿಸ್ಸೆ. वि. …ಂಭವ, ಅಸಾಧ್ಯ.

…वट, स्त्री. ಮಾಘಮಾಸದ ಮಳೆ.

…वत, पु. ಆನೆ ನಡೆಸುವವ, ಮಾ…ತ, ಮಾವಟಿಗ, ಜೋದ.

…वतनी, स्त्री. महावत का स्त्री. रूप.

…वर, पु. ಕೆಂಪರಗು, ಲಾಕ್ಷ; …ರಂಜಕ.

…वरा, पु. = मुहावरा.

…वरी, स्त्री. ಅರಗಿನ ಬಿಲ್ಲೆ.

महाशय, पु. ಮಹಾಶಯ, ಮಹನೀಯ.

महाशया, स्त्री. महाशय का स्त्री. रूप.

महियाउर, पु. ಬಕಾಳಭಾತು, ಮೊಸರನ್ನ.

महिला, स्त्री. ಮಹಿಳೆ, ಕುಲಸ್ತ್ರೀ.

मही, स्त्री. ಭೂಮಿ, ದೇಶ. पु ಮಜ್ಜಿಗೆ

महीन, वि. ತೆಳ್ಳನೆಯ, ತೆಳು; ಜಿನುಗಾದ, ನುಣುಪಾದ; ಕೋಮಲ. पु. ರಾಜ, ದೊರೆ; ರಾಜಕುಮಾರ.

महीनपन, पु. ನುಣುಪು; ಸೂಕ್ಷ್ಮತೆ.

महीना, पु. ಮಾಸ, ತಿಂಗಳು, ಮಾಹೆ; ಮಾಸಾಶನ, ಸಂಬಳ, ತಲಬು; ರಜೋಧರ್ಮ, ಮುಟ್ಟು.

महुअर, पु. ಪುಂಗಿ ವಾದ್ಯ; ಮಾಟ, ಮೋಡಿ.

महुआ, पु. ಹಿಪ್ಪೆಮರ, ಮಧೂಲ.

महेर, पु. ಜಗಳ, ಕಚ್ಚಾಟ.

महेरा, पु. ಬಕಾಳಭಾತು, ದಧ್ಯೋದನ

महेरी, स्त्री. ಮೊಸರನ್ನ, ಬಕಾಳಭಾತು; ರಾಗಿ ಮುದ್ದೆ. वि. ತಡೆಗಟ್ಟುವವ; ವಿಘ್ನ ತರುವವ.

महेला, पु. ಅರೆದ ಹುರುಳಿ ಕಾಳು.

महो, वि. ಮರೆತುಹೋದ; ಅಳಿಸಿದ; ತಲ್ಲೀನ, ನಿರತ.

महोछा, स्त्री. ದೊಡ್ಡ ಹಬ್ಬ; ಫಕೀರರ ಮರಣಾನಂತರ ಮಾಡುವ ಸಂತರ್ಪಣೆ.

महोत्सव, पु. ದೊಡ್ಡ ಜಾತ್ರೆ, ಮಹೋತ್ಸವ.

महोदय, पु. ಮಹಾಶಯ, ಸ್ವಾಮಿ.

महोदया, स्त्री. ಅಮ್ಮನವರು; ಮಹಾ

ತಾಯಿ.

**महोला**, पु. ನೆವ, ಸಬೂಬು; ಠಕ್ಕು, ಮೋಸ.

**महोसा**, पु. ಪುಚ್ಚೆ, ತಿಲಕ.

**मां**, स्त्री. ಅಮ್ಮ, ತಾಯಿ, ಮಾತೆ. मां जाया = ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ, ಸಗರ್ಭ್ಯ.

**मांई**, स्त्री. ಸೋದರಮಾವನ ಹೆಂಡತಿ.

**मांग**, स्त्री. ಬೇಡುವಿಕೆ, ಯಾಚನೆ, ವಶಿ; ಬೇಡಿಕೆ, ಕೋರಿಕೆ; ಗಿರಾಕಿ, ಗ್ರಾಹಕ; ಬೈತಲೆ, ಪಾವಟೆ, ಸೀಮಂತ; ಹಡಗಿನ ಮುಂಭಾಗ, ಅಣಿಗೆ; ವಾಚಾದತ್ತ; ವಾಚಾದತ್ತ ಮಾಡಿರುವ ಕನ್ಯೆ. मांग पट्टी = ಸೀಮಂತಕರಣ; ಬಾಚುವಿಕೆ; ಸಿಂಗಾರ. मांग भरना = ಬೈತಲೆಗೆ ಅರಿಶಿನ ಕುಂಕುಮ ಹಚ್ಚು; ಬೈತಲೆಗೆ ಮುತ್ತಿನ ಸರ ಅಥವಾ ಬಾಸಿಂಗವನ್ನು ಕಟ್ಟು; ಒಬ್ಬಳನ್ನು ಮದುವೆಯಾಗು.

**मांग-जली**, स्त्री. ವಿಧವೆ.

**मांग-टीका**, पु. ಬೈತಲೆ ಬೊಟ್ಟು, ಪಾವಟೆ ಬಿಲ್ಲೆ.

**मांगन**, पु. ಬೇಡುವಿಕೆ, ಯಾಚನೆ.

**मांगना**, सक्रि. ಯಾಚಿಸು, ಬೇಡು; ಎರೆ, ಕೋರು; ಕೇಳು; ಎರವಲು ತೆಗೆದುಕೊ; ವರಿಸು. मांगना तांगना = ಯಾಚನೆಮಾಡು, ತಿರುಪೆಮಾಡು.

**मांगी**, स्त्री. ಯಾಚನೆ, ಎರವಲು; ವಾಚಾದತ್ತ ಮಾಡಲ್ಪಟ್ಟ ಕನ್ಯೆ.

**मांचना**, अक्रि. ಪ್ರಚಲಿತವಾಗು.

**मांचा**, पु. = मंच.

**मांज**, स्त्री ಕೀವು, ಲಸಿಕೆ.

**मांजना**, सक्रि. ಉಜ್ಜು, ತಿಕ್ಕು; ಬೆಳಗು; ಹೊಳಪಿಸು; ಸಂಸ್ಕರಿಸು; ಗಾಳಿಪಟದ ದಾರಕ್ಕೆ ಗಾಜಿನ ಪುಡಿ ಬೆರಸಿದ ಸರಿಯನ್ನು ಹಚ್ಚು, ಮಾಂಜ ಹಚ್ಚು.

**मांजा**, पु. ಮಳೆ ನೀರಿನ ನೊರೆ; ಮೆರುಗು, ಪಾಲಿಷ್.

**मांझ**, पु. ಅಂತರ; ಮಧ್ಯ, ನಡು. क्रिवि. ನಡುವೆ.

**मांझत**, स्त्री. ಗೌರವ, ಘನತೆ.

**मांझा**, पु. ದ್ವೀಪ, ಕುದುರು, ನಡುಗಡ್ಡೆ; ಸಿರ್ಪೇಷ್; ಮರದ ಮೋಟು, ಬೊಡ್ಡೆ; ವಧೂವರರಿಗೆ ಕೊಡುವ ಹಳದೀ ವಸ್ತ್ರ; ಗಾಳಿ ಪಟದ ದಾರಕ್ಕೆ ಹಚ್ಚುವ ಗಾಜಿನ ಪುಡಿ ಬೆರೆತ ಸರಿ, ಮಾಂಜಾ, ಕುಯಿದಾರಕ್ಕೆ ಹಚ್ಚುವ ಸರಿ; ಮಂಚ.

**मांझी**, पु. ಅಂಬಿಗ, ನಾವಿಕ; ಮುಷ್ಕಗಾರ, ಪಂಚಾಯಿತ.

**मांट**, पु. ಮಡಕೆ, ಕುಂಡ; ವ.ನೆಮಮಾಳಿಗೆ.

**मांठ**, पु. ಮಡಕೆ, ಗಡಿಗೆ.

**मांड**, पु. ಗಂಜಿ, ಅಂಬಲಿ.

**मांडना**, सक्रि. ನಾದು, ಅಪ್ಪಳಿಸು; ಕುಟ್ಟು; ತುಳಿ, ಒಕ್ಕು; ಸಜ್ಜುಗೊಳಿಸು, ಅಣಿಮಾಡು; ಸವರು, ಮೆತ್ತು, ಬಳಿ; (ಗಲಾಟೆ) ಮಾಡು, ಎಬ್ಬಿಸು.

**मांडनी**, स्त्री. ಅಂಚು, ಕರೆ.

**मांडव**, पु. ಮಂಟಪ, ಚಪ್ಪರ.

**मांडा**, पु. ಪರೆ, ಕಣ್ಣುಪರೆ, ಕಣ್ಣು

...; ಮಂಟಪ, ಚಪ್ಪರ; ಮೈದಾ
...ನ ರೊಟ್ಟಿ, ದೋಸೆ; ಕಡಲೆ
...ನ ಪೂರಿ.
...ी, स्त्री. ಗಂಜಿ, ರಬ್ಬಳಿಗೆ, ಅಂಬಲಿ;
...ನ ಸರಿ; ತೊಡೆ; ಮೊಣಕಾಲು,
...
...त, वि. ಉನ್ಮತ್ತ; ಕಳೆಗುಂದಿದ.
...ना, अक्रि. ಉನ್ಮತ್ತನಾಗು.
..., वि. ಮಬ್ಬಾದ, ಮಂದವಾದ;
...ಲಿದ, ಕಂದಿದ. स्त्री. ತಿಪ್ಪೆಗುಂಡಿ;
...ಪಶುಮೃಗಗಳ ಇಕ್ಕೆ, ಹಡೆ, ಗವಿ;
...ಕ್ಕೆ, ಗಹ್ವರ.
...दगी, स्त्री. ದೇಹಾಲಸ್ಯ; ಜಾಡ್ಯ.
..., पु. ಒಂದು ವಾದ್ಯ.
...ा, वि. ದೇಹಾಲಸ್ಯವುಳ್ಳ, ಜಡ್ಡು;
...ಮಾಸಗೊಂಡ; ಅಸ್ವಸ್ಥ; ಉಳಿದ
...ना, अक्रि. ಮೆತ್ತಗಾಗು.
...पना, पु. ಮಾತೃತ್ವ, ತಾಯ್ತನ.
...ें, क्रिवि. ಮಧ್ಯೆ, ನಡುವೆ.
...स, पु. ಮಾಂಸ, ಆಮಿಷ.
...सपेशी, स्त्री. ಮಾಂಸಪಿಂಡ.
...ल, वि. ಮಾಂಸ ತುಂಬಿದ,
ಕೊಬ್ಬಿದ.
...हि, उप. ಒಳಗೆ, -ಲ್ಲಿ, ಪೈಕಿ.
...ा, स्त्री. ತಾಯಿ, ಅಮ್ಮ; ಸ್ತ್ರೀ. मा-
...प=ತಂದೆ ತಾಯಿ.
...ई, स्त्री. ಹೋಳಿಗೆ; ಹುಡುಗಿ.
...यका, पु. = मायका.
...ई, स्त्री. ತಾಯಿ, ಅಮ್ಮ. माई का
...ल=ಮುದ್ದುಮಗ; ವೀರ, ಪರಾ

ಕ್ರಮಿ.

**माकंद**, पु. ಮಾವಿನ ಕಾಯಿ.

**माक़ूल**, वि. ಬುದ್ಧಿಗೆ ಎಟಕುವ, ವಿವೇಕಯುಕ್ತವಾದ, ಸಮಂಜಸವಾದ; ಸರಿಯಾದ, ತಕ್ಕ; ಯೋಗ್ಯ, ಸಮುಚಿತ; ಒಪ್ಪವಾದ; ಪರರ ಮಾತಿನ ಸತ್ಯತೆಯನ್ನು ಮನಗಂಡು ಒಪ್ಪಿಕೊಳ್ಳುವವ; ವಿವೇಕಿ.

**माख**, पु. ಕೋಪ; ಅಹಂಕಾರ; ಅವಿವೇಕ; ಪಶ್ಚಾತ್ತಾಪ.

**माखड़ा**, पु. ಮಂಕ, ದಡ್ಡ; ಅವಿವೇಕಿ.

**माखता**, पु. ಪಶ್ಚಾತ್ತಾಪ.

**माखन**, पु. ಬೆಣ್ಣೆ, ನವನೀತ. माखन चोर=ನವನೀತಚೋರ, ಬೆಣ್ಣೆಕಳ್ಳ; ಶ್ರೀಕೃಷ್ಣನ ಹೆಸರು.

**माखना**, अक्रि. ರೇಗು, ಸಿಟ್ಟಾಗು.

**माखी**, स्त्री. ನೊಣ; ಸೋನಾಮುಖಿ.

**मागध**, पु. ವಂದಿಮಾಗಧ, ಹೊಗಳುಭಟ್ಟ.

**माघ**, पु. ಮಾಘಮಾಸ; ಕೋಲುಮಲ್ಲಿಗೆ.

**माघी**, स्त्री. ಮಾಘಮಾಸದ ಹುಣ್ಣಿಮೆ. वि. ಮಾಘಮಾಸದ; ಮಾಘಮಾಸದಲ್ಲಾಗುವ.

**माचा**, पु. ಮಂಚ, ಕಾಲಟ್ಟಿ, ಮಂಚಿಕೆ.

**माचातोड़**, वि. ಸೋಮಾರಿ, ಅಲಸ.

**माची**, स्त्री. ಸಣ್ಣಮಂಚ, ಕಾಲಟ್ಟಿ; ಗಾಡಿಯ ಚಟ್ಟು; ಹಲಿವೆ, ಕುಂಟೆ.

**माछ**, पु. ಮೀನು.

**माछर**, पु. ಮೀನು; ಸೊಳ್ಳೆ.

**माछी**, स्त्री. ನೊಣ.

**माज़रा**, पु. ಸಂಭವ, ಘಟನೆ; ಪ್ರಸಂಗ; ಸಂಗತಿ; ವೃತ್ತಾಂತ, ವಿದ್ಯಮಾನ; ಪರಿಸ್ಥಿತಿ.

**माज़िया**, क्रिवि. ಇನ್ನು ಮುಂದೆ, ಇನ್ನುಮೇಲೆ.

**माज़िरत**, स्त्री. ನೆವ, ನೆಪ, ವ್ಯಾಜ.

**माज़ी**, वि. ಪೂರ್ವದ, ಭೂತಪೂರ್ವ, ಮಾಜಿ. पु. ಭೂತಕಾಲ.

**माजू**, पु. ಅಳಲೆಕಾಯಿ, ತಾರೆಕಾಯಿ.

**माजून**, वि. ಕಲೆತ, ಬೆರತ. स्त्री. ಬಂಗೀ ಸೊಪ್ಪಿನಿಂದ ಮಾಡಿದ ಒಂದು ಸಿಹಿ ತಿಂಡಿ; ಬಂಗೀ ಲೇಹ್ಯ, ಮಾಜುಂ; ಲೇಹ, ಲೇಹ್ಯ.

**माजूफल**, पु. ಮಾಚಿಕಾಯಿ, ಅಳಲೆ ಕಾಯಿ.

**माज़ूर**, वि. ಲಾಯಕ್ಕಿಲ್ಲದ, ಅಶಕ್ತ.

**माज़ूल**, वि. ತೊಲಗಿಸಿದ; ಉಚ್ಚಾಟಿತ.

**माट**, पु. ತೊಟ್ಟಿ, ಬಾನೆ, ಮರಿಗೆ; ದೊಡ್ಡ ಗಡಿಗೆ, ಕೀಲು.

**माटी**, स्त्री. ಭೂಮಿ; ಮಣ್ಣು; ಧೂಳು.

**माठ**, पु. ಒಂದು ಮಿಠಾಯಿ.

**माठा**, पु. ಮಜ್ಜಿಗೆ, ತಕ್ರ, ಅಳಿ. वि. ಮೊಂಡ, ಚಂಡಿಖೋರ; ಸೋಮಾರಿ.

**माठू**, पु. ಹಾಸ್ಯಗಾರ, ಕೋಡಂಗಿ; ಕಪಿ.

**माड़ना**, सक्रि. ಒಕ್ಕು, ಬಡಿ; ತುಳಿ; ಧರಿಸು; ಪೂಜಿಸು.

**माड़ी**, स्त्री. ಗಂಜಿ, ಅಂಬಲಿ.

**माढ़ा**, पु. ಮೇಲಿನ ಕೈಸಾಲೆ, ಬಿಸಿಲು ಮಹಡಿ.

**माणिक्य**, पु. ಮಾಣಿಕ್ಯ, ಕೆಂಪು.

**मात**, स्त्री. ಮಾತೆ, ತಾಯಿ; ಸೋಲು, ಪರಾಜಯ, ಅಪಜಯ; ಚದುರಂಗ ದಾಟದಲ್ಲಿ ಕಟ್ಟು. वि. ಸೋತುಹೋದ, ಪರಾಜಿತ. मात खाना = ಸೋಲು. मात करना = ಸೋಲಿಸು, ಮೀರಿಸು.

**मातना**, अक्रि. ಮದವೇರು, ಮತ್ತ ನಾಗು; ಸೊಕ್ಕು; ಗರ್ವಗೊಳ್ಳು.

**मातबर**, वि. ವಿಶ್ವಾಸಾರ್ಹವಾದ, ನಂಬಿಗಸ್ಥ; ಸತ್ಯವಾದಿ.

**मातबरी**, स्त्री. ವಿಶ್ವಾಸಾರ್ಹತೆ.

**मातम**, पु. ಒಬ್ಬನ ಮರಣಕ್ಕಾಗಿ ಶೋಕಿಸುವಿಕೆ, ಶೋಕ, ಗೋಳಾಟ.

**मातमख़ाना**, पु. ಶೋಕದ ಮನೆ.

**मातमपुरसी**, स्त्री. ಒಬ್ಬರ ನಿಧನಕ್ಕಾಗಿ ಅವರ ಸಂಬಂಧಿಕರಲ್ಲಿ ಸಂತಾಪವನ್ನು ಸೂಚಿಸುವಿಕೆ, ಉಪಚಾರ ಹೇಳುವಿಕೆ; ಸಂತಾಪಸೂಚನೆ.

**मातमी**, वि. ಶೋಕದ, ಶೋಕಮಯ.

**मातल**, वि. ಹೆಂಡ ಕುಡಿದ; ಮತ್ತನಾದ.

**मातहत**, वि. ಅಧೀನಸ್ಥ, ಆಶ್ರಿತ.

**मातहती**, स्त्री. ಅಧೀನ, ಅಧಿಕಾರ, ಮೇಲಾರೈಕೆ..

**माता**, स्त्री. ತಾಯಿ, ಮಾತೆ, ಅಮ್ಮ; ಸಿಡುಬು. वि. ಮದಿಸಿದ, ಮತ್ತನಾದ; ಪ್ರಫುಲ್ಲ.

**माती**, वि. ಮತ್ತೇರಿದ, ಉನ್ಮತ್ತ.

**मात्रा**, स्त्री. ಮಾತ್ರೆ; ಪರಿಮಾಣ, ಮಿತಿ; ಒಂದು ಹೊತ್ತಿನ ಔಷಧ.

**माथा**, पु. ಹಣೆ, ನೊಸಲು; ಭಾನಜೆಯ

ಕಟ್ಟು, ಮೊಗಡು; ಹಡಗಿನ ಮುಂ
ಗ, ಅಣಿಗೆ. माथा पच्ची करना
ನ್ನ ಘಾತರ್ಕವಿತರ್ಕ ಮಾಡು, ತಲೆ
ಟ್ಟಿಕೊಳ್ಳು.

क, वि. ಮಾದಕ, ಮದಕಾರಿ, ಕೈಫೆ.

कता, स्त्री. ಕೈಫೆ, ಸುಂದು, ಮುಸ್ತಿ.

न, पु. ಖನಿ, ಗಣಿ.

र, स्त्री. ತಾಯಿ, ಅಮ್ಮ.

रज़ाद, वि. ಹುಟ್ಟಿನ; ಅಜನ್ಮ, ಸೋದರ, ಸಗರ್ಭ್ಯ; ದಿಗಂಬರ, ತ್ತಲೆ. मादरज़ाद नाबीना=ಹುಟ್ಟು ಕುರುಡ.

दरी, वि. ತಾಯಿಯ, ತಾಯಿಗೆ ಸಂಬಂಧಿಸಿದ. मादरी ज़बान= ಮಾತೃಭಾಷೆ, ತಾಯ್ನುಡಿ.

दला, पु. ಚಿನ್ನದ ಒಂದು ಒಡವೆ.

दा, मादीन, स्त्री. ಹೆಣ್ಣು(ಪ್ರಾಣಿ).

द्दा, पु. ವಸ್ತು; ತತ್ವ, ಸಾರ; ಶಕ್ತಿ, ಸಾಮರ್ಥ್ಯ; ಕೀವು.

धुरी, स्त्री. ಮಾಧುರ್ಯ; ಸೌಂದರ್ಯ; ಸೊಬಗು; ಮದ್ಯ, ಸೇಂದಿ; ಮಲ್ಲಿಗೆ.

ध्यम, वि. ನಡುವಣ. पु. ಸಾಧನ.

ध्वी, स्त्री. ಸೇಂದಿ; ಮದ್ಯ.

न, पु. ಅಳತೆ; ಪ್ರಮಾಣ; ಪರಿಮಾಣ; ಅಳವು; ಸಾಮರ್ಥ್ಯ; ಮಾನ; ಮರ್ಯಾದೆ; ಗೌರವ; ಮನ್ನಣೆ; ಗರ್ವ; ಬಿಂಕ; ನ್ನ ಪ್ರಿಯನ ಮೇಲಿನ ಕೋಪ, ಮುನಿ; ಕೋಪ, ಸಿಟ್ಟು. मान मनाना =ಸಿಟ್ಟಾದವರನ್ನು ಸಮಾಧಾನಪಡಿ ಸು; ಅನುನಯಿಸು, ಬೋಸರಿಸು.

**मान-गुमान**, पु. ಮರ್ಯಾದೆ, ಗೌರವ; ಗರ್ವ, ಜಂಭ.

**मानता**, स्त्री. = मन्नत.

**मानना**, सक्रि. ಮನ್ನಣೆಮಾಡು, ಮನ್ನಿಸು, ಗೌರವಿಸು; ಮಾನಿಸು; ಒಪ್ಪಿಕೊಳ್ಳು, ಒಪ್ಪು; ನಂಬು; ಸ್ವೀಕರಿಸು, ಸಮ್ಮತಿಸು; ಭಾವಿಸು; ಪರಿಗಣಿಸು, ಎಣಿಸು; ಹರಕೆ ಮಾಡು.

**मान-पान**, पु. ಮಾನಮರ್ಯಾದೆ; ಸ್ಥಾನಮಾನ.

**मान-मंदिर**, पु. ನಕ್ಷತ್ರ ಮತ್ತು ಗ್ರಹಗಳನ್ನು ನೋಡುವಸ್ಥಳ, ವೇಧಶಾಲೆ, ನಕ್ಷತ್ರಶಾಲೆ.

**मान-मनौती**, स्त्री. ಹರಕೆ, ಪ್ರಾರ್ಥನೆ, ರೇಗಾಟ ಮತ್ತು ಸಮಾಧಾನ.

**मानवी**, वि. ಮಾನವನ; ಅರ್ಥ ಅಥವಾ ತಾತ್ಪರ್ಯಕ್ಕೆ ಸಂಬಂಧಪಟ್ಟ; ಶಬ್ದಾರ್ಥದ. स्त्री. ನಾರಿ, ಸ್ತ್ರೀ.

**मानवीय**, वि. ಮನುಷ್ಯನ, ಮಾನವನ.

**मानसिक**, वि. ಮನಸ್ಸಿನ; ಮಾನಸಿಕ.

**मानिंद**, वि. ಸದೃಶ, ಸಮಾನವಾದ.

**मानिक**, पु. ಮಾಣಿಕ್ಯ, ಕೆಂಪು.

**मानी**, वि. ಗರ್ವಗೊಂಡ; ಬಿಗುಮಾನದ; ಕೋಪಗೊಂಡ. स्त्री. ಅರ್ಥ, ತಾತ್ಪರ್ಯ; ಅಭಿಪ್ರಾಯ; ಸಾರ, ಸತ್ವ.

**मानुख, मानुष, मानुस**, पु. ಮನುಷ್ಯ.

**मानुसाई**, स्त्री. ಮನುಷ್ಯತನ.

**मानूस**, वि. ಗೆಳೆಯ, ಪ್ರಿಯ.

**माने**, पु. ಅರ್ಥ, ತಾತ್ಪರ್ಯ. क्रिवि. ಅರ್ಥಾತ್, ಅಂದರೆ.

**मानों, मानो**, क्रिवि. ಹಾಗೆ, ಅಂತೆ, ಅನ್ನುವ ರೀತಿಯಲ್ಲಿ, ಎಂಬಂತೆ. पु. ಬೆಕ್ಕು, ಚೀಲಿ.

**माप**, पु. ಅಳೆಯುವಿಕೆ, ಅಳತೆ; ಅಳತೆಯ ಕೋಲು; ಜಮೀನಿನ ಅಳತೆ, ಪೈಮಾಯಿಷಿ.

**मापक**, पु. ಅಳತೆ, ಪ್ರಮಾಣ; ಅಳತೆಯ ಕೋಲು; ಅಳೆಯುವವ.

**मापन**, पु. ಅಳೆಯುವಿಕೆ, ಅಳತೆ.

**मापना**, सक्रि. ಅಳೆ, ಅಳತೆಮಾಡು; ಪೈಮಾಯಿಷಿ ಮಾಡು. अक्रि. ಮತ್ತನಾಗು, ಅಮಲೇರು.

**माफ़**, वि. ಕ್ಷಮಿಸಿದ, ಮನ್ನಿಸಿದ; ಮಾಫು ಮಾಡಿದ; ಸೋಡಿ ಬಿಟ್ಟ. **माफ़ करना** = ಕ್ಷಮಿಸು, ಮನ್ನಿಸು; ಮಾಫು ಮಾಡು.

**माफ़िक़**, क्रिवि. ಅನುಸಾರವಾಗಿ, ಅನುಗುಣವಾಗಿ, ತಕ್ಕಂತೆ.

**माफ़ी**, स्त्री. ಕ್ಷಮಾಪಣೆ, ಮಾಫಿ; ಸೂಟ, ಸೋಡಿ; ಕಂದಾಯದ ವಜಾ; ಜೋಡಿ ಜಮೀನು, ಇನಾಮತಿ ಜಮೀನು; ಮಾನ್ಯ, ಉಂಬಳಿ.

**माफ़ीदार**, पु. ಜೋಡಿದಾರ, ಇನಾಂದಾರ, ಮಾನ್ಯಗಾರ.

**मामलत**, स्त्री. ಸಂಗತಿ, ವಿಷಯ; ವ್ಯವಹಾರದ ಪ್ರಸಂಗ; ವಿವಾದಾಸ್ಪದವಾದ ವಿಷಯ.

**मामला**, पु. ಸಂಗತಿ, ವಿಷಯ; ಕಾರ್ಯ, ಜಂಬರ, ಉಸಾಬರಿ; ವಿವಾದಾಸ್ಪದವಾದ ವಿಷಯ; ವ್ಯವಹಾರ, ವ್ಯಾಜ್ಯ; ಮೊಕದ್ದಮೆ, ಖಟ್ಲೆ.

**मामा**, पु. ಸೋದರಮಾವ, ಮಾವ... स्त्री. ತಾಯಿ; ರೊಟ್ಟಿ ಸುಡುವವಳು... ಸೇವಕಿ, ತೊತ್ತು.

**मामागरी**, स्त्री. ಸೇವಕಿಯ ಕೆಲಸ...

**मामी**, स्त्री. ಸೋದರಮಾವನ ಹೆಂಡತಿ... ತನ್ನ ತಪ್ಪನ್ನು ಲಕ್ಷಿಸದಿರುವಿಕೆ. **मामी पीना** = ತನ್ನ ತಪ್ಪುಗಳನ್ನು ಗಮನಿ...ದಿರು.

**मामू**, पु. ಸೋದರಮಾವ.

**मामूर**, वि. ಜನವಸತಿಯುಳ್ಳ, ಜ... ಭರಿತ; ವಸಾಹತು ಮಾಡಲ್ಪಟ್ಟ, ಒ...ಲಿರಿಸಿದ; ಆಬಾದುಆದ, ಸಾಗು(ನೆಲ)... ಕಳಕಳಿಸುವ; ಭರ್ತಿಯಾದ, ಭರಿತ... ತುಂಬಿದ; ಹೇರಳ.

**मामूरी**, स्त्री. ಜನವಸತಿ; ವಾಸ, ವಸ್ತಿ... ಜನಸಂಖ್ಯೆ; ಆಬಾದು, ಸಾಗುವಳಿ... ಸಮೃದ್ಧಿ, ಹುಲುಸು; ಆನಂದ, ಸುಖ... ಭರ್ತಿ, ಪೂರ್ಣತೆ.

**मामूल**, वि. ಮಾಡಿದ, ತಯಾರಿಸಿದ... ರೂಢಿಯ, ವಾಡಿಕೆಯ. पु. ಕೆಲಸ... ಕಾರ್ಯ; ರೂಢಿ, ವಾಡಿಕೆ; ಪದ್ಧತಿ... ಮಾಮೂಲು, ಸಂಪ್ರದಾಯ; ವಾಡಿಕೆ...ಯಾಗಿ ಕೊಡುವ ರುಸುಂ ಅಥವಾ... ಇನಾಮು, ಮಾಮೂಲು ಹಣ.

**मामूली**, वि. ವಾಡಿಕೆಯಾದ, ರೂ...ಯ; ಮಾಮೂಲಿನ; ಸರ್ವಸಾಧಾರ...ವಾದ, ಸರ್ವಸಾಮಾನ್ಯ.

**मामूलीपन**, पु. ಸರ್ವಸಾಮಾನ್ಯ...

**माय**, स्त्री. ಮಾತೆ, ತಾಯಿ, ಅಪ್ಪ...

मायका, पु. ತವರುಮನೆ.

मायना, पु. = मानी.

मायल, वि. ಬಗ್ಗಿದ, ಪ್ರವೃತ್ತನಾದ; ಕಲಿತ, ಮಿಳಿತವಾದ, ಮಿಶ್ರಿತ.

माया, स्त्री. ಮಾಯೆ; ಜಾಲ; ಮೋಸ. पु. ಧನ; ಮೂಲಧನ, ಬಂಡವಾಳ; ಮೂಲ, ಬುಡ.

मायूब, वि. ಕೆಟ್ಟ, ದುಷ್ಟ.

मायूबी, स्त्री. ದುಷ್ಟತನ, ದುರುಳತನ.

मायूस, वि. ನಿರಾಶನಾದ, ಭಗ್ನಾಶ.

मायूसी, स्त्री. ನಿರಾಶೆ, ಆಶಾಭಂಗ.

मार, पु. ಸರ್ಪ, ಹಾವು. स्त्री. ಹೊಡೆಯುವಿಕೆ, ಹೊಡೆದಾಟ; ಹೊಡೆತ, ಏಟು; ಪೆಟ್ಟು, ದೆಬ್ಬೆ; ದಂಡನೆ; ತೊಂದರೆ, ಕಷ್ಟ; ಧಾವಿಸುವಿಕೆ, ಹಾರುವಿಕೆ; ಯುದ್ಧ, ಕಾಳಗ; ಲೂಟಿ; ಸೂರೆ; ಫಿರಂಗಿಯ ಕೆಲಸ; ಕೋಟೆಯ ತೆನೆಯಲ್ಲಿ ಫಿರಂಗಿ ಇಡುವ ಸ್ಥಳ, ಜೇಗಂಡಿ; ಎರೆಮಣ್ಣು. मार खाना = ಪೆಟ್ಟು ತಿನ್ನು.

मारक, वि. ಕೊಲ್ಲುವವ, ಹೊಡೆಯುವವ.

मारका, पु. ಯುದ್ಧ, ಕಾಳಗ; ಮಹತ್ವದ ಸಂಗತಿ, ಭಾರಿ ವಿಷಯ.

मार-काट, स्त्री. ಹೊಡೆದಾಟ, ಕಡಿದಾಟ, ಕೊಂದಾಟ; ಕಾದಾಟ, ಯುದ್ಧ.

मारग, पु. ಮಾರ್ಗ, ದಾರಿ.

मारगीर, पु. ಹಾವಾಡಿಗ, ಲಾವಕ.

मार-तौल, स्त्री. ಸುತ್ತಿಗೆ, ಕೊಡತಿ.

मारना, सक्रि. ಬಡಿ, ಹೊಡೆ; ಜಡಿ; ಕುಟುಕು; ತಗಲಿಸು; ಯಕ್ಕು, ಚಿಚ್ಚು; ಕೊಲ್ಲು, ಸಾಯಿಸು; ಎಸೆ, ಒಗೆ; ಬೀರು; ಹಾರಿಸು; ಅಡಗಿಸು; ತಡೆಗಟ್ಟು; ಚಲಾಯಿಸು; ಮಂತ್ರಹಾಕು, ಊದು.

मारनहारा, वि. ಹೊಡೆಯುವವ, ಕೊಲ್ಲುವವ.

मार-धाड़, मार-पीट, स्त्री. ಹೊಡೆದಾಟ, ಬಡಿದಾಟ, ಕಾದಾಟ.

मार-पेच, पु. ಠಕ್ಕು, ಬೂಟಾಟಿಕೆ.

मारफ़त, क्रिवि. ಮುಖಾಂತರ, ಮೂಲಕ, ದ್ವಾರಾ, ಮಾರಿಫತ್ತು. स्त्री. ಜ್ಞಾನ; ಬ್ರಹ್ಮಜ್ಞಾನ; ಸಾಧನ.

मारवाड़िन, स्त्री. ಮಾರ್ವಾಡಿ ಹೆಂಗಸು.

मारवाड़ी, स्त्री. ಮಾರ್ವಾಡಿಯವ.

मारा, वि. ಹೊಡೆಯಲ್ಪಟ್ಟ, ಬಡಿಯಲ್ಪಟ್ಟ; ಕೊಲ್ಲಲ್ಪಟ್ಟ; ಮುಳುಗಿಸಿದ (ಹಡಗು). मारा मारा फिरना = ಅಲೆದಾಡು, ತೊಳಲು, ತಿರಿ.

मारामार, स्त्री. ಹೊಡೆದಾಟ, ಜಗಳ, ಮಾರಾಮಾರಿ. क्रिवि. ಶೀಘ್ರವಾಗಿ, ತ್ವರೆಯಾಗಿ.

मारामारी, स्त्री. ಹೊಡೆದಾಟ, ಮಾರಾಮಾರಿ; ಜಗಳ; ಹೆಣಗಾಟ.

मारी, स्त्री. ಸೋಂಕುರೋಗ, ಅರಿಷ್ಟ.

मारू, वि. ಹೊಡೆಯುವವ, ಕೊಲ್ಲುವವ. पु. ರಣಗೀತೆ; ರಣಭೇರಿ; ದೊಡ್ಡ ನಗಾರಿ.

मारे, क्रिवि. ಓಸ್ಕರ, ದೆಸೆಯಿಂದ, ನಿಮಿತ್ತ

मार्ग, स्त्री. ಮಾರ್ಗ, ದಾರಿ, ಹಾದಿ.

मार्गव्यय, पु. ಹಾದಿಯ ವೆಚ್ಚ.

**मार्गी**, पु. ದಾರಿಕಾರ, ಹಾದಿಗ.

**मार्फ़त**, क्रिवि.; स्त्री. = मारफ़त.

**माल**, स्त्री. ಮಾಲೆ, ಹಾರ; ಚರಕದ ಕದುರನ್ನು ತಿರುಗಿಸುವ ದಾರ. पु. ಜಟ್ಟಿ, ಪೈಲವಾನ್; ಧನ, ಸಂಪತ್ತು, ಸೊಮ್ಮು; ಒಡವೆ, ಮಾಲು; ಸಾಮಾನು, ಸರಕು, ಜಿನಸಿ; ವಸ್ತು, ಪದಾರ್ಥ; ಬೆಳೆ, ಫಸಲು; ಹುಟ್ಟುವಳಿ; ಕಂದಾಯದ ವರಮಾನ; ಸವಿಯೂಟ, ಮೃಷ್ಟಾನ್ನ; ಸಿಹಿತಿಂಡಿ; (ಗಣಿತದಲ್ಲಿ) ಸಂಖ್ಯೆಯ ವರ್ಗ, ದ್ವಿಘಾತ; ಚರಟ, ರಾಡಿ, ಗಸಿ; ನೀಲಿಬಣ್ಣ ತಯಾರಿಸುವವ. माल असबाब = ಸೊತ್ತು, ಸ್ವತಂತ್ರ, ಸಾಮಾನು ಸರಂಜಾಮು.

**मालकंगनी**, स्त्री. ಒಂದು ಗಿಡ.

**मालकिन**, स्त्री. ಒಡತಿ, ಯಜಮಾನಿ.

**मालकियत**, स्त्री. ಒಡೆತನ, ಯಾಜಮಾನ್ಯ; ಸ್ವತ್ವ, ಸ್ವಾಮ್ಯ.

**मालख़ाना**, पु. ಭಂಡಾರ, ಕೋಠಿ; ಉಗ್ರಾಣ, ಗಡಂಗು.

**मालगाड़ी**, स्त्री. ಸಾಮಾನು ಒಯ್ಯುವ ರೈಲುಗಾಡಿ, "ಗುಡ್ಸ್" ಗಾಡಿ.

**मालगुज़ार**, पु. ತೆರಿಗೆ ಕೊಡುವವ, ಕಂದಾಯ ತೆರುವವ; ಜಮೀನುದಾರ.

**मालगुज़ारी**, स्त्री. ಕಂದಾಯ; ತೆರಿಗೆ; ತೀರ್ವೆ.

**मालज़ादा**, पु. ಸೂಳೆಯ ಮಗ; ಕುಂಟಣಿಗ.

**मालज़ादी**, स्त्री. ಸೂಳೆ, ವೇಶ್ಯೆ; ದಗಡಿ

**मालज़ामिन**, पु. ಜಾಮೀನುದಾರ, ಹೊಣೆಗಾರ.

**मालज़ामिनी**, स्त्री. ಹಣಕೊಡುವ ಹೊಣೆಗಾರಿಕೆ, ಜಾಮೀನು.

**मालदार, मालधनी**, वि. ಹಣಗಾರ, ಧನಿಕ.

**मालदारी**, स्त्री. ಹಣವಂತಿಕೆ, ಧನಾಢ್ಯತೆ

**मालन**, स्त्री. माली का स्त्री. रूप.

**मालपूआ**, पु. ಹೋಳಿಗೆ.

**मालमता, मालमुता**, पु. ಆಸಿಪಾಸ್ತಿ, ಸೊತ್ತು.

**मालमस्त**, वि. ಹಣದ ಸೊಕ್ಕಿನ, ಧನಗರ್ವಿತ.

**मालमस्ती**, स्त्री. ಹಣದ ಸೊಕ್ಕು, ಧನ ಮದ.

**मालवर**, वि. ಹಣವಂತ, ಧನಿಕ.

**माला**, स्त्री. ಮಾಲೆ, ಹಾರ. ಸರ.

**मालामाल**, वि. ರಾಶಿಹಾಕಿದ, ಒಟ್ಟು ಯಿಸಿದ; ಹೇರಳ, ತುಂಬಿದ; ಸಂಪನ್ನ, ಸಮೃದ್ಧ.

**मालिक**, पु. ಈಶ್ವರ, ಭಗವಂತ; ಒಡೆಯ, ಸ್ವಾಮಿ; ದಣಿ, ಮಾಲೀಕ; ಯಜಮಾನ; ಪತಿ, ಗಂಡ; ಕೋಠಿಗಾರ; ಹೂವಾಡಿಗ.

**मालिका**, स्त्री. ಚಿಕ್ಕ ಮಾಲೆ; ಅಧಿಶ್ವರಿ; ಒಡತಿ, ಯಜಮಾನಿ; ಹೆಂಡತಿ; ರಾಣಿ.

**मालिकाना**, पु. ಒಡೆತನ; ಸ್ವತ್ವ, ಸ್ವಾಮ್ಯ; ಜಮೀನುದಾರನಿಗೆ ಕೊಡುವ ಮಾಸಾಶನ. वि. ಒಡೆಯನ; ಧನಿಯಂತಹ.

...की, स्त्री. ಒಡೆತನ, ದಣಿತನ, ...ಮಾನಿಕೆ; ಸ್ವತ್ವ, ಹಕ್ಕು.

...न, मालिनी, स्त्री. माली का ... रूप.

...यत, स्त्री. ಐಶ್ವರ್ಯ, ಸಂಪತ್ತಿ; ... ಬಂಡವಾಳ; ಬೆಲೆ; ಬಹುಮೂ... ...ಸ್ತು; ಕಂದಾಯ, ಕರ.

...श, स्त्री. ಉಜ್ಜುವುದು, ತಿಕ್ಕು...; ಬೆಳಗಿಸುವಿಕೆ, ಮೆರುಗು ಕೊಡು... ...ವುವಿಕೆ, ಮರ್ದನ, ಮಾಲೀಸು.

...ी, पु. ತೋಟಗಾರ, ತೋಟಿಗ,

...ली वि. ಧನಸಂಬಂಧವಾದ, ...ಕ; ಸರಕುಗಳ; ಧನಿಕ.

...दा, पु. = मलीदा.

...म, वि. ತಿಳಿದ, ಗೊತ್ತಾದ; ವೇದ್ಯ... ...ದ, ವಿದಿತ; ವಿಶದವಾದ, ಪ್ರಕಟ; ...ಸಿದ್ಧವಾದ. मालूम होना = ಗೊ...ತ್ತಾಗು; ಕಾಣಿಸು; ಕಂಡುಬರು.

...ा, स्त्री. ಸತ್ವ, ಸಾರ, ರಸ; ಗಂಜಿ, ...ಲಿ; ಹಾಲುಗಿಣ್ಣು, ಹಾಲುಖೋ...; ಹೊಟ್ಟೆಯೊಳಗಿನ ಲೋಳೆ, ಜನೆ; ...ಮುಗು ಹಾಕುವ ಪದಾರ್ಥ, ಬಾಂ.

...ा, पु. ಮಾಷ, ಉದ್ದು.

...ा, पु. ಒಂದು ತೂಕ, ಮಾಶ; (...-सेर.) घड़ी में माशा ...ी में तोला = ಹಣ್ಣೆಸೊಪ್ಪು, ಬೇ... ...ಸ.ವಷ್ಟರಲ್ಲಿ ಪದಿನೆಂಟು ಮನಸ್ಸು.

...क़, पु. ಪ್ರಿಯ, ಪ್ರೀತಿಪಾತ್ರ, ... ಪ್ರಿಯತಮ; ಪ್ರೇಮಿಕ.

...क़ा, स्त्री. ಪ್ರಿಯೆ, ಪ್ರಿಯತಮೆ.

माशूक़ाना, वि. ಪ್ರೇಮಿ ಅಥವಾ ಪ್ರೇಮಿಕೆಯಂತಹ; ಪ್ರಿಯ, ಪ್ರೇಮದ

माशूक़ी, स्त्री. ಪ್ರೇಮ; ಸೌಂದರ್ಯ.

माश्की, पु ನೀರು ಹೊರುವವ.

मास, पु. ಮಾಸ, ತಿಂಗಳು, ಮಾಹೆ.

मासना, अक्रि. ಕಲೆ. सक्रि. ಕಲೆಸು.

मासिक, वि. ಮಾಸದ, ಮಾಸಕ್ಕೊಂದು ಸಲ ಆಗುವ. पु. ಮಾಸಪತ್ರಿಕೆ.

मासिवा, स्त्री. ಪ್ರಪಂಚ, ಸಂಸಾರ. क्रिवि. ಇದನ್ನು ಬಿಟ್ಟು, ಹೊರತು, ಸಿವಾಯಿ.

मासी, स्त्री. = मौसी.

मासूम, वि. ಸುರಕ್ಷಿತ; ನಿರ್ದೋಷ, ನಿರ್ಮಲ.

मासूमी, स्त्री. ನಿರ್ದೋಷತೆ, ನಿಷ್ಕಾಪಟ್ಯ

मास्टर, पु. ಉಪಾಧ್ಯಾಯ, ಶಿಕ್ಷಕ; "ಮೇಷ್ಟ್ರು", ಮಾಸ್ತರು, ಸಾಲಿ, ಶಿಕ್ಷಕೋದ್ಯೋಗಿ.

मास्टरिन, स्त्री. मास्टर का स्त्री. रूप.

मास्टरी, स्त्री. ಮೇಷ್ಟ್ರ ಕೆಲಸ, ಮಾಸ್ತರ ಕೆಲಸ; ಅಧ್ಯಾಪನ ವೃತ್ತಿ, ಶಿಕ್ಷಕೋದ್ಯೋಗ.

माह, पु. ಚಂದ್ರ, ತಿಂಗಳು; ಮಾಸ, ಮಾಹೆ.

माहगीर, पु. = माहीगीर.

माहजबीं, माहरू, स्त्री. ಚಂದ್ರನಂತಹ ಮುಖವುಳ್ಳವಳು, ಚಂದ್ರಮುಖಿ; ಸುಂದರಿ; ಚೆಲುವೆ; ಪ್ರಿಯೆ, ಪ್ರೇಮಿಕೆ

माहताब, पु. = महताब.

माहपार, माहपारा, पु. ಚೆಲುವ,

ಸುಂದರ ಪುರುಷ; ಪ್ರೇಮಿಕೆ.
**माहली,** वि. ಅಂತಃಪುರದ ಸೇವಕ.
**माहवार,** क्रिवि. ಪ್ರತಿ ತಿಂಗಳಲ್ಲೂ, ಮಾಹೆವಾರಿ. वि. ಪ್ರತಿ ಮಾಸದ, ಮಾಸಿಕ, ಮಾಹೆಯಾನ. पु. ಮಾಸದ ಸಂಬಳ
**माहवारी,** वि. ಪ್ರತಿಮಾಸದ.
**माहिँ,** क्रिवि. ಒಳಗೆ, -ಲ್ಲಿ.
**माहियत,** स्त्री. ಸಾರ;ಸ್ವಭಾವ,ಪ್ರಕೃತಿ; ವಿವರ, ತಪಶೀಲು; ಸ್ಥಿತಿಗತಿ.
**माहियाना,** वि. ತಿಂಗಳಿನ, ಮಾಸಿಕ, ಮಾಹೆಯಾನ. पु. ಮಾಸದ ಸಂಬಳ.
**माहिर,** वि. ನಿಪುಣ, ಪಟು, ಪ್ರವೀಣ.
**माहिरी,** स्त्री. ನೈಪುಣ್ಯ, ಪ್ರವೀಣತೆ.
**माही,** स्त्री. ಮೀನು, ಮತ್ಸ್ಯ. माही मरातिब = ಝಂಡಾ, ಆಲವಟ್ಟ.
**माही-ख़्वार,** पु. ಬಕಪಕ್ಷಿ.
**माहीगीर,** पु. ಅಂಬಿಗ, ಬೆಸ್ತ.
**माहीफ़रोश,** वि. ಮೀನು ಮಾರುವವ, ಮೀನುಗಾರ.
**माहुर,** पु. ವಿಷ, ನಂಜು.
**मिंगनी,** स्त्री. ಕುರಿಯ ಪಿಷ್ಠೆ, ಹಿಕ್ಕೆ.
**मिक़,** पु. ಮಲದ್ವಾರ, ಗುದ.
**मिक़दार,** स्त्री. ಪರಿಮಾಣ, ಪ್ರಮಾಣ; ಅಳತೆ, ಮಾನ, ಅಳವು; ದರ.
**मिकनत,** स्त्री. ಅಧಿಕಾರ, ಶಕ್ತಿ, ಬಲ.
**मिक़्ना,** पु. ಹೊದಿಕೆ, ದುಪ್ಪಟಿ; ಉದ್ದವಾದ ಬುರುಕಿ.
**मिक़्नातीस,** पु. ಲೋಹಚುಂಬಕ.
**मिक़्राज़,** स्त्री. ಕತ್ತರಿ.

**मिचकना,** अक्रि. ರೆಪ್ಪೆ ಬಡಿದುಕೊಳ್ಳು
**मिचकाना,** सक्रि. ರೆಪ್ಪೆ ಬಡಿ; ಕಣ್ಣು ಮಿಟುಕಿಸು, ಪಿಳಿಕಿಸು.
**मिचकारना,** सक्रि. ಗಲಬರಿಸು, ತೊಳೆ
**मिचना,** अक्रि. ಮುಚ್ಚು, ಮುಗಿ.
**मिचलाना,** सक्रि. ಹಸಿವಿಲ್ಲದೆ ತಿನ್ನು
**मिचलाना,** अक्रि. ಓಕರಿಸು, ಉಬ್ಬರಿಸು
**मिचली,** स्त्री. ಓಕರಿಕೆ, ಉಬ್ಬರಿಕೆ.
**मिचौलना,** सक्रि. ಕಣ್ಣನ್ನು ಮುಚ್ಚು
**मिचौली,** स्त्री. ಮುಚ್ಚುವಿಕೆ.
**मिज़मार,** पु. ಕುದುರೆಪಂತದಮೈದಾನ
**मिजमार,** पु. ಧೂಪ,ಪರಿಮಳದ್ರವ್ಯ ಹೊಗೆ; ಧೂಪಧಾನಿ.
**मिज़राब,** पु. ವೀಣೆ ಬಾರಿಸುವವರು ಬೆರಳಿಗೆ ಹಾಕಿಕೊಳ್ಳುವ ಉಂಗುರ
**मिजह,** स्त्री. ಕಣ್ಣು ರೆಪ್ಪೆ.
**मिज़ाज़,** पु. ಮಿಶ್ರ; ಸ್ವಭಾವ, ಪ್ರಕೃತಿ ಗುಣ; ವೈಗುಣ, ದೇಹಸ್ಥಿತಿ; ಮನಸ್ಸಿನ ಭಾವ; ಗರ್ವ, ಅಹಂಕಾರ. मिजाज आली, मिजाज शरीफ़ = ದೇಹಸ್ಥಿತಿ ಚೆನ್ನಾಗಿದೆಯಷ್ಟೆ; ಕ್ಷೇಮವೋ मिजाज पूछना=ಕುಶಲಪ್ರಶ್ನೆ ಮಾ
**मिज़ाजदान,** पु. ಅಂತರಂಗ ಸ್ನೇಹಿ
**मिज़ाजदार,** वि. ಗರ್ವಿಷ್ಠ, ಅಹಂಕಾ
**मिज़ाजपुर्सी,** स्त्री. ಕುಶಲಪ್ರಶ್ನೆ.
**मिज़ाजी,** वि. ಪ್ರಕೃತಿಗುಣದ; ಸ ವಾದ, ಸ್ವಾಭಾವಿಕವಾದ; ದುಃಸ್ವ ವದ; ಅಹಂಕಾರಿ, ಗರ್ವಿಷ್ಠ.
**मिटना,** अक्रि. ಅಳಿಸಿಹೋಗು, ವಾಗು; ಅಳಿ, ಬೀಯು; ತೊಲ

…; ಆರು, ತಣಿ; ನಂದು; ಮರು …, ಮೋಹಗೊಳ್ಳು.

…ना, सक्रि. ಆಳಿಸು, ತೊಡೆ; ನಾಶ …ಡು; ತೊಲಗಿಸು, ನೀಗು; ನಿವಾ …; ಆರಿಸು, ತಣಿಸು.

…ा, स्त्री. ಮಡಕೆ, ಗಡಿಗೆ.

…ी, स्त्री. ನೆಲ; ಮಣ್ಣು; ಅರುಲು; …; ಹೆಣ. मिट्टी देना = ಹೆಣ …ನ್ನು ಹೂಳು, ಒಪ್ಪಮಾಡು. मिट्टी …तेल = ಸೀಮೆ ಎಣ್ಣೆ, ಕಲ್ಲೆಣ್ಣೆ.

…ी, स्त्री. ಚುಂಬನ, ಮುತ್ತು.

…ू, पु. ಚಿಲಕ; ಸವಿಮಾತಿನವ, ಮಧು …ಭಾಷಿ, ಪ್ರಿಯವಾದಿ; ಗಿಳಿ. अपने मुंह …ं मिट्ठू बनना = ಆತ್ಮ ಪ್ರಶಂಸೆ …ಮಾಡಿಕೊಳ್ಳು, ಬಡಾಯಿಕೊಚ್ಚು.

…ोला, वि. ಸವಿ ನುಡಿಯುವ, ಮ …ಭಾಷಿ.

…ी, स्त्री. ಒಂದು ಮಿಠಾಯಿ.

…ोना, वि. ಸ್ವಲ್ಪ ಉಪ್ಪು ಬೆರೆತ.

…ाई, स्त्री. ಸಿಹಿ, ಮಾಧುರ್ಯ; ಸಿಹಿ …ರ್ಥ; ಸಿಹಿತಿಂಡಿ, ಮಿಠಾಯಿ.

…ा, पु. ಒದ್ದೆ, ಥಂಡಿ, ಹಸಿ.

…स, स्त्री. ಸವಿ, ಮಾಧುರ್ಯ, …, ಇಂಪು.

…ाई, स्त्री. ಸ್ನೇಹ, ಗೆಳೆತನ.

…ान, स्त्री. ಗೆಳತಿ, ಪ್ರಿಯೆ, ಪ್ರಣ …; ತನ್ನದೇ ಹೆಸರಿನ ಬೇರೊಬ್ಬ ….

…ि, स्त्री. ಮಿತಿ; ಗಡು, ಅವಧಿ; ಬೆಲೆ; …ಪಾತು.

मिती, स्त्री ತಿಥಿ; ತೇದಿ, ದಿವಸ; ಬಡ್ಡಿ; ವಟ್ಟ. मिती काटना = ಬಡ್ಡಿ ಕಟಾಯಿಸು, ವಟ್ಟ ತೆಗೆ. मिती पुगना या पूजना = ವಾಯಿದೆ ಪೂರೈಸು.

मितीकाटा, पु. ಹುಂಡಿಯ ಹಣವನ್ನು ಮುಂಗಡವಾಗಿ ಪಡೆಯಲು ಕೊಡುವ ವಟ್ಟ, ಹುಂಡಿಯ ಉತ್ತಾರ; ಕಳೆತ, ವಜಾ.

मित्र, पु. ಮಿತ್ರ, ಗೆಳೆಯ, ಸ್ನೇಹಿತ.

मित्रता, मित्राई, स्त्री. ಗೆಳೆತನ, ಮೈತ್ರಿ.

मित्रा, मित्राणी, स्त्री. ಗೆಳತಿ, ಸ್ನೇಹಿತೆ.

मिथुन, पु. ಜೋಡಿ, ಜೊತೆ; ಅವಳಿ ಮಕ್ಕಳು; ಮಿಥುನ ರಾಶಿ.

मिथ्या, वि. ಸುಳ್ಳು, ಹುಸಿ; ಅಪದ್ಧ.

मिनक्कार, स्त्री. ಪಕ್ಷಿಯ ಮೂಗು, ಕೊಕ್ಕು, ಚಂಚು, ಬೈರಿಗೆ.

मिनक्काश, पु. ಚಿಮುಟ.

मिनख्खर, स्त्री. ಮೂಗು, ಮೂಗಿನ ಹೊಳ್ಳೆ.

मिनतका, पु. ನಡುಕಟ್ಟು.

मिनती, स्त्री. ವಿನಂತಿ, ಪ್ರಾರ್ಥನೆ.

मिनमिनाना, अक्रि. ಮೂಗಿನಿಂದ ಮಾತನಾಡು, ಗೊಣಗು.

मिनहा, वि. ಕಳೆದ, ವಜಾಹಾಕಿದ, ಮುರಿದುಕೊಂಡ, ಕಡಮೆ ಮಾಡಿದ.

मिनहाई, स्त्री. ಮುರಿದುಕೊಳ್ಳುವಿಕೆ, ವಜಾ; ಉತ್ತಾರ, ಕಳೆತ, ತಳ್ಳುಪಡಿ; ವಟ್ಟ.

मिन्नत, स्त्री. ವಿನಂತಿ, ಪ್ರಾರ್ಥನೆ, ಬಿನ್ನಹ; ಬೇಡುದಲೆ, ಸೆರಗೊಡ್ಡಿ ಬೇಡುವಿಕೆ.

**मिमियाना,** अक्रि. = ममियाना.

**मियाँ,** पु. ಮಹಾಶಯು, ಸಾಹೇಬ; ಒಡೆಯು; ಯಜಮಾನ; ಪತಿ, ಗಂಡ. मियाँ मिट्ठू = ಸವಿಮಾತಿನವ, ಮಧುರ ಭಾಷಿ; ಮೂರ್ಖ.

**मियाद,** स्त्री. ಅವಧಿ, ವಾಯಿದೆ, ಗಡು; ಸಜಾ ವಿಧಿಸಿರುವ ಅವಧಿ.

**मियादी,** वि. ವಾಯಿದೆಯು; ಅವಧಿಯುಳ್ಳ. मियादी हुंडी = ವಾಯಿದೆ ಹುಂಡಿ, ಗಡು ಹುಂಡಿ.

**मियान,** पु. ಮಧ್ಯ, ನಡು; ಸೊಂಟ, ಟೊಂಕ; ಖಡ್ಗಕೋಶ, ಒರೆ. क्रिवि. ನಡುವೆ, ಮಧ್ಯೆ.

**मियानगी,** स्त्री. ಮಧ್ಯಸ್ಥಿಕೆ.

**मियानतह,** स्त्री. ಒಳವಸ್ತ್ರ, ಅಸ್ತರು.

**मियानदार,** वि. ಮಧ್ಯೆ ಇರುವ; ಮಧ್ಯಸ್ಥ; ಮಧ್ಯಸ್ಥಗಾರ; ಒರೆಯಲ್ಲಿರಿಸಿದ (ಕತ್ತಿ).

**मियानबस्ता,** वि. ಟೊಂಕ ಕಟ್ಟಿದ, ಕಟಿಬದ್ಧನಾದ; ಸಂಸಿದ್ಧವಾದ.

**मियाना,** वि. ಮಧ್ಯಮ ಆಕಾರದ; ಎಡತರ; ಸುಮಾರಾದ. पु. ಮಧ್ಯ, ಕೇಂದ್ರ; ಚಿಕ್ಕ ಪಲ್ಲಕ್ಕಿ, ಮೇನ; ಅಚ್ಚು, ಅಕ್ಷ; ಗಾಡಿಯ ಮೂಕಿಮರ.

**मियानी,** वि. ಮಧ್ಯದ, ನಡುವಣ. स्त्री. ಷರಾಯಿಯ ಕಾಲುಗಳೆರಡೂ ಸೇರುವ ಸ್ಥಳದಲ್ಲಿ ಹೊಲಿದಿರುವ ಮುಮ್ಮೂಲೆಯ ತೇಪೆ; ಬೀಸುವ ಕಲ್ಲಿನ ಗೂಟ.

**मिरगी,** स्त्री. ಅಪಸ್ಮಾರ, ಮಲನಾಗರು

**मिरचा,** पु. ಮೆಣಸಿನ ಕಾಯಿ.

**मिरज़ई,** स्त्री. ಉದ್ದವಾದ ತೋಳುಗಳುಳ್ಳ ಅಂಗಿ, ಜಾಕೆಟ್ಟು.

**मिरज़ा,** पु. ಶ್ರೀಮಂತನ ಪುತ್ರ; ಅರಸು ಮಗ; ನವಾಬನ ಮಗ; ಒಂದು ಬಿರುದು.

**मिरज़ाई,** स्त्री. ಕುಲೀನತೆ, ಸಜ್ಜನಿಕೆ; ಗರ್ವ, ಅಹಂಭಾವ.

**मिर्च,** स्त्री. ಮೆಣಸು; ಮೆಣಸಿನ ಕಾಯಿ; ಖಾರ. काली मिर्च, गोल मिर्च = ಕರಿಮೆಣಸು. लाल मिर्च = ಮೆಣಸಿನಕಾಯಿ.

**मिर्चा,** पु. ಮೆಣಸಿನ ಕಾಯಿ.

**मिल,** स्त्री. ಮಿಲ್ಲು, ಯಂತ್ರಶಾಲೆ, ಕಾರ್ಖಾನೆ. क्रिवि. ಸೇರಿ, ಕೂಡಿ. मिल जुल = ಒಟ್ಟುಗೂಡಿ.

**मिलन,** पु. ಸಂಧಿಸುವಿಕೆ; ಸೇರುವಿಕೆ; ಸೇರಿಕೆ; ಹೊಂದಿಕೆ; ಮಿಳನ.

**मिलनसार,** वि. ಸ್ನೇಹವಾತ್ಸಲ್ಯವುಳ್ಳ; ಸೌಜನ್ಯವಾದ; ಹೊಂದಿಕೊಳ್ಳುವ ಸ್ವಭಾವದ.

**मिलनसारी,** स्त्री. ಹೊಂದಿಕೊಳ್ಳುವ ಸ್ವಭಾವ; ಸೌಹಾರ್ದ, ಸೌಜನ್ಯ.

**मिलना,** अक्रि. ಮಿಶ್ರವಾಗು, ಸೇರಿಕೊಳ್ಳು; ಸೇರು, ಕಲೆ, ಬೆರೆ; ಕೂಡು; ಅಪ್ಪಿಕೊ, ತಬ್ಬಿಕೊ; ಆಲಿಂಗಿಸು; ಸಂಧಿಸು, ಭೇಟಿಮಾಡು; ಸಿಗು, ದೊರೆ; ಲಭಿಸು, ದೊರಕು; ಹೊಂದು; ತಾಗು; ಬೀಳು; ಹೋಲು, ಒಪ್ಪು. मिलना जुलना = ಅನ್ಯೋನ್ಯದಿಂದ ಕಲೆ; ಹೊಂದಿಕೆಯಾಗಿರು; ಒಪ್ಪು, ಹೋಲು

मिलनी, स्त्री. ಒಂದು ಬಗೆ ವಿವಾಹ.
मिलवाना, स्त्री. ಸೇರಿಸುವಿಕೆ, ಕೂಡಿಸುವಿಕೆ; ಹೋಲಿಸುವಿಕೆ; ವಿವಾಹದಲ್ಲಿ ಬೀಗರಿಬ್ಬರೂ ತಬ್ಬಿಕೊಳ್ಳುವ ಒಂದು ಪದ್ಧತಿ ಅಥವಾ ಶಾಸ್ತ್ರ. सक्रि. मिलाना ದ ಪ್ರೆ. ರೂಪ.
मिलान, पु. ಸೇರಿಸುವಿಕೆ, ಬೆರಸುವಿಕೆ; ಹೋಲಿಕೆ; ತಾಳೆ ನೋಡುವಿಕೆ.
मिलाना, सक्रि. ಸೇರಿಸು; ಕಲಸು, ಬೆರೆಸು; ಜೊತೆಮಾಡು; ಒಟ್ಟುಗೂಡಿಸು; ಸರಿನೋಡು, ತಾಳೆನೋಡು; ಹೋಲಿಸು; ಸಂಧಿ ಮಾಡಿಸು, ಭೇಟಿ ಮಾಡಿಸು.
मिलानी, स्त्री. ಹೋಲಿಕೆ; ಸರಿಪಡಿಸುವಿಕೆ.
मिलाप, पु. ಸೇರಿಕೆ, ಹೊಂದಿಕೆ; ಒಗ್ಗಟ್ಟು, ಐಕ್ಯ, ಐಕಮತ್ಯ; ಸ್ನೇಹ; ಸಂಧಿ, ಭೇಟಿ; ಸಂಪರ್ಕ.
मिलापी, वि. ಹೊಂದಿಕೆಯಾದ, ಸ್ನೇಹಪರ.
मिलाव, मिलावट, स्त्री. ಮಿಶ್ರಣ; ಬೆರಕೆ, ಕಲಪಡ; ಸೇರಿಕೆ; ಹೊಂದಾಣಿಕೆ; ಐಕ್ಯ, ಒಗ್ಗಟ್ಟು; ಸಂಧಿ, ಸಮಾಧಾನ.
मिलित, वि. ಬೆರೆತ, ಕಲೆತ, ಸೇರಿದ, ಮಿಶ್ರಿತವಾದ.
मिलोना, सक्रि. ಸೇರಿಸು, ಕಲಸು; ಜೊತೆಮಾಡು; ಹಾಲು ಕರೆ.
मिलौनी, वि. ಕಲೆತ, ಬೆರೆತ. स्त्री. ಬೆರಕೆ
मिल्क, स्त्री. ಭೂಸ್ಥಿತಿ, ಜಹಗೀರು; ಆಸ್ತಿ
मिल्कियत, स्त्री. ಜಹಗೀರು, ಇನಾಂ ಜಮೀನು; ಭೂಸ್ಥಿತಿ; ಆಸ್ತಿ; ಹಕ್ಕು; ಜಮೀನಿನ ಬಾಧ್ಯತೆ; ಸ್ವಾಧೀನ, ಹಿಡುವಳಿ.
मिल्की, पु. ಜಮೀನುದಾರ.
मिल्लत, स्त्री. ಮತ, ಧರ್ಮ; ಅನ್ಯೋನ್ಯ, ಸ್ನೇಹವಾತ್ಸಲ್ಯ.
मिश्र, वि. ಮಿಶ್ರಿತ; ಬೆರೆತ, ಕಲೆತ. पु. ಬ್ರಾಹ್ಮಣರ ಒಂದು ಬಿರುದು; ಪುರಾಣಿಕ; ಭಾಗವತರು; ಈಜಿಪ್ಟ್ ದೇಶ.
मिश्रण, पु. ಮಿಶ್ರಣ, ಬೆರಕೆ.
मिश्रित, वि. ಮಿಶ್ರಿತ, ಬೆರೆತ.
मिश्री, स्त्री. ಕಲ್ಲುಸಕ್ಕರೆ.
मिस, पु. ನೆವ, ವ್ಯಾಜ; ತಂತ್ರ; ತಾಮ್ರ
मिसकीन, वि. ದೀನ; ದಿಕ್ಕಿಲ್ಲದವ, ಬಡ
मिसकीनी, स्त्री. ದೈನ್ಯ; ಬಡತನ.
मिसना, अक्रि. ಪುಡಿಪುಡಿಯಾಗು.
मिसरा, पु. ಬಾಗಿಲಿನ ಒಂದು ಕದ; ಶ್ಲೋಕದ ಒಂದು ಪಂಕ್ತಿ, ಶ್ಲೋಕಾರ್ಧ; ಬ್ರಾಹ್ಮಣರ ಒಂದು ಬಿರುದು, "ಮಿಶ್ರ".
मिसरी, स्त्री. ಕಲ್ಲುಸಕ್ಕರೆ.
मिसहा, पु. ನೆಪ ಹೇಳುವವ; ಮೋಸಗಾರ.
मिसाई, स्त्री. ಒಕ್ಕಣೆ, ಹುಲ್ಲೊಕ್ಕಲು.
मिसाल, स्त्री. ಉದಾಹರಣೆ; ದೃಷ್ಟಾಂತ; ಹೋಲಿಕೆ; ಉಪಮೆ; ಗಾದೆ, ಸಾಮತಿ.
मिसिर, पु. ಬ್ರಾಹ್ಮಣರ ಒಂದು ಬಿರುದು, "ಮಿಶ್ರ".
मिसरानी, मिसिराइन, स्त्री. मिसिर

का स्त्री. रूप.

**मिसिल**, वि. ಸಮಾನ, ಸದೃಶ. स्त्री. ಕಾಗದ ಪತ್ರಗಳ ಕಟ್ಟು, "ಫೈಲ್".

**मिसी**, वि. ತಾಮ್ರದ.

**मिस्क़ला**, पु. ಸಾಣೆಕಲ್ಲು.

**मिस्तर**, पु. ಝಾಡಮಾಲಿ; ಪೆಟ್ಟಣಿಗೆ, ದಮ್ಮಸ್ಸು; ಬರೆಯುವಾಗ ಒತ್ತಿಗೆ ಇಟ್ಟುಕೊಳ್ಳುವ ರಟ್ಟು, ಅಡಿವತ್ತಳೆ.

**मिस्तरी**, पु. ಕೆಲಸಗಾರ; ಮೇಸ್ತ್ರಿ; ಗಾರೆಕೆಲಸದವ, ತರಗಾರ; ಬಡಗಿ.

**मिस्ता**, पु. ಮೈದಾನ, ಬಯಲು.

**मिस्मार**, वि. ಹಾಳಾದ, ಧ್ವಂಸವಾದ. पु. ಮೊಳೆ, ಗೂಟ.

**मिस्सा**, पु. ಗೋಧಿ ಕಡಲೆ ಮತ್ತು ಬಟಾಣಿ ಇವುಗಳ ಬೆರಿಕೆ.

**मिस्सी**, स्त्री. ಹೆಂಗಸರು ಅಲಂಕಾರಕ್ಕಾಗಿ ಹಲ್ಲುಗಳಿಗೆ ಹಚ್ಚಿಕೊಳ್ಳುವ ಒಂದು ಬಗೆ ಲೇಪ, ಹಲ್ಲುಗೆಂಪು, ಓರಣ. मिस्सी काजल = ಸಿಂಗಾರ.

**मिह**, वि. ದೊಡ್ಡ; ನಾಯಕ.

**मिहनत**, स्त्री. = मेहनत.

**मिहाद**, पु. ಮಂಚ, ಪಲಂಗ.

**मिहाना**, अक्रि. ಒದ್ದೆಯಾಗು.

**मिहिर**, पु. ಸೂರ್ಯ; ಚಂದ್ರ; ಮೇಘ, ಮೋಡ; ವಾಯು, ಗಾಳಿ.

**मिहीन**, वि. ನುಣುಪಾದ, ಸೂಕ್ಷ್ಮವಾದ; ತೆಳುವಾದ.

**मिहीनदोज़**, पु ಹೊಲಿಗೆಯವ, ದರ್ಜಿ

**मींगी**, स्त्री. ತಿರುಳು, ಕುಸುರಿ; ಕೆಚ್ಚು, ಚೀಗು.

**मींजना, मींडना**, सक्रि. ತಿಕ್ಕು, ಉಜ್ಜು; ಬೆಳಗು; ಹಿಸಕು.

**मीआद**, स्त्री. = मियाद.

**मीच**, स्त्री. ಮೃತ್ಯು, ಸಾವು; ಅಳಿವು

**मीचना**, सक्रि. ಕಣ್ಣು ಮುಚ್ಚು.

**मीज़ान**, पु. ತಕ್ಕಡಿ, ತ್ರಾಸು; ತುಲಾರಾಶಿ; ಕೂಡುವಿಕೆ; ಒಟ್ಟು, ಜುಮ್ಲಾ, ಬೇರಿಜು, ಏಕೂನು.

**मीज़ू**, पु. ಮಸೂರ ಬೀಜ.

**मीठा**, वि. ಸಿಹಿಯಾದ, ಮಧುರ; ಸವಿ, ರುಚಿಕರ; ಪ್ರಿಯ, ಪಸಂದಾದ; ಸರ್ವಸಾಧಾರಣವಾದ; ಎಡವಟ್ಟು; ಮಂದಬುದ್ಧಿ; ನಪುಂಸಕ. पु. ಸಿಹಿಪದಾರ್ಥ; ಬೆಲ್ಲ; ಸಿಹಿ. मीठा तेल = ಒಳ್ಳೆ ಎಣ್ಣೆ

**मीठिया, मीठी**, स्त्री. ಚುಂಬನ.

**मीत**, पु. ಮಿತ್ರ, ಸ್ನೇಹಿತ; ಪ್ರಿಯ.

**मीता**, पु. ತಂಬಿಗೆ, ಗಲಂತಿಕೆ; ಬಟ್ಟಲು

**मीन**, पु. ಮೀನು; ಮೀನರಾಶಿ. मीन मेख निकालना = ಮೀನ ಮೇಷ ನೋಡು; ವಿಮರ್ಶಿಸು, ಟೀಕಿಸು.

**मीना**, पु. ರಾಜಪುತ್ರಸ್ಥಾನದ (ಕಳ್ಳತನ, ದರೋಡೆ ಮಾಡುವ) ಒಂದು ಜಾತಿ; ದರೋಡೆಗಾರ, ಡಕಾಯಿತ; ದೇವಲೋಕ, ಸ್ವರ್ಗ; ನೀಲ ಆಕಾಶ; ನೀಲಮಣಿ; ನೀಲಿ; ಪಿಂಗಾಣಿ, ಮಿನಾಯಿ; ಚಿನ್ನದ ಮೇಲೆ ಮಾಡುವ ಬಣ್ಣದ ಕೆಲಸ; ಸೇಂದಿಯ ಗಾಜಿನ ಪಾತ್ರೆ. मीना बाज़ार = ವಿಚಿತ್ರ ಸಾಮಾನುಗಳ ಅಂಗಡಿ ಅಥವಾ ಸಂತೆ.

**मीनाकार**, पु. ಮಿನಾಯಿ ಹಾಕುವ

नाकारी, स्त्री. ಮಿನಾಯಿ ಕೆಲಸ.
नार, स्त್री. ಸ್ತಂಭಾಕಾರದ ಗೋಪುರ, ಕಂದ, ಗೋಪುರ ಸ್ತಂಭ.
र, पु. ಮುಖಂಡ, ನಾಯಕ; ಮು ಖ್ಯಸ್ಥ; ಆಚಾರ್ಯರು; ಇಸ್ಪೀಟಿನಲ್ಲಿ ರಾಜ. मीर फर्श = ರತ್ನಗಂಬಳಿಯ ಮೇಲೆ ಅಂಚಿನಲ್ಲಿ ಇಟ್ಟಿರುವ ಭಾರದ ಗುಂಡುಗಳು. मीर मजलिस = ಸಭಾ ಪತಿ, ಸಭಾನೇತೃ, ಸಭಾಧ್ಯಕ್ಷ.
रास, स्त्री. ಪಿತ್ರಾರ್ಜಿತ ಸೊತ್ತು, ದಾಯ; ವಂಶಪರಂಪರೆಯಾಗಿ ಬಂದ ಹಕ್ಕು ಬಾಧ್ಯತೆ, ಮಿರಾಸಿ.
रासी, वि. ವಂಶಪರಂಪರೆಯಾಗಿ ಬಂದ ಹಕ್ಕುಬಾಧ್ಯತೆಗೆ ಸಂಬಂಧಪಟ್ಟ, ಮಿರಾಸಿನ. पु. ಮಹಮ್ಮದೀಯ ಗಾಯಕ ಅಥವಾ ಲಾವಣಿಗಾರ.
ल, पु. ೧೭೬೦ ಗಜ, ಮೈಲು. स्त्री. ಚುಕ್ಕೆಗೆಯುವ ಸಣ್ಣ ಶಸ್ತ್ರ, ವೇಧನಿ; ಸೂಜಿ; ದಬ್ಬಣ.
लन, पु. ಮುಚ್ಚುವಿಕೆ.
ख, पु. ಪೋಟಿ, ಸ್ಪರ್ಧೆ; ಹಗೆ, ದ್ವೇಷ; ಮೋಸ, ವಂಚನೆ; ಠಕ್ಕು; ನೆಪ
री, स्त्री. ಒಂದು ಬಗೆ ಚಕ್ಕಳ.
सना, सक्रि. ಅರೆ, ಇಡಿ, ಬೀಸು.
ग्गा, पु. ಕೊಡತಿ, ಮುದ್ಗರ; ಕಾರಾ ಬಂದೀ.
ग्गरी, स्त्री. ಚಿಕ್ಕ ಕೊಡತಿ.
ग्गेर, वि. ಹಟಮಾರಿ, ಚಂಡಿ.
ग्गौरी, स्त्री. ಹೆಸರುಬೇಳೆ ಸಂಡಿಗೆ.
छ-मुंडा, वि. ಮೀಸೆ ಬೋಳಿಸಿ ಕೊಂಡವ.
मुंछैला, वि. ಮೀಸೆಯುಳ್ಳವ.
मुंड, पु. ತಲೆ, ಮುಂಡ, ಕಪಾಲ; ಬೋಳುತಲೆ, ಮರದ ಮೋಟು, ಬೊಡ್ಡಿ.
मुंडचीरा, पु. ತಲೆಯನ್ನೊಡೆದುಕೊಳ್ಳುವೆನೆಂದು ಹೆದರಿಸಿ ಭಿಕ್ಷೆ ಬೇಡುವವ; ಕಡ್ಡಾಯಗಾರ; ಸುಲಕೊಳ್ಳುವವ.
मुंडन, पु. ಮುಂಡನ, ಕ್ಷೌರ; ಚೌಲ.
मुंडना, अक्रि. ಕ್ಷೌರವಾಗು, ಹಜಾಮತ್ತಾಗು.
मुंडला, वि. ಬೋಳಿಸಿದ.
मुंडवाना, सक्रि. ಕ್ಷೌರಮಾಡಿಸು.
मुंडा, वि. ಬೋಳಿಸಿದ, ಮುಂಡ; ಬೋಳು; ಮೊಂಡ, ಮೋಟು(ಮರ). पु. ಎಕ್ಕಡ, ಮೆಟ್ಟು; ಮೋಡಿ ಬರಹ.
मुंडाई, स्त्री. ಕ್ಷೌರಮಾಡುವಿಕೆ, ಹಜಾಮತ್ತು; ಕ್ಷೌರದ ಕೂಲಿ.
मुंडाना, सक्रि. ಕ್ಷೌರಮಾಡು, ಹಜಾಮತ್ತು ಮಾಡು, ಬೋಳಿಸು.
मुंडासा, पु. ಮುಂಡಾಸು, ಪೇಟ.
मुंडित, वि. ಬೋಳಿಸಲ್ಪಟ್ಟ, ಮುಂಡಿತ.
मुंडिया, पु. ಶಿರಸ್ಸು, ತಲೆ; ಸನ್ಯಾಸಿ.
मुंडी, स्त्री. ಮುಂಡೆ, ಬೋಳಿ; ಒಂದು ವನಸ್ಪತಿ; ತಲೆ; ಶಿಖರ, ತುದಿ. पु. ಕ್ಷೌರಿಕ, ನಾಪಿತ.
मुंडीसा, पु. ತಲೆಯ ಕಡೆ.
मुंडेरा, पु. मुंडेर, मुंडेरी, स्त्री. ಗೋಡೆಯ ಅಗ್ರ, ಕುಂಬೆ, ಅಳುವೇರಿ.
मुंतक्रिल, वि. = मुन्तक्रिल.
मुंदना, अक्रि. ಮುದುರಿಕೊಳ್ಳು,

ಮುಗಿ; ಬಂದಾಗು, ಮುಚ್ಚು.

**मुंदरा**, पु. ಕಿವಿಯ ಕುಂಡಲ.

**मुंदरिया, मुंदरी**, स्त्री. ಉಂಗುರ.

**मुंह**, पु. ಮುಖ, ಮೊಗ; ಮುಖಭಾವ; ಮೂತಿ, ಮೋರೆ; ಬಾಯಿ; ದ್ವಾರ. मुंह की खाना=ಅವಮಾನ ಹೊಂದು. मुंह बनाना=ಅಣಕಿಸು. मुंह मारना =ಬಾಯಿಗೆ ಹಾಕು, ಲಂಚ ಕೊಡು.

**मुंहचंग**, पु. ಮೋರ್ಛಿಂಗ್ (ವಾದ್ಯ).

**मुंहचोर**, वि. ಪುಕ್ಕ, ಪಿರಿಕಿ; ಮನೆಯಲ್ಲೇ ಬಿದ್ದಿರುವವ.

**मुंह-छुआई**, स्त्री. ಒಣ ಉಪಚಾರದ ಮಾತು.

**मुंहज़बानी**, वि. ಬಾಯಿಮಾತಿನ; ಬಾಯಿಪಾಠದ, ಕಂಠಸ್ಥ.

**मुंहज़ोर**, वि. ಬಾಯಿಬಡುಕ, ಗಡುಸು ಮಾತಿನವ; ಗಡುಸಿನ, ಬಿರುಸಿನ; ದುಡುಕಿನವ; ಹಟಮಾರಿ.

**मुंहज़ोरी**, स्त्री. ದುಡುಕು; ಹಟ.

**मुंहटोपा**, पु.'ಬಾಯಿ ಕುಲಾವಿ', ಲಂಚ

**मुंहड़ा**, पु. ಮುಖ, ಮೂತಿ; ಬಾಯಿ.

**मुंहतोड़**, वि. ಮುಖ ಮುರಿಯುವ (ಜವಾಬು).

**मुंहदिखाई**, स्त्री. ಮದುವೆಯನಂತರ ಗಂಡಿನ ಕಡೆಯುವರು ವಧುವನ್ನು ಮೊತ್ತ ಮೊದಲು ನೋಡುವ ಸಂಪ್ರದಾಯ, ಮುಖ ನೋಡುವ ಶಾಸ್ತ್ರ; ವಧುವನ್ನು ನೋಡುವಾಗ ಕೊಡುವ ಉಡುಗೊರೆ.

**मुंहदेखनी**, स्त्री. ವಧುವನ್ನು ಮೊತ್ತ ಮೊದಲು ನೋಡುವಿಕೆ.

**मुंहदेखा**, वि. ಮುಖ ದಾಕ್ಷಿಣ್ಯದ (ಕೆಲಸ).

**मुंहनाल**, स्त्री. ಹುಕ್ಕಾವಿನ ಬಾಯಿ.

**मुंह-फट**, वि. ಕೆಟ್ಟನಾಲಗೆಯವ, ಕೆಟ್ಟ ಬಾಯಿನವ; ಹರಟೆಮಲ್ಲ; ನಿರ್ಭ...ನಾದವ.

**मुंहबोला**, वि. ಹೆಸರಿನ; ಹೆಸರ... मुंहबोला भाई=ದತ್ತಕ ಸೋದರ; ಸೋದರನೆಂದು ಹೆಸರು ಕೊಟ್ಟು ಕರೆಯುವವ; ಪರಮಮಿತ್ರ, ಆಪ್ತಸ್ನೇಹಿತ

**मुंहभराई**, स्त्री. ಬಾಯಿ ತುಂಬಿಸುವುದು; ಲಂಚ.

**मुंहमांगा**, वि. ಬೇಡಿದ, ಕೋರಿದ-

**मुंहामुंह**, क्रिवि. ತುಂಬಿದ, ಪೂರ್ಣ; ಇದಿರುನಲ್ಲಿ, ರೂಬರೂಬು, ಮೊಖಾ...

**मुंहासा**, पु. ಮೊಡವೆ, ಮುಖಕ್ಕೆ... ಮಡಿಮೆ, ಮುದ್ಧಣ.

**मुअज़्ज़न**, पु. ಮುಸಲ್ಮಾನರನ್ನು ನಮಾಜಿಗೆ ಮಸೀದಿಗೆ ಕರೆವ ಮುಲ್ಲಾ.

**मुअज़्ज़म**, वि. ದೊಡ್ಡ, ಹಿರಿಯ.

**मुअत्तल**, वि. ಖಾಲಿ; ನಿವೃತ್ತನಾದ.

**मुअन्नस**, पु. ಸ್ತ್ರೀಲಿಂಗ.

**मुअम्मा**, पु. ಗೂಢಸಂಗತಿ, ಮರ್ಮ... ಒಗಟು; ಕಠಿಣ ಕೆಲಸ, ಸಮಸ್ಯೆ.

**मुअल्लिफ़**, पु. ಸಂಪಾದಕ, ರಚಯಿತ...

**मुअल्लिम**, पु. ಅಧ್ಯಾಪಕ, ಶಿಕ್ಷಕ.

**मुअल्लिमा**, स्त्री. ಅಧ್ಯಾಪಿಕೆ, ಶಿಕ್ಷಕಿ.

**मुअल्लिमी**, स्त्री. ಅಧ್ಯಾಪನ; ಶಿಕ್ಷಣ...

**मुअस्सर**, वि. ಗುಣಕಾರಿ.

…ना, अक्रि. ಸಾಯು, ಮಡಿ.
…फ़, वि. = माफ़.
…मिला, पु. = मामला.
…यना, पु. ಮೇಲ್ವಿಚಾರಣೆ; ಉಸ್ತು…ರಿ; ದೃಷ್ಟಿ, ನೋಟ.
…ज़ा, पु. ಔಷಧೋಪಚಾರ, …ಜು, ವೈದ್ಯ ಚಿಕಿತ್ಸೆ.
…लिज, पु. ಚಿಕಿತ್ಸಕ.
…वज़ा, पु. ಪ್ರತಿಫಲ, ಸಂಭಾವನೆ; ಮುಯ್ಯಿ; ಪರಿವರ್ತನೆ.
…हिदा, पु. ಪ್ರತಿಜ್ಞೆ, ಕರಾರು.
…, स्त्री. ತಾಯಿ.
…टा, पु. ಮುಗುಟ.
…तदा, पु. ಆಚಾರ್ಯ, ಗುರು.
…तदी, पु. ಅನುಕರಣ ಮಾಡುವವ, …ಪಾಲಿಸುವವ; ಶಿಷ್ಯ.
…तदीर, वि. ಶಕ್ತಿವಂತ, ಬಲಿಷ್ಠ.
…फ़ी, वि. ತೃಪ್ತನಾದ, ಸಂತುಷ್ಟ; …ರ್ತಿಯಾದ, ಪರ್ಯಾಪ್ತ.
…त्ता, वि. ಅಚ್ಚುಕಟ್ಟಾದ, ಚೊಕ್ಕಟ
…द्दम, वि. ಪೂರ್ವದ; ಮುಂದಿನ; …ತನ; ಪ್ರಧಾನ. पु. ಮುಂದಾಳು
…दमा, मुक़द्दमा, पु. ಮೊಕದ್ದಮೆ, …; ದಾವಾ, ವ್ಯಾಜ್ಯ; ಪೀಠಿಕೆ, …ಮಿಕೆ.
…दमाबाज़, मुक़दमेबाज़, पु. ವ್ಯಾಜ್ಯವಾಡುವವ.
…मेबाज़ी, स्त्री. ವ್ಯಾಜ್ಯವಾಡುವಿಕೆ; …ವಾದ.
…द्दर, वि. ಕದಡಿದ, ಕಲಕು; ಅಸಂತುಷ್ಟ; ವ್ಯಥಿತ.
मुक़द्दर, पु. ಭಾಗ್ಯ, ನಿಯತಿ, ವಿಧಿ.
मुक़द्दस, वि. ಪವಿತ್ರವಾದ, ಪಾವನ.
मुकम्मल, वि. ಪೂರ್ಣ, ಸಂಪೂರ್ಣವಾಗಿ ಅಳವಡಿಸಿದ; ಪೂರೈಸಿದ, ಸಮಾಪ್ತ.
मुकरना, अक्रि. ಕೊಟ್ಟ ಮಾತನ್ನು ಮೀರು; ಅಲ್ಲವೆನ್ನು, ಅಪಲಪಿಸು; ನಿರಾಕರಿಸು.
मुकरनी, मुकरी, स्त्री. ಕವನವಿಶೇಷ.
मुकर्रम, वि. ಗೌರವವುಳ್ಳ, ಮಾನ್ಯ.
मुकर्रर, क्रिवि. ಮತ್ತೊಮ್ಮೆ, ಪುನಶ್ಚ. मुकर्रर शिकर्रर = ಎರಡನೇ ಸಾರಿ ಮೂರನೇ ಸಾರಿ; ಪದೇ ಪದೇ, ಪುನಃ ಪುನಃ.
मुक़र्रर, वि. ನಿಶ್ಚಿತ, ಗೊತ್ತಾದ; ನಿಗದಿ ಮಾಡಿದ, ನಿಯತ, ನೇಮಕವಾದ, ನಿಯುಕ್ತ; ನಿತ್ಯವಾದ, ಶಾಶ್ವತ.
मुक़र्ररा, वि. ನಿಗದಿಯಾದ (ಭಾಗ). पु. ನಿಗದಿಯಾದ ವೇತನ, ಮಾಸಾಶನ
मुक़र्ररी, स्त्री. ನಿಗದಿ, ನಿರ್ಧಾರಣ; ನಿಯುಕ್ತಿ, ನಿಯೋಗ, ನೇಮಣೂಕಿ.
मुकलावा, पु. = गौना.
मुक़व्वी, वि. ಬಲಕಾರಕ, ಪೌಷ್ಟಿಕ.
मुक़स्सर, वि. ಒಡೆದ, ಮುರಿದ; ಕುಂದುಳ್ಳ; ಅಪೂರ್ಣ.
मुक़ाबला, पु. ಮುಖಾಮುಖಿ, ಭೇಟಿ, ಮೊಕಾಬಿಲೆ; ಮಾರೊಡ್ಡುವಿಕೆ, ಎದುರಾಟ; ಹೋರಾಟ; ವಿರೋಧ, ಪ್ರತಿಭಟನೆ; ಸಾಮ್ಯ, ಈಡು; ಹೋಲಿಕೆ,

ತುಲನೆ; ಪರೀಕ್ಷೆ, ಪರಿಶೀಲನೆ.

**मुक़ाबिल**, क्रिवि. ಸಮ್ಮುಖದಲ್ಲಿ, ಎದುರಿನಲ್ಲಿ. पु. ಎದುರಾಳಿ, ಪ್ರತಿಸ್ಪರ್ಧಿ, ವಿರೋಧಿ.

**मुक़ाम**, पु. ನಿಲ್ಲುವ ಸ್ಥಳ, ನೆಲೆ; ತಂಗುವ ಸ್ಥಳ, ಬಿಡದಿ, ಬಿಡಾರ; ಬೀಡು; ಮೊಕ್ಕಾಂ; ತಂಗುವಿಕೆ, ಅವಸ್ಥಾನ, ನಿವಾಸ; ಸಂದರ್ಭ, ಎಡೆ; ವೀಣೆಯ ಗವಸಣಿಗೆ.

**मुक़ातबत**, स्त्री. ಪತ್ರವ್ಯವಹಾರ.

**मुक़ामी**, वि. ಸ್ಥಳೀಯ, ಸ್ಥಾನೀಯ.

**मुकियाना**, सक्रि. ಗುಮ್ಮು, ಗುದ್ದು.

**मुक़ी**, पु. ವಾಂತಿ ಉಂಟುಮಾಡುವ ಔಷಧ, ವಮನಕಾರಿ ಔಷಧ.

**मुक़ीम**, वि. ತಂಗುವವ, ಇರುವವ; ನಿವಾಸಿ. पु. ತರಗುಗಾರ, ದಲ್ಲಾಳಿ.

**मुकुट**, पु. ಕಿರೀಟ, ಮುಕುಟ.

**मुकुर**, पु. ದರ್ಪಣ, ಕನ್ನಡಿ; ಮೊಗ್ಗು.

**मुकुल**, पु. ಮೊಗ್ಗು, ಮುಗುಳು.

**मुकुलित**, वि. ಅರಳಿದ; ವಿಕಸಿಸಿದ.

**मुक्का**, पु. ಗುದ್ದು, ಗುಮ್ಮು, ಮುಷ್ಟಿ.

**मुक्कियाना**, सक्रि. ಮುಷ್ಟಿಯಿಂದ ಹೊಡೆ, ಗುದ್ದು, ಗುಮ್ಮು; ಹಿಟ್ಟನ್ನು ನಾದು; ಹಿಸುಕು.

**मुक्की**, स्त्री. ಮುಷ್ಟಿ; ಗುದ್ದು, ಗುಮ್ಮು; ಮುಷ್ಟಿಯುದ್ಧ, ಗುದ್ದಾಟ; ಮುಷ್ಟಿಯಿಂದ ಹಿಸುಕುವಿಕೆ.

**मुक्केबाज़**, वि. ಗುದ್ದಾಡುವವ.

**मुक्त**, वि. ಬಿಡುಗಡೆಯಾದ, ಬಿಟ್ಟ.

**मुक्ति**, स्त्री. ಮುಕ್ತಿ, ಬಿಡುಗಡೆ.

**मुख**, पु. ಮುಖ; ಮೂತಿ, ಮೋರೆ; ಬಾಯಿ; ದ್ವಾರ.

**मुख़ड़ा**, पु. ಮುಖ, ಮೂತಿ, ಮ[illegible] ಸುಡಿ; ಬಾಯಿ.

**मुख़न्नस**, वि. ನಪುಂಸಕ; ನಪುಂಸಕಲಿಂ[illegible]

**मुख़बिर**, वि. ಸುದ್ದಿಹೇಳುವವ, ದೂ[illegible] ಗೂಢಚಾರ.

**मुख़बिरी**, स्त्री. ಗುಪ್ತರೀತಿಯಲ್ಲಿ ವಿಚಾರಿಸುವಿಕೆ, ಬೇಹು; ಗುಪ್ತಚಾರ[illegible] ಕೆಲಸ.

**मुख़म्मस**, वि. ಐದರಷ್ಟು, ಐದುಮ[illegible] ಐದು ಮೂಲೆಗಳುಳ್ಳ. पु. ಐ[illegible] ಕೋನಗಳ ಕ್ಷೇತ್ರ; ಐದು ಚರಣಗ[illegible] ಕವಿತೆ, ಪಂಚಪದಿ.

**मुख़लिस**, वि. ಶುದ್ಧವಾದ, ಅಪ್ಪ[illegible] ನಿಜವಾದ, ಯಥಾರ್ಥ. पु. ಸ್ನೇಹ[illegible]

**मुख़लिसाना**, क्रिवि. ಯಥಾರ್ಥವಾ[illegible] ಸ್ನೇಹಭಾವದಲ್ಲಿ.

**मुख़लिसी**, स्त्री. ಮುಕ್ತಿ, ಬಿಡುಗ[illegible]

**मुख़ातिब**, वि. ಮಾತನಾಡಿಸಲ್ಪ[illegible] ವವ, ಸಂಬೋಧಿತ; ಬಿರುದಾಂ[illegible] ಹೆಸರುಳ್ಳ, ನಾಮಾಂಕಿತ; ಮಾತಾ[illegible] ವವ, ಸಂಬೋಧಿಸುವವ. मुखा[illegible] होना= ಸಂಬೋಧಿಸು. पु. ಮಧ್ಯ[illegible] ಪುರುಷ (ವ್ಯಾಕರಣ).

**मुखा**, पु. ಛಾವಣಿಯ ಬೆಂತೊಲೆ.

**मुखानी**, स्त्री. ರೂಪ, ಆಕೃತಿ.

**मुखारा**, वि. ಕೆಟ್ಟಬಾಯಿಯವ, [illegible] ನಾಲಗೆಯವ.

**मुख़ालफ़त**, स्त्री. ಎದುರಿಸುವಿಕೆ, [illegible]ರೋಧ; ಪ್ರತಿಭಟನೆ; ಮತಭೇ[illegible]

ಭಿನ್ನಾಭಿಪ್ರಾಯ.

**मुख़ालिफ़**, वि. ವಿರುದ್ಧವಾದ; ಎದುರಾಳಿ, ವಿರೋಧಿ.

**मुखिया**, वि. ಮುಖಂಡ, ಅಗ್ರೇಸರ.

**मुख़िरी**, स्त्री. ಮೊಗ್ಗು, ಮುಗುಳು.

**मुख़िल**, वि. ದೊಂಬಿ ಎಬ್ಬಿಸುವವ, ಗಲಾಟೆಖೋರ.

**मुखी**, स्त्री. ಒಂದು ಬಗೆ ಪಾರಿವಾಳ.

**मुख़्फ़ी**, वि. ಗುಟ್ಟಾದ, ಗುಪ್ತ.

**मुखड़ा**, पु. ಮೂತಿ, ಮೋರೆ.

**मुख़्तलिफ़**, वि. ಬೇರೆ, ಭಿನ್ನ; ಅನೇಕ, ಬೇರೆಬೇರೆ; ಬಗೆಬಗೆಯ, ವಿವಿಧ.

**मुख़्तसर**, वि. ಸಂಕ್ಷಿಪ್ತ, ಲಘು; ಅಲ್ಪ, ಕಿರಿಯ. पु. ಸಾರಾಂಶ, ಅಡಕ.

**मुख़्तसरन्**, क्रिवि. ಸಂಕ್ಷೇಪವಾಗಿ.

**मुख़्तार**, पु. ಸ್ವತಂತ್ರ ಪುರುಷ; ಪ್ರತಿನಿಧಿ, ಪ್ರತಿಹಸ್ತಕ, ಏಜಂಟು, ಮೊಕ್ತೆಯಾರ್.

**मुख़्तारकार**, पु. ಏಜಂಟು, ಕಾರಭಾರಿ

**मुख़्तारनामा**, पु. ಅಧಿಕಾರ ಪತ್ರ, ಮೊಕ್ತಯಾರನಾಮೆ, ವಕಾಲತು.

**मुख़्तारी**, स्त्री. ಮೊಕ್ತಿಯಾರನ ಕೆಲಸ; ಪ್ರಾತಿನಿಧ್ಯ; ಸ್ವಾತಂತ್ರ್ಯ.

**मुख्य**, वि. ಮುಖ್ಯ, ಪ್ರಧಾನ.

**मुख्यता**, स्त्री. ಪ್ರಾಮುಖ್ಯ, ಪ್ರಾಧಾನ್ಯ

**मुग़**, पु. ಅಗ್ನಿಪೂಜಕ; ಸೇಂದಿ ಅಂಗಡಿಯವ.

**मुगदर**, पु. ಗದೆ; ಕೊಡತಿ, ಬಡಿಗೆ; ಮುಗದರ.

**मुग़न्नी**, पु. ಸಂಗೀತಗಾರ.

**मुग़ल**, पु. ಮುಸಲ್ಮಾನರ ಒಂದು ಜಾತಿ, ಮೊಗಲರು. मुग़ल पठान = ಹುಲಿಕಲ್ಲಿನಾಟ.

**मुग़लई, मुग़लाई**, वि. ಮೊಗಲರ, ಮೊಗಲಾಯಿ.

**मुग़लक़**, वि. ಗೂಢವಾದ, ಕ್ಲಿಷ್ಟವಾದ; ಕಷ್ಟತರವಾದ.

**मुग़लज़ात**, स्त्री. ಬೈಗುಳು, ನಿಂದೆ.

**मुग़लानी**, स्त्री. ಮೊಗಲರ ಸ್ತ್ರೀ; ದಾಸಿ, ಸೇವಕಿ; ಹೊಲಿಗೆಯವಳು.

**मुग़ालता**, पु. ಮೋಸ, ಠಕ್ಕು; ಭ್ರಮೆ

**मुग्ध**, वि. ಚೆಲುವಿನ, ಸುಂದರ; ಬೆಪ್ಪಾದ, ವಿವೇಕಶೂನ್ಯ.

**मुग्धता**, स्त्री. ಚೆಲುವು, ಅಂದ, ಸೌಂದರ್ಯ; ಬೆಪ್ಪು; ಮುಗ್ಧತೆ.

**मुचंग**, पु. ಮೋರ್ಛಿಂಗು.

**मुचकाना**, सक्रि. ತಿರುಚು, ಹೊಸೆ.

**मुचलका**, पु. ದಸ್ತಾವೇಜು, ಕರಾರು ಪತ್ರ; ಒಪ್ಪಂದ; ಜಾಮೀನು ಪತ್ರ; ಮುಚ್ಚಳಿಕೆ.

**मुचलाना**, सक्रि. ಮುಚ್ಚಿಸು.

**मुचाना**, सक्रि. ಮುಚ್ಚು; ಮುಚ್ಚಿಸು.

**मुचीना**, पु. ಚಿಮುಟ, ಚಿಮುಟಿ.

**मुचा**, पु. ಮಾಂಸದ ದೊಡ್ಡ ಚೂರು.

**मुछंदर**, पु. ಉದ್ದ ಮೀಸೆಯವ; ಕಪಿ; ಕಪಿರಾಯ, ದಡ್ಡ; ಜೋಗಿ.

**मुज़क्कर**, पु. ಪುಲ್ಲಿಂಗ.

**मुज़फ़्फ़र**, वि. ವಿಜಯಿ; ಶ್ರೇಷ್ಠ.

**मुजमल**, वि. ಸಂಕ್ಷಿಪ್ತ; ಅಡಕ; ಕ್ರೋಢೀಕರಿಸಿದ.

**मुजरा**, पु. ಪ್ರಚಲಿತವಾದದ್ದು; ತಳ್ಳುಪಡಿ, ಉತ್ತಾರ; ವಜಾ, ವಟ್ಟ; ನಮಸ್ಕಾರ, ಪ್ರಣಾಮು; ಮುಜರೆ, ಓಲಗ; ಪುರಸ್ಕಾರ; ನಾಯಕಸಾನಿಯ ಸಂಗೀತ ಕಛೇರಿ.

**मुजराई**, पु. ಉತ್ತಾರ; ವಜಾ, ವಟ್ಟ; ಮುಜರೆ ಮಾಡುವವ, ಓಲಗಕಾರ; ಸೇವಾರ್ಥಿ.

**मुज़रिम**, पु. ಆಪಾದಿತ, ಅಪರಾಧಿ.

**मुजर्रद**, वि. ಕೇವಲ, ಬರಿಯ; ಒಬ್ಬಂಟಿಗ; ಅವಿವಾಹಿತ.

**मुजर्रब**, वि. ಅಜಮಾಯಿಷಿ ಮಾಡಿದ; ಪರೀಕ್ಷಿಸಿದ; ಅನುಭವವುಳ್ಳ; ಅರಿತುಸುರಿತ.

**मुज़ादला**, पु. ಜಗಳ, ವಿರೋಧ.

**मुज़ाफ़**, वि. ಸೇರಿದ, ಸಂಬದ್ಧ.

**मुज़ायक़ा**, पु. ಚಿಂತೆ; ಕಷ್ಟ; ಬಡತನ.

**मुज़ारा**, वि. ಸಮಾನ, ಸದೃಶ.

**मुज़ारी**, पु. ಕೃಷಿಕ, ರೈತ.

**मुजालसत**, स्त्री. ಸಭೆ, ಕೂಟ, ಅಧಿವೇಶನ

**मुजावर**, पु. ಗೋರಿಗೆಸೇರಿದಪೂಚಾರಿ; ನೆರೆಯವ.

**मुजाहमत**, स्त्री. ತಡೆಗಟ್ಟುವಿಕೆ, ಅಡಚಣೆ

**मुज़ाहिम**, वि. ತಡೆಗಟ್ಟುವ, ತಡೆವ.

**मुज़िर**, वि. ಹಾನಿಕರ, ಕೆಟ್ಟ.

**मुज़्तर**, वि. ಶಾಂತಿಯಿಲ್ಲದ

**मुझ**, सर्व. 'मैं' ಶಬ್ದಕ್ಕೆ ವಿಭಕ್ತಿ ಸೇರುವಾಗ ಆಗುವ ರೂಪ.

**मुझे**, सर्व. ನನ್ನನ್ನು; ನನಗೆ.

**मुटकना**, वि. ಪುಟ್ಟ; ಪುಟಾಣಿ.

**मुटका**, पु. ಮಗುಟ

**मुटरी**, स्त्री. ಗಂಟು, ಮೂಟೆ.

**मुटल्ला**, वि. ದಪ್ಪವಾದ, ಗಡುತರ.

**मुटाई**, स्त्री. **मुटापा**, पु. ಪುಷ್ಟಿ, ಗಾತ್ರ; ದಪ್ಪ; ಕೊಬ್ಬು.

**मुटाना**, अक्रि. ದಪ್ಪವಾಗು, ಕೊಬ್ಬು.

**मुटासा**, वि. ಪ್ರತಿಷ್ಠೆಯುಳ್ಳ, ಅಹಂಕಾರಿ

**मुटिया**, पु. ಭಾರ ಹೊರುವವ.

**मुट्ठा**, पु. ದೊಡ್ಡ ಹಿಡಿ; ಗಂಟು, ಕಟ್ಟು, ಪಿಂಡಿ.

**मुट्ठी**, स्त्री. ಮುಷ್ಟಿ, ಹಿಡಿ; ಹಿಡಿತ. मुट्ठी गर्म करना = ಲಂಚ ಕೊಡು.

**मुठभेड़**, स्त्री. ಸಂಧಿಸುವಿಕೆ; ತೆಕ್ಕೆಬೀಳುವಿಕೆ; ಜಗಳ, ಹೋರಾಟ.

**मुठमर्द**, वि. ಬಲಿಷ್ಠ; ದಾಂಡಿಗ; ಘೋರಿ

**मुठमर्दी**, स्त्री. ಬಲ; ಬಲಾತ್ಕಾರ.

**मुठिया**, स्त्री. ಹಿಡಿಕೆ, ಕಾವು, ಹಿಡಿ; ಅರಳೆ ಎಕ್ಕುವ ಕೋಲು ಅಥವಾ ಕುಡುಪು; ಭಿಕ್ಷುಕನಿಗೆ ಹಿಡಿ ಅಕ್ಕಿ ಹಾಕುವಿಕೆ.

**मुठियाना**, सक्रि. ಹಿಡಿ, ತುಡುಕು, ಹಿಡಿದುಕೊಳ್ಳು.

**मुड़ना**, अक्रि. ಬಾಗು, ಮಣಿ; ತಿರುವು, ತಿರುಗು; ಮುರಿಗೆಯಾಗು, ಹೊರಳು; ಕ್ಷೌರವಾಗು, ಹಜಾಮತ್ತಾಗು.

**मुड़वाना**, सक्रि. मूड़ना का प्रे. रूप.

**मुड़वारी**, स्त्री. ಗೋಡೆಯ ತುದಿ, ಕುಂಬೆ; ತಲೆ ಕಡೆ.

**मुड़हर**, पु. ತಲೆ ಸೆರಗು.

**मुड़ाना**, सक्रि. ಕ್ಷೌರ ಮಾಡಿಸು.

॥, पु. ಮುರಿವು, ಮುಡುಕು;
... ಮುರುದಲೆ.
॥, पु. ಸನ್ಯಾಸಿ. स्त्री. ತಲೆ;
... ಅಕ್ಷರ.
॥ पु. ಪಟೇಲ, ಹೆಗ್ಗಡೆ.
॥ पु. ಹಗಲು.
॥ स्त्री. ದಿಮ್ಮಿ, ನಾಟಿ.
...ाना, अक्रि. ಬಾಗು; ತಿರಿಚಿಕೊ.
...ज्जिब, वि. ವಿಸ್ಮಿತ, ಚಕಿತ.
...ल्लिक़, वि. ಅವಲಂಬಿತ; ಸೇರಿದ,
...ಂಧವುಳ್ಳ, ಸಂಬದ್ಧ. क्रिवि.
...ಂಧವಾಗಿ, ಕುರಿತು.
...ल्लिफ़, वि. ಪರಿಚಿತ, ಬಳಕೆಯುಳ್ಳ
...ल्लिम, वि. ಓದಿಸಿದ, ಕಲಿಸಿದ;
... ದವ, ಓದಾಳಿ, ಪಂಡಿತ; ಉಪಾ
...ಯ, ಗುರು.
...ा, पु. ಕೈಪಿಡಿ ಗೋಡೆ; ಕಂಬ;
... ಪ್ರಾಕಾರದ ಗೋಪುರ.
...ज्जिम, पु. ಜ್ಯೋತಿಷ್ಕ.
...ज्ज़िर, वि. ಅಸಹ್ಯ.
...ा, पु. ಉಚ್ಚಿಬುರುಕ.
...बी, वि. ಚತುರ, ಠಕ್ಕ.
...र्रक़, वि. ಬೇರೆಯಾದ, ಪೃಥಕ್.
...र्रक़ात, स्त्री. ವಿವಿಧ, ಸಬ್ಲುಂಡ;
... ಲ್ಲದ ವಸ್ತುಗಳು.
...क्किर, मुतफ़िक्र, वि. ಚಿಂತಿತ.
...ब्ना, पु. ದತ್ತಕ ಪುತ್ರ, ಸ್ವೀಕಾರ
...ತ್ರ.
...बर, वि. ನಂಬಿಕೆಯ, ವಿಶ್ವಾಸಾರ್ಹ;
...ಮಾರ್ಣ, ಸತ್ಯವಾದ; ಗಣ್ಯ, ಮಾನ್ಯ

मुतबरी, स्त्री. ನಂಬಿಗಸ್ತಿಕೆ, ವಿಶ್ವಾಸಾರ್ಹತೆ; ಮಾನ್ಯತೆ; ಗೌರವ.
मुतमईन, वि. ಸಂತುಷ್ಟ, ತೃಪ್ತ.
मुतमाद, वि. ನಂಬಿಗಸ್ತ, ನಾಣ್ಯಸ್ಥ; ಪ್ರಾಮಾಣಿಕ.
मुतरजिम, पु. ಭಾಷಾಂತಕಾರ, ಅನುವಾದಕರ್ತ.
मुतलक़, क्रिवि. ಲವಲೇಶವೂ, ಸ್ವಲ್ಪವೂ. वि. ಸಂಪೂರ್ಣ, ಇಡೀ, ಪೂರಾ; ಧಾರಾಳವಾದ.
मुतवातिर, वि. ಒಂದರ ಹಿಂದೆ ಒಂದಾಗಿ ಬರುವ, ಅನುಕ್ರಮವಾದ.
मुतसद्दी, पु. ಬರಹಗಾರ, ಕಾರಕೂನ, ಗುಮಾಸ್ತ, ಮುತ್ಸದ್ದಿ; ವಿರೋಧ.
मुताना, सक्रि. ಉಚ್ಚೆ ಹೊಯ್ಯಿಸು.
मुताबिक़, वि. ಅನುಸಾರವಾದ, ತಕ್ಕ, ಅನುಗುಣವಾದ. क्रिवि. ಅನುಗುಣವಾಗಿ, ಮೇರೆಗೆ, ತಕ್ಕಂತೆ.
मुतालआ, पु. ಯೋಚನೆ, ವಿಚಾರ, ಚಿಂತನೆ; ಪಠನ, ವ್ಯಾಸಂಗ.
मुतालबा, पु. ಕೇಳುವಿಕೆ; ವಸೂಲು ಬಾಕಿ.
मुतास, स्त्री. ಜಲಬಾಧೆ, ಲಘುಶಂಕೆ.
मुताह, स्त्री. ಕೂಡುವಳಿ, ಕೂಡಿಕೆ.
मुत्तफ़िक़, वि. ಒಪ್ಪಿಕೆಯುಳ್ಳ, ಸಮ್ಮತಿಸುವ; ಒಮ್ಮತವಾದ, ಏಕಮುಖ.
मुथरा, वि. ಮಂಕ; ಮುದಡ.
मुदगर, पु. = मुगदर.
मुदब्बिर, पु. ವ್ಯವಸ್ಥಾಪಕ, ಆಡಳಿತಗಾರ; ರಾಜ್ಯಾಡಳಿತಗಾರ; ಅಮಾತ್ಯ,

ಸಚಿವ.

**मुदब्बिरी**, स्त्री. ವ್ಯವಸ್ಥೆ, ಆಡಳಿತ; ಕಟ್ಟುಕಟ್ಟಳೆ.

**मुदर्रिस**, पु. ಅಧ್ಯಾಪಕ, ಶಿಕ್ಷಕ.

**मुदर्रिसी**, स्त्री. ಅಧ್ಯಾಪನ; ಅಧ್ಯಾಪಕ ವೃತ್ತಿ, ಶಿಕ್ಷಣವೃತ್ತಿ.

**मुदाख़िलत**, स्त्री. ಹಸ್ತಕ್ಷೇಪ.

**मुदाम**, क्रिवि. ಸದಾ, ನಿರಂತರವಾಗಿ

**मुदामी**, वि. ನಿರಂತರವಾದ, ನಿತ್ಯ.

**मुदित**, वि. ಮುದಿತ, ಹರ್ಷಿತ.

**मुद्आ**, पु. ಇಷ್ಟ, ಇಚ್ಛೆ; ಅಭಿಪ್ರಾಯ, ತಾತ್ಪರ್ಯ; ಕಳವು ಮಾಲು.

**मुद्दइया**, स्त्री. मुद्दई का स्त्री. ರೂಪ.

**मुद्दई**, पु. ತನ್ನ ಹಕ್ಕನ್ನು ಕೇಳುವವ, ದಾವೆದಾರ; ಫಿರ್ಯಾದಿದಾರ, ವಾದಿ; ಶತ್ರು.

**मुद्दत**, स्त्री. ಕಾಲ, ಬಹುಕಾಲ; ಅಂತರ, ಎಡೆ; ಕಾಲಾಂತರ. मुद्दत से= ಲಾಗಾಯಿತ್ತಿನಿಂದ.

**मुद्दालेह**, पु. ಪ್ರತಿವಾದಿ; ಪ್ರತಿಪಕ್ಷದವ

**मुद्रण**, पु. ಮುದ್ರಿಸುವಿಕೆ; ಅಚ್ಚು ಮಾಡುವಿಕೆ, ಮುದ್ರಣ.

**मुद्रा**, स्त्री. ಮುದ್ರೆ, ಮೊಹರು; ಉಂಗುರ; ನಾಣ್ಯ.

**मुद्रित**, वि. ಮುದ್ರಿಸಲ್ಪಟ್ಟ, ಅಚ್ಚು ಮಾಡಿದ, ಮುದ್ರಿತ.

**मुनक्श**, वि. ಕೆತ್ತಿದ; ಮುದ್ರಿಸಿದ.

**मुनक्का**, पु. ದೊಡ್ಡ ದ್ವೀಪದ್ರಾಕ್ಷಿ.

**मुनगा**, पु. ನುಗ್ಗೆಕಾಯಿ.

**मुनज्जिम**, पु. ಜೋತಿಷ್ಯ, ಜೋಯಿಸ

**मुनफ़रिद**, वि. ಏಕ, ಒಂಟಿ.

**मुनफ़सिल**, वि. ಬಿಡಿಸಿದ, ಬೇರೆಯಾದ.

**मुनहनी**, वि. ಡೊಂಕಾದ, ವಕ್ರ.

**मुनहसिर**, वि. ಅವಲಂಬಿತ, ಆಶ್ರಿತ.

**मुनाज़रा**, पु. ಜಗಳ; ವಾಗ್ವಾದ.

**मुनाजात**, स्त्री. ಪ್ರಾರ್ಥನೆ, ಬೇಡಿಕೆ, ವಿನಂತಿ.

**मुनाज़ात**, स्त्री. ಜಗಳ, ಕಚ್ಚಾಟ.

**मुनादी**, स्त्री. ಘೋಷಣೆ, ಸಾರುವಿಕೆ; ಡಂಗುರ, ದಂಡೋರೆ; ಸಾರುವವ, ಘೋಷಣೆ ಮಾಡುವವ. मुनादी करना= ಸಾರು, ಘೋಷಿಸು, ಪ್ರಕಟಿಸು

**मुनाफ़ा**, पु. ಲಾಭ, ನಫೆ; ಫಾಯಿದೆ.

**मुनासिब**, वि. ಯೋಗ್ಯ, ಯುಕ್ತ; ಉಚಿತ, ಯಥೋಚಿತ; ತಕ್ಕ, ಸೂಕ್ತ.

**मुनासिबत**, स्त्री. ಸಂಬಂಧ, ಸಂಬದ್ಧತೆ; ಸಾದೃಶ್ಯ, ಹೋಲಿಕೆ; ಯುಕ್ತತೆ, ಔಚಿತ್ಯ.

**मुनि**, पु. ಋಷಿ, ಮುನಿ.

**मुनियां**, स्त्री. ಒಂದು ಪಕ್ಷಿ.

**मुनीब**, **मुनीम**, पु. ಸಹಾಯಕ, ಉಪಕಾರಿ; ಗುಮಾಸ್ತ, ಕಾರ್ಯಸ್ಥ, ಕಾರಕೂನ, ಕುಲಕರ್ಣಿ.

**मुन्तक़िल**, वि. ಸಾಗಿಸಿದ, ಒಯ್ದ; ಸ್ಥಳಾಂತರ ಹೊಂದಿದ.

**मुन्तख़ाब**, वि. ಆರಿಸಿದ, ಆಯ್ದ.

**मुन्तज़िम**, वि. ವ್ಯವಸ್ಥೆಗೊಳಿಸಿದ, ಅಣಿಮಾಡಿದ; ಕ್ರಮಪಡಿಸಿದ. पु. ವ್ಯವಸ್ಥಾಪಕ.

**मुन्तज़िर**, वि. ಎದುರು ನೋಡುತ್ತಿ

… ನಿರೀಕ್ಷಿಸುವ.

…िक़, वि. ಸರಿಯಾದ; ತಕ್ಕ.

…िर, वि. ಹರವಿದ; ಚದರಿದ.

…ा. वि. ಮುಗಿಸಿದ, ಪೂರ್ತಿ

… पु. ಕೊನೆ, ಮುಕ್ತಾಯ.

…त्त. ಮುದ್ದು ಮಗು, 'ಬಂಗಾರ'.

…ी, पु. ಬರೆಹಗಾರ, ಲೇಖಕ; …ಸ್ತ.

…ीम, पु. ವ್ಯವಸ್ಥಾಪಕ, ಆಡಳಿತ …

…िक़, वि. ಸೇರಿಸಿದ, ಜಂಟಿಸಿದ; …ತ್ತಿಸಿದ.

…फ़, पु. ನ್ಯಾಯ ಮಾಡುವವ, …ಮಕರ್ತ, ನ್ಯಾಯಾಧಿಕಾರಿ.

…फ़ी, स्त्री. ನ್ಯಾಯ; ನ್ಯಾಯಾಧಿ…ಯ ಕೆಲಸ ಅಥವಾ ಕಛೇರಿ.

…लिस, वि. ದರಿದ್ರ, ಬಡವ.

…लिसी, स्त्री. ದಾರಿದ್ರ್ಯ, ಬಡತನ.

…सिद, वि. ಜಗಳಗಂಟ; ತಂಟೆ…ಕೋರ.

…स्सल, वि. ಬೇರೆಬೇರೆಯಾದ; …ವಾದ; ವಿಸ್ತೃತವಾದ. पु. ರಾಜ…ವನ್ನು ಬಿಟ್ಟು ಪ್ರಾಂತ್ಯದ ಉ…ಸ್ಥಳಗಳು, ಗ್ರಾಮಾಂತರ.

…ज्ञात, वि. ಅನಿರೀಕ್ಷಿತವಾದ, …ಕ್ಷಿಕವಾದ.

…क़त, स्त्री. ಬೇರೆಯಾಗುವಿಕೆ, …ಗಲಿಕೆ.

…ासला, पु. ದೂರ, ಹಾಸಲೆ.

…ीद, वि. ಲಾಭಕರ; ಪ್ರಯೋಜನಕರ; ಸಾರ್ಥಕ.

मुफ़्त, वि. ಧರ್ಮಾರ್ಥ, ಪುಕ್ಕಟೆ, ಬಿಟ್ಟಿ, ಪುಗಸಟ್ಟೆ, ಉಚಿತ. क्रिवि. ವ್ಯರ್ಥವಾಗಿ

मुफ़्त-ख़ोर, पु. ಬಿಟ್ಟಿ ಊಟ ಮಾಡುವವ; ಕೆಲಸವೇನೂ ಮಾಡದೆ ಪರಾವಲಂಬನದಿಂದ ಜೀವಿಸುವವ; ಕೂತುಂಬುವವ, ಉಂಡಾಡಿ; ಸೋಮಾರಿ.

मुफ़्तरी, वि. ದುರುಳ, ತುಂಟ; ಸುಳ್ಳ.

मुफ़्ती, पु. ಧರ್ಮಾಧಿಕಾರಿ. वि. ಬಿಟ್ಟಿ, ಪುಗಸಟ್ಟೆ.

मुबलग़, पु. ಮೊಬಲಗು.

मुबहम, वि. ಮರೆಯಾದ; ಗೂಢ; ರಹಸ್ಯ.

मुबादला, पु. ಪರಿವರ್ತನೆ, ಮಾರುವೆ; ಸಾಟಿವ್ಯಾಪಾರ; ಪ್ರತೀಕಾರ.

मुबारक, वि. ಶುಭ, ಮಂಗಳಪ್ರದ. अव्य. ಶುಭಮಸ್ತು, ಸ್ವಸ್ತಿ.

मुबारकबाद, स्त्री. ಅಭಿನಂದನೆ, ಸ್ವಸ್ತಿ ವಾಚನ; ಸ್ವಸ್ತಿ.

मुबारकबादी, स्त्री. ಸೋಬಾನೆ; ಸ್ವಸ್ತಿ ವಾಚನ; ಶುಭಾಗಮನ; ಸುಖಾಗಮನ

मुबारकी, स्त्री. ಸ್ವಸ್ತಿ ವಾಚನ.

मुबालिग़ा, पु. ಪರಿಶ್ರಮ, ಮೆಹನತ್ತು, ಅತ್ಯುಕ್ತಿ.

मुबाहिसा, पु. ಚರ್ಚೆ, ವಾಕ್ಯಾರ್ಥ.

मुब्तदा, स्त्री. ಪ್ರಾರಂಭ, ಷುರು.

मुब्तला, वि. ಸಿಕ್ಕಿಬಿದ್ದ, ಸಿಕ್ಕಿಕೊಂಡ; ಸಿಲುಕಿದ; ಮರುಳಾದ.

मुब्तदी, वि. ಕಲಿಕೆಯುವ, ಹೊಸಬ.

मुमकिन, वि. ಸಂಭಾವ್ಯ, ಸಾಧ್ಯ.

**मुमताज़,** वि. ಆಯ್ದ, ಆರಿಸಿದ; ಶ್ರೇಷ್ಠ, ಮಾನ್ಯ.

**मुमाखी,** स्त्री. ಜೇನುನೊಣ, ಜೇನು ತುಂಬಿ.

**मुमानियत,** स्त्री. ವರ್ಜನೆ; ನಿಷೇಧ, ನಿರೋಧ.

**मुमानी,** स्त्री. ಸೋದರಮಾವನ ಹೆಂಡತಿ

**मुम्तहन,** वि. ಪರೀಕ್ಷಾರ್ಥಿ.

**मुम्तहिन,** पु. ಪರೀಕ್ಷಣ; ಪರೀಕ್ಷಕ.

**मुयस्सर,** वि. ದೊರೆಯುವ, ಸಿಗುವ, ಪ್ರಾಪ್ಯ.

**मुरंडा,** पु. ಗೋಧಿಯ ಲಾಡು, ಲಡ್ಡು. वि. ಒಣಗಿದ, ಬಾಡಿದ; ಮುಡಿಸಿದ.

**मुर,** क्रिवि. ತಿರುಗಿ, ಪುನಃ.

**मुरई,** स्त्री. ಮೂಲಂಗಿ.

**मुरक,** स्त्री. ಬಾಗುವಿಕೆ, ಬಾಗು, ತಿರುವು.

**मुरकना,** अक्रि. ಬಾಗು, ತಿರುಗು; ತಿರಿಚಿಕೊಳ್ಳು, ಮುರಿ; ನಷ್ಟವಾಗು.

**मुरकाना,** सक्रि. ಬಗ್ಗಿಸು, ತಿರುಗಿಸು; ತಿರಿಚು, ಹೊಸೆ; ಪೋಲುಮಾಡು.

**मुरकी,** स्त्री. ಹತ್ತಕಡಕು, ಒಂಟಿ.

**मुरक्कब,** वि. ಸೇರಿದ, ಮಿಶ್ರಿತ. पु. ಕೂಡುನುಡಿ, ಸಮಾಸಪದ.

**मुरग़ा,** पु. ಕೋಳಿ, ಹುಂಜ.

**मुरग़ाबी,** स्त्री. ನೀರುಕೋಳಿ.

**मुरग़ी,** स्त्री. ಕೋಳಿ, ಹೇಂಟೆ.

**मुरचंग,** पु. ಮೋರ್ಛಿಂಗ್ (ವಾದ್ಯ).

**मुरचहा,** वि. ತುಕ್ಕು ಹಿಡಿದ.

**मुरछना,** अक्रि. ಮೂರ್ಛೆ ಹೋಗು.

**मुरझन,** पु. ಬಾಡುವಿಕೆ, ಬಳಲುವಿಕೆ.

**मुरझाना,** अक्रि. ಬಾಡು, ಬಳ[...] ಕಂದು; ಸೊರಗು.

**मुरत्तिब,** पु. ಕ್ರಮಪಡಿಸುವವ, [...] ಮಾಡುವವ; ಪತ್ರಿಕೆಯ ಸಂಪಾ[...]

**मुरदनी,** वि. ಸಾಯುವ, ಸಾಯುವಂ[...] स्त्री. ಶೋಕ; ಸಾವು; ಕರ್ಮಾಂತ[...] ಅಂತ್ಯೇಷ್ಟಿ.

**मुरदा,** वि. ಸತ್ತುಹೋದ, ನಿರ್ಜೀ[...] ಮೃತ. पु. ಹೆಣ, ಶವ.

**मुरदार,** वि. ಸತ್ತುಹೋದ, ಮೃತ[...] ನಿರ್ಜೀವ; ಅಪವಿತ್ರ. पु. ಹೆಣ, ಶ[...]

**मुरदासंख,** पु. ಮುರದಾರಸಿಂಗಿ.

**मुरब्बा,** पु. ಮುರಬ್ಬ, ರಸಾಯ[...] ಸಕ್ಕರೆ ಬಾಳಕ, ಅವಲೇಹ. वि. [...] ಚೌಕವಾದ, ಚದುರ. मुरब्बा बैठ[...] = ಚಪ್ಪಣಕಾಲು ಹಾಕಿ ಕೂಡು.

**मुरब्बासाज़,** पु. ಮುರಬ್ಬ ಮಾಡುವ[...]

**मुरब्बी,** पु. ಪೋಷಕ, ಸಂರಕ್ಷಕ.

**मुरम,** पु. ಒಂದು ಬಗೆ ಗರಸು ನೆ[...]

**मुरमुरा,** पु. ಗರಗಾಗಿರುವಿಕೆ; ಪು[...] ಅರಳು.

**मुरमुराना,** अक्रि. ಚಟಚಟನೆ ಮು[...]

**मुरमुरी हड्डी,** स्त्री. ಮೃದುವಾದ ಅ[...] ಕೋಮಲಾಸ್ಥಿ.

**मुरला,** वि. ಹಲ್ಲಿಲ್ಲದ, ಬೋಡು. पु. ನವಿಲು.

**मुरली,** स्त्री. ಪಿಳ್ಳಂಗೋವಿ, ಮುರಳಿ.

**मुरवा,** पु. ಕಾಲಿನ ಹರಡು, ಗುಬ್ಬ[...] ಅಡಿಗಣ್ಣು.

**मुरव्वज,** वि. ಚಲಾವಣೆಯಲ್ಲಿರುವ[...]

...ಮನ್ನಿಸುವ.
...त, स्त्री. ದಯೆ, ದಾಕ್ಷಿಣ್ಯ; ...ರ್ಯ; ಶೀಲ, ಸೌಜನ್ಯ.
...द, पु. ಧರ್ಮೋಪದೇಶಕ, ಗುರು.
...दी, स्त्री. ಧರ್ಮೋಪದೇಶ.
...स, वि. ಕಳುಹಿಸಲ್ಪಟ್ಟ; ಕಳು...ಹಿಸಿದ, ದೂತ; ರಾಯಭಾರಿ.
...ा, पु. ಪತ್ರ, ಸಿರೂಪ.
...ंद, पु. ಕಂಠಿಸರದ ಕೋಳಿಕೆ, ...ು.
...ा, वि. ರತ್ನಖಚಿತ, ರತ್ನಪಡಿ.
...ी, स्त्री. ಗೋಕರ್ಣ.
...ा, वि. ಅನಾಥ, ತಬ್ಬಲಿ; ದುರುಳ.
...ುರಿಗೆ, ನುಲಿಕೆ; ನವಿಲು.
...ी, स्त्री. ಮುರಿಗೆ, ನುಲಿಕೆ.
...ड़, मुगाऊ, पु. ಕಾಯಿಪಲ್ಯ ...ವವ.
...ा, पु. ಉರಿವ ಕಟ್ಟಿಗೆ, ಕೊಳ್ಳಿ.
...र, स्त्री. ಆಶೆ, ಇಚ್ಛೆ; ಹಾರೈಕೆ; ...ಪ; ಅಭಿಪ್ರಾಯ, ಆಶಯ.
...ी, वि. ಇಚ್ಛಿಸಿದ, ಬಯಸಿದ; ...ಮುಸಾರವಾದ; ಬೇರೆ ಅರ್ಥ, ...ವಾದ ಅರ್ಥ; ಚಿಲ್ಲರೆ ಹಣ.
...ा, पु. ಮೇಲ್ಪಟ್ಟವರಿಗೆ ಅರಿಕೆ ...ಕೊಳ್ಳುವಿಕೆ, ಅರ್ಜಿ, 'ಅಪೀಲು'
...ा, पु. ಮೇಲ್ಪಟ್ಟ ಕೋರ್ಟಿಗೆ ...ು ಮಾಡುವವ, ಅಪೀಲುದಾರ.
... पु. ಶಿಷ್ಯ, ಅನುಯಾಯಿ.
... पु. ಪೇಟ, ರುಮಾಲು, ಪಾಗು.
... पु. ನವಿಲುಮರಿ; ನವಿಲು.

मुरौवत, स्त्री. = मुरव्वत.
मुर्ग़, पु. ಕೋಳಿ, ಹುಂಜ; ಪಕ್ಷಿ.
मुर्ग़ा, पु. = मुर्ग़ा.
मुर्रा, पु. ಹೊಟ್ಟೆ ಕಡತ, ಹೊಟ್ಟೆ ನುಲಿ; ಹೊಟ್ಟೆ ಕಡತಕ್ಕೆ ಔಷಧವಾದ ಒಂದು ಬಿತ್ತ; ಪಟಾಕಿ, ಮದ್ದಿನ ಬಾಣ.
मुर्री, स्त्री. ಹೊಸೆಯುವಿಕೆ, ತಿರಿಚುವಿಕೆ; ತಿರಿ, ಬತ್ತಿ.
मुलकना, अक्रि. ಕಣ್ಣುಗಳಿಂದ ಸಂತೋಷವನ್ನು ಪ್ರಕಟಿಸು.
मुल, पु. ಸಾರಾಯಿ, ಸುರೆ. क्रिवि. ಕೊನೆಗೆ; ಸಂಕ್ಷೇಪವಾಗಿ; ಕೊನೆಯ ಪಕ್ಷ; ಆದರೂ.
मुलज़िम, वि. ಅಪಾದಿತ, ಅಪರಾಧಿ.
मुलट्ठी, स्त्री. ಅತಿಮಧುರ.
मुलन, क्रिवि. ಪೂರ್ಣವಾಗಿ, ಪೂರ್ತ; ಸುತರಾಂ.
मुलना, पु. ಮುಹಮ್ಮದೀಯ ಪಂಡಿತ.
मुलब्बब, वि. ತುಂಬಿ ತುಳುಕುವ, ಸೂಸಿ ಹರಿಯುವ.
मुलमची, पु. ಮುಲಾಮು ಕೊಡುವವ.
मुलम्मा, पु. ಬಂಗಾರದ ಮುಲಾಮು, ಚಿನ್ನದ ಒಪ್ಪ, ಸೊನ್ನಾರ, ಗಿಲೀಟು.
मुलम्मागर, मुलम्मासाज़, पु. ಬಂಗಾರದ ಮುಲಾಮು ಕೊಡುವವ, ಗಿಲೀಟು ಮಾಡುವವ.
मुलहटी, स्त्री. ಅತಿಮಧುರ.
मुलाई, स्त्री. ಬೆಲೆ ಕಟ್ಟುವಿಕೆ.
मुलाक़ात, स्त्री. ಭೇಟಿ, ಸಂದರ್ಶನ; ಭೆಟ್ಟಿ; ಸೇರಿಕೆ, ಹೊಂದಿಕೆ, ಅನ್ಯೋನ್ಯ.

**मुलाक़ाती**, पु. ದರ್ಶಕ; ದರ್ಶನಾರ್ಥಿ; ಪರಿಚಿತಸ್ಥ; ಗೆಳೆಯ.

**मुलाक़ी**, पु. ಸೇರಿಕೆ, ಮಿಳನ; ಭೇಟಿ ಮಾಡುವವ, ಭೇಟಿಗಾರ, ದರ್ಶಕ.

**मुलाज़िम**, पु. ಸೇವಕ, ನೌಕರ.

**मुलाज़िमत**, स्त्री. ಪರಿಶ್ರಮ; ಸೇವೆ, ನೌಕರಿ, ಚಾಕರಿ.

**मुलाज़िमी**, स्त्री. ಸೇವೆ, ಚಾಕರಿ.

**मुलाना**, सक्रि. ಬೆಲೆ ಕಟ್ಟು; ಬೇರ ಮಾಡು, ಚೌಕಾಸಿ ಮಾಡು.

**मुलायम**, वि. ಮೆದುವಾದ, ಮೆತ್ತನೆಯ; ನಮ್ರ, ನಯ; ಮೆಲುವಾದ, ಕೋಮಲ

**मुलायमत**, **मुलायमियत**, **मुलायमी**, स्त्री. ಮೆದು, ನಮ್ರತೆ; ಮೆಲುಪು, ಕೋಮಲತೆ.

**मुलाहज़ा**, पु. ನೋಡುವಿಕೆ; ಗಮನಿಸುವಿಕೆ, ಲಕ್ಷ್ಯ; ದಾಕ್ಷಿಣ್ಯ, ಭಿಡೆ; ಅನುಗ್ರಹ, ರಿಯಾಯಿತಿ.

**मुलेठी**, स्त्री. ಅತಿಮಧುರ.

**मुलैयन**, वि. ಮೃದುವಿರೇಚಕ(ಔಷಧ)

**मुल्क**, पु. ದೇಶ, ಸೀಮೆ, ನಾಡು; ರಾಷ್ಟ್ರ.

**मुल्कदारी**, स्त्री. ರಾಜ್ಯಭಾರ, ರಾಜ್ಯಾಡಳಿತ.

**मुल्करानी**, स्त्री. ಆಳಿಕೆ, ಶಾಸನ

**मुल्की**, वि. ನಾಡಿನ, ದೇಶೀಯ; ರಾಷ್ಟ್ರೀಯ. पु. ನಾಡು ಜನ, ದೇಶಸ್ಥ.

**मुल्तजा**, पु. ಆಶ್ರಯಸ್ಥಾನ; ನೆರವು, ಆಶ್ರಯ; ರಕ್ಷಕ.

**मुल्तमिस**, पु. ಪ್ರಾರ್ಥಿಸುವವ.

**मुल्तवी**, वि. ಬಗ್ಗಿದ, ವಕ್ರ; ನಿಲ್ಲಿಸಿಟ್ಟ, ನಿಲಕಡೆ ಮಾಡಿದ; ಮುಂದಕ್ಕೆ ಹಾಕಿ ಮುಂದುವರಿದ, ಮಾನಸಿಕ ಮಾಡಿ

**मुल्ला**, पु. ಮಹಮ್ಮದೀಯ ಪಂಡಿ ಮೌಲ್ವಿ, ಮುಲ್ಲಾ; ಪಕ್ಷಿಗಳನ್ನು ಹಿ ತರಲು ಪಳಗಿಸಿದ ಹೆಣ್ಣುಪಕ್ಷಿ, ತೆ ಹಿನ ಪಕ್ಷಿ, ದೀಪ; ವೇಷಧಾರಿ.

**मुल्लानी**, स्त्री. मुल्ला का स्त्री. रू.

**मुवक्किल**, पु. ವಕೀಲರ ಕಕ್ಷಿಗಾ ಕಕ್ಷಿದಾರ; ಸಂರಕ್ಷಕ.

**मुवना**, अक्रि. ಸಾಯು; ನಶಿಸು.

**मुवा**, वि. ಸತ್ತವ; ನಿರ್ಜೀವ; ಅಧ

**मुवाफ़िक़**, वि. = माफ़िक़.

**मुवाफ़िक़त**, स्त्री. ಹೊಂದಿಕೆ, ಹೊ ದಾವಣೆ.

**मुशज्जर**, वि. ಬುಟ್ಟಾ ಕೆಲಸ ಮಾಡಿ

**मुशब्बा**, वि. ಸಮಾನ, ಸದೃಶ. ಉಪಮಾನ.

**मुशब्बा-बिह**, पु. ಉಪಮೇಯ.

**मुशाबहत**, स्त्री. ಸಮಾನತೆ, ಸಾಮ್ ಹೋಲಿಕೆ, ಸಾದೃಶ್ಯ.

**मुशाबिह**, पु. ಹೋಲಿಕೆ, ಉಪಮೆ

**मुशायरा**, पु. ಕವಿಗಳ ಕೂಟ, ಸಾಹಿ ಗೋಷ್ಠಿ, ಕವಿ ಸಮ್ಮೇಳನ.

**मुशारिक**, पु. ಪಾಲುಗಾರ, ಹಿಸ್ಸೆದಾ

**मुशाहदा**, पु. ನೋಡುವಿಕೆ, ದರ್ಶನ

**मुशाहरा**, पु. ಸಂಬಳ, ತಲಬು.

**मुशाहिद**, वि. ನೋಡುವವ, ದರ್ಶ

**मुशीर**, पु. ಮಂತ್ರಿ, ಸಚಿವ.

**मुश्क**, पु. ಕಸ್ತೂರಿ. स्त्री. ತೋಳ ಬಾಹು. मुश्कें कसना या बांधना

…ಮುರಿ ಕಟ್ಟು, ಹೆಡಮುರಿಗೆ
…ಮುರಿಕಟ್ಟು, ಮುಷ್ಟಿಕಟ್ಟು.
…फ़ा, पु. ಮೃಗನಾಭಿ.
…फ़ाम, वि. ಕಪ್ಪಾದ, ಕರಿಯ
…ಕ್ರಿಮಿಕೆಯ ಅಲಕ.
…ई, स्त्री. ಪುನುಗು ಬೆಕ್ಕು.
…व, स्त्री. ತಟ್ಟೆ.
…, वि. ಕಷ್ಟವಾದ, ಕಠಿಣ, ದುಸ್ತರ
… ಕಷ್ಟ, ತೊಂದರೆ, ಸಂಕಟ.
…ी, वि. ಕಸ್ತೂರಿಯ ಬಣ್ಣದ.
…ीन, वि. ಕಸ್ತೂರಿಯ.
…, पु. ಮುಷ್ಟಿ, ಹಿಡಿ; ಗುದ್ದು.
… मुश्त = ಒಂದೇ ಮುಷ್ಟಿಯಲ್ಲಿ,
[illegible]
…ज़न, पु. ಮುಷ್ಟಿಯುದ್ಧ ಮಾಡು
…, ಮಲ್ಲ, ಜಟ್ಟಿ.
…क, वि. ಸಾಮಾನ್ಯವಾದ, ಹು
…ಬಿನ, ಒಟ್ಟಿನ.
…का, वि. ಊರೊಟ್ಟಿನ, ಹುದು
… ಮುದ್ದಕದ.
…री, पु. ಕೊಳ್ಳುವವ, ಗಿರಾಕಿ;
… ಗ್ರಹ, ಬೃಹಸ್ಪತಿ.
…हर, वि. ಪ್ರಕಟವಾದ, ಬಯಲಾದ.
…ाक़, वि. ಇಚ್ಛುಕ, ಆಸಕ್ತ.
…, पु. ಮುಷ್ಟಿ; ಕಳ್ಳತನ, ಚೌರ್ಯ.
…, मुश्टंडा, मुस्टंडा, वि. ಬಲಿಷ್ಠ,
…ಕಾಯ; ಮಜಬೂತಾದವ, ಕಟ್ಟು
…ದವ, ದಾಂಡಿಗ; ಬಲಿತವ.
…, स्त्री. ಮುಷ್ಟಿ, ಹಿಡಿ; ಗುದ್ದು.
…ाना, मुसकुराना, अक्रि. ಕಿರಿ
ನಗೆ ನಗು, ಮುಗುಳುನಗೆ ನಗು.

**मुसकराहट, मुसकुराहट, मुसकान, मुसक्यान**, स्त्री. ಮುಗುಳು ನಗೆ, ಮೆಲು ನಗೆ, ಕಿರುನಗೆ, ನಸುನಗೆ.

**मुसकिर**, वि. ಮದವನ್ನುಂಟುಮಾಡುವ, ಮಾದಕ.

**मुसक्किन**, पु. ಆಶ್ವಾಸನಪಡಿಸುವವ; ನೋವನ್ನು ಹೋಗಲಾಡಿಸುವ ಔಷಧ, ವೇದನಹಾರಿ.

**मुसद्दस**, वि. ಆರು ವಸ್ತುಗಳುಳ್ಳ; ಷಟ್ಕೋಣ. पु. ಆರು ಚರಣಗಳ ಪದ್ಯ, ಷಟ್ಪದಿ.

**मुसना**, अक्रि. ಕಳವಾಗು.

**मुसन्नफ़**, पु. ರಚನೆ, ಕೃತಿ.

**मुसन्ना**, पु. ದಸ್ತಾವೇಜಿನ ನಕಲು, ಎದುರು ಚೀಟು, ದ್ವಿಪ್ರತಿ; ರಸೀತಿಯ ಇಮ್ಮಡಿ ನಕಲು, ಅನುಪ್ರತಿ; "ಡ್ಯೂಪ್ಲಿಕೇಟ್"; ಮರು ರಸೀತಿ.

**मुसन्निफ़**, पु. ಗ್ರಂಥಕಾರ, ರಚಯಿತ.

**मुसफ़्फ़ा**, वि. ಶುದ್ಧ, ಶುಭ್ರ.

**मुसफ़्फ़ी**, पु. ಶುದ್ಧಿಮಾಡುವವ.

**मुसब्बर**, स्त्री. ಕತ್ತಾಳೆ, ಲೋಳೆಸರ.

**मुसमसाना**, अक्रि. = **मसमसाना**.

**मुसमीर**, वि. ಫಲವತ್ತಾದ; ಫಲಕಾರಿ.

**मुसम्मम**, वि. ಗೊತ್ತಾದ, ನಿಗದಿಯಾದ.

**मुसम्मा**, वि. ಹೆಸರುಳ್ಳ, ನಾಮಕ.

**मुसम्मात**, वि. ಹೆಸರಿನವಳು. स्त्री. ಸ್ತ್ರೀ, ಹೆಂಗಸು; ಶ್ರೀಮತಿ.

**मुसलमान**, पु. ಮಹಮ್ಮದೀಯ ಮತದವ, ಮುಸಲ್ಮಾನ.

**मुसलमानी**, वि. ಮುಹಮ್ಮದೀಯರ, ಮುಸಲ್ಮಾನರ. स्त्री. ಮುಸಲ್ಮಾನರ ಧರ್ಮ; ಶಿಶ್ನದ ಮುಂಭಾಗದ ಚರ್ಮವನ್ನು ಕತ್ತರಿಸುವ ಮುಸಲ್ಮಾನರ ಒಂದು ಸಂಸ್ಕಾರ, ಸುನ್ನತಿ, ಖತನಾ, ಪರಿಕರ್ತನ; ಮುಸಲ್ಮಾನರ ಸ್ತ್ರೀ.

**मुसलमीन**, पु ಮುಸಲ್ಮಾನರು.

**मुसलसल**, वि. ಪೋಣಿಸಿದ; ಅನುಕ್ರಮವಾದ.

**मुसलिम**, पु. ಮುಹಮ್ಮದೀಯಮತಸ್ಥ

**मुसल्लम**, वि. ಸುರಕ್ಷಿತ; ಅಖಂಡ; ಸಂಪೂರ್ಣ; ಸುಪರ್ದುಮಾಡಿದ; ಸ್ವೀಕೃತ.

**मुसल्लस**, वि. ಮುಮ್ಮೂಲೆಯ. पु. ತ್ರಿಕೋಣ; ಮೂರರ ಸಮೂಹ; ಮೂರು ಚರಣಗಳ ಪದ್ಯ, ತ್ರಿಪದಿ.

**मुसल्लसी**, वि. ತ್ರಿಕೋಣಾಕಾರದ.

**मुसल्लह**, वि. ಆಯುಧಧಾರಿ.

**मुसल्ला**, पु. ನಮಾಜು ಮಾಡುವಾಗ ಹಾಸುವ ಬಟ್ಟೆ ಅಥವಾ ಚಾಪೆ.

**मुसव्विर**, पु. ಚಿತ್ರಗಾರ; ಶಿಲ್ಪಿ.

**मुसव्विरी**, स्त्री. ಚಿತ್ರಕಲೆ; ಶಿಲ್ಪಕಲೆ.

**मुसाना**, सक्रि. **मूसना** का प्रे. रूप.

**मुसाफ़िर**, पु. ಪ್ರಯಾಣಿಕ, ಯಾತ್ರಿಕ.

**मुसाफ़िर-ख़ाना**, पु. ಯಾತ್ರಿಕರು ತಂಗುವ ಸ್ಥಳ, ಧರ್ಮಶಾಲೆ, ಮುಸಾಫರಿ ಬಂಗಲೆ, ಮುಸಾಫರ ಖಾನೆ.

**मुसाफ़िरत, मुसाफ़िरी**, स्त्री. ಯಾತ್ರೆ, ಪ್ರವಾಸ, ಸಂಚಾರ.

**मुसावात**, स्त्री. ಸಮಾನತೆ, ಸಾಮ್ಯ; ಸಮೀಕರಣ.

**मुसावी**, वि. ಸಮವಾದ, ಸಮ, ಸಮಾನ.

**मुसाहबत, मुसाहिबी**, स्त्री. ಸಂಗ, ಒಡನಾಟ; ಒಡನಾಡಿತನ.

**मुसाहिब**, पु. ಅರಸುಮಕ್ಕಳ ಅಥವಾ ಶ್ರೀಮಂತರ ಜತೆಯಲ್ಲಿರುವವ, ನರ್ಮಸಚಿವ, ಪಾರ್ಷದ; ಸಂಗಡಿಗ.

**मुसीबत**, स्त्री. ಕಷ್ಟ, ತೊಂದರೆ; ಸಂಕಷ್ಟ; ವಿಪತ್ತು, ಇಟ್ಟಳೆ.

**मुसुंड, मुस्टंडा**, वि. ಕಟ್ಟುಮಸ್ತಾದ, ದಾಂಡಿಗ, ದಡಿಯ, ಪುಂಡ.

**मुसुंडापन**, पु. ಕಟ್ಟುಮಸ್ತು; ದಾಂಡಿಗತನ.

**मुस्कयान**, पु. ಮುಗುಳುನಗೆ.

**मुस्कयाना**, अक्रि. ನಸುನಗು.

**मुस्तक़बिल**, पु. ಭವಿಷ್ಯ; ಭವಿಷ್ಯಕಾಲ.

**मुस्तक़िल**, वि. ಅಚಲ, ದೃಢ; ಸರಿ; ನಿಶ್ಚಿತ.

**मुस्तनद**, वि. ಪ್ರಾಮಾಣ್ಯವಾದ; ಅಪ್ಪಟ.

**मुस्तफ़ा**, वि. ಶುದ್ಧ, ನಿರ್ಮಲ.

**मुस्तफ़ी**, वि. ಆಯ್ದ, ಆರಿಸಿದ; ಚುನಾಯಿಸಿದ, ಚುನಾಯಿತ.

**मुस्तफ़ीद**, वि. ಲಾಭವನ್ನಪೇಕ್ಷಿಸುವವ; ಲಾಭಕರ, ಪ್ರಯೋಜನಕಾರಿ.

**मुस्तसना**, वि. ಬೇರೆಮಾಡಿದ; ಬಹಿಷ್ಕೃತ; ಶ್ಲಾಘ್ಯ; ಉತ್ಕೃಷ್ಟವಾದ.

**मुस्तैद**, वि. ಸಿದ್ಧ, ತತ್ಪರ, ಸನ್ನದ್ಧ; ಚಟುವಟಿಕೆಯುಳ್ಳ, ಚುರುಕಾದ.

**मुस्तैदी**, स्त्री. ಸಿದ್ಧತೆ, ಸನ್ನಾಹ; ಯೋಗ್ಯತೆ; ಚಟುವಟಿಕೆ, ಚುರುಕು.

...ौजिब, वि. ತಕ್ಕ, ಯೋಗ್ಯ, ಅರ್ಹ.
...ಕರ್ತ; ಕಾರಣಕರ್ತ.

...क़ी, स्त्री. ಲೆಕ್ಕ ಪರಿಶೋಧಕ,
...ಕಾರಸ್ಥ, ತನಿಖೆದಾರ.

...न, वि. ದೃಢವಾದ, ಗಟ್ಟಿ; ಬೇಲಿ
...ದ, ಆವರಿಸಲ್ಪಟ್ಟ.

...कमा, पु. = महकमा.

...ज़ब, वि. ಸಭ್ಯ, ಶಿಷ್ಟ.

...ताज, वि. ಅಗತ್ಯದ; ಬಡ, ದರಿದ್ರ;
...ಮುಳ್ಳ, ಕೊರತೆಯು. पु. ಬಡವ,
...ದ್ರ; ಯಾಚಕ, ಭಿಕ್ಷುಕ.

...ताज-ख़ाना, पु. ಧರ್ಮಸತ್ರ;
...ಥಾಲಯ.

...ताजगी, मुहताजी, स्त्री. ಬಡತನ,
...ದ್ರ್ಯ, ಬಡಸ್ತಿಕೆ; ಅಭಾವ; ಅಗತ್ಯ.

...ब्बत, स्त्री. ಪ್ರೇಮ, ಪ್ರೀತಿ;
...ತ್ರಿ; ಸ್ನೇಹ.

...मल, वि. ಅರ್ಥವಿಲ್ಲದ; ಬಳಕೆ
...ಯಿಲ್ಲದ; ಉದ್ದೇಶವಿಲ್ಲದ.

...म्मद, पु. ಮಹಮ್ಮದ್ ಪೈಗಂಬರ.

...र, स्त्री. = मोहर.

...री, स्त्री. = मोहरी.

...न, वि. ನಿಷೇಧಿಸಿದ, ನಿಷಿದ್ಧ;
...ತ್ರವಾದ, ಪುನೀತ; ದೊಡ್ಡ,
...म, पु. ಮೊಹರಂ ಹಬ್ಬ, ಅಲಾಬಿ
...; ಬಾಬಯ್ಯನ ಹಬ್ಬ, ಶೋಕ.

...र्मी, वि. ಮೊಹರಮ್ಮಿನ; ಅಳು
...ರೆಯ.

...रिक, पु. ಸಂಚಾಲಕ, ನಾಯಕ.

...रिर, पु. ಲೇಖಕ, ಬರೆಹಗಾರ.

मुहर्रिरी, स्त्री. ಲೇಖಕನ ಕೆಲಸ ಅಥವಾ ಉದ್ಯೋಗ; ಲೇಖಕತನ.

मुहलत, स्त्री. ತಡ, ವಿಳಂಬ; ಸಾವಕಾಶ, ಪುರಸತ್ತು.

मुहलिक, वि. ಅಪಾಯಕರ; ಪ್ರಾಣಾಂತಕ.

मुहल्ला, पु. = महल्ला.

मुहसिन, वि. ಒಳ್ಳೆಯವ, ಸಜ್ಜನ.

मुहसिल, पु. ಕಂದಾಯ ವಸೂಲು ಮಾಡುವವ; ಆಳು, ಪೇದೆ.

मुहाना, पु. ಮುಖ, ಮೂತಿ; ನದಿಗಳ ಸಂಗಮಸ್ಥಾನ, ಕೂಡಲು; ಕೂಡು ರಸ್ತೆ, ಮುರುದಲೆ; ಜಲಸಂಧಿ.

मुहाफ़ज़त, स्त्री. ಸಂರಕ್ಷಣೆ, ಪಾಲನೆ.

मुहाफा, पु. ಒಂದು ಬಗೆ ಪಲ್ಲಕ್ಕಿ.

मुहाफ़िज़, वि. ಸಂರಕ್ಷಕ, ಪಾಲಕ; ಕಾವಲುಗಾರ.

मुहाबा, पु. ಪಕ್ಷಪಾತ, ಪಾರಪಕ್ಷ; ಆದರ, ಮನ್ನಣೆ; ಗೌರವ; ಸ್ನೇಹ; ಜಾಗರೂಕತೆ, ಜೋಪಾನ.

मुहार, स्त्री. ಒಂಟೆಯ ಮೂಗುದಾರ.

मुहारबा, पु. ಜಗಳ, ಯುದ್ಧ.

मुहाल, पु.; वि. = महाल.

मुहाला, पु. ಆನೆಯ ಕೋರೆಹಲ್ಲಿನ ಅಣಸು, ಬಳೆ.

मुहावरा, मुहाविरा, पु. ರೂಢಿ, ಬಳಕೆ; ಸಂಭಾಷಣೆ; ಭಾಷಾರೂಢಿ, ಹಿಡಿನುಡಿ, ಭಾಷಾಸಂಪ್ರದಾಯ, ಭಾಷಾ ರೀತಿ.

मुहासा, पु. = मुंहासा.

मुहासिब, पु. ಗಣಿತಜ್ಞ; ಲೆಕ್ಕ ಪರಿ

ಶೋಧಕ.

मुहासिबा, पु. ಲೆಕ್ಕ, ಲೆಕ್ಕಾಚಾರ.

मुहासिरा, पु. ಮುತ್ತಿಗೆ, ಗೇರಾ ಯಿಸುವಿಕೆ.

मुहासिल, पु. ವಸೂಲಿ ಹಣ, ಆಯ; ವಸೂಲಿ ಮಾಡುವವ.

मुहिब्ब, पु. ಪ್ರೇಮಿ; ಗೆಳೆಯ.

मुहिम्म, स्त्री. ಯುದ್ಧ, ದಾಳಿ. वि. ದೊಡ್ಡ. ಭಾರಿ; ಜರೂರಾದ, ಅಗತ್ಯದ

मुहिम्मी, स्त्री. ಅಗತ್ಯವಾದ ಕಾರ್ಯ, ಜರೂರು ಕೆಲಸ.

मुहीत, पु. ಸುತ್ತಳತೆ, ಪರಿಧಿ.

मुहीब, वि. ಭಯಂಕರ, ಭೀಕರ.

मुहुर, क्रिवि. ಪುನಃ; ಪದೇಪದೇ.

मुहूर, पु. = महर.

मूंकी, स्त्री. ಗುದ್ದು, ಗುಮ್ಮು.

मूंगा, स्त्री. ಹೆಸರುಕಾಳು.

मूंगची, स्त्री. ಹೆಸರು ಬೇಳೆ ಸಂಡಿಗೆ.

मूंगफली, स्त्री. ನೆಲಗಡಲೆ, ಬೇರು ಗಡಲೆ, ಕಡಲೆಕಾಯಿ, ಶೇಂಗಾ.

मूंगौरी, स्त्री. ಹೆಸರುಬೇಳೆ ಸಂಡಿಗೆ.

मूंगा, पु. ಪ್ರವಾಳ, ಹವಳ.

मूंगिया, वि. ಹವಳದ; ಹವಳದಂಥ.

मूंछ, स्त्री. ಮೀಸೆ. मूंछ पर ताव देना = ಮೀಸೆ ತಿರುವು, ಮೀಸೆ ಹೊಸೆ.

मूंज, स्त्री. ಮುಂಜಿ ಗಿಡ, ನೊದೆ.

मूंड, पु. मूंडी, स्त्री. ತಲೆ, ಶಿರಸ್ಸು.

मूंडन, पु. ಮುಂಡನ. ಕ್ಷೌರ; ಚೌಲ.

मूंडना, सक्रि. ಮುಂಡನ ಮಾಡು, ಕ್ಷೌರ ಮಾಡು, ಬೋಳಿಸು.

मूंढा, पु. ಹೆಗಲು; ಮುಕ್ಕಾಲು ಮಣೆ.

मूंदना, सक्रि. ಮುಚ್ಚು,ಬಂದುಮಾಡು; ಆಚ್ಛಾದಿಸು, ಹೊಚ್ಚು.

मूक, वि. ಮೂಕ, ಮೂಗ; ಬಡ.

मूका, पु. ಗವಾಕ್ಷ, ಗುದ್ದು.

मूगा, पु. ಒಂದು ಬಗೆ ರೇಷ್ಮೆ ಬಟ್ಟೆ.

मूछ, स्त्री. ಮೀಸೆ; ಬಡಾಯಿ,ಬಡಿವಾರ.

मूजिद, पु. ಪ್ರವರ್ತಕ; ರಚಯಿತ.

मूजिब, पु. ಕಾರಣ, ಹೇತು.

मूज़ी, वि. ಪೀಡಿಸುವವ, ದುಷ್ಟ.

मूठ, स्त्री. ಮುಷ್ಟಿ, ಹಿಡಿತ; ಪಟ್ಟು, ಹಿಡಿ; ಹಿಡಿಕೆ, ಕಾವು, ಕೈಪಿಡಿ;ಮಂತ್ರ ಮಾಟ, ಪಂಪು; ಜೂಜಾಟ.

मूठा, पु. ಹಿಡಿ, ಕೈಪಿಡಿ; ಹಿಡಿಕೆ, ಕಾವು.

मूठी, स्त्री. ಮುಷ್ಟಿ, ಹಿಡಿ; ಹಿಡಿಕೆ.

मूढ़, वि. ಮೂಢ, ದಡ್ಡ, ಬೆಪ್ಪ.

मूढ़ता, स्त्री. ದಡ್ಡತನ, ಮೂಢತನ.

मूत, पु. ಮೂತ್ರ, ಉಚ್ಚೆ. ಕಾಲ್ಮಡಿ.

मूतना, अक्रि. ಉಚ್ಚೆ ಹೊಯ್ಯು, ಮೂತ್ರಿಸು, ಕಾಲು ಮಡಿಸು.

मूना, अक्रि. = मुवना.

मूनिस, वि. ಆಶ್ವಾಸನ ಕೊಡುವ. पु. ಜೊತೆಗಾರ, ಗೆಳೆಯ; ಆಪ್ತ ಸ್ನೇಹಿತ.

मूमिन, पु. ದೇವರಲ್ಲಿ ನಂಬಿಕೆಯುಳ್ಳವ, ಆಸ್ತಿಕ.

मूरत, स्त्री. ಮೂರ್ತಿ, ಪ್ರತಿಮೆ.

मूरख, मूर्ख, वि. ಮೂರ್ಖ, ದಡ್ಡ.

मूर्खता, स्त्री. ಮೂರ್ಖತನ.

मूर्च्छन, पु. ಮೂರ್ಛೆ ಹೋಗುವಿಕೆ.

मूर्च्छना, अक्रि. ಮೂರ್ಛೆಹೋಗು.

[illegible], स्त्री. ಮೂರ್ಛೆ, ಹಮ್ಮು ದ.
[illegible], स्त्री. ಮೂರ್ತಿ, ಪ್ರತಿಮೆ.
[illegible] पु. ಮೂಲ, ಬೇರು; ಬುಡ; [illegible]; ಉದ್ಗಮ, ಉತ್ಪತ್ತಿ; [illegible], ಅಸಲು, ಬಂಡವಾಳ.
[illegible]का, स्त्री. ಮೂಲಿಕೆ, ಬೇರು.
[illegible], स्त्री. ಮುಲ್ಲಂಗಿ; ಮೂಲಿಕೆ; ಬೇರು.
[illegible] पु. ಮೌಲ್ಯ, ಬೆಲೆ, ಕಿಮ್ಮತ್ತು.
[illegible]कन, पु. ಬೆಲೆ ಕಟ್ಟುವಿಕೆ, ಮದಿಪು
[illegible] पु. ಇಲಿ, ಮೂಷಕ.
[illegible]ानी, स्त्री. ಇಲಿ ಬೋನು.
[illegible], पु. ಕಳವು, ಚೋರಿ.
[illegible]ा, सक्रि. ಕದಿ, ಎಗರಿಸು.
[illegible], पु. ಒನಕೆ; ದೊಣ್ಣೆ, ಲಾಠಿ.
[illegible]धार, मूसलाधार, पु. ಭಾರಿ [illegible], ಜೋರುಮಳೆ. क्रिवि. ಮುಸಲ [illegible]ಯಾಗಿ, ಧಾರಾಸಂಪಾತವಾಗಿ. [illegible]धार बरसना = ಧಾರಾಸಂಪಾ[illegible]ಯು, ಭಾರಿ ಮಳೆ ಹೊಯ್ಯು, [illegible]ಯುಟ್ಟು ಸುರಿ.
[illegible]ा, पु. ಕಾಂಡ, ದಂಟು.
[illegible]ी, स्त्री. ತಾಯಿಬೇರು, ನೆಲಬೇರು
[illegible], पु. ಇಲಿ; ಒಬ್ಬ ಪೈಗಂಬರ.
[illegible], पु. ಮೃತಿಪತ್ರ ಬರೆದಿಟ್ಟವ.
[illegible]की, स्त्री. ಗಾಂಧರ್ವ ವಿದ್ಯೆ, ಗಾ[illegible]ಕಲೆ, ಸಂಗೀತ.
[illegible]दान, पु. मूसेदानी, स्त्री. ಇಲಿ [illegible].
[illegible], पु. ಮೃಗ, ಪಶು; ಜಿಂಕೆ.
[illegible]ला, पु. ಕೃಷ್ಣಾಜಿನ, ಕಡಾಸು.

मृगछौना, पु. ಜಿಂಕೆ ಮರಿ.
मृगनयनी, मृगनैनी, स्त्री. ಜಿಂಕೆಯಂತಹ ಕಣ್ಣುಳ್ಳವಳು, ಹರಿಣಾಕ್ಷಿ.
मृगया, स्त्री. ಬೇಟೆ, ಶಿಕಾರಿ.
मृगी, स्त्री. ಹೆಣ್ಣು ಜಿಂಕೆ.
मृत, वि. ಸತ್ತ, ಮೃತಪಟ್ಟ.
मृतक, पु. ಹೆಣ, ಶವ.
मृत्यु, स्त्री. ಮೃತ್ಯು, ಸಾವು.
मृदंग, पु. ಮೃದಂಗ, ಮದ್ದಲೆ; ದೀಪಕ್ಕೆ ಹಾಕುವ ಗಾಜಿನ ಮರೆ, ಷೇಡು.
मृदंगिया, पु. ಮದ್ದಲೆಗಾರ.
मृदु, वि. ಮೃದುವಾದ, ಮೆದು.
मृदुता, स्त्री. ಮೃದುತ್ವ, ಮೆಲ್ಪು.
में, प्रत्य. ಒಳಗೆ, -ಲ್ಲಿ, -ಒಳು. में से = ಪೈಕಿ.
मेंकना, अक्रि. ಕುರಿಯಂತೆ ಬೆಕ್ಕರಿಸು.
मेंगनी, स्त्री. ಪಿಷ್ಠೆ, ಹಿಕ್ಕೆ; ಲದ್ದಿ.
मेंड, स्त्री. ಮಿಂಟೆ, ಮೇಡು; ಒಡ್ಡು, ತೆವರು; ಬದು, ಬಾಂದು.
मेंडबंदी, स्त्री. ಚಕ್ಕುಬಂದಿ.
मेंडा, पु. ಬಾವಿಯ ಕೈಪಿಡಿ ಗೋಡೆ, ಬಾವಿಯ ಸುತ್ತುಗೋಡೆ.
मेंडियाना, सक्रि. ಸುತ್ತುಗಟ್ಟು, ಅಂಚು ಕಟ್ಟು.
मेंडक, मेंढक, पु. मेंढकी, स्त्री. ಕಪ್ಪೆ. मेंढकी को जुकाम होना = ಜಂಭದಿಂದ ತಾನು ಬಹಳ ದೊಡ್ಡವನೆಂದು ಅಂದುಕೊಳ್ಳು.
मेंढा, पु. ಗಂಡಾಡು, ಹೋತ.
में-में, स्त्री. ಕುರಿಯಂತೆ ಅರಚು,

ಬೆಕ್ಕರಿಸು.

**मेंह**, पु. ಮೇಘ, ಮುಗಿಲು; ಮಳೆ.

**मेंहदी**, स्त्री. ಗೋರಂಟಿ, ಮದರಂಗಿ; ಒಂದು ಮದುವೆ ಶಾಸ್ತ್ರ.

**मेख**, पु. ಮೇಷ, ಆಡು.

**मेख़**, पु. ಗೂಟ, ಗುಂಟ; ಮೇಕು, ಬೆಣೆ, ಆಪು; ಮೊಳೆ.

**मेख़चू**, **मेख़चो**, पु. ಕೊಡತಿ.

**मेखला**, स्त्री. ನಡುಕಟ್ಟು; ಡಾಬು, ಒಡ್ಯಾಣ.

**मेगम**, पु. ಶ್ವೇತಕುಷ್ಠ, ತೊನ್ನು.

**मेघ**, पु. ಮೇಘ, ಮುಗಿಲು.

**मेघडंबर**, पु. ಮೇಘದ ಗರ್ಜನೆ, ಗುಡುಗು; ದೊಡ್ಡ ಡೇರೆ, ಶಾಮಿಯಾನ.

**मेचक**, वि. ಕಪ್ಪಾದ, ಕರಿಯ. पु. ಕಪ್ಪು; ಹೊಗೆ.

**मेचकताई**, स्त्री. ಕಪ್ಪು; ಕತ್ತಲೆ.

**मेज़**, स्त्री. ಮೇಜು, ಮಣೆ.

**मेज़वान**, पु. ಆತಿಥ್ಯ ಮಾಡುವವ, ಅತಿಥಿಯನ್ನು ಸತ್ಕರಿಸುವವ.

**मेज़बानी**, स्त्री. ಅತಿಥಿಸತ್ಕಾರ.

**मेजा**, **मेझुका**, पु. ಕಪ್ಪೆ.

**मेझरा**, पु. ಜವೆಗೋಧಿ ಮತ್ತು ಕಡಲೆಯ ಮಿಶ್ರಣ.

**मेट**, पु. ಮಡಕೆ, ಗಡಿಗೆ.

**मेटक**, **मेटनहारा**, वि. ದೂರಮಾಡುವವ, ಅಳಿಸುವವ.

**मेटना**, सक्रि. ದೂರಮಾಡು; ಅಳಿಸು, ತೊಡೆಸು; ನಿವಾರಿಸು, ಸೀಗಿಸು.

**मेटिया**, **मेटी**, स्त्री. ಚಿಕ್ಕಮಡಕೆ, ಕುಡಿಕೆ

**मेड़**, पु. = मेंड.

**मेडरा**, पु. **मेडरी**, स्त्री. ಉಬ್ಬಾದ ಅಂಚು, ಎತ್ತರವಾದ ಅಂಚು.

**मेडिया**, स्त्री. ಕುಟಿ, ಗುಡಿಸಲು.

**मेढ़ा**, पु. ಟಗರು, ಆಡು. टेढ़ा मेढ़ा = ಅಂಕುಡೊಂಕಾದ.

**मेढ़ासिंगी**, स्त्री. ಅಜಶೃಂಗಿ, ಕುರುಟಿಗೆ

**मेढ़ी**, स्त्री. ಮೇಕೆ; ವೇಣಿ, ಹೆಳಲು.

**मेथी**, स्त्री. ಮೆಂತೆಯ, ಮೆಂತ್ಯ.

**मेथौरी**, स्त्री. ಮೆಂತೆಯದ ಸಂಡಿಗೆ.

**मेद**, पु. ಕೊಬ್ಬು, ಮೇದಸ್ಸು; ದಪ್ಪ.

**मेदा**, पु. ಹೊಟ್ಟೆ, ಉದರ; ಜಠರ.

**मेदिनी**, स्त्री. ಭೂಮಿ; ಭೂಸ್ಥಿತಿ.

**मेध**, पु. ಯಜ್ಞ, ಯಾಗ.

**मेधुकी**, पु. ನಾಯಕ, ದಳಪತಿ.

**मेना**, सक्रि. ನಾದಿದ ಹಿಟ್ಟಿಗೆ ಎಣ್ಣೆ ಅಥವಾ ತುಪ್ಪ ಸೇರಿಸು. पु. ಮೇನೆ, ಡೋಲಿ.

**मेम**, स्त्री. ಫರಂಗಿ ಹೆಂಗಸು, 'ಮೇಡಂ'; ಇಸ್ಪೀಟಾಟದ ರಾಣಿ. मेम साहब = ದೊರೆಸಾನಿ.

**मेमना**, पु. ಕುರಿಮರಿ.

**मेमार**, पु. ಇಟ್ಟಿಗೆಕೆಲಸದವ, ಉಪ್ಪಾರ, ತರಗಾರ, ಪಲಗಂಡ, ಕಾಮಾಟಿಗ.

**मेमारी**, स्त्री. ತರಗಾರನ ಕೆಲಸ; ಗಾರೆ ಕೆಲಸ.

**मेमियानी**, स्त्री. ತಿಣುಕುವಿಕೆ, ಮುಲುಕುವಿಕೆ; ತಿಣಕಾಟ.

**मेयाड़**, पु. ಪರೀಕ್ಷೆ, ನಿಕಷ.

**मेरा**, **मेरी**, सर्व. ನನ್ನ, ನನ್ನದು.

...क, पु. ಒಂದು ಬಗೆ ಧೂಪ.

..., पु. ಸಂಬಂಧ, ಸಂಪರ್ಕ; ಸೇರಿಕೆ;
...ಂದ; ಹೊಂದಿಕೆ; ಸಾಮರಸ್ಯ;
...ಮತ್ಯ; ಸ್ನೇಹ, ಸಲಿಗೆ; ಹೋಲಿಕೆ,
...ಮ್ಯ; ತರಹ, ರೀತಿ, ಬಗೆ; ಮಿಶ್ರಣ,
...ನ. मेल जोल = ಒರಗೆ, ಹೊಂ
...ಕೆ, ಸಲಿಗೆ. मेल मिलाप = ಅ
...ೀನ್ಯ, ಬಳಕೆ, ಸಲಿಗೆ.

...न, पु. ಮಿಳನ, ಕೂಡಿಕೆ.

...ना, सक्रि. ತುರುಕು, ಅಡಚು;
...ಿಸು. अक्रि. ಒಟ್ಟುಗೂಡು.

...ा, पु. ಗುಂಪು, ಸಂದಣಿ; ಕೂಟ;
...ತ್ರೆ, ಮೇಳ, ಪರಿಷೆ; ಸನ್ಯಾಸಿಗಳ
...ೆ. मेला ठेला = ಉತ್ಸವ, ಜಾತ್ರೆ.

...ाना, सक्रि. = मिलाना.

...ी, वि. ಸ್ನೇಹಪರ, ಸಲಿಗೆಯುವ.
... ಸ್ನೇಹಿತ, ಗೆಳೆಯ; ಭಾಗಸ್ಥ.

...ना, अक्रि. ತಳಮಳಿಸು.

...ी, स्त्री. ಸಿಂದುವಾರ; ನಿರ್ಗುಂಡಿ.

...ा, पु. ಒಣಗಿದ ಹಣ್ಣು, ಹಣ್ಣು
...ಂಪಲು.

...टी, स्त्री. ಒಂದು ಪಣ್ಯಾರ.

...ाँ, मेवाती, पु. ಕಳ್ಳತನಕ್ಕೆ ಹೆಸರು
...ಯಾದ ಒಂದು ಜಾತಿ ಜನರು.

...दार, वि. ಫಲವುಳ್ಳ, ಫಲಭರಿತ.

...फरोश, पु. ಹಣ್ಣು ಮಾರುವವ.

...दी, स्त्री. = मेंहदी.

..., पु. ಮೇಘ, ಮುಗಿಲು, ಮೋಡ;
...ಕೆ; ಮೇಹರೋಗ.

...र, पु. ಝಾಡಮಾಲಿ, ಒಡ್ಡ, ಬಂಗಿ, ತೋಟಿ, ಹಲಾಲಖೋರ; ನಾಯಕ, ಯಜಮಾನ; ಮುಖಂಡ.

मेहतरानी, स्त्री. मेहतर का स्त्री. रूप.

मेहनत, स्त्री. ಪರಿಶ್ರಮ, ಪ್ರಯಾಸ; ಮೆಹನತ್ತು, ಧಾವತಿ; ನಿಗಾ, ಗಮನ; ಅಭ್ಯಾಸ; ಕಸರತ್ತು. मेहनत मज़दूरी = ದಿನವಹಿ ಕೂಲಿ; ಕೂಲಿನಾಲಿ.

मेहनताना, पु. ಶ್ರಮದಕ್ಷಿಣೆ, ಪಾರಿಶ್ರಮಿಕ; ಪುರಸ್ಕಾರ, ರುಸುಂ.

मेहनती, वि. ದುಡಿಯುವವ, ಉದ್ಯಮಿ; ಕಷ್ಟಾಳು, ಪಾಡು ಪಡುವವ; ಶ್ರಮಪಟ್ಟವ. पु. ಕೂಲಿಗಾರ.

मेहना, पु. ಕೊರಚಾಟ, ವ್ಯಂಗೋಕ್ತಿ; ಸುಡುನುಡಿ.

मेहबस, पु. ಕಸೂತಿ ಮಾಡಿದ ಗವಸಣಿಗೆ.

मेहमान, पु. ಅತಿಥಿ, ಅಭ್ಯಾಗತ; ಔತಣಿಗ, ಬಿದ್ದಣಿಗ; ಅಳಿಯ.

मेहमानदार, पु. ಆತಿಥ್ಯ ಮಾಡುವವ.

मेहमानदारी, स्त्री. ಆತಿಥ್ಯ, ಅತಿಥಿ ಸತ್ಕಾರ.

मेहमानी, स्त्री. ಅತಿಥಿಯಾಗಿ ಇರೋಣ; ಆತಿಥ್ಯ, ಅತಿಥಿಸತ್ಕಾರ; ಔತಣ.

मेहमीज़, स्त्री. ರಿಕಾಬು, ಅಂಕವಡಿ.

मेहर, पु. ಸೂರ್ಯ. स्त्री. ಕೃಪೆ, ದಯೆ, ಕನಿಕರ; ಕುಲಾಂಗನೆ.

मेहरबान, वि. ದಯಾಳು, ಕೃಪಾಳು.

मेहरबानी, स्त्री. ದಯೆ, ಕೃಪೆ, ಅನುಗ್ರಹ.

मेहरा, पु. ಹೆಣ್ಣಿಗ, ನಪುಂಸಕ.

लुहारिन, स्त्री. ಕಮ್ಮಾರತಿ.

लुहारी, स्त्री. ಕಮ್ಮಾರತಿ; ಕಮ್ಮಾರನ ಕೆಲಸ.

लू, स्त्री. ಉಷ್ಣವಾಯು, ಬಿಸುಗಾಳಿ; ಝುಳ.

लूक, स्त्री. ಅಗ್ನಿಯ ನಾಲಗೆ, ಜ್ವಾಲೆ; ಉರಿವ ಕಟ್ಟಿಗೆ, ಕೊರೆಕೊಳ್ಳಿ; ಉಷ್ಣವಾಯು, ಬಿಸುಗಾಳಿ; ಝುಳ; ಉಲ್ಕ.

लूकट, वि. ಅರ್ಧ ಉರಿದ.

लूकटी, स्त्री. ಉರಿವ ಕಟ್ಟಿಗೆ, ಕೊರೆಕೊಳ್ಳಿ; ನರಿ.

लूकना, अक्रि. ಸುಡು, ಹುರಪಳಿಸು; ಸೋಡು, ಈಕ್ಷಿಸು.

लूका, पु. लूकी, स्त्री. ಉರಿ, ಜ್ವಾಲೆ; ಕಿಡಿ; ಉರಿವ ಕಟ್ಟಿಗೆ, ಕೊಳ್ಳಿ.

लूगा, पु. ಬಟ್ಟೆ, ಹೊದಿಕೆ.

लूची, स्त्री. ತೆಳುವಾದ ಪೂರಿ.

लूट, स्त्री. ಕೊಳ್ಳೆ, ಕೋಳು, ಲೂಟಿ, ಸೂರೆ. लूटपाट, लूटमार, लूटखसोट, लूटालूट = ಸೂರೆ, ಲೂಟಾಲೂಟಿ, ವಳದುಳ.

लूटक, पु. ಸುಲಿಗೆಕಾರ, ಲೂಟಿಗಾರ.

लूटना, सक्रि. ಸುಲಕೊಳ್ಳು, ಕೊಳ್ಳೆ ಹೊಡೆ; ದೋಚಿಕೊಳ್ಳು, ಲೂಟಿಮಾಡು, ಸೂರೆಗೊಳ್ಳು; ಮೋಹಗೊಳಿಸು.

लूत, स्त्री. ಜೇಡನ ಹುಳು, ಜಾಡ; ಒಂದು ಚರ್ಮ ರೋಗ.

लूता, स्त्री. ಜೇಡನ ಹುಳು, ಜಾಡ, ಸೆಲದಿ; ಉರಿವ ಕಟ್ಟಿಗೆ, ಕೊಳ್ಳಿ.

लून, पु. ಉಪ್ಪು, ಲವಣ. वि. ಕತ್ತರಿಸಿದ; ಕಡಿದುಹಾಕಿದ; ಘಾಯಗೊಂಡ.

लूनना, सक्रि. ಕೊಯ್ಯು, ಕಟಾಯಿಸು.

लूनिया, वि. ಉಪ್ಪಾದ, ಉಪ್ಪು ಬೆರತ; ಚವುಳು. पु. ಉಪ್ಪಲಿಗ, ತೊರೆಯ; ಬಜ್ಜಲೆ ಸೊಪ್ಪು, ಸುಚ್ಚುಗೋಳಿ ಸೊಪ್ಪು.

लूनी, स्त्री. ಗೋಡೆಯಿಂದ ಉದುರುವ ಚವುಳುಮಣ್ಣು, ಉಪ್ಪುಮಣ್ಣು; ಬೆಣ್ಣೆ

लूमना, अक्रि. ಜೋಲಾಡು, ನೇತಾಡು.

लूला, वि. ಕೈಯಿಲ್ಲದವ, ಮೊಂಡ, ಹೆಳವ, ಕುಂಟ. लूला लंगड़ा = ಕುಂಟ ಮುರವ.

लूली, स्त्री. ನರ್ತಕಿ, ಪಾತರಗಿತ್ತಿ.

लूलू, पु. ಭೂತ; ಗೊಗ್ಗಯ್ಯ, ಗುಮ್ಮ, ಬೂಚಿ; ದಡ್ಡ, ಮೂಢ; ಹುಚ್ಚ; ಮುಕ್ತಾಫಲ, ಮುತ್ತು.

लूह, लूहर, स्त्री. = लू.

लेंड, स्त्री. ಮಲ, ವಿಷ್ಠೆ.

लेंडी, स्त्री. ನಾಯಿ; ಹೆಣದತ್ತ; ಪುಕ್ಕ, ಹೇಡಿ; ಬತ್ತಿಯಂತೆ ಬೀಳುವ ಮಲ; ಹಿಕ್ಕೆ, ವಿಷ್ಠೆ. लेंडी तर होना = ಹಿಗ್ಗು; ಹೆಮ್ಮೆಪಡು.

लेंड़रा, पु. ಅಳ್ಳೆದೆಯುವ, ಪುಕ್ಕ; ತನ್ನ ಮೊದಲನೆಯ ಗಂಡನಿಗೆ ಹುಟ್ಟಿದ ಮಗ.

लेंहड़, लेंहड़ा, पु. ಮಂದೆ, ಹಿಂಡು.

ले, अव्य. ಮೊದಲುಗೊಂಡು. क्रिवि. ತನಕ, ವರೆಗೆ.

लेई, स्त्री. ಲೇಹ್ಯ, ಚಟ್ನಿ; ಅಂಬಲಿ, ಕೂಳು; ಗಂಜಿ, ಸರಿ; ಸುಣ್ಣದ ಗಚ್ಚು

**लेऊ**, वि. ತೆಗೆದುಕೊಳ್ಳುವವ.
**लेकिन**, अव्य. ಆದರೆ, ಪರಂತು.
**लेख**, पु. ಲೇಖ, ಲೇಖನ; ಬರಹ, ಬರವಣಿಗೆ; ಲೆಕ್ಕ, ಲೆಕ್ಕಾಚಾರ.
**लेखक**, पु. ಲೇಖಕ, ಬರಹಗಾರ.
**लेखकी**, स्त्री. ಲೇಖಕನ ಕೆಲಸ.
**लेखना**, सक्रि. ಬರೆ; ಕೆತ್ತು, ಕೊರೆ; ಲೆಕ್ಕಿಸು; ಎಣಿಸು; ವಿಚಾರವಮಾಡು.
**लेखनी**, स्त्री. ಲೇಖನಿ, ಪೇನಾ.
**लेखा**, स्त्री. ರೇಖೆ, ಗೆರೆ; ಲೇಖೆ. पु. ಗಣನೆ, ಎಣಿಕೆ; ಲೆಕ್ಕ; ಲೆಕ್ಕಾಚಾರ; ದಸ್ತಾವೇಜು. लेखा जोखा = ಲೆಕ್ಕಾಚಾರ. लेखा बही = ಲೆಕ್ಕದ ಪುಸ್ತಕ, ಖಾತೆಕಿರ್ದಿ. लेखा डेवढ़ करना = ಲೆಕ್ಕ ತೀರಿಸು, ಫೈಸಲುಮಾಡು.
**लेज़म**, स्त्री. ಕಸರತ್ತು ಮಾಡಲು ಬಳಸುವ ಗೆಜ್ಜೆ ಕಟ್ಟಿದ ಬಿಲ್ಲು, "ಲೆಜಿಂ".
**लेज़ुर, लेज़ुरी**, स्त्री. ಹಗ್ಗ, ಹುರಿ.
**लेट**, पु. ಗಾರೆ, ಗಚ್ಚು.
**लेटना**, अक्रि. ಮಲಗು, ಶಯನಿಸು; ಒರಗು; ಪವಡಿಸು.
**लेटाना**, सक्रि. ಮಲಗಿಸು, ಒರಗಿಸು.
**लेदी**, स्त्री. ಒಂದು ಪಕ್ಷಿ.
**लेन**, पु. ತೆಗೆದುಕೊಳ್ಳುವಿಕೆ, ಪರಿಗ್ರಹ; ಬರಬೇಕಾದ ಹಣ, ಲೇಣೆ.
**लेनदार**, पु. ಹಣ ಪಡೆಯಬೇಕಾದವ, ಲೇಣೆದಾರ.
**लेन-देन**, पु. ಕೊಡುವುದು ತೆಗೆಯುವುದು, ಕೊಳ್ಳುಕೊಡೆ; ಆದಾನ ಪ್ರದಾನ, ಲೇಣೆ ದೇಣೆ, ಲೇವಾದೇವಿ; ವ್ಯಾಪಾರ.
**लेनहार**, वि. ತೆಗೆದುಕೊಳ್ಳುವವ.
**लेना**, सक्रि. ಕೊಳ್ಳು, ತೆಗೆದುಕೊಳ್ಳು; ತೆಗೆ, ಪರಿಗ್ರಹಿಸು; ಇಸುಕೊಳ್ಳು; ಪಡೆ. ಹೊಂದು; ಹಿಡಿ, ಎತ್ತು, ವಹಿಸು, ಸ್ವೀಕರಿಸು; ಧರಿಸು, ತಳೆ, (ರೂಪ) ತಾಳು. लेदे करना = ತಕರಾರು ಮಾಡು.
**लेनिया-देनिया**, स्त्री. ಭಾಗ್ಯ, ಅದೃಷ್ಟ; ವಿಧಿ.
**लेप**, पु. ಲೇಪ; ಮುಲಾಮು.
**लेपना**, सक्रि. ಸವರು; ಲೇಪಿಸು; ಬಳಿ.
**ले-पालक**, पु. ದತ್ತಪುತ್ರ; ಸಾಕುಮಗ.
**लेरुआ, लेरू**, पु. ಕರು, ಕಂದಿ.
**लेला**, पु. ಕುರಿಮರಿ.
**लेव**, पु. ಲೇಪ; ಒಲೆಯ ಮೇಲಿಡುವ ಪಾತ್ರೆಗಳ ಬುಡಕ್ಕೆ ಬಳಿಯುವ ಬೂದಿ; ಮಣ್ಣುಗಾರೆ, ಗಚ್ಚು. लेव चढ़ना = ಮೆತ್ತಲ್ಪಡು; ಕೊಬ್ಬು.
**लेवा**, पु. ಮಣ್ಣುಗಾರೆ, ಕಲಸುಮಣ್ಣು; ಗಚ್ಚು, ಗಾರೆ; ಲೇಪ; ಒಲೆಯ ಮೇಲಿಡುವ ಪಾತ್ರೆಗಳ ಬುಡಕ್ಕೆ ಬಳಿವ ಬೂದಿ. वि. ತೆಗೆದುಕೊಳ್ಳುವ, ಎತ್ತುವವ. नाम लेवा = ಹೆಸರೆತ್ತುವವ; ವಂಶಸ್ಥ; ವಾರಸುದಾರ.
**लेवादेई**, स्त्री. ಕೊಳ್ಳುಕೊಡೆ, ಲೇಣೆ ದೇಣೆ, ಲೇವಾದೇವಿ.
**लेवा-वेची**, स्त्री. ಖರೀದಿ ಬಿಕರಿ, ಕೊಳ್ಳಾಟ ಮಾರಾಟ.
**लेवार**, पु. ಮಣ್ಣುಗಾರೆ.
**लेवाल, लेवैया**, पु. ಕೊಳ್ಳುವವ.

ಲೆವಾಸ, ಪು. ಗಾರೆ, ಗಚ್ಚು.
ಲೆಸ, ಪು. ಅಂಟು, ಸರಿ, ಜಿಗಟು; ಸಂಬಂಧ; ಲೇಪಿಸುವಿಕೆ, ಸಾರಣೆ; ಕಿರಿಯತನ.
ಲೆಸನಾ, ಸಕ್ರಿ. ಉರಿಸು; ಲೇಪಿಸು, ಬಳಿ; ಸಾರಣೆ ಮಾಡು, ಸಾರಿಸು; ಪೂಸು, ತೊಡಸು; ಹಚ್ಚು, ಚಿಗಟಾಯಿಸು; ಚಾಡಿ ಹೇಳು.
ಲೆಹನ, ಪು. ನೆಕ್ಕುವಿಕೆ.
ಲೆಹನಾ, ಪು. ಬಾಕಿ ಹಣ, ಲೇಣೆ; ಗೋಮಾಳ; ಮೇವು.
ಲೆಹರಾ, ವಿ. ಕೊಳೆಯಾದ, ಕೊಳಕಾದ.
ಲೆಹಾಜ಼,ಲೆಹಾಜ಼ಾ, ಕ್ರಿವಿ. ಆದುದರಿಂದ, ಅತಃ.
ಲೆಹೀ, ಸ್ತ್ರೀ. ಸರಿ, ಕೂಳುಸರಿ; ಬಂಡವಾಳ, ಮೂಲಧನ.
ಲೆಹೂ, ಪು. ರಕ್ತ, ನೆತ್ತರು.
ಲೈಸ, ವಿ. ಸನ್ನದ್ಧವಾದ, ತಯಾರು, ಸಿದ್ಧ. ಪು. ಅಂಬು, ಬಾಣ; ಹುಳಿ ರಸ, ಕಾಡಿ; ಅಂಚು, ಗೋಟು; ಜರತಾರಿ, ಸರಿಗೆ, ಜರಿ, ನಿರಾಜಿ, ಕಲಾಬತ್ತು.
ಲೌಂ, ಅವ್ಯ. ವರೆಗೆ, ಗಂಟ, ತನಕ.
ಲೌಂದಾ, ಪು. ಮುದ್ದೆ, ತೆರಳೆ, ಉಂಡೆ.
ಲೋ, ಅವ್ಯ. ಇಗೋ! ಇದಿಗೋ!
ಲೋಈ, ಸ್ತ್ರೀ. ರೊಟ್ಟಿಯ ಹಿಟ್ಟಿನ ಬಿಲ್ಲೆ, ಕಣಕದ ಬಿಲ್ಲೆ; ಕಳೆ, ಕಾಂತಿ; ಮಾನ; ನಯವಾದ ಕಂಬಳಿ, ಬುರಣೀಸು, ಬೂರ್ನಿಸು.
ಲೋಕಂದಾ, ಪು. ಹೆಣ್ಣನ್ನು ಅತ್ತೆ ಮನೆಗೆ ಕಳುಹಿಸುವಾಗ ಜೊತೆಯಲ್ಲಿ ಒಬ್ಬ ದಾಸಿಯನ್ನು ಕಳುಹಿಸುವಿಕೆ.
ಲೋಕಂದೀ, ಸ್ತ್ರೀ. ಹೆಣ್ಣನ್ನು ಅತ್ತೆ ಮನೆಗೆ ಕಳುಹಿಸುವಾಗ ಜೊತೆಯಲ್ಲಿ ಹೋಗುವ ದಾಸಿ, ತೊತ್ತು.
ಲೋಕ, ಪು. ಲೋಕ, ಜಗತ್ತು; ಜನ.
ಲೋಕನ, ಪು. ನೋಟ, ದೃಷ್ಟಿ.
ಲೋಕನಾ, ಸಕ್ರಿ. ಹಿಡಿ, ಬುತ್ತಿ ಹಿಡಿ, ಪುಟಹಿಡಿ, "ಕ್ಯಾಚ್" ಹಿಡಿ; ಹಾರಿಸಿಕೊ
ಲೋಕನಿಯಾ, ವಿ. ಕಾಣುವ, ದೃಶ್ಯ, ಪ್ರಕಟ
ಲೋಕನೀ, ಸ್ತ್ರೀ. ದಾಸಿ, ಸೇವಕಿ, ಚೇಟಿ
ಲೋಕಾಚಾರ, ಪು. ಜನಗಳ ಪದ್ಧತಿ, ಲೋಕಾಚಾರ.
ಲೋಕಾಠ, ಪು. ಒಂದು ಬಗೆ ಹಣ್ಣು.
ಲೋಕಾನಾ, ಸಕ್ರಿ. ಹಾರಿಸು, ಬಿಸಾಡು.
ಲೋಕೋಕ್ತಿ, ಸ್ತ್ರೀ. ನಾಡಗಾದೆ, ಗಾದೆ, ಲೋಕೋಕ್ತಿ.
ಲೋಖಡೀ, ಸ್ತ್ರೀ. ನರಿ, ಬಳ್ಳು.
ಲೋಖರ, ಪು. ಯಂತ್ರ, ಆಯುಧ, ಕೈದು; ಉಪಕರಣ; ಕಬ್ಬಿಣದ ಸಾಮಾನು.
ಲೋಗ, ಪು. ಮನುಷ್ಯ, ಜನ, ಮಂದಿ, ಲೋಗ. ಲೋಗ ಬಾಗ = ದೊಡ್ಡವರು ಚಿಕ್ಕವರು, ಎಲ್ಲರೂ. ಲೋಗ ಹಂಸಾಈ = ಜನಗಳ ಅಪಹಾಸ್ಯ; ಅವಮಾನ. ಲೋಗ ಲುಗಾಈ = ಗಂಡಸರು ಹೆಂಗಸರು.
ಲೋಗಾಈ, ಸ್ತ್ರೀ. ಸ್ತ್ರೀ; ಹೆಂಡತಿ.
ಲೋಃವೀ, ವಿ. = ಲುಃವೀ.
ಲೋಚ, ಸ್ತ್ರೀ. ಬಾಗುವಿಕೆ, ಬಳುಕುವಿಕೆ; ಕೋಮಲತೆ, ಮೃದು; ಇಂಪು, ಮಾಧುರ್ಯ; ಹಿಟ್ಟು, ಪಿಷ್ಟ; ಅಂಬಲಿ, ಸರಿ; ಜಿಗಟು. ಪು. ಅಭಿಲಾಷೆ.
ಲೋಚದಾರ, ವಿ. ಹಿಟ್ಟುಳ್ಳ; ಹಿಟ್ಟಿನ;

ಮೃದುವಾದ, ಕೋಮಲ; ಪಸಂದಾದ
लोचन, पु. ಕಣ್ಣು, ನೇತ್ರ.
लोचना, सक्रि. ಹೊಳಗಿಸು, ಬೆಳಗಿಸು; ರುಚಿ ಹುಟ್ಟಿಸು, ಆಶೆ ಹುಟ್ಟಿಸು. अक्रि. ಆಶೆಪಡು, ಹಂಬಲಿಸು, ಹಾ ತೊರೆ; ಶೋಭಿಸು, ರಾರಾಜಿಸು.
लोचक,लोचा,पु.ರಾಗಿ ಮುದ್ದೆ,ತೆರಳೆ; ಮಾಂಸದ ತುಂಡು.
लोट, पु. ಇಳಕಲು, ಇಳಿಜಾರು. स्त्री. ಎದೆಗೂ ಕಿಬ್ಬೊಟ್ಟೆಗೂ ಮಧ್ಯೆ ಮೂರು ಮಡಿಕೆಗಳಾಗಿರುವ ಚರ್ಮ, ತ್ರಿವಲಿ; ಹುಂಡಿ ಕಾಗದ, ನೋಟು, ಲೋಟು; ಉರುಳುವಿಕೆ, ಹೊರಳಾಡುವಿಕೆ. लोट पोट = ಹೊರಳಾಡುವ; ಮುಗ್ಧನಾದ, ಮರುಳಾದ
लोटन, पु. ಹೊರಳಾಡುವಿಕೆ; ಹೊರ ಳಾಡುವ ಪಾರಿವಾಳ, ಗಿರೇಬಾಜ; ಪೊ ದೆ, ಪೊದರು; ನೊರಜುಗಲ್ಲು.
लोटना, अक्रि. ಉರುಳು, ಹೊರಳಾಡು; ಬೋರಲ ಬೀಳು; ಚಡಪಡಿಸು, ಒದ್ದಾ ಡು; ಮಲಗು; ಮುಗ್ಧನಾಗು, ಬೆರಗಾಗು
लोटपाटा, पु. ವಧೂವರರಿಬ್ಬರೂ ಹಸೆ ಯಲ್ಲಿ ಸ್ಥಾನ ಬದಲಾಯಿಸುವಿಕೆ; ಬದಲಾವಣೆ, ಮಾರ್ಪಾಟು.
लोटा, पु. ತಂಬಿಗೆ, ಚೆಂಬು; ಗಡಿಗೆ, ಸಣ್ಣ ಮಡಕೆ. लोटा उठाना = ಒಬ್ಬರ ಸೇವೆ ಶುಶ್ರೂಷೆ ಮಾಡು.
लोटाना, सक्रि. ಉರುಳಿಸು, ಹೊರ ಳಿಸು; ಕೆಡವು.
लोटिया, स्त्री. ಚಿಕ್ಕ ತಂಬಿಗೆ.
लोड़ना, अक्रि ಅಗತ್ಯ ಬೀಳು.
लोढ़, स्त्री. ಆಶೆ, ಬಯಕೆ, ಹಂಬಲ.
लोढ़ना, पु. ಉದುರುಕಾಳು, ಹಕ್ಕಲು. सक्रि. ಆಯು, ಹೆಕ್ಕು, ಆರಿಸು; ಹತ್ತಿ ಬೀಜ ಬಿಡಿಸು, ಎಕ್ಕು; ಅಂಚು ಮಡಿಸಿ ಹೊಲಿ, ತಿಬ್ಬಿ ಹೊಲಿ; ಬಯಸು.
लोढ़ा, पु. लोढ़िया, स्त्री. ಅಸೆಯ ಕಲ್ಲಿನಮೇಲೆ ಅರೆಯುವ ಗುಂಡು ಕಲ್ಲು, ಉರುಳು ಕಲ್ಲು.
लोढ़ा-ढाल, वि. ಧ್ವಂಸವಾದ, ಚಟ್ಟಾದ.
लोढ़ी, स्त्री. ಬಟ್ಟೆಯ ಅಂಚು; ಹತ್ತಿ ಬೀಜ ಬಿಡಿಸುವ ರಾಟೆ, ಕಿರಕು ರಾಟೆ.
लोथ, स्त्री. ಹೆಣ, ಶವ; ಕಳೇಬರ.
लोथड़ा, पु. लोथड़ी, स्त्री. ಮಾಂಸಪಿಂಡ
लोथा, पु. ಚೀಲ, ಗೋಣಿ ಚೀಲ.
लोथी, स्त्री. ದೊಣ್ಣೆ, ಲಾಠಿ, ದಡಿ.
लोधी, लोधा, पु. ಆರಂಬದ ಕೆಲಸ ಮಾಡುವ ಪಠಾಣರ ಒಂದು ಜಾತಿ; ಒಕ್ಕಲಿಗ, ಬೇಸಾಯಗಾರ.
लोन, पु. ಲವಣ, ಉಪ್ಪು.
लोना, वि. ಉಪ್ಪಾದ; ಉಪ್ಪುನೆಲ; ಲಾವಣ್ಯವುಳ್ಳ. पु. ಮಣ್ಣುಗೋಡೆ ಯಿಂದ ಮಣ್ಣುದುರುವಿಕೆ; ಉದು ರಿದ ಮಣ್ಣು; ಚವುಳುಮಣ್ಣು; ನುಚ್ಚು ಗೋಳಿ ಸೊಪ್ಪು. स्त्री. ಮಾಟಗಾತಿ. सक्रि. ಕೊಯ್ಯು, ಕಲಾಯಿಸು.
लोनाई, लोना-पन, पु. ಉಪ್ಪುತನ; ಲಾವಣ್ಯ.
लोनार, पु. ಉಪ್ಪಿನ ಕಟ್ಟೆ, ಉಪ್ಪುಮಡಿ.
लोनिया, पु. ಉಪ್ಪಲಿಗ, ತೊರೆಯ.

**लोनी**, स्त्री. ಬಚ್ಚಲೆ ಸೊಪ್ಪು, ನುಚ್ಚು ಗೋಳಿ ಸೊಪ್ಪು. वि. ಉಪ್ಪಾದ. लोनी मिट्टी = ಉಪ್ಪು ಮಣ್ಣು, ಚೌಳು ಮಣ್ಣು.

**लोप**, पु. ಲೋಪ, ಮರೆಯಾಗುವಿಕೆ.

**लोपड़ी**, स्त्री. ಮುದ್ದೆ; "ಪೋಲ್ಟೀಸು".

**लोत्रा**, स्त्री. ನರಿ, ಬಳ್ಳು.

**लोबाना**, पु. ಧೂಪ, ಕುಂದುರು, ಲೋಬಾನ, ಸೀಮೆ ಸಾಂಬ್ರಾಣಿ.

**लोबिया**, पु. ಒಂದು ಬಗೆ ಅವರೆಕಾಯಿ

**लोभ**, पु. ಅತ್ಯಾಶೆ, ಲೋಭ.

**लोभना**, अक्रि. ಲೋಭಗೊಳ್ಳು, ಮರುಳಾಗು.

**लोभी**, वि. ಅತ್ಯಾಸೆಪಡುವವ, ಲೋಭಿ

**लोम**, पु. ಮೈಗೂದಲು, ರೋಮ; ಬೊಚ್ಚು, ತುಪ್ಪಳ; ಕಾವಲುಗಾರ, ಪಹರೆಯುವ; ನರಿ.

**लोमड़ी**, स्त्री. ಕುಣಿ ನರಿ, ಕಂಕನರಿ.

**लोर**, वि. ಡೋಲಾಯಮಾನ; ಓಲಾಡುವ; ಚಂಚಲ. पु. ಕಂಬನಿ, ಬಿಂದು; ಲೋಲಕು; ಚಳತುಂಬು.

**लोरी**, स्त्री. ಜೋಗುಳ, ತಾರಮ್ಮಯ್ಯನ ಪದ, ತೊಟ್ಟಿಲ ತ್ರುಪ್ಪಿ, ಲಾಲಿ. लोरी देना = ಜೋಗುಳ ಹಾಡು.

**लोलक**, पु. ಲೋಲಕು, ಜುಮುಕಿ, ಚಳತುಂಬು.

**लोलकी**, स्त्री. ಕಿವಿಯ ಆಲೆ, ತಮ್ಮೆ; ಸಣ್ಣ ಲೋಲಕು.

**लोलना**, सक्रि. ಅಲ್ಲಾಡಿಸು, ತೂಗಾಡಿಸು

**लोवा**, पु. ನರಿ, ಕುಣಿನರಿ.

**लोहंडा**, पु. **लोहंडी**, स्त्री. ಕಬ್ಬಿಣದ ಬಾನೆ; ಕಬ್ಬಿಣದ ಹಂಡೆ.

**लोह**, पु. ಲೋಹ; ಕಬ್ಬಿಣ.

**लोहज**, पु. ಕಂಚು.

**लोहसार**, पु. ಉಕ್ಕು; ಉಕ್ಕಿನ ಸರಪಣಿ

**लोहा**, पु. ಲೋಹ, ಕಬ್ಬಿಣ; ಅಸ್ತ್ರ ಶಸ್ತ್ರ. लोहा बनाना = ಕತ್ತಿ ಹಿಡಿದು ಯುದ್ಧಮಾಡು. लोहा मानना = ಕತ್ತಿಗೆ ಬಾಗು, ಅಧೀನನಾಗು. लोहा लोटना = ಗುರಿ ತಪ್ಪಿಹೋಗು; ನಿರಾಶನಾಗು; ಅದೃಷ್ಟಹೀನನಾಗು. लोहे का चना = ಕಬ್ಬಿಣದ ಕಡಲೆ; ಬಹಳ ಕಠಿಣವಾದ ವಿಷಯು.

**लोहाना**, अक्रि. ಕಬ್ಬಿಣದಂತೆ ಆಗು.

**लोहार**, पु. ಲೋಹಕಾರ, ಕಮ್ಮಾರ.

**लोहारनी**, **लोहारिन**, स्त्री. ಕಮ್ಮಾರತಿ

**लोहारी**, स्त्री. ಕಮ್ಮಾರತಿ; ಕಮ್ಮಾರನ ಕೆಲಸ.

**लोहांग**, **लोहा-लट्ठ**, पु. ಕಬ್ಬಿಣದ ತುದಿಯುಳ್ಳ ಲಾಠಿ; ಕಬ್ಬಿಣದ ಕೋಲು

**लोहिया**, पु. ಕಬ್ಬಿಣ; ಕಬ್ಬಿಣದ ಸಾಮಾನು ಮಾರುವವ; ಕೆಂಚ ಬಣ್ಣದ ಎತ್ತು. वि. ಕಬ್ಬಿಣದ.

**लोही**, स्त्री. ತುತ್ತು, ರೊಟ್ಟಿ; ಕವಳ; ರೇಷ್ಮೆ ಬಟ್ಟೆ; ಅರುಣೋದಯು, ನಸುಕು; ಕೆಂಪು ಬಣ್ಣ; ಪ್ರಕಾಶ; ಕಾಂತಿ; ಮಾನ, ಗೌರವ.

**लोहू**, पु. = लहू.

**लौं**, अव्य. ತನಕ, ವರೆಗೆ.

**लौंकना**, अक्रि. ಹೊಳೆ, ಮಿಂಚು;

ಗೋಚರಿಸು.

**लौंग**, पु. ಲವಂಗ, ಕೀಬು; ಕಿವಿ ಮುರು; ಮೂಗುತಿ.

**लौंगड़ा**, पु. ಲವಂಗದಿಂದ ತಯಾರಾದ ಔಷಧ.

**लौंगदानी**, स्त्री. ಲವಂಗದಾನಿ.

**लौंजी**, स्त्री. ಮಾವಿನಕಾಯಿ ಉಪ್ಪಿನಕಾಯಿ.

**लौंडा**, पु. ಹುಡುಗ, ಪೋರ, ಹೈದ; ಕೆಲಸಮಾಡುವ ಹುಡುಗ; ಆಳುಮಗ.

**लौंडिया**, **लौंडी**, स्त्री. ಹುಡುಗಿ, ಪೋರಿ; ದಾಸಿ, ಲವುಂಡಿ.

**लौंडेबाज़**, पु. ಬಾಲಕರನ್ನು ಮೈಥುನ ಮಾಡುವವ, ಗುದ ಮೈಥುನ ಮಾಡುವವ, ಪುಂಮೈಥುನ ಮಾಡುವವ.

**लौंद**, पु. ಅಧಿಕಮಾಸ, ಮಲಮಾಸ. लौंद का वर्ष = ಅಧಿಕವರ್ಷ, ೩೬೬ ದಿನಗಳ ವರ್ಷ.

**लौ**, स्त्री. ಉರಿಯ ನಾಲಗೆ, ದೀಪದ ಶಿಖೆ; ಚಿತ್ತವೃತ್ತಿ; ಇಚ್ಛೆ, ಪ್ರೀತಿ; ಕಿವಿಯ ಆಲೆ, ತಮ್ಮೆ. लौ लगाना = ಚಿತ್ತೈಸು, ಚಿತ್ತವಿಡು.

**लौआ**, पु. ಸೋರೆಕಾಯಿ.

**लौकना**, अक्रि. ಗೋಚರಿಸು; ತೋರು; ಹೊಳೆ. सक्रि ನೋಡು; ಬುತ್ತಿ ಬಿಡಿ

**लौका**, पु. ಪ್ರಕಾಶ; ಸೋರೆಕಾಯಿ.

**लौकी**, स्त्री. ಸೋರೆಕಾಯಿ, ಅಲಾಬು.

**लौज़**, पु. ಬಾದಾಮಿ; ಒಂದು ಮಿಠಾಯಿ

**लौट**, स्त्री. ಹಿಂತಿರುಗುವಿಕೆ, ವಾಪಸು, ಪರತ. लौट पौट = ತಿರುಗು ಮುರುಗು

**लौटना**, अक्रि. ತಿರುಗು, ಹಿಂತಿರುಗು; ಪರತ ಬರು, ವಾಪಸು ಬರು.

**लौटाना**, **लौटालना**, सक्रि. ತಿರುಗಿಸು, ಹಿಂತಿರುಗಿಸು; ವಾಪಸು ಮಾಡು; ಪರತ ಮಾಡು; ಪಲ್ಲಟಿಸು.

**लौठा**, पु. ಯುವಕ, ತರುಣ; ಒರಟ

**लौन**, पु. ಬಣ್ಣ; ರೂಪ; ಜಾತಿ, ವಿ

**लौना**, सक्रि. ಕೊಯ್ಯು, ಕಟಾಯಿ

**लौनी**, स्त्री. ಕೊಯಿಲು, ಕಟಾ ಕೊಯ್ಯಲು ಕೊಡುವ ಕೂಲಿ.

**लौम**, पु. ದೋಷಾರೋಪಣೆ, ಆಪಾ

**लौल**, स्त्री. ಕಿವಿಯ ಆಲೆ, ತಮ್ಮೆ

**लौह**, पु. ಲೋಹ, ಕಬ್ಬಿಣ; ಮೇಜು.

**लौहार**, पु. ಪರವಶತೆ, ಪಾರ

**ल्यारी**, स्त्री. ತೋಳ.

## व

**वंक**, वि. ವಕ್ರ, ಡೊಂಕು.

**वंचक**, वि. ವಂಚಿಸುವವ, ಮೋಸಗಾರ, ವಂಚಕ.

**वंचना**, स्त्री. ವಂಚನೆ, ಮೋಸ. सक्रि. ವಂಚಿಸು; ಓದು, ಪಠಿಸು.

**वंडा**, वि. ಮೊಂಡ, ಮೋಟು

**वंदन**, पु. **वंदना**, स्त्री. ವಂ

**वंदनीय**, वि. ವಂದಿಸಲು ಯೋ

**वंदित**, वि. ವಂದಿಸಿದ, ವ

**वंदीजन**, पु. ಸ್ತುತಿಪಾ

ಮಾಗಧ.

**वंश**, पु. ವಂಶ; ಬಿದಿರು; ಕೊಳಲು.

**वंशज**, पु. ವಂಶೀಯರು; ಸಂತಾನ.

**वंशी**, स्त्री. ಪಿಳ್ಳಂಗೋವಿ, ಕೊಳಲು.

**वंशीधर**, पु. ಕೊಳಲಿನವ; ಶ್ರೀಕೃಷ್ಣ

**वंशीय**, वि. ವಂಶದಲ್ಲಿ ಹುಟ್ಟಿದ, ವಂಶಸ್ಥ, ವಂಶೀಯ.

**व**, अव्य. ಮತ್ತು, ಹಾಗೂ.

**वक़अत**, स्त्री. ತೂಕ; ಮಾನ, ಗೌರವ; ಶಕ್ತಿ.

**वकालत**, स्त्री. ರಾಯಭಾರ, ದೌತ್ಯ; ನಿಯೋಗ; ಬೇರೊಬ್ಬನ ಪರವಾಗಿ ವಾದಿಸುವಿಕೆ, ಪಕ್ಷಗಟ್ಟಿ ಮಾತಾಡುವಿಕೆ; ವಕೀಲರ (ಲಾಯರ) ಕೆಲಸ ಅಥವಾ ಕಸಬು, ವಕಾಲತ್ತು, ವಕೀಲವೃತ್ತಿ, ಲಾಯರಿ.

**वकालतन्**, क्रिवि. ನಿಯೋಗದಿಂದ, ನಿಯೋಗಿಸಲ್ಪಟ್ಟು.

**वकालतनामा**, पु. ವಕಾಲತ್ತು ಕೊಡುವ ಅಧಿಕಾರ ಪತ್ರ, ವಕಾಲತ್ತುನಾಮೆ

**वकील**, पु. ದೂತ, ರಾಯಭಾರಿ; ನಿಯೋಗಿ, ಪ್ರತಿನಿಧಿ; ಪಕ್ಷಗಟ್ಟಿ ಮಾತಾಡುವವ, ಪಕ್ಷವಾದ ಮಾಡುವವ; ಪರಾರ್ಥವಾದಿ; ವಕೀಲ, ಲಾಯರು.

**वकीली**, स्त्री. ವಕೀಲನ ಕೆಲಸ; ವಕಾಲತ್ತು.

**वक़्फ़**, पु. ಜ್ಞಾನ, ಬುದ್ಧಿ; ವಿವೇಕ; ತಿಳಿವಳಿಕೆ; ದಕ್ಷತೆ. वि. ದಡ್ಡ; ಅವಿವೇಕಿ

**वक्त**, पु. ಸಮಯ, ಕಾಲ; ಹೊತ್ತು; ವೇಳೆ; ಸಂದರ್ಭ; ಸಾವಕಾಶ. वक्त पर=ಹೊತ್ತಿಗೆ ಸರಿಯಾಗಿ, ಸಕಾಲಕ್ಕೆ.

**वक़्तन् फ़-वक़्तन्**, क्रिवि. ಸಮಯ ಸಮಯಕ್ಕೂ, ಆಗಾಗ್ಗೆ.

**वक्ता**, पु. ಭಾಷಣಕಾರ, ಉಪನ್ಯಾಸಕ; ವಾಗ್ಮಿ.

**वक्तृता**, स्त्री. वक्तृत्व, पु. ವಾಕ್ಪಟುತ್ವ; ಭಾಷಣ, ಪ್ರಸಂಗ, ಉಪನ್ಯಾಸ.

**वक़्फ़**, पु. ಧರ್ಮಾರ್ಥವಾಗಿ ಕೊಟ್ಟ ಹಣ, ಧರ್ಮಸೊತ್ತು; ದಾನ ಬರ ಕೊಟ್ಟ ಆಸ್ತಿ, ದತ್ತಿ.

**वक़्फ़नामा**, पु. ದಾನಶಾಸನ.

**वक़्फ़ा**, पु. ತಡ, ತಾಮಸ, ವಿಳಂಬ; ಅಂತರ, ಸಾವಕಾಶ.

**वक़्र**, पु. ಮಾನ, ಮರ್ಯಾದೆ; ಗೌರವ.

**वग़ैरह**, अव्य. ಇತ್ಯಾದಿ, ಮುಂತಾದ, ಪ್ರಭೃತಿ, ವಗೈರೆ.

**वचन**, पु. ವಚನ; ಮಾತು; ಭಾಷೆ.

**वज़न**, पु. ಭಾರ, ಹೊರೆ, ವಜ್ಜೆ, ತೂಕ; ಶಬ್ದದ ಮಾತ್ರೆ; ಛಂದಸ್ಸು.

**वज़नी**, वि. ಭಾರವಾದ, ತೂಕವುಳ್ಳ.

**वजह**, स्त्री. ಕಾರಣ, ಹೇತು; ನಿಮಿತ್ತ; ಬಗೆ, ರೀತಿ; ವೇತನ, ಸಂಬಳ.

**वजा**, पु. ನೋವು, ಬೇನೆ; ರೋಗ.

**वज़ा**, स्त्री. ರಚನೆ, ಮೈಕಟ್ಟು, ರೂಪ; ತರಹ, ರೀತಿ; ಸ್ಥಿತಿ, ಸ್ಥಿತಿಗತಿ; ನಡತೆ, ವರ್ತನೆ; ತಳ್ಳುಪಡಿ, ವಜಾ; ವಟ್ಟಿ, ಕಳೆತ

**वज़ादार**, वि. ರೂಪವಂತ, ಚೆಲುವ; ಶೀವಿಯುವ, ಷೋಕಿನವ.

**वज़ादारी**, स्त्री. ರೀತಿ; ತರಹ; ಶೀವಿ; ಷೋಕಿ; ಸೊಬಗು.

वज़ारत, स्त्री. ಮಂತ್ರಿತನ; ದಿವಾನಗಿರಿ

वजाहत, स्त्री. ಸ್ಥಾನಮಾನ; ಅಂತಸ್ತು; ಸೌಂದರ್ಯ, ಕಾಂತಿ.

वज़ीफ़ा, पु. ವಿದ್ಯಾರ್ಥಿ ವೇತನ, "ಸ್ಕಾಲರ್ಷಿಪ್"; ಮಾಸಾಶನ, ಪಿಂಚಿಣಿ; ಮಂತ್ರಪಠನ, ಜಪ.

वज़ीर, पु. ಮಂತ್ರಿ, ಅಮಾತ್ಯ; ದಿವಾನ, ವಜೀರ; ಚದುರಂಗದ ರಾಣಿ.

वज़ीरी, स्त्री. ಮಂತ್ರಿಯ ಕೆಲಸ, ಮಂತ್ರಿತನ, ದಿವಾನಗಿರಿ. पु. ಒಂದು ಜಾತಿ ಕುದುರೆ.

वजीह, वि. ಗೌರವಸ್ಥ, ಸಂಭಾವಿತ; ಸುಂದರ, ಚೆಲುವಾದ.

वज़ू, पु. ಪ್ರಕ್ಷಾಲನ, ಶೌಚ.

वजूद, पु. ಕಾರ್ಯಸಿದ್ಧಿ; ದೇಹ, ಮೈ; ಅಸ್ತಿತ್ವ, ಇರುವಿಕೆ, ಇರವು. वा-वजूद = ಇದ್ದರೂ, ಆದಾಗ್ಯೂ.

वज्द, पु. ತನ್ಮಯಸ್ಥಿತಿ, ಪರವಶತೆ; ಮೈಮರೆಯುವಿಕೆ, ಪಾರವಶ್ಯ.

वज्र, वि. ಗಟ್ಟಿಯಾದ; ಕಠಿಣವಾದ; ಕಠೋರ. पु. ವಜ್ರಾಯುಧ; ಸಿಡಿಲು; ವಜ್ರ.

वज्रपात, पु. ಸಿಡಿಲಿನ ಬಡಿತ.

वट, पु. ಆಲದ ಮರ.

वटी, स्त्री. ದಾರ; ಸರ; ಮಣಿ.

वतन, पु. ಜನ್ಮಭೂಮಿ, ತಾಯಿನಾಡು; ಸ್ವದೇಶ; ವಾಸಸ್ಥಾನ.

वतनी, वि. ದೇಶೀಯ, ಸ್ವದೇಶದ, ನಾಡಿನ.

वत्स, पु. ವತ್ಸ, ಕಂದ.

वदन, पु. ಮುಖ; ಬಾಯಿ.

वदरना, सक्रि. ಒದರು, ಬಡಬಡಿಸು.

वदीयत, स्त्री. ಅಮಾನತ್ತು, ನ್ಯಾಸ.

वध, पु. ಕೊಲ್ಲುವಿಕೆ, ವಧೆ.

वधू, स्त्री. ಸೊಸೆ; ಪತ್ನಿ.

वन, पु. ಕಾಡು, ವನ, ಅಡವಿ.

वनवासी, पु. ಕಾಡಿನಲ್ಲಿ ವಾಸಮಾಡುವವ; ತಪಸ್ವಿ.

वनस्पति, स्त्री. ಮರ, ಗಿಡ, ವನಸ್ಪತಿ.

वनिता, स्त्री. ಸ್ತ್ರೀ, ಮಹಿಳೆ; ಹೆಂಡತಿ.

वनैला, वन्य, वि. ಕಾಡಿನ; ಹಿಂಸ್ರಕ.

वफ़ा, पु. ಮಾತನ್ನು ನೆರವೇರಿಸುವಿಕೆ; ಕರ್ತವ್ಯಪಾಲನೆ; ಪ್ರಾಮಾಣಿಕತೆ, ಯಥಾರ್ಥತೆ; ಸಜ್ಜನತೆ; ಪರ್ಯಾಪ್ತಿ.

वफ़ाई, स्त्री. ಪ್ರಾಮಾಣಿಕತೆ; ಸ್ವಾಮಿನಿಷ್ಠೆ; ಯಥಾರ್ಥತೆ.

वफ़ात, स्त्री. ಮೃತ್ಯು, ಸಾವು.

वफ़ादार, वि. ಕರ್ತವ್ಯನಿಷ್ಠ; ಪ್ರಾಮಾಣಿಕ; ಸ್ವಾಮಿನಿಷ್ಠ.

वफ़ादारी, स्त्री. ಕರ್ತವ್ಯನಿಷ್ಠೆ, ಆರ್ಜವ

वबा, स्त्री. ಸಾಂಕ್ರಾಮಿಕ ರೋಗ, ಸೋಂಕುರೋಗ; ಮಾರಿ, "ಪ್ಲೇಗು".

वबाल, पु. ಭಾರ, ಹೊರೆ; ವಿಪತ್ತು, ಅನರ್ಥ; ಕಾಟ, ಪೀಡೆ; ದೇವರ ಕಾಟ

वमन, पु. ವಮನ, ವಾಂತಿ.

वयः, वयस्, स्त्री. ವಯಸ್ಸು.

वयस्क, वि. ವಯಸ್ಸಾದವ, ವಯಸ್ಕ.

वर, पु. ವರ; ವರದಾನ. वि. ಶ್ರೇಷ್ಠ.

वरक़, पु. ಎಲೆ, ಪತ್ರ; ಹಾಳೆ; ಪುಟ, ಪೇಜು, ಪಾನು; ಬಂಗಾರದ ವರಕು,

ರೇಕು.

**वरग़लाना**, सक्रि. ಮರುಳು ಮಾಡು; ಪುಸಲಾಯಿಸು; ಠಕ್ಕಿಸು.

**वरज़िश**, स्त्री. ರೂಢಿ, ವಾಡಿಕೆ; ಅಭ್ಯಾಸ; ವ್ಯಾಯಾಮ; ಕಸರತ್ತು.

**वरदान**, पु. ವರ, ವರಪ್ರಸಾದ.

**वरदी**, वि. ಗುಲಾಬಿಯ; ಗುಲಾಬಿ ಬಣ್ಣದ. स्त्री. ಸಿಫಾಯಿಗಳ ಉಡುಪು; ಒಂದೇ ಬಗೆಯ ಪೋಷಾಕು, ಜತೆ ಗಟ್ಟಿನ ವಸ್ತ್ರ, ಸಮವಸ್ತ್ರ, ದುಸ್ತು.

**वरना**, अव्य. ಇಲ್ಲವೆ, ಇಲ್ಲದಿದ್ದರೆ, ಅನ್ಯಥಾ.

**वरम**, पु. ಉಬ್ಬು, ಬಾವು, ಬೀಗು. वरम जिगर = ಪ್ಲೀಹರೋಗ.

**वरल**, पु. ಕಣಜದ ಹುಳು.

**वरे**, क्रिवि. ಈ ಕಡೆ, ಈಚೆ.

**वर्ग**, पु. ವರ್ಗ, ತರಗತಿ; ಕೋಮು.

**वर्ण**, पु. ವರ್ಣ, ಬಣ್ಣ.

**वर्णन**, पु. ಹೇಳುವಿಕೆ, ವರ್ಣನೆ.

**वर्णित**, वि. ವರ್ಣಿಸಲ್ಪಟ್ಟ, ವರ್ಣಿತ.

**वर्द**, पु. ಗುಲಾಬಿ ಹೂ, ರೋಜಾ.

**वर्म**, पु. ಕವಚ; ಬಾವು, ಬೀಗು.

**वर्ष**, पु. ವರ್ಷ, ಸಂವತ್ಸರ. वर्षों = ವರ್ಷಗಟ್ಟಲೆ, ವರ್ಷಾಂತರ.

**वर्षगांठ**, स्त्री. ಜಯಂತಿ, ವರ್ಧಂತಿ.

**वलवला**, पु. ಗದ್ದಲ, ಸಂದಣಿ; ಜೋರು, ಆವೇಶ; ಉತ್ಸಾಹ, ಹುಮ್ಮಸ್ಸು.

**वला**, क्रिवि. ಹತ್ತಿರ, ಬಳಿ.

**वलायत**, स्त्री. ಸ್ವಾಧೀನ; ಅಧಿಕಾರ; ಆಳಿಕೆ, ಶಾಸನ; ಸಂರಕ್ಷಣೆ, ಪಾಲನೆ; ದೇಶ, ನಾಡು; ಪರದೇಶ, ಸೀಮೆ; ಸ್ನೇಹ; ಭವಿಷ್ಯ ಹೇಳುವಿಕೆ.

**वली**, पु. ಒಡೆಯ, ಸ್ವಾಮಿ; ಅರಸ; ಶಾಸಕ; ಸಂರಕ್ಷಕ; ಸಾಧು, ಸಂತ; ಸ್ನೇಹಿತ; ಸಹಾಯಕ.

**वलेकिन**, क्रिवि. = लेकिन.

**वल्द**, पु. ಮಗ, ಪುತ್ರ. जवाहर वल्द मोतीलाल = ಜವಹರ್, ಮೋತೀಲಾಲರ ಪುತ್ರ.

**वल्दियत**, स्त्री. ತಂದೆಯ ಹೆಸರು; ಪ್ರವರ; ಕುಟುಂಬ; ಕುಲಗೋತ್ರ.

**वल्लाह**, अव्य. ದೇವರಾಣೆ; ಶಹಬಾಸ್!

**वश**, पु. ವಶ, ಅಧಿಕಾರ; ಹತೋಟಿ, ಅಂಕೆ

**वसअत**, स्त्री. ವಿಸ್ತಾರ; ಹರವು; ವಿಸ್ತೀರ್ಣ, ಕ್ಷೇತ್ರಫಲ; ಸಾಮರ್ಥ್ಯ, ಶಕ್ತಿ, ಅಳವು; ಅವಕಾಶ, ಇಂಬು, ಆಸ್ಪದ.

**वसत**, पु. ಮಧ್ಯ, ನಡು. वि. ನಡುವಣ, ಮಧ್ಯದ; ನಡುತರದ; ಒಳ್ಳೆಯ; ಉತ್ತಮ; ಸರಿಯಾದ; ಸಂಪನ್ನ.

**वसति**, स्त्री. ಮನೆ; ವಾಸಸ್ಥಾನ; ವಸತಿ.

**वसवास**, पु. ವಿಲೋಭನ; ಮತಿಭ್ರಮಣ; ಸಂದೇಹ, ಶಂಕೆ.

**वसवासी**, वि. ಸಂದೇಹದ; ಶಂಕಾಸ್ಪದ; ಸಂದೇಹಪಡುವ, ನಸನಸೆ.

**वसा**, पु. ವಸೆ, ನೆಣ, ಚರಬಿ.

**वसीक़ा**, पु. ಒಬ್ಬನು ತನ್ನ ವಾರಸುದಾರರಿಗೆ ಬಡ್ಡಿ ಸಲ್ಲಲೆಂದು ಸರಕಾರದಲ್ಲಿ ಠೇವಣಿಯಿಟ್ಟ ಹಣ; ಈ ಹಣದ ಮೇಲಿನ ಬಡ್ಡಿ; ಸಾಲಪತ್ರ, ಬಾಂಡು.

**वसीठ**, पु. ದೂತ, ಹರಿಕಾರ.

**वसीयत**, स्त्री. ಅಪ್ಪಣೆ, ಆಜ್ಞೆ; ವಶ, ಸುಪರ್ದು; ಸಾಯುವವನ ಆಸ್ತಿಯ ವಿಲೆವಾರಿ, ಮರಣಶಾಸನ, ಉಯಿಲು.

**वसीयतनामा**, पु. ಮೃತಿಪತ್ರ, ಮರಣ ಶಾಸನ, ಉಯಿಲು, ವೀಲು.

**वसीला**, पु. ಸಂಬಂಧ, ಆಧಾರ; ಆಶ್ರಯ, ನೆರವು; ಹೇತು; ಸಾಧನ.

**वसूल**, वि. ದೊರೆತ, ಪ್ರಾಪ್ತ; ಪಾವತಿ ಯಾದ. पु. ಪಾವತಿ, ಸಂದಾಯ; ವಸೂಲು.

**वसूलना**, सक्रि. ವಸೂಲಿ ಮಾಡು; ಶೇಖರಿಸು, ಸಂಗ್ರಹಿಸು.

**वसूलयाबी**, स्त्री. ವಸೂಲು ಮಾಡು ವಿಕೆ; ವಸೂಲಿ.

**वसूली**, स्त्री. ವಸೂಲಿ, ಪಾವತಿ; ವಸೂ ಲಾಗತಕ್ಕ ಹಣ, ವಸೂಲಾತಿ.

**वस्त**, पु. = **वसत**.

**वस्तु**, स्त्री. ವಸ್ತು, ಪದಾರ್ಥ.

**वस्फ़**, पु. ಪ್ರಶಂಸೆ, ಹೊಗಳಿಕೆ; ವಿವ ರಣೆ; ವೈಶಿಷ್ಟ್ಯ, ಗುಣ.

**वस्फ़ी**, वि. ವರ್ಣನಾತ್ಮಕ; ಗುಣಾತ್ಮಕ.

**वस्मा**, पु. ನರೆಗೂದಲನ್ನು ಕಪ್ಪಗೆ ಮಾಡುವ ಔಷಧ, ಕೇಶಕಲ್ಪ; ಲೇಪ, ತೈಲ; ಚಿನ್ನದ ವರಕು ಒತ್ತಿದ ಅಚ್ಚಿನ ಬಟ್ಟೆ.

**वस्ल**, पु. ಸೇರಿಕೆ, ಮಿಲನ; ಭೇಟಿ, ಸಂದರ್ಶನ; ಸಂಧಿ, ಸಮಾಗಮ.

**वस्ली**, वि. ಸೇರಿಸುವ, ಸಂಬಂಧಿಸುವ. पु. ರಟ್ಟಿನ ಕಾಗದ, ರಟ್ಟು; ಅಡಿವತ್ತಳೆ.

**वह**, सर्व. ಅವನು, ಅವಳು, ಅದು.

**वहदत**, स्त्री. ಐಕ್ಯ, ಏಕತ್ವ.

**वहम**, पु. ಊಹಾಪೋಹ, ಕಲ್ಪನೆ; ಭ್ರಾಂತಿಭಾವ, ಮಿಥ್ಯಾಭ್ರಮೆ; ಶಂಕೆ, ಸಂಶಯ.

**वहमी**, वि. ಸಂದೇಹಪಡುವವ, ಸಂಶ ಯಾತ್ಮ; ಭ್ರಮೆಯ, ಭ್ರಾಂತಿಯ.

**वहल**, पु. ಕೆಸರು, ಬದಿ, ಬುರುದೆ.

**वहला**, पु. ಧಾಳಿ, ಹಲ್ಲಾ, ಆಕ್ರಮಣ.

**वहश**, पु. ಕಾಡುಮೃಗ.

**वहशत**, स्त्री. ಮರುಭೂಮಿ; ನಿರ್ಜನ ಸ್ಥಾನ; ಏಕಾಂತ; ಒರಟುತನ; ಅನಾ ಗರಿಕತೆ, ಅಸಭ್ಯತೆ; ಹುಚ್ಚು; ಆತುರ, ಕಾತುರತೆ; ಭಯ, ಗಿಲಿ, ಗಾಬರಿ.

**वहशी**, वि. ಒರಟಾದ, ಜಾಂಗಲ; ಅಸ ಭ್ಯ, ಅಶಿಷ್ಟ; ಭಯಂಕರ; ಭಯಭೀತ.

**वहाँ**, क्रिवि. ಅಲ್ಲಿ.

**वहिब**, वि. ಉದಾರಿ, ಧಾರಾಳಿ.

**वहीं**, क्रिवि. ಅಲ್ಲೇ, ಅಲ್ಲಿಯೇ.

**वही**, सर्व. ಅವನೇ, ಅವಳೇ, ಅದೇ. स्त्री. ಭಗವತ್ಪ್ರೇರಣೆ; ಆಕಾಶವಾಣಿ, ದೇವವಾಣಿ.

**वहीद**, वि. ಸಾಟಿಯಿಲ್ಲದ, ಅನುಪಮ.

**वां**, क्रिवि. ಅಲ್ಲಿ.

**वा**, अव्य. ಅಥವಾ, ಇಲ್ಲವೆ, ಯಾ.

**वाइज़**, पु. ಧರ್ಮಗುರು; ಉಪದೇಶಕ

**वाक़ई**, वि. ಯಥಾರ್ಥ, ವಾಸ್ತವ, ನಿಜ; ಸರಿ. अव्य. ಯಥಾರ್ಥವಾಗಿ, ನಿಜವಾಗಿ.

**वाक़या**, **वाक़िया**, पु. ಒದಗಿದ ಪ್ರ ಸಂಗ, ಸಂಭವ; ಘಟನೆ, ಸಂಗತಿ.

वाक़ा, वि. ಸಂಭವಿಸುವ, ಆಗುವ; ಇರುವ, ಸ್ಥಿತ.

वाक़िफ़, वि. ಪರಿಚಿತ, ತಿಳಿದವ; ಅಭಿಜ್ಞ.

वाक़िफ़कार, वि. ಅರಿತವ, ಅನುಭವಸ್ಥ.

वाक़िफ़कारी, स्त्री. ತಿಳಿವಳಿಕೆ; ಅನುಭವ

वाक़िफ़ियत, स्त्री. ತಿಳಿವಳಿಕೆ, ಪರಿಚಯ; ಅನುಭವ.

वाक़िफ़ी, स्त्री. ಮೊಗವರಿಕೆ, ಪರಿಚಯ

वाक्, पु. ಮಾತು; ನುಡಿ; ವಾಕ್ಯ.

वाक्-चातुरी, स्त्री. ವಾಕ್ಚಾತುರ್ಯ.

वाचक, वि. ಹೇಳುವ, ಸೂಚಿಸುವ. पु. ಹೇಳುವವ; ಓದುವವ.

वाचा, स्त्री. ಮಾತು; ಶಪಥ.

वाचाल, वि. ಮಾತುಗಾರ, ವಾಚಾಲ.

वाज़, पु. ಧರ್ಮೋಪದೇಶ; ಶಿಕ್ಷಣ; ಉಪನ್ಯಾಸ.

वाजिब, वि. ಉಚಿತ, ತಕ್ಕ, ಯೋಗ್ಯ; ಆವಶ್ಯಕ. पु. ಸಂಬಳ, ವೇತನ.

वाजिबी, वि. ಅಗತ್ಯವಾದ, ಆವಶ್ಯಕ; ತಕ್ಕ; ಯೋಗ್ಯ. स्त्री. ಆವಶ್ಯಕತೆ, ಅಗತ್ಯ; ಸಂಬಳ, ವೇತನ.

वाज़िह, वि. ಪ್ರಕಟವಾದ; ವಿಶದ; ವಿದಿತ

वाटिका, स्त्री. ತೋಟ, ಉದ್ಯಾನವನ.

वाटिया, स्त्री. ಕೊಯಿಲು ಕತ್ತಿ, ಕುಡುಗೋಲು.

वाटी, स्त्री. ಮನೆ; ಉದ್ಯಾನ.

वाद, पु. ವಾದ, ಚರ್ಚೆ.

वादा, पु. ವಚನ, ಮಾತು; ಪ್ರತಿಜ್ಞೆ, ವಾಗ್ದಾನ; ಒಪ್ಪಂದ, ಕರಾರು; ಗಡು, ವಾಯಿದೆ, ಅವಧಿ; ಸಾರಾಯಿ, ಸೇಂದಿ.

वादी, पु. ಫಿರ್ಯಾದಿ, ವಾದಿ. स्त्री. ಕಣಿವೆ, ಘಟ್ಟ; ತಪ್ಪಲು, ಕಿಬ್ಬಿ; ಮರುಭೂಮಿ; ನದಿಯ ಪಾತ್ರ.

वानर, पु. ಕೋತಿ, ಕಪಿ.

वानरी, स्त्री. ಹೆಣ್ಣುಕಪಿ.

वापस, क्रिवि. ಹಿಂದೆ, ತರುವಾಯ, ಅನಂತರ; ತಿರುಗಿ, ಪುನಃ; ವಾಪಸು, ಪರತ. वापस आना = ತಿರುಗಿ ಬರು; ವಾಪಸು ಬರು, ಪರತ ಬರು.

वापसी, वि. ತಿರುಗಿ ಬರುವ, ವಾಪಸು ಬರುವ, ಪರತಆದ; ಹಿಂತಿರುಗಿಬರುವ. स्त्री. ಹಿಂತಿರುಗುವಿಕೆ, ವಾಪಸು, ಪರತ.

वाम, पु. ಸಾಲ, ಕಡ; ಸಾಲ ಕೊಡುವಿಕೆ; ಸಾಲ ತೆಗೆಯುವಿಕೆ; ಹಣದ ಲೇವಾದೇವಿ; ಬಣ್ಣ, ರಂಗು.

वार, पु. ಹೊಡೆತ, ಏಟು; ಧಕ್ಕೆ; ಕಡಿತ; ಘಾಯ; ಆಕ್ರಮಣ, ಧಾಳಿ. स्त्री. ತಡ; ಹೊತ್ತು; ಪುರಸತ್ತು. क्रिवि. ನದಿಯ ಈ ದಡದಲ್ಲಿ; ಇತ್ತ.

वारदात, स्त्री. ದುರ್ಘಟನೆ, ಅವಘಡ, ಅಪಘಾತ; ಗಲಭೆ, ಕಲಹ, ದೊಂಬಿ.

वारना, सक्रि. ಸುತ್ತು, ಗೇರಾಯಿಸು, ಬಳಸು; ಅರ್ಪಣೆ ಮಾಡು, ಅರ್ಪಿಸು. पु. ಅರ್ಪಣೆ, ಬಲಿ; ಆತ್ಮಾರ್ಪಣೆ.

वार-फेर, वारा-फेरा, पु. वारी-फेरी, स्त्री. ಬಲಿ, ಆತ್ಮಾರ್ಪಣೆ; ಇಳಿ ತೆಗೆಯುವಿಕೆ, ನಿವಾಳಿ.

वारा, पु. ಉಳಿತಾಯ, ಮಿತವ್ಯಯ; ಅಗ್ಗ; ಲಾಭ, ಆದಾಯ; ಅನುಗ್ರಹ; ಭಾಗ್ಯ. वि. ಮಿತವ್ಯಯದ; ಅಗ್ಗ

ವಾದ. वारा न्यारा = ಇತ್ಯರ್ಥ, ನಿಷ್ಕರ್ಷೆ, ಫೈಸಲು.

**वारिद**, पु. ಉಪಸ್ಥಿತಿ, ಹಾಜರಿ; ಬರುವಿಕೆ, ಆಗಮನ, ಬರವು. वारिद सारिद = ಬರುವವರು ಹೋಗುವವರು; ಅತಿಥಿ; ಅಭ್ಯಾಗತ; ಯಾತ್ರಿಕ.

**वारिस**, पु. ಉತ್ತರಾಧಿಕಾರಿ, ವಾರಸುದಾರ; ಯಜಮಾನ, ಒಡೆಯ; ಸಂರಕ್ಷಕ

**वारिसी**, स्त्री. ವಾರಸುದಾರನಿಗೆ ಬಂದ ಸೊತ್ತು; ಕಾಣಾಚಿ.

**वाला**, प्रत्य. ಉಳ್ಳ, ಇರುವ, -ಕಾರ, -ಗಾರ. ಉದಾ:- पैसेवाला, पासवाला, जानेवाला, मैसूरवाला.

**वालिद**, पु. ತಂದೆ, ಪಿತಾ. वालिदैन = ಇಬ್ಬರು ಪಿತೃಗಳು, ತಂದೆತಾಯಿಗಳು

**वालिदा**, स्त्री. ತಾಯಿ, ಮಾತೆ.

**वावैला**, पु. ಅಳು; ಕೂಗಾಟ, ಗದ್ದಲ.

**वासिक़**, वि. ದೃಢವಾದ, ಗಟ್ಟಿಯಾದ; ಆಗತ್ಯವಾದ, ಕಡ್ಡಾಯವಾದ; ನಿಶ್ಚಯವಾದ, ಖಾತ್ರಿಯಾದ.

**वासिल**, वि. ಕೂಡಿದ, ಸೇರಿದ; ದೊರಕುವ; ವಸೂಲಾದ; ಪಾವತಿಯಾದ. वासिल बाक़ी = ವಸೂಲು ಬಾಕಿ.

**वास्ता**, पु. ಮಧ್ಯಸ್ಥಗಾರ; ದಲ್ಲಾಳಿ, ತರಗುಗಾರ; ಸಾಧನ, ಮುಖಾಂತರ; ಬಾಂಧವ್ಯ, ನೆಂಟತನ; ಸಲುವು, ಹೇತು; ಸಂಬಂಧ, ಪರಸ್ಪರ ವ್ಯವಹಾರ; ಸಂಪರ್ಕ; ಗೊಡವೆ.

**वास्ती**, स्त्री. ಲಾಳದ ಕಡ್ಡಿ; ಲೆಕ್ಕಣಿಕೆ.

**वास्ते**, क्रिवि. ಸಲುವಾಗಿ, ದೆಸೆಯಿಂದ, ಬಗ್ಗೆ.

**वाह**, अव्य. ಭಲಾ! ಶಹಬಾಸ್! ವಹವಾ! ಪೂತುರೆ! ಭಾಪುರೆ!; ಛೀ! ಥತ್!; ಹಾ, ಹಾಯ್! वाह वाह करना = ಹೊಗಳು, ಕೊಂಡಾಡು.

**वाहक**, पु. ಹೊರುವವ; ಒಯ್ಯುವವ; ಹೊರೆಯಾಳು.

**वाहन**, पु. ಸವಾರಿಯ ಬಂಡಿ; ವಾಹನ, ಯಾನ.

**वाहवाही**, स्त्री. ಹೊಗಳಿಕೆ, ಕೊಂಡಾಟ, ಶಾಬಾಸಗಿರಿ.

**वाहिद**, वि. ಏಕ, ಒಂಟಿ. पु. ಈಶ್ವರ; ಒಂದು; ಏಕವಚನ (ವ್ಯಾಕರಣ).

**वाहियात**, वि. ವ್ಯರ್ಥವಾದ, ನಿರರ್ಥಕ; ಕೆಟ್ಟ, ತುಚ್ಛ.

**वाही**, वि. ಸೋಮಾರಿ; ಮುರಿದ; ಶಿಥಿಲವಾದ; ನಿರ್ಬಲ; ಕೆಲಸಕ್ಕೆ ಬಾರದ, ನಿಷ್ಪ್ರಯೋಜಕ; ದಡ್ಡ; ಲುಚ್ಚ, ಪುಂಡ; ಹುಚ್ಚ.

**वाही-तबाही**, वि. ಅಶಿಷ್ಟ, ಒರಟ; ದುಷ್ಟ; ಪುಂಡ, ಪೋಲಿ; ಗೊತ್ತುಗುರಿಯಿಲ್ಲದ, ಅಸಂಬದ್ಧ; ಹಾಳಾದ. स्त्री. ಅಸಂಬದ್ಧಮಾತು, ಬೈಗಳು; ಬಂಡು ಮಾತು.

**विकट**, वि. ದೊಡ್ಡ, ಭಾರಿ; ಭಯಂಕರ.

**विकराल**, वि. ಭಯಂಕರ, ಭೀಕರ, ಕರಾಳ.

**विकल**, वि. ಕುಂದುಳ್ಳ; ಗಡಿಬಿಡಿಯಾದ; ಅಶಾಂತ; ಖಿನ್ನ, ವ್ಯಥಿತ.

**विकलाना**, अक्रि. ವ್ಯಾಕುಲಪಡು.

विकसना, अक्रि. ವಿಕಸಿಸು, ಅರಳು.
विकसित, वि. ಅರಳಿದ, ವಿಕಸಿಸಿದ.
विक्रय, पु. ಬಿಕರಿ, ಮಾರಾಟ.
विक्रयी, विक्रेता, पु. ಮಾರುವವ, ಮಾರಾಟಗಾರ. पुस्तक विक्रेता = ಪುಸ್ತಕ ವ್ಯಾಪಾರಿ.
विख्यात, वि. ಖ್ಯಾತಿಹೊಂದಿದ.
विख्याति, स्त्री. ಖ್ಯಾತಿ, ಪ್ರಸಿದ್ಧಿ.
विगलित, वि. ಬಿದ್ದುಹೋದ; ಚ್ಯುತ; ಕೆಟ್ಟುಹೋದ.
विघ्न, पु. ವಿಘ್ನ, ಅಡಚಣೆ.
विचरना, अक्रि. ಓಡಾಡು, ವಿಹರಿಸು.
विचलना, अक्रि. ಪದಚ್ಯುತನಾಗು; ತಪ್ಪು; ಗಾಬರಿಗೊಳ್ಳು.
विचलाना, सक्रि. ಗಾಬರಿಪಡಿಸು.
विचार, पु. ವಿಚಾರ; ವಿಚಾರಣೆ; ಯೋಚನೆ.
विचारना, सक्रि. ವಿಚಾರ ಮಾಡು; ವಿಚಾರಣೆ ಮಾಡು; ವಿಚಾರಿಸು.
विचारशील, वि. ವಿಚಾರಪರ.
विछोह, स्त्री. ವಿಯೋಗ, ಅಗಲಿಕೆ.
विजय, पु. (स्त्री.) ವಿಜಯ, ಜಯ, ಗೆಲುವು.
विजयी, वि. ಜಯಶಾಲಿ.
विजातीय, वि. ಬೇರೆ ಜಾತಿಯ.
विज़ारत, स्त्री. = वज़ारत.
विज्ञप्ति, स्त्री. ವಿಜ್ಞಾಪನೆ, ಅರಿಕೆ; ಪ್ರಕಟಣೆ, ನಿರೂಪ.
विज्ञान, पु. ವಿಜ್ಞಾನ, ಶಾಸ್ತ್ರ
विज्ञापन, पु. ಪ್ರಕಟಣೆ; ಜಾಹಿರಾತು.
विडंबना, स्त्री. ಅಣಗಿಸುವಿಕೆ; ಗೇಲಿ; ಪರಿಹಾಸ.
विडरना, अक्रि. ಚದರು, ಓಡು.
विडराना, सक्रि. ಚದರಿಸು; ಎರಚು, ಈಡಾಡು; ಹಾಳುಮಾಡು; ಓಡಿಸು.
वितान, पु. ಮೇಲ್ಕಟ್ಟು, ಉಲ್ಲಡೆ.
विथकना, अक्रि. ಆಯಾಸಗೊಳ್ಳು.
विदरना, अक्रि. ಒಡೆ, ಬಿರಿ; ಸೀಳು.
विदा, स्त्री. ಹೊರಡುವಿಕೆ, ಪ್ರಸ್ಥಾನ; ಬೀಳ್ಕೊಳ್ಳುವಿಕೆ, ಹೊರಡಲು ಅನುಮತಿ. विदा होना = ಬೀಳ್ಕೊಳ್ಳು; ಹೊರಡು, ಅಗಲು.
विदाई, स्त्री. ಅಗಲುವಿಕೆ; ಹೊರಡಲು ಅಪ್ಪಣೆ, ಅನುಮತಿ; ಬೀಳ್ಕೊಳ್ಳುವಿಕೆ, ಸೆಲವು; ಬೀಳ್ಕೊಳ್ಳುವಾಗ ಕೊಡುವ ಹಣ. वि. ಬೀಳ್ಕೊಳ್ಳುವ.
विदारना, सक्रि. ಒಡೆ, ಸೀಳು, ಸಿಗಿ.
विदित, वि. ತಿಳಿದ, ವಿದಿತ.
विदूषना, सक्रि. ದೂಷಿಸು, ದೂರು.
विदेश, पु. ಬೇರೆ ದೇಶ, ವಿದೇಶ, ಪರದೇಶ.
विदेशी, वि. ಪರದೇಶದ, ವಿದೇಶಿ.
विद्यमान, वि. ಇರುವ; ಉಪಸ್ಥಿತ, ಹಾಜರಿರುವ. विद्यमान होना = ಇರು; ಹಾಜರಿರು.
विद्यमानता, स्त्री. ಇರುವಿಕೆ, ಹಾಜರಿ, ಉಪಸ್ಥಿತಿ.
विद्यार्थिनी, स्त्री. विद्यार्थी, पु. ವಿದ್ಯೆ ಕಲಿಯುವವರು; ಶಿಷ್ಯರು.
विद्रोह, पु. ದ್ರೋಹ, ದಂಗೆ, ಬಂ

विलायत, पु. ಪರದೇಶ, ದೇಶಾಂತರ; ಸೀಮೆ, ವಿಲಾಯತು; ಈರಾನ್ ದೇಶ, ಪರ್ಷಿಯಾದೇಶ; ದೇಶಾವರ.
विलायती, वि. ವಿದೇಶದ, ಸೀಮೆಯ. स्त्री. ಒಂದು ಬಗೆ ಸಣ್ಣ ಕತ್ತಿ.
विलास, पु. ಆನಂದ, ಮನೋರಂಜನೆ; ಹಾವಭಾವ, ಪ್ರೇಮವಿಲಾಸ.
विलासी, वि. ಸುಖಾಭಿಲಾಷಿ; ರಸಿಕ; ಕಾಮುಕ.
विलोकना, सक्रि. ನೋಡು.
विवरण, पु. ವಿವರ; ವೃತ್ತಾಂತ; ವರ್ಣನೆ.
विवाह, पु. ವಿವಾಹ, ಮದುವೆ.
विवाहना, सक्रि. = ब्याहना.
विवाहित, वि. ವಿವಾಹವಾದ, ಮದುವೆಯಾದ.
विशारद, पु. ಪಂಡಿತ, ಕೋವಿದ.
विशाल, वि. ವಿಸ್ತೃತವಾದ, ವಿಶಾಲ.
विशिष्ट, वि. ಸಮಗ್ರ, ಇಡೀ.
विशेष, पु. ವಿಶೇಷ; ಹೆಚ್ಚು.
विशेषता, स्त्री. ವಿಶೇಷ, ವೈಶಿಷ್ಟ್ಯ.
विश्रांति, स्त्री. ವಿಶ್ರಾಂತಿ, ವಿರಾಮ.
विश्वसनीय, विश्वस्त, वि. ವಿಶ್ವಾಸಾರ್ಹವಾದ, ನಂಬಿಕೆಯುಳ್ಳ.
विश्वास, पु. ನಂಬಿಕೆ, ನೆಚ್ಚಿಕೆ.
विष, पु. ವಿಷ, ನಂಜು.
विषधर, पु. ಹಾವು.
विषय, पु. ವಿಷಯ, ಸಂಗತಿ.
विषयक, वि. ವಿಷಯವಾದ, ಸಂಬಂಧವಾದ.
विषहा, विषैला, वि. ವಿಷವುಳ್ಳ.
विसाल, पु. ಭೇಟಿ; ಕೂಡಿಕೆ, ಸೇರಿಕೆ; ನಾಯಕ ನಾಯಕಿಯರ ಮಿಲನ, ಸಮಾಗಮ; ಮೃತ್ಯು, ಸಾವು.
विस्तार, पु. ವಿಸ್ತಾರ, ಹರವು.
विस्तारना, सक्रि. ಹರಡಿಸು, ವಿಸ್ತರಿಸು.
विस्मय, पु. ಆಶ್ಚರ್ಯ, ವಿಸ್ಮಯ.
विहरना, अक्रि. ತಿರುಗಾಡು, ವಿಹರಿಸು.
विहार, पु. ತಿರುಗಾಡುವಿಕೆ, ವಿಹಾರ; ಬೌದ್ಧರ ಮಠ, ಸಂಘಾರಾಮ.
वीर, पु. ವೀರ, ಗಂಡುಗಲಿ. स्त्री. ಸ್ತ್ರೀ, ಮಹಿಳೆ.
वीरता, स्त्री. ವೀರತನ, ಶೌರ್ಯ.
वीरान, वि. ನಿರ್ಜನ(ಸ್ಥಾನ), ಬೆಂಗಾಡಾದ; ಪಾಳು.
वीराना, पु. ಪಾಳು; ನಿರ್ಜನ ಸ್ಥಾನ, ನಿರ್ಮಾನುಷ ಸ್ಥಳ; ಏಕಾಂತ.
वीरानी, स्त्री. ನಾಶ, ಹಾಳು.
वे, सर्व. ಅವರು, ಅವು.
वेग, पु. ವೇಗ, ತೀವ್ರತೆ.
वेतन, पु. ಸಂಬಳ, ತಲಬು, ವೇತನ.
वेतन-भोगी, पु. ಸಂಬಳ ಪಡೆಯುವವ, ಸಂಬಳಗಾರ.
वेदना, स्त्री. ಪೀಡೆ, ವೇದನೆ.
वेदी, स्त्री. ಅಟ್ಟಲು, ವೇದಿಕೆ, ಹಸೆ.
वेधना, सक्रि. ಚುಚ್ಚು, ಕೊರೆ.
वेधशाला, स्त्री. ನಕ್ಷತ್ರಗಳನ್ನು ನೋಡುವ ಯಂತ್ರಶಾಲೆ, ನಕ್ಷತ್ರಶಾಲೆ.
वेला, स्त्री. ಸಮಯ, ಹೊತ್ತು, ವೇಳೆ.
वेश, वेष, पु. ವೇಷ, ಕೋಲ,

ಸೋಗು; ಅಲಂಕಾರ; ರೂಪ.

**वैंछना**, सक्रि. ಸುಲಿ, ಎಡೆ, ಉರಿಚು.

**वैद्य**, पु. ವೈದ್ಯ, ಚಿಕಿತ್ಸಕ.

**वैद्यक**, पु. ವೈದ್ಯಶಾಸ್ತ್ರ.

**वैर**, पु. ವೈರ, ವಿರೋಧ, ಹಗೆತನ.

**वैसा**, वि. ಅಂತಹ, ಆ ಬಗೆಯು. क्रिवि. ಹಾಗೆ, ತಥಾ.

**वैसे**, क्रिवि. ಹಾಗೆ, ಸುಮ್ಮನೆ; ಪುಕ್ಕಟೆ.

**वोल्लाह**, पु. ಒಂದು ಜಾತಿ ಕುದುರೆ.

**व्यक्ति**, पु. ಒಬ್ಬ ಮನುಷ್ಯ, ಇಸಂ, ವ್ಯಕ್ತಿ.

**व्यय**, पु. ಖರ್ಚು, ವೆಚ್ಚ.

**व्यवस्था**, स्त्री. ವ್ಯವಸ್ಥೆ, ಏರ್ಪಾಟು.

**व्याख्या**, स्त्री. ಅರ್ಥವಿವರಣೆ, ವ್ಯಾಖ್ಯೆ.

**व्याख्यान**, पु. ಭಾಷಣ, ಉಪನ್ಯಾಸ.

**व्याज**, पु. ಬಡ್ಡಿ; ವ್ಯಾಜ, ನೆಪ.

**व्यापना**, सक्रि. ವ್ಯಾಪಿಸು, ಹರವು.

**व्यापार**, पु. ಕೆಲಸ, ವ್ಯಾಪಾರ.

**व्यास**, पु. ಪುರಾಣ ಹೇಳುವವ; ಪುರಾಣೀಕ, ಭಾಗವತರು, ರಾಮಾಯಣ ಶಾಸ್ತ್ರಿ.

# श

**शंकना**, अक्रि. ಶಂಕಿಸು; ಹೆದರು.

**शंक**, पु. **शंका**, स्त्री. ಶಂಕೆ; ಭಯ; ಸಂಶಯ.

**शंख**, पु. ಶಂಖ, ಕಂಬು.

**शंग**, वि. ಚೆಲುವಿನ. पु. ಕಳ್ಳ.

**शंजरफ़**, पु. ಇಂಗಲೀಕ, ಸಿಂದೂರ.

**शंठ**, पु. ನಪುಂಸಕ; ದಡ್ಡ, ಶುಂಠ.

**शंड**, पु. ಗೂಳಿ, ಬಸವ; ನಪುಂಸಕ; ನಿರ್ವೀರ್ಯ; ವಿದೂಷಕ, ಹಾಸ್ಯಗಾರ; ಕುಚ್ಚಿಕಾಡು.

**शंबा**, पु. ಶನಿವಾರ.

**शऊर**, पु. ಜಾಣತನ; ಸಾಮರ್ಥ್ಯ; ದಕ್ಷತೆ; ಯೋಗ್ಯತೆ; ತಿಳಿವಳಿಕೆ; ಒಳ್ಳೆಯ ನಡತೆ, ಶೀಲ.

**शऊरदार**, वि. ನಿಪುಣ, ಕುಶಲ; ಸುಶೀಲ

**शक**, पु. ಶಕ, ಶಕಾಬ್ದ; ಸಂದೇಹ, ಸಂಶಯ.

**शकट**, पु. ಬಂಡಿ, ಚಕ್ಕಡಿ.

**शकर**, स्त्री. ಸಕ್ಕರೆ; ಸವಿಮಾತು.

**शकरकंद**, पु. ಗೆಣಸು.

**शकरख़ोरा**, पु. ಹೆಚ್ಚಾಗಿ ಸಕ್ಕರೆಯನ್ನು ತಿನ್ನುವವ; ಒಂದು ಬಗೆ ಪಕ್ಷಿ.

**शकरपारा**. पु. ಸಕ್ಕರೆನಿಂಬೆ; ಕತ್ತರಿ ಹೋಲಿಗೆ; "ಮೈಸೂರುಪಾಕು".

**शकर-रेज़**, वि. ಸವಿಮಾತಿನವ, ಮಧುರಭಾಷಿ.

**शकरिस्तान**, पु. ಸಕ್ಕರೆ ಕಾರ್ಖಾನೆ.

**शकल**, स्त्री. ಹೋಲಿಕೆ; ಪ್ರತಿಕಾಯ, ಪ್ರತಿಮೆ; ಮುಖಭಾವ, ಮೋರೆ; ಮೈಕಟ್ಟು, ರೂಪ; ಆಕೃತಿ, ಸ್ವರೂಪ, ವೇಷ, ಸೋಗು; ವಿಧ, ತೆರ. शकल बनाना = ರೂಪುಗೊಳಿಸು; ವೇಷ ಹಾಕಿಕೊಳ್ಳು, ನಾಟಕ ಪಾತ್ರವನ್ನು ವಹಿಸು; ಅಣಕಿಸು.

**शकवा**, पु. ದೂರು; ಮೊರೆ, ಫಿರ್ಯಾದು; ಮೂದಲೆ.

शकील, वि. ರೂಪವಂತ, ಚೆಲುವ.
शकुन, पु. ಶಕುನ, ನಿಮಿತ್ತ; ಒಂದು ಪಕ್ಷಿ.
शकुनी, पु. ಶಕುನ ಹೇಳುವವ. स्त्री. ಹೆಣ್ಣು ಗುಬ್ಬಚ್ಚಿ, ಚಟಿಕೆ.
शकर, स्त्री. ಸಕ್ಕರೆ.
शक्की, वि. ಸಂಶಯುಪಡುವವ, ಶಂಕಿ; ಸಂಶಯಾತ್ಮ, ಸರ್ವಸಂದೇಹಿ; ನಸ ನಸೆ ಮನುಷ್ಯ.
शक्त, वि. ಶಕ್ತಿಯುಳ್ಳವ; ಸಮರ್ಥ, ಶಕ್ತ.
शक्ति, स्त्री. ಶಕ್ತಿ, ಬಲ; ಪ್ರಭಾವ.
शख़्स, पु. ಮನುಷ್ಯ; ಒಬ್ಬ; ವ್ಯಕ್ತಿ.
शख़्सियत, स्त्री. ವ್ಯಕ್ತಿತ್ವ; ವಿಶೇಷ ಗುಣ, ವೈಶಿಷ್ಟ್ಯ; ಸ್ಥಾನಮಾನ, ಅಂತಸ್ತು.
शख़्सी, वि. ವ್ಯಕ್ತಿಗತ, ವೈಯುಕ್ತಿಕ.
शग़ल, पु. ಕೆಲಸ, ಕಾರ್ಯ; ಉದ್ಯಮ, ಉದ್ಯೋಗ; ವಿನೋದ, ತಮಾಷೆ.
शगाल, पु. ನರಿ, ಗುಳ್ಳೆನರಿ.
शगुन, शगून, पु. ಶಕುನ, ನಿಮಿತ್ತ, ಕಣಿ; ಕಾಣಿಕೆ; ವಿವಾಹ ನಿಶ್ಚಿತಾರ್ಥ ದಲ್ಲಿ ತಿಲಕ ಹಚ್ಚುವ ಒಂದು ಶಾಸ್ತ್ರ.
शगुनिया, पु. ನಿಮಿತ್ತಜ್ಞ, ಕಣಿಗಾರ.
शगुफ़्तगी, स्त्री. ಅರಳುವಿಕೆ, ಪ್ರಫು ಲ್ಲತೆ; ಹರ್ಷ; ಆಶ್ಚರ್ಯ.
शगुफ़्ता, वि. ಅರಳಿದ, ವಿಕಸಿಸಿದ, ಪ್ರಫುಲ್ಲ; ಹರ್ಷಚಿತ್ತ, ಆನಂದಿತ.
शगूफ़ा, पु. ಮೊಗ್ಗು, ಮುಗುಳು; ಪುಷ್ಪ, ಹೂ; ಆಶ್ಚರ್ಯಕರವಾದ ಹೊಸ ಘಟನೆ. शगूफ़ा खिलाना = ಆಶ್ಚರ್ಯಜನಕವಾದ ಹೊಸ ಘಟನೆ ಯನ್ನುಂಟುಮಾಡು.
शचान, पु. ಗಿಡಗ, ಡೇಗೆ.
शजर, पु. ವೃಕ್ಷ; ಮರ; ಗಿಡ. शजर-नामा = ವಂಶವೃಕ್ಷ.
शजरा, पु. ವೃಕ್ಷ; ವಂಶವೃಕ್ಷ; ಜಮೀ ನಿನ ನಕ್ಷೆ, ನಕಾಶ, ಭೂಪಟ.
शठ, पु. ದುರುಳ; ಪುಂಡ; ತುಂಟ; ದಡ್ಡ; ಮೋಸಗಾರ.
शठता, स्त्री. ದಡ್ಡತನ; ದುರುಳುತನ, ಪುಂಡತನ.
शत, वि. ನೂರು, ಶತ.
शतरंज, स्त्री. ಚದುರಂಗದಾಟ, ಚತು ರಂಗ.
शतरंगबाज़, वि. ಚದುರಂಗವಾಡುವವ
शतरंजी, स्त्री. ವಿವಿಧ ಬಣ್ಣದ ರತ್ನ ಗಂಬಳಿ; ಚದುರಂಗದ ಹಾಸು, ಅಷ್ಟ ಕಾಂಗ. पु. ಚದುರಂಗವಾಡುವವ.
शताब्दि, शती, स्त्री. ೧೦೦ ವರ್ಷ, ಶತಮಾನ.
शत्रु, पु. ಶತ್ರು, ವಿರೋಧಿ, ವೈರಿ.
शत्रुता, स्त्री. ವಿರೋಧ, ಹಗೆತನ, ವೈರ.
शदीद, वि. ಕಷ್ಟತರ, ಕಠಿಣ; ಕಡು.
शद्द, पु. ದೃಢಪಡಿಸುವಿಕೆ, ಗಟ್ಟಿಮಾಡು ವಿಕೆ; ಉದಾತ್ತಸ್ವರ. शद्द-ओ-मद्द = ವೈಖರಿ ವಿಜೃಂಭಣೆ.
शनाख़्त, स्त्री. ಗುರುತು, ಗುರುತಿ ಸೋಣ; ಪರಿಚಯ; ಜ್ಞಾನ, ಅರಿವು.
शनिवार, शनीचर, पु. ಶನಿವಾರ.
शनी, पु. ಶನಿಗ್ರಹ; ಶನಿವಾರ. स्त्री.

ದುಷ್ಟತನ; ದುರಾಚಾರ; ವ್ಯಭಿಚಾರ; ಪುರುಷಮೈಥುನ. वि. ಕೆಟ್ಟ; ದುಷ್ಟ.
शनीद, स्त्री. ಲಾಲಿಸುವಿಕೆ, ಕೇಳುವಿಕೆ.
शनीदा, वि. ಲಾಲಿಸಿದ, ಕೇಳಿದ, ಶ್ರುತ. पु. ಶ್ರುತವಾದುದು, ಕೇಳಿದ್ದು; ಶ್ರುತಿ.
शपथ, पु. ಶಪಥ, ಆಣೆ.
शप्पर, पु. ಬಾವಲಿ, ಗಬ್ಬಿಲ.
शप्पा, पु. ಲಕ್ಷ್ಯ, ವೇಧ್ಯ, ಗುರಿ; ಗುರಿಹಲಗೆ.
शफ़क़, स्त्री. ಸಂಜೆಗೆಂಪು, ಕೆಂಬಾರ; ಅರುಣೋದಯ.
शफ़क़त, स्त्री. ಕೃಪೆ; ದಯೆ; ಪ್ರೀತಿ.
शफ़ताल्न, पु. ಪಿಚ್ಚೀಸು ಹಣ್ಣು, ಅರು.
शफ़ा, पु. ಆರೋಗ್ಯ, ದೇಹಸೌಖ್ಯ, ಸ್ವಾಸ್ಥ್ಯ; ಆರೋಗ್ಯ ಚಿಕಿತ್ಸೆ.
शफ़ाअत, स्त्री. ಶಿಫಾರಸು.
शफ़ाख़ाना, पु. ಆಸ್ಪತ್ರೆ, ಚಿಕಿತ್ಸಾಲಯ
शफ़ीक़, वि. ದಯಾಳು, ಕೃಪಾಳು; ಅಭಿಮಾನವುಳ್ಳವ, ಪ್ರಿಯ; ಮಿತ್ರ.
शफ़्फ़ाफ़, वि. ಸ್ವಚ್ಛವಾದ, ತಿಳಿಯಾದ, ಪಾರದರ್ಶಕ.
शब, स्त्री. ರಾತ್ರಿ, ತಿರುಳು. शबोरोज़ = ಹಗಲಿರುಳು. शबे माह = ಬೆಳದಿಂಗಳು; ಬೆಳದಿಂಗಳ ರಾತ್ರಿ.
शबका, पु. ಬಲೆ, ಕಲ್ಲಿ; ಜಾಳಿಗೆ.
शबकोर, पु. ರಾತ್ರಿ ಹೊತ್ತು ಸರಿಯಾಗಿ ಕಣ್ಣು ಕಾಣದಿರುವವ, ಇರುಳುಗಣ್ಣ.
शबकोरी, स्त्री. ರಾತ್ರಿಯಲ್ಲಿ ಕಣ್ಣು ಕಾಣದಿರುವಿಕೆ, ಇರುಳುಗಣ್ಣು.
शब-ख़ूं, पु. ರಾತ್ರಿಯ ಧಾಳಿ.
शबदेग, स्त्री. ರಾತ್ರಿಯೆಲ್ಲ ಬೇಯಿಸಿದ ಮಾಂಸ ಮತ್ತು ಸಿಹಿ ಮೂಲಂಗಿಯ ಒಂದು ವ್ಯಂಜನ.
शबदेज़, पु. ಕಸ್ತೂರಿಬಣ್ಣದ ಕುದುರೆ.
शबनम, पु. ಮಂಜು, ಇಬ್ಬನಿ; ಒಂದು ಬಗೆ ನಯವಾದ ಬಟ್ಟೆ.
शबनमी, वि. ಮಂಜಿನ, ಇಬ್ಬನಿಯ. स्त्री. ರಾತ್ರಿಯ ಇಬ್ಬನಿ ತಗಲದಂತೆ ತಡೆಯುವ ಒಂದು ಬಗೆ ಮೇಲ್ಕಟ್ಟು; ಸೊಳ್ಳೆಪರದೆ, ಸೊಳ್ಳೆತೆರೆ.
शब-बरात, स्त्री. ಮುಸಲ್ಮಾನರ ಒಂದು ಹಬ್ಬ.
शब-बाश, पु. ರಾತ್ರಿ ತಂಗುವವ.
शब-बाशी, स्त्री. ರಾತ್ರಿ ತಂಗುವಿಕೆ.
शब-बेदार, वि. ರಾತ್ರಿಯೆಲ್ಲ ಜಾಗರಣೆ ಮಾಡುವವ.
शब-बेदारी, स्त्री. ರಾತ್ರಿಯೆಲ್ಲ ಜಾಗರಣೆ
शबह, स्त्री. ಪ್ರತಿಮೆ; ಉಪಮೆ.
शबान, पु. ಕುರುಬ; ದನಕಾಯುವವ.
शबाना, वि. ರಾತ್ರಿಯ; ರಾತ್ರಿ. शबाना रोज़ = ಹಗಲೂ ರಾತ್ರಿಯೂ
शबाब, पु. ಯೌವನ, ತಾರುಣ್ಯ; ಲಾವಣ್ಯ, ಚೆಲುವು.
शबाहत, स्त्री. ಆಕೃತಿ, ರೂಪ; ಸಾಮ್ಯ.
शबिस्तां, पु. ರಾತ್ರಿ ಇರುವ ಸ್ಥಳ; ಮಲಗುವ ಕೋಣೆ, ಶಯನಗೃಹ.
शबीह, स्त्री. ಚಿತ್ರ; ಪ್ರತಿಬಿಂಬ.
शब्द, पु. ಶಬ್ದ, ಮಾತು.
शब्ब, पु. ಪಟಿಕ, ಪಟಿಕಾರ.

शब्बो, स्त्री. ರಜನೀಗಂಧ, ಸುಗಂಧರಾಜ.
शम, पु. ಶಾಂತಿ; ಮೋಕ್ಷ.
शमन, पु. ಶಾಂತಿ, ಸಮಾಧಾನ; ನಾಶ; ವಿಗ್ರಹಾರಾಧನೆ ಮಾಡುವವ, ಮೂರ್ತಿ ಪೂಜಕ; ವಿಗ್ರಹ, ಪ್ರತಿಮೆ; ಪ್ರತಿಮೆಯ ಮಂದಿರ.
शमशेर, स्त्री. ಕತ್ತಿ, ತಲವಾರು.
शमशेर-बाज़ी, स्त्री. ಕತ್ತಿವರಸೆ.
शमाइल, पु. ವಿಶೇಷಗುಣ, ವೈಶಿಷ್ಟ್ಯ; ಸಂಪ್ರದಾಯ, ಪದ್ಧತಿ; ಬಡಗಣ ಗಾಳಿ.
शमा, स्त्री. ಮೋಣದ ಬತ್ತಿ.
शमादान, पु. ದೀಪದಾನಿ, ಸಮೆ.
शमीम, स्त्री. ಸುಗಂಧ, ಪರಿಮಳ.
शम्मा, पु. ಗಂಧ, ವಾಸನೆ, ರೂಢಿ.
शम्स, पु. ಸೂರ್ಯ, ರವಿ.
शम्सी, वि. ಸೂರ್ಯನ; ಸೌರ.
शर, पु. ಬಾಣ, ಅಂಬು, ಶರ. स्त्री. ಕೆಡಕು, ಕೆಟ್ಟತನ.
शरअ, स्त्री. ಕುರಾನಿನ ಆದೇಶ; ಧರ್ಮ, ಮತ; ಸಂಪ್ರದಾಯ, ರೀತಿ; ಮುಸಲ್ಮಾನರ ಧರ್ಮಶಾಸ್ತ್ರ.
शरई, वि. (ಮುಹಮ್ಮದೀಯರ) ಧರ್ಮ ಸಮ್ಮತವಾದ, ಶಾಸ್ತ್ರೀಯವಾದ.
शरण, स्त्री. ಸಂರಕ್ಷಣೆ; ಆಶ್ರಯ; ಸಹಾಯ.
शरफ़, पु. ಯೋಗ್ಯತೆ; ಮಹತ್ವ; ಘನತೆ.
शरबत, स्त्री. ಪಾನಕ, ಷರಬತ್ತು; ವಿವಾಹ ನಿಶ್ಚಿತಾರ್ಥ, ವೀಳೆಯಶಾಸ್ತ್ರ.
शरबती, वि. ಷರಬತ್ತಿನ ಬಣ್ಣದ, ನಸುಹಳದಿ; ರಸವತ್ತಾದ. पु. ನಸುಹಳದಿ; ಸಕ್ಕರೆನಿಂಬೆ; ಒಂದು ಬಗೆ ನಯವಾದ ಬಟ್ಟೆ.
शरम, पु. = शर्म.
शरह, स्त्री. ವ್ಯಾಖ್ಯಾನ, ಭಾಷ್ಯ, ಟೀಕೆ; ಬೆಲೆ, ಧಾರಣೆ, ದರ.
शराकत, स्त्री. ಸೇರುವಿಕೆ, ಸೇರಿಕೆ; ಜಂಟಿ; ಪಾಲುಗಾರಿಕೆ, ಹುದುವು, ಪತ್ತಿಗೆ.
शराटा, पु. ಶಬ್ದ, ಗದ್ದಲ.
शराफ़त, स्त्री. ಕುಲೀನತೆ, ಸಜ್ಜನತೆ.
शराब, स्त्री. ಸೇಂದಿ, ಮದ್ಯ, ಸುರೆ, ಸಾರಾಯಿ.
शराबख़ाना, पु. ಸೇಂದಿ ಅಂಗಡಿ, ಪಡಖಾನೆ.
शराबख़ोर, वि. ಮದ್ಯಪಾಯಿ, ಹೆಂಡ ಕುಡುಕ.
शराबख़ोरी, स्त्री. ಮದ್ಯಪಾನ.
शराब-बंदी, स्त्री. ಪಾನನಿರೋಧ.
शराबी, वि. ಸಾರಾಯಿ ಕುಡಿಯುವವ, ಹೆಂಡಕುಡುಕ, ಮದ್ಯಪಾಯಿ.
शराबोर, वि. ನೆನೆದ, ತೋಯ್ದ.
शरर, शरार, पु. ಅಗ್ನಿಕಣ, ಕಿಡಿ.
शरारत, स्त्री. ದುರುಳತನ; ತುಂಟತನ.
शरारती, वि. ದುಷ್ಟ, ತುಂಟ.
शराव, पु. ಶ್ರಾವೆ, ಮುಚ್ಚಳ.
शरीअत, स्त्री. ಮುಸಲ್ಮಾನರ ಧರ್ಮಶಾಸ್ತ್ರ; ನ್ಯಾಯ, ಧರ್ಮ.
शरीक, वि. ಸಮ್ಮಿಳಿತ; ಜಂಟಿಯಾದ; ಸೇರಿದ. पु. ಜೊತೆಗಾರ; ಕೂಟಾಳಿ, ಜಂಟಿ; ಭಾಗಸ್ಥ, ಪತ್ತಿಗ, ಪಾಲುಗಾರ.
शरीफ़, पु. ಸತ್ಕುಲದ, ಕುಲೀನ; ಭದ್ರ

ಪುರುಷ, ಸಂಭಾವಿತ, ಗೌರವಸ್ಥ; ನಾಯಕ.

**शरीफ़ा**, पु. ಸೀತಾಫಲ, ದುರಂಜಿ.

**शरीर**, वि. ದುಷ್ಟ, ತುಂಟ. पु. ದೇಹ.

**शर्त्त**, स्त्री. ಪಂಥ, ಪಣ; ನಿಬಂಧನೆ, ಕರಾರು; ಶರ್ತ, ಷರತ್ತು, ಶರ್ಯತ್ತು. शर्त्त बांधना = ನಿಬಂಧನೆ ಮಾಡು; ಕರಾರು ಮಾಡು; ಪಂಥ ಕಟ್ಟು, ಬಾಜಿ ಕಟ್ಟು. बशर्ते कि = ಈ ನಿಬಂಧನೆಯ ಮೇಲೆ, ಈ ಷರತ್ತಿನ ಮೇಲೆ.

**शर्त्तिया**, क्रिवि. ಪಂಥಕಟ್ಟಿ; ದಿಟವಾಗಿ; ಖಚಿತವಾಗಿ. वि. ನಿಶ್ಚಯವಾದ; ಖಾತ್ರಿಯಾದ.

**शर्ती**, वि. ನಿಬಂಧನೆ ಅಥವಾ ಷರತ್ತು ಹಾಕಿದ; ಷರತ್ತಿನ.

**शर्म**, स्त्री. ನಾಚಿಕೆ, ಲಜ್ಜೆ, ಸಂಕೋಚ; ಮಾನ.

**शर्मसार**, वि. ಲಜ್ಜೆಯುಳ್ಳವ, ಲಜ್ಜಾಲು.

**शर्मगीन**, वि. ಲಜ್ಜೆಪಡುವ; ಲಜ್ಜಿತ.

**शर्मनाक**, वि. ಲಜ್ಜಿತ; ಲಜ್ಜಾಜನಕ.

**शर्मसारी**, स्त्री. ಲಜ್ಜೆ, ನಾಚಿಕೆ; ಅವಮಾನ.

**शर्माऊ**, वि. ಲಜ್ಜಾಲು, ಸಂಕೋಚಿ.

**शर्माना**, अक्रि. ಲಜ್ಜೆಪಡು, ನಾಚಿಕೆಪಡು, ನಾಚು. सक्रि. ನಾಚಿಕೆಪಡಿಸು.

**शर्मा-शर्मी**, क्रिवि. ಲಜ್ಜೆಯಿಂದ, ನಾಚಿಕೆಯಿಂದ.

**शर्मिंदगी**, स्त्री. ಲಜ್ಜೆ, ನಾಚಿಕೆ.

**शर्मिंदा**, वि. ಲಜ್ಜಿತ, ನಾಚಿಕೆಪಡುವ.

**शर्मीला**, वि. ಲಜ್ಜಾಲು, ಸಂಕೋಚಿ.

**शल**, वि. ಆಯಾಸಪಟ್ಟ, ದಣಿದ; ಜೋಮು ಹಿಡಿದ, ಮರಗಟ್ಟಿದ.

**शलख़**, स्त्री. ಗುಂಡಿನ ಸುರಿಮಳೆ.

**शलगम**, **शलजम**, पु. ಸವಿಮೂಲಂಗಿ.

**शलभ**, पु. ಕುಂಟುಮಿಡಿತೆ.

**शलवार**, पु. ಷರಾಯಿ, ಇಜಾರು.

**शलाका**, स्त्री. ಅಂಬು, ಬಾಣ; ಕಂಬಿ, ಸಲಾಕಿ; ಮೂಳೆ; ಮುಳ್ಳುಹಂದಿ.

**शलीता**, पु. ಚೀಲ; ಗೋಣಿಚೀಲ.

**शलूका**, पु. ಚಿಕ್ಕ ಅಂಗಿ.

**शव**, पु. ಹೆಣ, ಶವ.

**शवदाह**, पु. ಹೆಣವನ್ನು ಸುಡುವಿಕೆ, ಶವದಹನ, ಅಗ್ನಿಸಂಸ್ಕಾರ.

**शवरी**, स्त्री. ತೆಪ್ಪ, ಓಡ, ದೋಣಿ.(?)

**शवाब**, पु. ಸೌಂದರ್ಯ, ಚೆಲುವು.

**शश**, वि. ಷಟ್, ಆರು. शश-पहलू = ಆರು ಕೋನಗಳುಳ್ಳ, ಷಟ್ಕೋಣ. शश-ओ-पंज = ನಸನಸೆ, ನಚ್ಚು; ಕಳವಳ, ಗಾಬರಿ. शश-ओ-पंज में होना = ಕಳವಳಗೊಳ್ಳು, ಗಾಬರಿಪಡು; ಹಿಂದು ಮುಂದು ನೋಡು.

**शशक**, पु. ಮೊಲ.

**शशदर**, पु. ಪಗಡೆಯ ದಾಳ, ನೆತ್ತ, ಪಾಚಿಕೆ. वि. ಅದ್ಭುತ, ವಿಚಿತ್ರ; ಚಕಿತ, ವಿಸ್ಮಿತ; ಕಕ್ಕಾಬಿಕ್ಕಾದ.

**शशमाही**, वि. ಆರು ತಿಂಗಳ, ಷಾಣ್ಮಾಸಿಕ.

**शशा**, पु. ಮೂತ್ರ, ಉಚ್ಚೆ.

**शशादान**, पु. ಮೂತ್ರಕೋಶ, ಉಚ್ಚೆ

ಬುರುಡೆ.
शशी, पु. ಚಂದ್ರ.
शस्त, स्त्री. ಅಂಗುಷ್ಠ, ಹೆಬ್ಬೆಟ್ಟು; ಅಂಗುಸ್ತಾನಿ; ಗಾಳದ ಕೊಕ್ಕೆ; ಲಕ್ಷ್ಯ, ವೇಧ್ಯ, ಗುರಿ. वि. ಅರವತ್ತು.
शह, पु. ದೊರೆ, ಅರಸ; ಮದವಣಿಗ, ವರ. स्त्री. ಚದುರಂಗದಾಟದಲ್ಲಿ ಷಹ, ಕಟ್ಟರಸು, ಕಟ್ಟು; ಹುರಿದುಂಬಿಸುವಿಕೆ, ಪ್ರೇರಣೆ. वि. ಪ್ರಶಸ್ತ, ಶ್ರೇಷ್ಠ; ದೊಡ್ಡ, ಭಾರಿ; ಪ್ರಧಾನ.
शहज़ादा, पु. ರಾಜಕುಮಾರ, ದೊರೆಮಗ.
शहज़ादी, स्त्री. ರಾಜಕುಮಾರಿ.
शहज़ोर, वि. ಬಲಿಷ್ಠ; ಶೂರ, ವೀರ.
शहज़ोरी, स्त्री. ಬಲ, ಶಕ್ತಿ; ಪರಾಕ್ರಮ. ಶೌರ್ಯ.
शहतीर, पु. ನಾಟ, ದೂಲ, ದಿಮ್ಮಿ.
शहतूत, पु. ಹಿಪ್ಪಲಿ ನೇರಳೆ, ಕೋರಿ ಹಣ್ಣು.
शहद, पु. ಜೇನುತುಪ್ಪ; ಜೇನು, ಮಧು.
शहना, पु. ಕೊತವಾಲ; ರಕ್ಷಕ; ಕಾವಲುಗಾರ.
शहनाई, स्त्री. ಒಂದು ವಾದ್ಯ, ಮೌರಿ, ಸನಾದಿ.
शहपर, पु. ಪಕ್ಷಿಯ ಎಲ್ಲಕ್ಕಿಂತ ಗಟ್ಟಿಯಾದ ರೆಕ್ಕೆ.
शहबाज़, पु. ದೊಡ್ಡ ಗಿಡಗ.
शहबाला, पु. ಮೆರವಣಿಗೆಯಲ್ಲಿ ಮದವಣಿಗನ ಜತೆಗೆ ಬರುವ ಬಾಲಕ, ಅಳಿಯನ ಗೆಳೆಯ.
शहम, स्त्री. ಕೊಬ್ಬು; ಸ್ಥೂಲತೆ; ತಿರುಳು, ಕುಸುರಿ.
शहमात, स्त्री. ಷಹ, ಕಟ್ಟರಸು.
शहर, पु. ಪಟ್ಟಣ, ನಗರ; ತಿಂಗಳು.
शह-रग, स्त्री. ಕಂಠದ ನರ.
शहरदार, पु. ಬೇಟೆಗಾರ, ಬೇಡ; ಹಕ್ಕಿ ಬೇಟೆಗಾರ.
शहरपनाह, स्त्री. शहरबंद, पु. ನಗರದ ಸುತ್ತುಗೋಡೆ, ಸುತ್ತಾಲೆ, ಪ್ರಾಕಾರ, ಪಾಗಾರ.
शहर-बदर, पु. ದೇಶಭ್ರಷ್ಟ; ಗಡೀಪಾರು.
शहर-यार, पु. ನಗರಪತಿ, ಅರಸ.
शहर-यारी, वि. ಅರಸನ, ದೊರೆಯ, ರಾಜನ. स्त्री. ಅರಸುತನ; ರಾಜ್ಯಭಾರ; ಸಾಮ್ರಾಜ್ಯ.
शहरियत, स्त्री. ನಗರದ ವಿಸ್ತಾರ; ಆಬಾದು; ಜನಸಂಖ್ಯೆ; ನಾಗರೀಕತೆ.
शहराता, शहरी, वि. ಪಟ್ಟಣದ, ನಗರದ; ಪಟ್ಟಣಿಗ, ನಾಗರಿಕ.
शहला, स्त्री. ಆಡಿನಂತಹ ಕಣ್ಣುಗಳುಳ್ಳವಳು, ಅಜಾಕ್ಷಿ; ಒಂದು ಬಗೆ ನೈದಿಲೆ.
शहवत, स्त्री. ಆಶೆ, ಇಚ್ಛೆ, ಅಭಿಲಾಷೆ; ಬೆದೆ, ಮುಸ್ತಿ; ಕಾಮ, ಸಂಭೋಗಾಭಿಲಾಷೆ.
शहवत-परस्त, शहवती, वि. ವಿಲಾಸಿ, ಕಾಮುಕ; ಲಂಪಟತೆ.
शहवत-परस्ती, स्त्री. ಕಾಮುಕತೆ, ಕಾಮಾಸಕ್ತತೆ; ಲಂಪಟತೆ.
शह-सवार, पु. ಒಳ್ಳೆಯ ಕುದುರೆ

ಸವಾರ.

**शहाद**, पु. ಸಾಕ್ಷ್ಯ, ಪುರಾವೆ.

**शहादत**, स्त्री. ಸಾಕ್ಷ್ಯ, ಸಾಕ್ಷಿ, ಶಾಯಿದಿ, ಪುರಾವೆ; ಪ್ರಮಾಣ, ರುಜುವಾತು; ಧರ್ಮಕ್ಕಾಗಿ ಜೀವವನ್ನು ತೊರೆಯುವಿಕೆ, ಸಾಕ್ಷಿ ಮರಣ.

**शहादतनामा**, पु. ಸಾಕ್ಷಿಪತ್ರ.

**शहाना**, वि. ರಾಜರ; ರಾಜಯೋಗ್ಯವಾದ; ಉತ್ತಮ, ಭರ್ಜರಿ; ಮದುವೆಯ ಉಡುಪು; ಹಬ್ಬದ ಉಡಿಗೆ; ಗಾಜಿನ ಕೈಬಳೆ.

**शहाब**, पु. ಅಚ್ಚಗೆಂಪು.

**शहामत**, स्त्री. ಧೀರತನ, ಪರಾಕ್ರಮ; ಔದಾರ್ಯ, ಧಾರಾಳ; ಚುರುಕು, ಚಟುವಟಿಕೆ.

**शहीद**, पु. ಸಾಕ್ಷಿ, ಸಾಕ್ಷಿಗಾರ; ಮತಾಭಿಮಾನಕ್ಕಾಗಿ ಪ್ರಾಣ ತೊರೆಯುವವ, ಹತಸಾಕ್ಷಿ, ಸತ್ಯಸಾಕ್ಷಿ, ರಕ್ತಸಾಕ್ಷಿ. शहीद होना = ಧರ್ಮಯುದ್ಧದಲ್ಲಿ ಪ್ರಾಣಬಿಡು; ಬಹಳವಾಗಿ ಪ್ರೀತಿಸು, ಮೋಹಗೊಳ್ಳು.

**शांत**, वि. ಶಾಂತವಾದ; ತಣ್ಣಗಾದ.

**शांति**, स्त्री. ಸ್ವಸ್ಥತೆ; ಶಾಂತಿ, ನೆಮ್ಮದಿ.

**शाइस्तगी**, स्त्री. ಸಭ್ಯತೆ, ಶಿಷ್ಟತೆ; ವಿನಯ.

**शाइस्ता**, वि. ಸಭ್ಯ, ಶಿಷ್ಟ; ವಿನಮ್ರ

**शाक**, पु. ಸೊಪ್ಪು; ತರಕಾರಿ; ಶಕ.

**शाकिन**, स्त्री. ಶಾಕಿನಿ, ಡಾಕಿನಿ.

**शाकी**, वि. ದೂರು ಹೇಳುವವ; ದೂರುವವ, ಚಾಡಿ ಹೇಳುವವ.

**शाकिर**, वि. ಕೃತಜ್ಞ, ಆಭಾರಿ.

**शाख़**, स्त्री. ಕೊಂಬೆ, ರಂಬೆ; ದಂಟು, ಕಾಂಡ; ಕೊಂಬು, ಕೋಡು; ತುಂಡು; ವಿಭಾಗ, ಶಾಖೆ. पु. ಗಟ್ಟಿ ನೆಲ; ಬೆಟ್ಟದತುದಿ, ಶಿಖರ; ಕಠಿಣವಾದವಸ್ತು

**शाख़दार**, वि. ಕೊಂಬೆಯುಳ್ಳ, ಶಾಖೆಗಳುಳ್ಳ.

**शाखा**, स्त्री. ಕೊಂಬೆ; ವಿಭಾಗ; ಶಾಖೆ.

**शाख़ी**, वि. ಶಾಖೆಗಳುಳ್ಳ. पु. ಮರ, ವೃಕ್ಷ.

**शागिर्द**, पु. ಶಿಷ್ಯ, ಚೇಲ; ಸೇವಕ.

**शागिर्दी**, स्त्री. ಶಿಷ್ಯತನ; ಸೇವೆ.

**शाग़िल**, वि. ತಲ್ಲೀನ, ನಿರತ; ಧ್ಯಾನಕೊಡುವ.

**शाद**, वि. ಖುಷಿಯಾದ, ಪ್ರಸನ್ನ; ಶುಭ, ಮಂಗಳ; ಸಂಪನ್ನ.

**शादमान**, वि. ಸುಖಿ; ಪ್ರಸನ್ನ, ಮುದಿತ

**शादमानी**, स्त्री. ಆನಂದೋತ್ಸವ, ಸಂತೋಷ, ಕುಶಾಲು.

**शादियाना**, पु. ಮಂಗಳವಾದ್ಯ, ನಗಾರಿ ನವಪತ್ತು, ಆನಂದೋತ್ಸವ; ಮಂಗಳಗೀತ.

**शादी**, स्त्री. ಆನಂದ; ಮಂಗಳ, ಕಲ್ಯಾಣ; ವಿವಾಹ, ಮದುವೆ. शादी ब्याह = ಮದುವೆ ಮುಂಜಿ. शादी शुदा = ಮದುವೆಯಾದ, ವಿವಾಹಿತ.

**शान**, पु. ಜೇನುಹುಟ್ಟು, ರಾಡೆ; ಸಾಣೆಕಲ್ಲು; ಒರೆಗಲ್ಲು; ಸೀರಸಾಟು, ಪಡಮ. स्त्री. ವಿಜೃಂಭಣೆ, ಠೀವಿ; ಥಳುಕು, ಒಯ್ಯಾರ; ಥೋರಣೆ, ಭವ್ಯತೆ; ವೈಭವ,

ಘನತೆ. शान-ओ-शौकत = ಆಡಂಬರ, ವೈಖರಿ, ವೈಶಾಲ್ಯ.

शानदार, वि. ಠೀವಿಯ, ಥೋರಣೆಯ; ಬೆಡಗಿನ; ಘನವಾದ, ಭವ್ಯ.

शाना, पु. ಹೆಗಲು; ಬಾಚಣಿಗೆ; ಹುಂಜದ ಶಿಖೆ; ಜೇನುಹುಟ್ಟು, ರಾಡೆ.

शानी, स्त्री. ಸಾಣೆಕಲ್ಲು, ಮಸೆಗಲ್ಲು.

शाप, पु. ಶಾಪ; ಧಿಕ್ಕಾರ.

शाफ़ी, वि. ಗುಣಪಡಿಸುವ, ಗುಣಕಾರಕ; ವಾಸಿಮಾಡುವ.

शाबाश, अव्य. ಭೇಷ್! ಭಳಿರೆ! ಶಹಬಾಸ್! ವಹವಾ! ಸಾಧುಸಾಧು!

शाबाशी, स्त्री. ಸಾಧುವಾದ, ಹೊಗಳಿಕೆ, ಕೈವಾರ, ಶಹಬಾಸಗಿರಿ.

शाम, स्त्री. ಸಾಯಂಕಾಲ, ಸಂಜೆ, ಬೈಗು; ಕಬ್ಬಿಣದ ಬಳೆ, ಅಣಸು; ಶ್ಯಾಮವರ್ಣದವ, ಶ್ರೀಕೃಷ್ಣ; ಸಿರಿಯಾದೇಶ.

शामत, स्त्री. ದುರದೃಷ್ಟ, ದುರ್ಭಾಗ್ಯ; ವಿಪತ್ತು, ಅನಿಷ್ಟ; ದುರ್ದೆಶೆ; ಅವಮಾನ; ನರೋಲಿ, ಹಾಲುಣ್ಣೆ. शामत आना = ಕೇಡು ಒದಗು.

शामती, वि. ನಿರ್ಭಾಗ್ಯ, ದುರ್ದಶಾಗ್ರಸ್ತ

शामा, पु. ಶ್ಯಾಮವರ್ಣ, ಕರಿಬಣ್ಣ; ಕೊಳೆ, ಕೊಳಕು; ಸಾವೆ, ಸಾವೆಯಕ್ಕಿ. स्त्री. ಚೆನ್ನಾಗಿ ಹಾಡುವ ಒಂದು ಪಕ್ಷಿ.

शामियाना, पु. ದೊಡ್ಡ ಡೇರೆ, ಶಾಮಿಯಾನ.

शामिल, वि. ಸೇರಿದ, ಕೂಡಿದ; ಸಮ್ಮಿಳಿತವಾದ; ಅಂತರ್ಗತ; ಜಂಟಿಯಾದ; ಜೊತೆಯಾದ. शामिल होना = ಸೇರು; ಭಾಗಿಯಾಗು, ಶಾಮಿಲಾತಾಗು.

शामिलात, स्त्री. ಹುದುವು, ಜಂಟಿ; ಅವಿಭಕ್ತ ಸೊತ್ತು.

शामिलाती, वि. ಹುದುವಿನ, ಜಂಟಿಯ; ಅವಿಭಕ್ತ.

शामी, वि. ಸಿರಿಯಾ ದೇಶದ. स्त्री. ಸಿರಿಯಾ ದೇಶದ ಭಾಷೆ; ಕಬ್ಬಿಣದ ಬಳೆ, ಅಣಸು.

शायक़, वि. ಅಭಿಲಾಷಿ, ಅನುರಕ್ತ.

शायद, अव्य. ಒಂದುವೇಳೆ, ಕದಾಚಿತ್

शायर, पु. ಕವಿ, ಕಬ್ಬಿಗ.

शायरा, स्त्री. ಕವಿತ್ವಗಾತಿ, ಕವಯಿತ್ರಿ.

शायरी, स्त्री. ಕವಿತೆ, ಕವನ.

शाया, वि. ಪ್ರಕಟ, ಪ್ರಕಾಶಿತ.

शारंग, वि. ವಿವಿಧ ಬಣ್ಣದ. पु. ಜಿಂಕೆ; ನವಿಲು.

शार, पु ಜಲಪಾತ, ತಡಸಲು.

शारक, स्त्री. ಮೈನ, ಗೊರವಂಕ.

शारा, पु. ರಾಜಮಾರ್ಗ; ಧರ್ಮಸೂತ್ರ.

शारिक़, पु. ಸೂರ್ಯ, ರವಿ.

शारिह, पु. ಟೀಕಾಕಾರ, ಭಾಷ್ಯಕಾರ.

शारी, पु. ಆನೆಯ ಪಕ್ಕರಕ್ಕೆ, ರಂಚೆ; ಮೋಸ, ವಂಚನೆ. स्त्री. ಮೈನ, ಗೊರವಂಕ.

शाल, पु. ತೇಗದ ಮರ, ಸಾಗವಾನಿ; ಒಂದು ಮೀನು. स्त्री. ಶಾಲು, ಶಾಲುವೆ, ಸಕಲಾತಿ. शाल-बाफ़ = ಶಾಲು ನೇಯುವವ.

शाला, स्त्री. ಶಾಲೆ, ಆಲಯ, ಮನೆ.

शालार, पु. ನಿಚ್ಚಣಿಕೆ, ಏಣಿ; ಪಂಜರ.

शाली, वि. ಶಾಲಿನಿಂದ ತಯಾರಾದ.

शासक, वि. ಆಳುವವ; ಶಾಸಕ.

शासन, पु. ಆಜ್ಞೆ, ಅಪ್ಪಣೆ; ಆಳಿಕೆ.

शास्त्र, पु. ಶಾಸ್ತ್ರ; ವಿಜ್ಞಾನ.

शास्त्रार्थ, पु. ಶಾಸ್ತ್ರದ ಚರ್ಚೆ; ವಾಕ್ಯಾರ್ಥ.

शास्त्री, पु. ಶಾಸ್ತ್ರವನ್ನರಿತವ, ಪಂಡಿತ, ಶಾಸ್ತ್ರಿ.

शाहंशाह, पु. ರಾಜಾಧಿರಾಜ, ಚಕ್ರವರ್ತಿ, ಸಾರ್ವಭೌಮ.

शाह, पु. ರಾಜ, ಅರಸ, ದೊರೆ; ಭೂಪ; ಫಕೀರರ ಬಿರುದು. वि. ದೊಡ್ಡ, ಭಾರಿ, ಮಹಾ.

शाहज़ादा, पु. ರಾಜಕುಮಾರ.

शाहज़ादी, स्त्री. ರಾಜಕುಮಾರಿ.

शाहनामा, पु. ರಾಜರ ಚರಿತ್ರೆ.

शाहबाज़, पु. ದೊಡ್ಡ ಗಿಡಗ.

शाह-राह, स्त्री. ರಾಜಮಾರ್ಗ, ಘಂಟಾಪಥ, ಹೆದ್ದಾರಿ.

शाह-वार, वि. ರಾಜಾರ್ಹ, ರಾಜಯೋಗ್ಯ.

शाहाना, वि. ರಾಜಕೀಯ; ರಾಜಾರ್ಹ; ಭರ್ಜರಿ. पु. ಮದವಣಿಗನಿಗೆ ಉಡಿಸುವ ವಸ್ತ್ರಗಳು; ಗಾಜಿನ ಬಳೆ.

शाहिद, पु. ಸಾಕ್ಷಿ, ಸಾಕ್ಷಿಗಾರ, ಶಾಯಿದಿ. वि. ಸುಂದರವಾದ; ಪ್ರಿಯ.

शाहिदी, स्त्री. ಸಾಕ್ಷ್ಯ, ಶಾಯಿದಿ, ಪುರಾವೆ.

शाही, वि. ಅರಸನ; ರಾಜಕೀಯ; ರಾಜಾರ್ಹ. स्त्री. ಶಾಸನ, ಆಳಿಕೆ; ರಾಜ್ಯ.

शाहीन, पु. ಗಿಡಗ, ಡೇಗೆ.

शिंगरफ़, पु. ಇಂಗಲೀಕ, ಸಿಂದೂರ.

शिकंजा, पु. ಪೀಡನಾಯಂತ್ರ, ಕೋಳ; ಒತ್ತುವ ಅಥವಾ ಬಿಗಿಯುವ ಯಂತ್ರ. शिकंजे में खींचना = ಕೋಳಹಾಕು; ಚಿತ್ರಹಿಂಸೆ ಮಾಡು.

शिकन, स्त्री. ಮುದುರುವಿಕೆ, ಮುರುಟಿಕೊಳ್ಳುವಿಕೆ, ಉಡುಗುವಿಕೆ; ನಿರಿಗೆ, ಮಡಿಕೆ; ತೆರೆ, ಸುಕ್ಕು.

शिकम, पु. ಹೊಟ್ಟೆ, ಉದರ.

शिकमी, वि. ಹೊಟ್ಟೆಯ; ಹೊಟ್ಟೆಬಾಕ; ಅಗರ್ಭ; ಒಳಗಿನ, ಅಂತರ್ಗತ. शिकमी काश्तकार = ಒಳಗೇಣಿ ತಕ್ಕೊಂಡವ, ಒಳಗೇಣಿದಾರ, ಒಳವರ್ಗದಾರ.

शिकरा, पु. ಡೇಗೆ, ಗಿಡಗ.

शिकवा, पु. ನಿಂದೆ, ದೂರು.

शिकस्त, स्त्री. ಒಡಕು; ಸೋಲು, ಅಪಜಯ; ಭಂಗ; ಒಳಪಡಿ. वि. ಭಂಗವಾದ, ಪರಾಜಿತ.

शिकस्तगी, स्त्री. ಪರಾಜಯ, ಸೋಲು; ಭಗ್ನತೆ, ಭಂಗ; ಒಡಕು; ಜಾಡ್ಯ; ದುಃಖ, ವ್ಯಥೆ.

शिकस्ता, वि. ಮುರಿದ, ಭಗ್ನವಾದ; ಘಾಯಹೊಂದಿದ; ದುರ್ಬಲ. पु. ಮೋಡಿ ಬರವಣಿಗೆ.

शिकहर, पु. ನೆಲುವು, ಶಿಕ್ಕ, ಕಸ್ಲಿ.

शिकायत, स्त्री. ಚಾಡಿ, ನಿಂದೆ; ದೂರು, ಪುಕಾರು, ಮೊರೆ, ಫಿರ್ಯಾದು; ಗೋಳು; ರೋಗ. शिकायत करना = ದೂರು

ಹೇಳು; ಮೊರೆ ಇಡು.

**शिकायती**, वि. ದೂರು ಹೇಳುವ; ಮೊರೆ ಇಡುವ.

**शिकार**, पु. ಬೇಟೆಯಾಡುವಿಕೆ, ಆಖೇಟ, ಶಿಕಾರಿ; ಬೇಟೆಯ ಪ್ರಾಣಿ, ಬೇಟೆ; ಆಹುತಿ; ಸೂರೆ, ಕೊಳ್ಳೆ.

**शिकारगाह**, स्त्री. ಬೇಟೆಯಾಡುವ ಸ್ಥಳ

**शिकारी, शिकारबाज़**, पु. ಬೇಟೆಯಾಡುವವ, ಬೇಟೆಗಾರ. **शिकारी कुत्ता** = ಬೇಟೆ ನಾಯಿ.

**शिकेब, शिकेबाई**, स्त्री. ಸಹನೆ, ತಾಳ್ಮೆ.

**शिकेबा**, वि. ಸಹಿಷ್ಣು.

**शिकोह**, पु. ಮಹತ್ವ, ಪ್ರತಾಪ.

**शिक्षक**, वि. ಶಿಕ್ಷಣ ಕೊಡುವವ, ಶಿಕ್ಷಣಕಾರ; ಶಿಕ್ಷಕ, ಗುರು.

**शिक्षण**, पु. ಪಾಠ ಹೇಳಿಕೊಡುವಿಕೆ, ಕಲಿಸುವಿಕೆ, ಶಿಕ್ಷಣ.

**शिक्षा**, स्त्री. ವಿದ್ಯಾಭ್ಯಾಸ; ಕಲಿಸುವಿಕೆ; ಶಿಕ್ಷಣ; ದಂಡನೆ, ಶಿಕ್ಷೆ.

**शिक्षित**, वि. ಶಿಕ್ಷೆ ಹೊಂದಿದ, ತರಬಿಯತಾದ, ಶಿಕ್ಷಿತ.

**शिखर**, पु. ತುದಿ, ಶಿಖರ.

**शिखरी**, वि. ಶಿಖರವುಳ್ಳ.

**शिखरन**, स्त्री. ಸಕ್ಕರೆ ಬೆರೆತ ಮೊಸರು.

**शिखा**, स्त्री. ಶಿಖೆ, ಜುಟ್ಟು; ತುದಿ, ಶಿಖರ.

**शिगाफ़**, पु. ಸೀಳುವಿಕೆ; ಸೀಳು; ಹರಕು ಬಿರುಕು; ರಂಧ್ರ, ತೂತು; ತೆರಪು, ಬಿರುಕು; ಸೀಳಿದ ಘಾಯ, ಕಚ್ಚು.

**शिगाल**, पु. ಶೃಗಾಲ, ನರಿ.

**शिगुफ़्ता**, वि. ವಿಕಸಿಸಿದ, ಅರಳಿದ.

**शिगूफ़ा**, पु. = शगूफ़ा.

**शिताब**, क्रिवि. ಶೀಘ್ರ, ಬೇಗ, ಜಲ್ದಿ.

**शिताबां**, वि. ಆತುರಪಡುವವ, ಅವಸರಪಡುವವ.

**शिताबी**, स्त्री. ತ್ವರೆ, ಅವಸರ. क्रिवि. ಶೀಘ್ರವಾಗಿ, ಜಲ್ದಿ.

**शिथिल**, वि. ಸಡಿಲವಾದ, ಶಿಥಿಲ, ಢೀಲಾದ; ಬಳಲಿದ, ದಣಿದ.

**शिथिलता**, स्त्री. ಸಡಿಲತೆ, ಢೀಲು; ಶಿಥಿಲತೆ.

**शिदाद**, वि. ತೀಕ್ಷ್ಣವಾದ, ಉಗ್ರವಾದ.

**शिद्दत**, स्त्री. ಕಾಠಿಣ್ಯ, ಕಠೋರತೆ; ಗಡುಸು, ಉಗ್ರತೆ; ಜೋರು, ಬಲವಂತ; ಆಧಿಕ್ಯ; ಕಷ್ಟ.

**शिनवा**, वि. ಆಲಿಸುವವ, ಕೇಳುವವ, ಶ್ರೋತೃ.

**शिनवाई**, स्त्री. ಆಲಿಸುವಿಕೆ, ಕೇಳುವಿಕೆ, ಶ್ರವಣ.

**शिना**, पु. ಈಜುವಿಕೆ, ಈಜು.

**शिनाख़्त**, स्त्री. = शनाख़्त.

**शिनावर**, वि. ಈಜುವವ, ಈಜುಗಾರ.

**शिनावरी**, स्त्री. ಈಜಾಟ; ಈಜುಗಾರಿಕೆ.

**शिनास**, वि. ಅರಿತವ, ತಜ್ಞ (ಸಮಾಸದಲ್ಲಿ).

**शिनासाई**, स्त्री. ಪರಿಚಯ, ತಿಳಿವಳಿಕೆ; ಅರಿವು, ಜ್ಞಾನ

**शिबर**, पु. ಚೋಟು, ಪ್ರಾದೇಶ.

**शिमटी**, स्त्री. ಒಂದು ಬಗೆ ಬಟ್ಟೆ.

**शिमाल**, पु. ಉತ್ತರದಿಕ್ಕು, ಬಡಗು.

**शिमाली**, वि. ಉತ್ತರದಿಕ್ಕಿನ, ಬಡಗಣ.

**शिम्मा**, पु. ಸ್ವಲ್ಪ ವಾಸನೆ, ನಸು ವಾಸನೆ. वि. ಸ್ವಲ್ಪ, ತುಸ, ಒಸಿ.
**शिया**, पु. ಸಹಾಯಕ, ಒತ್ತಾಸೆಗಾರ; ಮುಸಲ್ಮಾನರ ಒಂದು ಪಂಗಡ.
**शिर**, पु. ಶಿರಸ್ಸು, ತಲೆ.
**शिरयान**, स्त्री. ರಕ್ತನಾಳ, ಸಿರೆ.
**शिरा**, स्त्री. ರಕ್ತನಾಳ, ಸಿರೆ. पु. ಕ್ರಯ, ಖರೀದಿ; ವಿಕ್ರಯ, ಬಿಕರಿ.
**शिरकत, शिराकत**, स्त्री. = शराकत.
**शिर्क**, पु. ಪಾಲುಗಾರಿಕೆ, ಹುದುವು; ಹಲವು ದೇವರುಗಳಲ್ಲಿ ನಂಬಿಕೆ, ಬಹು ದೇವಪೂಜನ.
**शिल**, पु. ಈಟಿ, ಭರ್ಜಿ; ತ್ರಿಶೂಲ; ಬೇಲದ ಮರ.
**शिला**, स्त्री. ಕಲ್ಲು, ಬಂಡೆ, ಶಿಲೆ; ಅಸೆಯ ಕಲ್ಲು; ಬಾಗಿಲು, ಕದ.
**शिल्प**, पु. ಕೈಗಾರಿಕೆ, ಕೆಲಸಗಾರಿಕೆ, ಶಿಲ್ಪ.
**शिल्पकार, शिल्पी**, पु. ಶಿಲ್ಪ ಕೆಲಸ ಮಾಡುವವ, ಶಿಲ್ಪಿ.
**शिव**, पु. ಶಿವ, ಈಶ್ವರ; ಭಗವಂತ.
**शिवालय, शिवाला**, पु. ಈಶ್ವರನ ಗುಡಿ, ಶಿವಾಲಯ; ದೇವಸ್ಥಾನ.
**शिशु**, पु. ಮಗು, ಶಿಶು, ಕೂಸು, ಹಸುಳೆ.
**शिशुता**, स्त्री. ಶೈಶವ, ಶಿಶುತ್ವ.
**शिष्ट**, वि. ಕ್ರಮಪಡಿಸಿದ, ಅಣಿಮಾಡಿದ; ತರಬಿಯತ್ತಾದ; ಸಭ್ಯ, ಶಿಷ್ಟ.
**शिष्टता**, स्त्री. ಸಭ್ಯತೆ, ಶಿಷ್ಟತೆ.
**शिष्य**, पु. ಶಿಷ್ಯ, ಚೇಲ.
**शिस्त**, स्त्री. ಗಾಳದ ಮುಳ್ಳು; ಗುರಿ.
**शीकर**, पु. ಸೋನೆ ಮಳೆ; ತುಂತುರು; ಇರಿಚಲು.
**शीघ्र**, वि. ಶೀಘ್ರವಾದ; ವೇಗ. क्रिवि. ಶೀಘ್ರವಾಗಿ, ಜಲ್ದಿ, ಬೇಗನೆ.
**शीघ्रता**, स्त्री. ಶೀಘ್ರತೆ, ಜಲ್ದಿ, ವೇಗ.
**शीतल**, वि. ತಣ್ಣಗಾದ, ತಂಪಾದ; ಶೀತಲ.
**शीतलता**, स्त्री. ತಂಪು; ತಣಿವು; ಶೀತಲತೆ.
**शीतला**, स्त्री. ಸಿಡುಬು, ಸೀತಾಳಮ್ಮ.
**शीर**, पु. ಕ್ಷೀರ, ಹಾಲು.
**शीर-गरम**, वि. ಉಗುರುಬೆಚ್ಚಗಾದ, ಕವೋಷ್ಣ.
**शीर-दार**, वि. ಹಾಲುಕೊಡುವ, ಕರಾವು.
**शीर-बिरंज**, स्त्री. ಅನ್ನದ ಪಾಯಸ, ಹಾಲು ಪರಮಾನ್ನ.
**शीरमाल**, पु. ಹಾಲು ಸೇರಿಸಿ ಮಾಡಿದ ಒಂದು ಬಗೆ ರೊಟ್ಟಿ.
**शीरा**, पु. ರಕ್ತನಾಳ, ಸಿರೆ, ನಾಡಿ; ನೀರಿನ ಧಾರೆ; ಸಕ್ಕರೆ ಪಾಕ, ಕ್ಷೀರಾ; ಹಣ್ಣುಗಳ ರಸ; ಷರಬತ್ತು.
**शीराज़ा**, पु. ರಟ್ಟು ಕಟ್ಟುವಾಗ ಪುಸ್ತಕದ ಬೆನ್ನಿಗೆ ಹೊಲಿಯುವ ನವಾರು; ಪುಸ್ತಕದ ಬೆನ್ನಿನ ಹೊಲಿಗೆ; ಬಂದೋಬಸ್ತು, ಏರ್ಪಾಡು, ವ್ಯವಸ್ಥೆ.
**शीरीं**, वि. ಮಧುರ; ಇನಿಯ; ಪ್ರಿಯ; ಸಾಮ್ಯ.
**शीरी**, वि. ಹಾಲಿನ; ಹಾಲು ಕೊಡುವ. स्त्री. ಹಡಗಿನ ಒಂದು ಭಾಗ.
**शीरीनी**, स्त्री. ಮಾಧುರ್ಯ, ಸವಿ, ಇಂಪು; ಮಿಠಾಯಿ; ಪ್ರೀತಿ, ಪ್ರೇಮ.
**शीर्षक**, पु. ಅಭಿದಾನ, ಶಿರೋನಾಮೆ, ಶಿರೋಲೇಖ.

शीश, पु. ಶಿರಸ್ಸು, ತಲೆ.

शीशम, पु. ಶಿಂಶಪೆ ಮರ, ಸಿಸವೆ.

शीशमहल, पु. ಗಾಜಿನ ಮನೆ.

शीशा, पु. ಕನ್ನಡಿ, ದರ್ಪಣ; ಗಾಜು, ಸೀಸೆ.

शीशी, स्त्री. ಸೀಸೆ, ಕುಪ್ಪಿ, ಬುಡ್ಡಿ, ಬಾಟಲಿ

शीष, पु. ಶಿರಸ್ಸು, ತಲೆ.

शुकराना, शुक्राना, पु. ಕೃತಜ್ಞತೆ, ಧನ್ಯವಾದ; ಶ್ರಮದಕ್ಷಿಣೆ, ಸಂಭಾವನೆ.

शुक्र, पु. ಶುಕ್ರ; ವೀರ್ಯ; ಧನ್ಯವಾದ, ಕೃತಜ್ಞತೆ.

शुक्रगुज़ार, वि. ಆಭಾರಿ, ಕೃತಜ್ಞ.

शुक्रगुज़ारी, स्त्री. ಧನ್ಯವಾದ ಸಮರ್ಪಣೆ, ಕೃತಜ್ಞತೆ.

शुक्रिया, पु. ಕೃತಜ್ಞತೆ; ಧನ್ಯವಾದ; ನಲವರಿಕೆ. शुक्रिया अदा करना = ಧನ್ಯವಾದ ಸಲ್ಲಿಸು.

शुग़ाल, पु. = शग़ाल.

शुजा, पु. ವೀರ, ಪರಾಕ್ರಮಿ.

शुजाअत, स्त्री. ವೀರತನ, ಪರಾಕ್ರಮ.

शुतुर, पु. ಒಂಟೆ. शुतुर मुर्ग़ = ಶಹಾಮೃಗ, ಉಷ್ಟ್ರಪಕ್ಷಿ, ಬೆಂಕಿಕೋಳಿ..

शुतुर-गाव, पु. ಜಿರಾಫೆ ಎಂಬ ಮೃಗ.

शुतुर-बान, वि. ಒಂಟೆ ನಡೆಸುವವ, ಒಂಟೆಗಾರ.

शुद, वि. ಆದ; ಆಗಿಹೋದ; ಕಳೆದ.

शुदकार, पु. ಉಕ್ಕೆಯಾಗಿ ಬಿತ್ತಿದ ಜಮೀನು; ಪರೀಕ್ಷೆ; ಮದಿಪು.

शुदनी, स्त्री. ಆಗುವ ಘಟನೆ, ಭವಿತವ್ಯ, ನಿಯಾಮತು; ಸಂಭವ.

शुदबुद, स्त्री. ಅಲ್ಪಜ್ಞಾನ.

शुबहा, पु. ಸಂದೇಹ; ಭ್ರಮೆ, ಭ್ರಾಂತಿ.

शुमार, पु. ಸಂಖ್ಯೆ, ಎಣಿಕೆ, ಗಣನೆ.

शुमारी, स्त्री. ಎಣಿಕೆ, ಗಣನೆ; ಜಪಮಾಲೆ.

शुमाल, पु. ಉತ್ತರದಿಕ್ಕು, ಬಡಗು.

शुमाली, वि. ಉತ್ತರದಿಕ್ಕಿನ, ಬಡಗಣ.

शुरू, पु. ಆರಂಭ, ಆದಿ, ಮೊದಲು; ಉಪಕ್ರಮ, ಶುರು, ಷುರು, ಸುರುವು.

शुरूआत, स्त्री. ಪ್ರಾರಂಭ, ಪೀಠಿಕೆ.

शुर्ब, पु. ಕುಡಿಯುವಿಕೆ, ಪಾನ; ಪಾನಕ.

शुल, वि. ಮೃದು, ಕೋಮಲ.

शुल्क, पु. ಹಾಸಲು, ಶುಲ್ಕ, ರುಸುಂ.

शुश, पु. ಶ್ವಾಸಕೋಶ, ಪುಪ್ಪುಸ; ನಾಯಿಯನ್ನು ಛೂ ಬಿಡುವಾಗ ಮಾಡುವ ಶಬ್ದ.

शुशकारना, सक्रि. ನಾಯನ್ನು ಛೂ ಬಿಡು.

शुशकारी, स्त्री. ನಾಯನ್ನು ಛೂ ಬಿಡುವಿಕೆ.

शुश्रूषा, स्त्री. ಸೇವೆ, ಶುಶ್ರೂಷೆ.

शुष्क, वि. ಒಣಗಿದ, ತಾರಿದ, ಶುಷ್ಕ.

शुष्कता, स्त्री. ಒಣತನ, ಶುಷ್ಕತೆ.

शुस्त, स्त्री. ತೊಳೆಯುವಿಕೆ; ಪ್ರಕ್ಷಾಲನೆ. वि. ತೊಳೆದ, ಶುದ್ಧಮಾಡಿದ; ಪವಿತ್ರ. शुस्त शू= ತೊಳೆದು ಶುದ್ಧಮಾಡುವಿಕೆ

शुस्तगी, स्त्री. ಪವಿತ್ರತೆ, ಶುದ್ಧ, ಸ್ವಚ್ಛತೆ.

शूम, वि. ದುರದೃಷ್ಟ, ಹತಭಾಗ್ಯ; ಕೃಪಣ, ಲೋಭಿ.

शूमी, स्त्री. ಜಿಪುಣತನ, ಲೋಭ.

शूर, पु. ಶೂರ, ವೀರ.

**शूरता**, स्त्री. ಶೂರತನ, ಶೌರ್ಯ.
**शूरा**, पु. ಮಂತ್ರಾಲೋಚನೆ; ಸಲಹೆ.
**शूल**, पु. ಚುಚ್ಚುವ ನೋವು, ಶೂಲೆ; ಈಟಿ, ಶೂಲ; ತ್ರಿಶೂಲ.
**शूली**, स्त्री. ಗಲ್ಲುಮರ, ತೂಗುಮರ.
**शृंगार**, पु. ನಾಯಕ ನಾಯಕಿಯರ ಪ್ರೇಮ ಮತ್ತು ಅದರ ವರ್ಣನೆ; ಶೃಂಗಾರ ರಸ; ಸಿಂಗರಿಸುವಿಕೆ, ಶೃಂಗಾರ, ಅಲಂಕಾರ.
**शृंगारदान**, पु. ಅಲಂಕಾರದ ವಸ್ತುಗಳನ್ನಿಡುವ ಪೆಟ್ಟಿಗೆ.
**शृंगारना**, सक्रि. ಸಿಂಗರಿಸು, ಅಲಂಕರಿಸು.
**शेख़**, पु. ಮುಹಮ್ಮದ್ ಪೈಗಂಬರನ ವಂಶಸ್ಥರ ಬಿರುದು; ಮುಸಲ್ಮಾನರ ಒಂದು ಪಂಗಡ; ಮುಸಲ್ಮಾನರ ಧರ್ಮಗುರು, ಆಚಾರ್ಯ.
**शेख़-चिल्ली**, पु. ಪೆದ್ದ, ಹೆಡ್ಡ; ಮಂಕುದಾಸಯ್ಯ, ಗಾಂಪರೊಡೆಯ; ಮನೋರಾಜ್ಯ ಮಾಡುವವ.
**शेख़ानी**, स्त्री. शेख़ का स्त्री. रूप.
**शेख़ी**, स्त्री. ಅಹಂಕಾರ, ಗರ್ವ; ಹೆಮ್ಮೆ, ಜಂಭ; ಜಬರ್; ಒಯ್ಯಾರ; ಬಡಾಯಿ, ಬಡಿವಾರ, ಡೌಲು. शेख़ी बघारना = ಜಂಭಕೊಚ್ಚು, ಬಡಿವಾರ ಹೇಳು.
**शेख़ीबाज़**, वि. ಜಂಭಗಾರ, ಬಡಾಯಿಖೋರ.
**शेद**, वि. ಪ್ರಕಾಶಿಸುವ, ಹೊಳೆವ. पु. ಬೆಳಕು; ಸೂರ್ಯ.
**शेफ़्तगी**, स्त्री. ಮೋಹ, ಆಸಕ್ತಿ.
**शेफ़्ता**, वि. ಮೋಹಗೊಂಡ, ಆಸಕ್ತ.
**शेब**, पु. ಇಳಕಲು, ಇಳಿತ; ಇಳಿಜಾರು. क्रिवि. ಕೆಳಗೆ, ಕೆಳಗಡೆ.
**शेर**, पु. ಹುಲಿ; ಸಿಂಹ; ಉರ್ದು ಕವಿತೆಯ ಎರಡು ಚರಣ; ಕವನ.
**शेरदहां**, पु. ವ್ಯಾಘ್ರಮುಖ.
**शेरनी**, स्त्री. ಹೆಣ್ಣು ಹುಲಿ, ವ್ಯಾಘ್ರಿ.
**शेर-पंजा**, पु. ಹುಲಿನಖ.
**शेरबच्चा**, पु. ಹುಲಿ ಮರಿ; ಚಿಕ್ಕ ತುಪಾಕಿ, ಕೋವಿ.
**शेरवानी**, स्त्री. ಒಂದು ಬಗೆ ಅಂಗಿ.
**शेराना**, वि. ಸಿಂಹದಂತಹ; ಉಗ್ರ, ರೌದ್ರ
**शेरी**, वि. ಭಯಂಕರ; ಧೈರ್ಯಶಾಲಿ.
**शेवन**, पु. ಗೋಳಾಟ; ಅಳು.
**शेवा**, पु. ರೀತಿ, ಬಗೆ; ರೂಢಿ; ಕೆಲಸ; ವೃತ್ತಿ, ಉದ್ಯೋಗ; ಹಾವಭಾವ, ಒಯ್ಯಾರ, ಬೆಡಗು.
**शै**, स्त्री. ವಸ್ತು, ಪದಾರ್ಥ; ಕೆಲಸ; ಭೂತ
**शैतनत**, स्त्री. ದುಷ್ಟತನ, ಕೆಟ್ಟತನ, ಖೋಡಿತನ.
**शैतान**, पु. ಪಿಶಾಚಿ, ಭೂತ, ಸೈತಾನ; ಅತಿದುಷ್ಟ; ಖೋಡಿ. शैतान की आंत = ಹನುಮಂತನಬಾಲ; ರಗಳೆಯ ಕೆಲಸ
**शैतानी**, वि. ಸೈತಾನಿನ; ಪೈಶಾಚಿಕ. स्त्री. ದುಷ್ಟತನ, ದುರುಳತನ; ತಂಟೆ.
**शैद**, पु. ಮೋಸ; ವಂಚನೆ, ಕಪಟ.
**शैदा**, वि. ಆಸಕ್ತ; ಪ್ರೇಮೋನ್ಮತ್ತ.
**शैदाई**, पु. ಅನುರಾಗಿ, ಪ್ರೇಮಿ.
**शैन**, पु. ಅವಮಾನ; ಅಗೌರವ; ಕಳಂಕ
**शैब**, पु. ಕೂದಲಿನ ಬಿಳುಪು, ನರೆ;

ವಾರ್ಧಕ್ಯ, ಮುದಿತನ, ಮುಪ್ಪು.
शैल, पु. ಪರ್ವತ, ಬೆಟ್ಟ, ಶೈಲ.
शैली, स्त्री. ರೀತಿ, ತರಹ; ಶೈಲಿ, ವಾಗ್ಧೋರಣೆ.
शोक़, पु. ವ್ಯಥೆ, ವ್ಯಸನ, ಶೋಕ.
शोख़, वि. ಉದ್ಧಟ, ಎಟ್ಟ; ತುಂಟ; ಚುರುಕಿನವ; ಭಂಡ; ನಿರ್ಲಜ್ಜ; ಬೆಡಗಿನ, ಥಳುಕಿನ; ಥಳಥಳಿಸುವ.
शोख़ी, स्त्री. ಉದ್ಧಟತನ, ತುಂಟತನ; ದಿಂಡತನ, ನಿರ್ಲಜ್ಜತೆ; ಒಯ್ಯಾರ, ಬೆಡಗು, ಥಳುಕು.
शोच, पु. ದುಃಖ; ಚಿಂತೆ.
शोचनीय, वि. ಚಿಂತಾಜನಕ; ಹೀನ.
शोधा, पु. ಶುದ್ಧಿ; ಶೋಧನೆ; ಚುಕ್ತಾಯ
शोधना, सक्रि. ಶೋಧಿಸು, ಸೋಸು.
शोधवाना, सक्रि. शोधना का प्रे.रूप.
शोब, पु. ಒಗೆಯುವಿಕೆ, ತೊಳೆಯುವಿಕೆ
शोबदा, पु. ಇಂದ್ರಜಾಲ; ಮಾಟ; ತಕ್ಕು
शोभना, अक्रि. ಶೋಭಿಸು, ಸೊಗಯಿಸು
शोभा, स्त्री. ಪ್ರಭೆ, ಕಾಂತಿ; ಸೌಂದರ್ಯ, ಅಂದ; ಅಲಂಕಾರ.
शोभित, वि. ಶೋಭಿಸುವ; ಅಲಂಕೃತ
शोर, वि. ಉಪ್ಪಾದ, ಚೌಳು (ನೆಲ), ಹುಚ್ಚ. पु. ಗದ್ದಲ, ಗೌಜಿ, ಗುಬಾರು; ಗುಲ್ಲು, ಗಲಭೆ, ರಂಪು; ಪ್ರಸಿದ್ಧಿ. शोर गुल = ರಂಪುರಾದ್ಧಾಂತ, ರಂಪುರವಳಿ
शोरबा, पु. ಬೇಳೆಯ ಕಟ್ಟು, ಎಸರು; ರಸ, ಸಾರು.
शोरा, पु. ಸೋರುಪ್ಪು, ಪೆಟ್ಲುಪ್ಪು; ಬರಡು ನೆಲ.
शोरियत, स्त्री. ಉಪ್ಪುತನ, ಉಪ್ಪು.
शोरिश, स्त्री. ಗಲಭೆ; ಜಗಳ; ಕಲಹ.
शोरीदगी, स्त्री. ಹುಚ್ಚು; ಆಸಕ್ತಿ; ಮೋಹ.
शोरीदा, वि. ಮತಿಭ್ರಾಂತನಾದ; ಹುಚ್ಚ; ಅತಿಮೋಹಗೊಂಡ, ಅತ್ಯಾಸಕ್ತ; ಎದೆಗುಂದಿದ.
शोला, पु. ಉರಿಯ ನಾಲಗೆ, ಜ್ವಾಲೆ; ಕಿಡಿ
शोशा, पु. ಮುಂದಕ್ಕೆ ಚಾಚಿದ ತುದಿ, ಕೋಡು; ಅದ್ಭುತಸಂಗತಿ; ಅಣು, ಕಣ
शोहदा, पु. ಲಂಪಟ, ಪುಂಡ; ಶೋದ, ಸಿತಗ; ಆವಾರೋಲಿ, ಪೋಕರಿ.
शोहरत, शोहरा, स्त्री. ಖ್ಯಾತಿ, ಪ್ರಸಿದ್ಧಿ; ಹೆಸರುವಾಸಿ; ಸುದ್ದಿ, ಜನಶ್ರುತಿ.
शौक़, पु. ಉತ್ಸುಕತೆ, ಗೀಳು; ಖುಷಿ, ಮಜ, ಷೋಕಿ; ದುರ್ವ್ಯಸನ, ಚಾಳಿ, ಚಟ; ಖಾಯಿಷು. शौक़ से = ಖುಷಿಯಾಗಿ, ಭೇಷಾಗಿ, ಇಚ್ಛಾನುಸಾರ.
शौकत, स्त्री. ವಿಜೃಂಭಣೆ, ಠೀವಿ; ವೈಖರಿ; ಪರಾಕ್ರಮ; ಮುಳ್ಳು.
शौक़िया, वि. ಷೋಕಿನ, ಮೋಜಿನ. क्रिवि. ಖುಷಿಯಾಗಿ, ಷೋಕಾಗಿ.
शौक़ीन, पु. ಷೋಕಿಲಾಲ, ಮೋಜುಗಾರ; ಇಚ್ಛುಕ; ವಿಲಾಸಿ.
शौक़ीनी, स्त्री. ಷೋಕಿ, ಮೋಜು.
शौहर, पु. ಭರ್ತ, ಪತಿ, ಗಂಡ.
शौहरा, पु. ಹಣೆಯ ಪಟ್ಟಿ, ಬಾಸಿಂಗ.
शौहरी, वि. ಪತಿಯ, ಗಂಡನ.
श्याम, वि. ಶ್ಯಾಮ, ಶ್ಯಾಮಲ. श्याम टीका = ದೃಷ್ಟಿ ಬೊಟ್ಟು, ಹಣೆಗಪ್ಪು.

**श्यामा**, स्त्री. ಹಾಡುವ ಒಂದು ಪಕ್ಷಿ.
**श्रम**, पु. ಶ್ರಮ, ಪ್ರಯಾಸ, ದಣಿವು.
**श्रमजीवी**, वि. ಕೂಲಿಗಾರ, ಕಾರ್ಮಿಕ
**श्लीपद**, पु. ಹುತ್ತುಗಾಲು, ಆನೆಗಾಲು.

## ष

**षंड**, पु. ನಪುಂಸಕ; ಕೊಜ್ಜೆ, ಖೋಜ.
**षट्चक्र, षड्यंत्र**, पु. ಫಿತೂರಿ, ಒಳಸಂಚು; ಮಸಲತ್ತು, ಕಪಟೋಪಾಯ; ಠಕ್ಕು, ಮೋಸ.
**षड्यंत्री**, पु. ಫಿತೂರಿ ನಡೆಸುವವ, ಒಳಸಂಚುಗಾರ.

## स

**संकट**, वि. ಇರುಕಾದ, ಇಕ್ಕಟ್ಟಾದ. पु. ಸಂಕಟ, ಕಷ್ಟ; ತೊಂದರೆ.
**संकरा**, वि. ಇರುಕಾದ, ಸಂಕೀರ್ಣ, ಇಕ್ಕಟ್ಟಾದ. पु. ಬಿಕ್ಕಟ್ಟು, ಕಷ್ಟ. स्त्री. ಸರಪಣಿ.
**संकल**, स्त्री. ಸರಪಣಿ, ಸಂಕೋಲೆ.
**संकली**, स्त्री. ಕೈಸಂಕೋಲೆ, ಕೈಕೋಳ
**संकल्प**, पु. ದೃಢ ವಿಚಾರ, ನಿಶ್ಚಯ, ಸಂಕಲ್ಪ; ದಾನ.
**संकलपना, संकल्पना**, सक्रि. ನಿಶ್ಚಯಿಸು, ಸಂಕಲ್ಪಿಸು; ದಾನಕೊಡು. अक्रि. ಸಂಕಲ್ಪಮಾಡಿಕೊಳ್ಳು, ಎಣಿಸು
**संकार**, स्त्री. ಸಂಕೇತ, ಇಂಗಿತ, ಸನ್ನೆ, ಇಷಾರೆ. पु. ಧೂಳು, ದುಂಬು.
**संकारना**, सक्रि. ಸನ್ನೆಮಾಡು.
**संकुल**, वि. ಸಂಕಟಪಡುವ, ವ್ಯಥಿತ.
**संकेत**, पु. ಸಂಕೇತ, ಸನ್ನೆ, ಇಂಗಿತ. वि. ಇಕ್ಕಟ್ಟಾದ, ಸಂಕುಚಿತ.
**संकोच**, पु. ನಾಚಿಕೆ, ಲಜ್ಜೆ; ಸಂಕೋಚ; ಇಕ್ಕಟ್ಟು, ಇರುಕು; ಕಡಮೆ.
**संकोचना**, सक्रि. ಸಂಕೋಚಮಾಡು.
**संकोची**, वि. ಸಂಕೋಚಗಾರ, ಲಜ್ಜಾಲು
**संखिया**, पु. ಶಂಖ ಪಾಷಾಣ.
**संखो**, पु. ಸೇತುವೆ, ಸಂಕ.
**संख्या**, स्त्री. ಎಣಿಕೆ, ಗಣನೆ; ಅಂಕ, ಸಂಖ್ಯೆ.
**संग**, पु. ಕಲ್ಲು, ಶಿಲೆ; ಸೇರುವಿಕೆ, ಮಿಳನ; ಸಂಗಮ; ಕೂಟ; ಜೊತೆ, ಸಂಗ; ಸಮಾಗಮ. क्रिवि. ಜೊತೆಯಲ್ಲಿ, ಸಂಗಡ, ಕೂಡ.
**संग खारा**, पु ಚಕಮುಕಿಕಲ್ಲು, ಅಗ್ನಿಶಿಲೆ
**संगठक**, पु. ಒಂದುಗೂಡಿಸುವವ, ಕ್ರಮಪಡಿಸುವವ, ಚಾಲಕ.
**संगठन**, पु. ಒಟ್ಟುಗೂಡಿಸುವಿಕೆ, ಸೇರಿಸುವಿಕೆ, ಸಂಘಟನೆ.
**संगत**, स्त्री. ಸಂಗ, ಜತೆ; ಸಂಗಾತಿ; ಕೂಟ, ಸಭೆ; ಸಿಕ್ಖರು ಪೂಜಿಸುವ ಸ್ಥಳ, ಸಿಕ್ಖರ ದೇವಸ್ಥಾನ.
**संगतरा**, पु. ಕಿತ್ತಳೆ ಹಣ್ಣು.
**संग-तराश**, पु. ಕಲ್ಲುಕುಟಿಗ; ಶಿಲ್ಪಿ.
**संग-तराशी**, स्त्री. ಕಲ್ಲುಕುಟಿಗನ ಕೆಲಸ; ಶಿಲ್ಪ.

ಕೃಷ್ಣಾಜಿನ; ಗಡಾರಿ, ಹಾರೆ.

**साबल**, पु. ಗಡಾರಿ, ಹಾರೆ.

**साबिक़**, वि. ಪೂರ್ವದ, ಮೊದಲಿನ; ಪ್ರಥಮ. क्रिवि. ಪೂರ್ವದಲ್ಲಿ, ಮೊದಲು; ಪ್ರಥಮತಃ. पु. ಪೂರ್ವಕಾಲ.

**साबिक़ा**, पु. ಭೇಟಿ, ಭೆಟ್ಟಿ, ಸಂದರ್ಶನ; ಪೂರ್ವಪದ್ಧತಿ; ಹಳೆಯ ಪರಿಚಯ; ಸೇರಿಕೆ, ಸಂಬಂಧ; ಉಪಸರ್ಗ.

**साबित**, वि. ಪ್ರಮಾಣಪಡಿಸಿದ, ಉಪಪಾದಿಸಿದ; ರುಜುವಾತಾದ, ಸಾಧಿಸಿದ; ಸ್ಥಾಪಿತ, ಪ್ರಾಮಾಣಿಕ; ದೃಢ, ಸ್ಥಿರ; ಸಂಪೂರ್ಣವಾದ, ಸಮರ್ಪಕವಾದ.
साबित करना=ರುಜುವಾತುಮಾಡು; ಊರ್ಜಿತಪಡಿಸು.

**साबिर**, वि. ತಾಳ್ಮೆಯುಳ್ಳವ, ಸಹಿಷ್ಣು.

**साबिरी**, स्त्री. ಸಹಿಷ್ಣುತೆ, ಸಹನೆ.

**साबुन**, पु. ಸಾಬೂನು, ಸಬುಕಾರ, ಸೋಪು, ಸಾಬಾಣ.

**साबुनगर**, पु. ಸಾಬೂನು ಮಾಡುವವ.

**साबुनी**, वि. ಸಾಬೂನು ಸೇರಿಸಿದ; ಸಾಬೂನಿನ. स्त्री. ಒಂದು ಬಗೆ ಮಿಠಾಯಿ.

**साबू, साबूदाना**, पु. = सागूदाना.

**साम**, स्त्री. ಕಬ್ಬಿಣದ ಬಳೆ, ಅಣಸು; ಗರ್ಭವೇಷ್ಟನ, ಮಾಸು.

**सामना**, पु. ಮುಂದೆ ಬರುವಿಕೆ; ಮುಂಭಾಗ, ಮುಂಬಳಿ; ಸಂಧಿಸುವಿಕೆ, ಬೇಟಿ, ಭೆಟ್ಟಿ; ಎದುರಿಸುವಿಕೆ, ವಿರೋಧ.
सामना करना=ಎದುರು ಬೀಳು, ಎದುರಿಸು, ಮಾರ್ಕೊಡ್ಡು.

**सामने**, क्रिवि. ಮುಂದುಗಡೆ, ಇದಿರು; ಸಮ್ಮುಖದಲ್ಲಿ, ಸಾನ್ನಿಧ್ಯದಲ್ಲಿ, ಎದುರಿಗೆ; ಎದುರಾಗಿ, ವಿರೋಧವಾಗಿ.

**सामर्थ, सामर्थ्य**, पु. ಸಾಮರ್ಥ್ಯ; ಶಕ್ತಿ, ಬಲ; ಯೋಗ್ಯತೆ.

**सामा**, स्त्री. ಸಾಮಗ್ರಿ; ಉಪಕರಣ; ಮುಟ್ಟು; ಜಿನಸಿ, ರಸ್ತು.

**सामान**, पु. ಉಪಕರಣ, ಸಾಮಗ್ರಿ, ಸೋಪಸ್ಕರ; ಮನೆಮುಟ್ಟು; ಸಾಮಾನು; ಪರಿಕರ, ವಸ್ತು; ವ್ಯವಸ್ಥೆ, ಏರ್ಪಾಡು; ಕಟ್ಟು; ಸಿದ್ಧತೆ; ರೀತಿ.

**सामी**, पु. ಸ್ವಾಮಿ, ಒಡೆಯ. स्त्री. ಸಾಗುವಳಿ ಭೂಮಿ; ಬಳೆ, ಅಣಸು. वि. ಉನ್ನತ, ಉತ್ತುಂಗ.

**सामुहाँ**, क्रिवि. ಸಮ್ಮುಖ, ಎದುರಿಗೆ.

**साम्य**, पु. ಸಮಾನತೆ, ಸಾಮ್ಯ.

**साम्यवाद**, पु. ಸಮಾಜ ಸಮತಾವಾದ, ಸಾಮ್ಯವಾದ.

**सायंकाल**, पु. ಸಾಯಂಕಾಲ, ಸಂಜೆ.

**सायत**, स्त्री. = साइत.

**सायबान**, पु. ಬಿಸಿಲು ಮಳೆಗಾಗಿ ಮನೆಯ ಮುಂದುಗಡೆ ಹಾಕಿದ ಚಪ್ಪರ, ಚಾಟು ಚಪ್ಪರ; ಒಪ್ಪಾರು, ಓರಬಾಕಿ; ವರಾಂಡ, ಓಸಾರೆ; ಛತ್ರಿ, ಕೊಡೆ.

**सायर**, पु. ಸಾಗರ, ಸಮುದ್ರ; ಮುಂಭಾಗ; ತಲೆ; ತಿರುಗಾಡುವವ; ಸುಂಕ, ಆಕ್ಟ್ರಾಯಿ; ಸಾಯರು, ಜಕಾತಿ.
सायर ख़र्च=ಸಾದಿಲ್ವಾರು.

**साया**, पु. ಛಾಯೆ, ನೆರಳು; ಆಶ್ರಯ; ಪ್ರತಿಬಿಂಬ; ಭೂತ, ದೆವ್ವ, ರಾವು;

ದೆವ್ವಸೋಙು; ಲಂಗ, ಪಾವಡೆ.

सायिर, पु. ತೆರಿಗೆಯಿಲ್ಲದ ಜಮೀನು, ಜೋಡಿ ಜಮೀನು, ಮಾನ್ಯ, ಉಂಬಳಿ; ವಿವಿಧ, ಚಿಲ್ಲರೆ.

सायिल, पु. = साइल.

सारंग, पु. ಜಿಂಕೆ; ನಾವಿಕ; ಒಂದು ರಾಗ; ಸಾರಂಗಿ (ವಾದ್ಯ).

सारंगिया, पु. ಸಾರಂಗಿ ಬಾರಿಸುವವ.

सारंगी, स्त्री. ಒಂದು ಬಗೆ ವೀಣೆ, ಸಾರಂಗಿ.

सार, पु. ಸಾರ, ರಸ; ತತ್ವ; ತಿರುಳು; ಕೆಚ್ಚು, ಚೇಗು; ಕಸುವು, ಸತ್ವ, ಶಕ್ತಿ; ಹಾಲಿನ ಕೆನೆ; ಪೋಷಣೆ, ಸಂರಕ್ಷಣೆ. वि. ಉತ್ತಮವಾದ, ಉತ್ಕೃಷ್ಟ.

सारना, सक्रि. ಮುಗಿಸು, ಪೂರ್ತಿ ಮಾಡು; ನೆರವೇರಿಸು; ತರಬೇತು ಮಾಡು, ತಿದ್ದು; ಸಿಂಗರಿಸು; ರಕ್ಷಿಸು; ನಿರ್ವಹಿಸು; ಕಣ್ಣಿಗೆ ಕಪ್ಪು ಹಚ್ಚು; (ಬಾಣ) ಎಸೆ.

सारबान, पु. ಒಂಟೆ ನಡೆಸುವವ.

सारभाटा, पु. ಸಮುದ್ರದ ಇಳಿತ ಮತ್ತು ಭರತ.

सारस, पु. ಸಾರಸ ಪಕ್ಷಿ, ಕೊಕ್ಕರೆ.

सारा, वि. ಎಲ್ಲ, ಸಕಲ, ಸಮಸ್ತ, ಇಡೀ, ವಿಶಿಷ್ಟ. पु. ಭಾವಮೈದ.

सारिणी, स्त्री. ಕೋಷ್ಟಕ, ಗೋಷ್ವಾರೆ.

सारी, स्त्री. ಸೀರೆ, ಶೇಲೆ; ನೆತ್ತದಾಟದ ಕಾಯಿ, ಸಾರಿ.

सारिका, सारू, स्त्री. ಗೊರವಂಕ, ಮೈನ.

साल, स्त्री. ತೂತು ಬೀಳುವಿಕೆ; ತೂತು ಕೊರೆಯುವಿಕೆ; ತೂತು, ರಂಧ್ರ, ಘಾಯ, ಹುಣ್ಣು; ದುಃಖ, ವೇದನೆ; ಶಾಲೆ; ಮನೆ. पु. ಬೇರು; ಮರ,ವೃಕ್ಷ; ರಾಳ; ವರ್ಷ, ಸಾಲು, ಸಂವತ್ಸರ.

सालक, वि. ನೋವನ್ನುಂಟುಮಾಡುವ, ದುಃಖಕರ.

साल-गिरह, स्त्री. ಜನ್ಮದಿನ,ವರ್ಧಂತಿ.

सालन, पु. ಪಲ್ಯ, ಪಳದ್ಯ, ಕರಿ; ಮಸಾಲೆ ಹಾಕಿದ ಮಾಂಸ.

सालना, सक्रि. ತಿವಿ; ತೂತು ಕೊರೆ, ಚುಚ್ಚು; ನೋಯಿಸು. अक्रि. ನೋವಾಗು, ಚುಚ್ಚು.

सालब-मिश्री, सालम-मिश्री, स्त्री. ಪುಷ್ಟಿಕಾರಕವಾದ ಒಂದು ಬಗೆ ಗೆಡ್ಡೆ, ಸಾಲಾಮಿಸ್ರಿ.

सालसा, पु. ಸೊಗದೆಬೇರು, ನನ್ನಾರಿ, ಸಾರಸಪರಿಲ್ಲ.

साला, पु. ಭಾವಮೈದ, ಭಾವನೆಂಟ, ಮೈದ; ಗೊರವಂಕ, ಮೈನ.

सालाना, वि. ಸಾಲಿಯಾನಾ,ವಾರ್ಷಿಕ.

सालार, पु. ಮುಂದಾಳು, ನಾಯಕ; ದಳಪತಿ.

सालिक, पु. ಪ್ರಯಾಣಿಗ, ಯಾತ್ರಿಕ; ಧರ್ಮಿಷ್ಠ; ಭಕ್ತ, ಸಂತ.

सालिम, वि. ಭದ್ರವಾದ, ಜೋಪಾನವಾದ; ಸೌಖ್ಯವಾದ, ಸ್ವಸ್ಥವಾದ; ಪೂರ್ಣ, ಸಂಪೂರ್ಣ.

सालियाना, वि. = सालाना.

सालिस, पु. ಮೂರನೆಯವ; ಮಧ್ಯಸ್ಥ

ಗಾರ; ಪಂಚಾಯಿತ.
**सालिसी**, स्त्री. ಮಧ್ಯಸ್ತಿಕೆ, ಪಂಚಾಯತು.
**साली**, स्त्री. ಹೆಂಡತಿಯ ತಂಗಿ, ನಾದಿನಿ.
**साल्**, पु. ಕುಂಕುಮ ವಸ್ತ್ರ.
**सालूस**, पु. ಮೋಸ, ಕಪಟ.
**सालेह**, वि. ಸದಾಚಾರಿ, ಪುಣ್ಯವಂತ.
**सावंत**, वि. ವೀರ, ಶೂರ.
**सावंती**, स्त्री. ಶೌರ್ಯ, ಪರಾಕ್ರಮ.
**साव**, पु. ಸಾಹುಕಾರ, ಧನಿಕ.
**सावकाश**, पु. ಸಾವಕಾಶ, ಪುರಸತ್ತು.
**सावज**, वि. ಕಾಡಿನ, ವನದ, ವನ್ಯ, पु. ಬೇಟೆ; ಬೇಟೆಯ ಮೃಗ.
**सावत**, स्त्री. ಸವತಿಯರ ದ್ವೇಷ, ಅಸೂಯೆ.
**सावधान**, वि. ಜಾಗರೂಕ, ಎಚ್ಚರಿಕೆಯುಳ್ಳ, ಗಮನಕೊಡುವ.
**सावधानी**, स्त्री. ಜಾಗರೂಕತೆ, ಎಚ್ಚರಿಕೆ, ಜೋಪಾನ. सावधानी रखना =ಎಚ್ಚರಿಕೆ ವಹಿಸು, ಗಮನ ಕೊಡು.
**सावन**, पु. ಶ್ರಾವಣಮಾಸ. सावन सूखे न भादों हरे=ಎಲ್ಲಾ ಕಾಲಗಳಲ್ಲೂ ಒಂದೇಸಮನಾಗಿರುವಿಕೆ.
**सावनी**, वि. ಶ್ರಾವಣದ; ಶ್ರಾವಣಮಾಸದಲ್ಲಿ ಕೊಯ್ಲಿಗೆ ಬರುವ (ಬೆಳೆ), ಮುಂಗಾರು (ಬೆಳೆ). स्त्री. ಶ್ರಾವಣಿ, ಉಪಾಕರ್ಮ.
**सावर**, पु. ಒಂದು ಜಾತಿ ಜಿಂಕೆ.
**सास**, स्त्री. ಹೆಂಡತಿ ಅಥವಾ ಗಂಡನ ತಾಯಿ, ಅತ್ತೆ.
**सासन**, पु. ಶಾಸನ, ಆಳಿಕೆ, ಆಣತಿ.
**सासनलेट**, स्त्री. ಜಾಳು ಬಟ್ಟೆ.
**सासना**, सक्रि. ಶಾಸ್ತಿಮಾಡು, ದಂಡಿಸು.
**सासरा**, पु. ಅತ್ತೆಮನೆ, ಗಂಡನ ಮನೆ, ಹೊಕ್ಕ ಮನೆ.
**सासुर**, पु. ಮಾವ; ಮಾವನ ಮನೆ.
**साह**, पु. ಸಾಧು; ಸಜ್ಜನ; ವ್ಯಾಪಾರಸ್ಥ; ಸಾಹುಕಾರ, ಸೇಠ್, ಶ್ರೇಷ್ಠಿ.
**साहन**, स्त्री. साह का स्त्री. रूप.
**साहनी**, स्त्री. ಸೇನೆ, ಪಡೆ; ಜತೆಗಾತಿ.
**साहब**, पु. ಮಿತ್ರ, ಸ್ನೇಹಿತ; ಸ್ವಾಮಿ, ಒಡೆಯ, ಅಧಿಪತಿ; ಮರ್ಯಾದಸ್ಥ; ಘನವಂತ, ಮಹನೀಯರು; ಸಾಹೇಬ, ಘರಂಗಿಯವ. साहब सलामत =ನಮಸ್ಕಾರ, ವಂದನೆ.
**साहबज़ादा**, पु. ಪುತ್ರ, ಮಗ.
**साहबज़ादी**, स्त्री. ಪುತ್ರಿ, ಮಗಳು.
**साहबी**, वि. ಸ್ವಾಮಿಯ, ಅಧಿಪತಿಯ; ಸಾಹೇಬರಿಗೆ ಸಂಬಂಧಿಸಿದ; ಘನವಂತರ. स्त्री. ಒಡೆತನ; ಆಳಿಕೆ; ಪ್ರಭುತ್ವ; ದೊಡ್ಡಸ್ತಿಕೆ.
**साहस**, पु. ಧೈರ್ಯ, ಸಾಹಸ, ದಿಟ್ಟತನ; ಅಪಹಾರ; ದಂಡ.
**साहसी**, वि. ಎದೆಗಾರ, ಸಾಹಸಿ, ದಿಟ್ಟ.
**साहा**, पु. ಶುಭಲಗ್ನ, ಮುಹೂರ್ತ.
**साहाय्य**, पु. ಸಹಾಯ, ಒತ್ತಾಸೆ.
**साहित्य**, पु. ಸೇರಿಕೆ, ಕೂಟ; ಕಾವ್ಯ; ಸಾಹಿತ್ಯ, ವಾಙ್ಮಯ.
**साहित्यिक**, वि. ಸಾಹಿತ್ಯ ಸಂಬಂಧಪಾದ, ಸಾಹಿತ್ಯಕ. पु. ಸಾಹಿತಿ.

**साहिब**, पु. = साहब.

**साहिबा**, स्त्री. ಸ್ವಾಮಿನಿ; ಮಹಿಳೆ; ದೊರೆಸಾನಿ; ಮಡದಿ; ಪತ್ನಿ.

**साहिर**, पु. ಮಂತ್ರಗಾರ, ಜಾಲಗಾರ.

**साहिरा**, स्त्री. ಮಾಟಗಾತಿ.

**साहिल**, पु. ನದೀತೀರ, ತಟ.

**साही**, स्त्री. ಮುಳ್ಳುಹಂದಿ, ಏದು; ಜೋಗಿ, ಫಕೀರ.

**साहु**, पु. ಸಜ್ಜನ; ಸಾಹುಕಾರ; ವ್ಯಾಪಾರಸ್ಥ.

**साहुल**, पु. ಇಟ್ಟಿಗೆ ಕೆಲಸದವರ ಗುಂಡು, ಗಟ್ಟಿಗುಂಡು, ಲಂಬಸೂತ್ರ.

**साहू**, पु. ಸಾಹುಕಾರ, ವ್ಯಾಪಾರಸ್ಥ; ಸಜ್ಜನ; ಹಿತೈಷಿ; ಸತ್ಯವಂತ.

**साहूकार**, पु. ವ್ಯಾಪಾರಸ್ಥ; ಸಾಹುಕಾರ, ಸಾವಕಾರ, ಸೇಠ್, ಶ್ರೇಷ್ಠಿ.

**साहूकारा**, पु. ಹಣದ ಲೇವಾದೇವಿ, ಸರಾಫು ವ್ಯಾಪಾರ; ಚಿನಿವಾರ ಕಟ್ಟೆ. वि. ಸಾಹುಕಾರರ.

**साहूकारी**, स्त्री. ಹಣದ ಲೇವಾದೇವಿ, ಮಾರುವೆ, ಸರಾಫು ವ್ಯಾಪಾರ; ಸಾವಕಾರಿಕೆ; ವ್ಯಾಪಾರ, ವಾಣಿಜ್ಯ.

**साहेब**, पु. = साहब.

**सिकना**, अक्रि. ಕೆಂಡದಲ್ಲಿ ಬೇಯು, ಸುಡು.

**सिंगड़ा**, पु. **सिंगड़ी**, स्त्री. ಕೋವಿ ಮದ್ದಿನ ಕೊಂಬು, ಸಣ್ಣ ಕಹಳೆ.

**सिंगरौर**, पु. ಶುಂಠಿ.

**सिंगरफ़**, पु. ಚಂದ್ರ, ಸಿಂದೂರ.

**सिंगा**, पु. ಕೊಂಬು, ಕಹಳೆ; ಸಿಂಗ.

**सिंगार**, पु. ಶೃಂಗಾರ, ಸಿಂಗಾರ, ಅಲಂಕಾರ; ಅಂದ, ಸೊಬಗು.

**सिंगारदान**, पु. ಬಾಚಣಿಗೆ ಕನ್ನಡಿ ಮೊದಲಾದ ಶೃಂಗಾರ ಸಾಮಗ್ರಿಗಳನ್ನಿಡುವ ಪೆಟ್ಟಿಗೆ.

**सिंगारना**, सक्रि. ಸಿಂಗರಿಸು, ಅಲಂಕರಿಸು; ಸಜ್ಜುಗೊಳಿಸು, ಸವಣಿಸು.

**सिंगारहाट**, स्त्री. ಗುಡಸೆಟ್ಟಿಯ ಮನೆ, ಹಾದರದ ಮನೆ; ಸೂಳೆಗೇರಿ.

**सिंगारहार**, पु. ಪಾರಿಜಾತ ಹೂ.

**सिंगारिया**, पु. ದೇವರ ವಿಗ್ರಹಗಳಿಗೆ ಅಲಂಕಾರ ಮಾಡುವವ, ಪೂಜಾರಿ, ತಮ್ಮಡಿ.

**सिंगारी**, वि. ಸಿಂಗರಿಸುವವ, ಅಲಂಕಾರ ಮಾಡುವವ.

**सिंगिया**, पु. ಒಂದು ವಿಷಮೂಲಿಕೆ, ಶೃಂಗಿಕ.

**सिंगी**, पु. ಕೊಂಬು, ಕಹಳೆ, ಸಿಂಗನಾದ. स्त्री. ಒಂದು ಜಾತಿ ಮೀನು; ರಕ್ತ ಹೀರುವ ಕೊಳವೆ, ಉಸಿರು ಬುರುಡೆ, ಶೃಂಗ, ರಕ್ತಚೋಷಕ. सिंगी लगाना = ಉಸಿರು ಬುರುಡೆ ಹಿಡಿಸು.

**सिंगौटी**, स्त्री. ದನದ ಕೋಡಿಗೆ ಹಾಕುವ ಹಿತ್ತಾಳೆ ಟೋಪಿ, ಕೋಡಣಸು; ಬಾಚಣಿಗೆ ಮೊದಲಾದುವನ್ನು ಇಟ್ಟುಕೊಳ್ಳುವ ಚಿಕ್ಕ ಪೆಟ್ಟಿಗೆ, ಸಂಬಳಿಗೆ.

**सिंघ**, पु. ಸಿಂಹ, ಸಿಂಗ.

**सिंघा**, पु. ಕೊಂಬು, ಕಹಳೆ.

**सिंघाड़ा**, पु. ಒಂದು ಬಳ್ಳಿ, ಶೃಂಗಾಟಕ; ಮುಮ್ಮೂಲೆಯಾದ ಹೊಲಿಗೆ.

**सिंघारा**, पु. ಕೊಂಬುಳ್ಳ ಪ್ರಾಣಿಗಳು.
**सिंघान**, पु. ತುಕ್ಕು, ಕಿಟ್ಟ, ಮುಂಡೂರ
**सिंघासन**, पु. ಸಿಂಹಾಸನ.
**सिंघिनी**, स्त्री. ಹೆಣ್ಣು ಸಿಂಹ.
**सिंघी**, स्त्री. ಒಂದು ಬಗೆ ಮೀನು; ಶುಂಠಿ
**सिंघेला**, पु. ನೀರು ಚಿಮುಕಿಸುವಿಕೆ, ಪ್ರೋಕ್ಷಣೆ; ನೀರು ಹಾಯಿಸುವಿಕೆ.
**सिंचना**, अक्रि. ನೀರು ಕಟ್ಟಲ್ಪಡು, ನೀರು ಹಾಯು; ಸೇಚಿತವಾಗು.
**सिंचाई**, स्त्री. ನೀರು ಚಿಮುಕಿಸುವಿಕೆ, ಸಿಂಪಡಿಸುವಿಕೆ, ಪ್ರೋಕ್ಷಣೆ; ನೀರು ಹಾಯಿಸುವಿಕೆ, ನೀರಾವರಿ; ನೀರು ಹಾಯಿಸಲು ಕೊಡುವ ಕೂಲಿ ಅಥವಾ ತೆರಿಗೆ, ನೀರಾವರಿ ತೆರಿಗೆ.
**सिंचाना**, सक्रि. **सींचना** का प्रे. रूप.
**सिंदूर**, पु. ಸಿಂದೂರ, ಚಂದ್ರ (ಪುಡಿ)
**सिंदूरदान**, **सिंदूरबंदन**, पु. ಮದುವೆ ಹೆಣ್ಣಿನ ಬೈತಲೆಗೆ ಕುಂಕುಮ ಹಚ್ಚುವ ಒಂದು ಶಾಸ್ತ್ರ.
**सिंदूरिया**, वि. ಕುಂಕುಮ ಬಣ್ಣದ
**सिंदोरा**, **सिंधोरा**, पु. ಕುಂಕುಮದ ಭರಣಿ.
**सिंह**, पु. ಸಿಂಹ.
**सिंहनी**, स्त्री. ಹೆಣ್ಣುಸಿಂಹ, ಸಿಂಹಿಣಿ.
**सिंहपौर**, पु. ಹೆಬ್ಬಾಗಿಲು, ಸಿಂಹದ್ವಾರ
**सिंहावलोकन**, पु. ಮುಂದರಿಯುವ ಮುನ್ನ ಹಿಂತಿರುಗಿ ನೋಡುವಿಕೆ, ಹಿಂದಿನ ಸಂಗತಿಗಳ ಪುನರಾಲೋಚನೆ; ಸಿಂಹಾವಲೋಕನ, ಹಿನ್ನೋಟ.
**सिअरा**, पु. ಛಾಯೆ, ನೆಳಲು.
**सिआना**, सक्रि. ಹೊಲಿಸು.
**सिआर**, पु. **सिआरी**, स्त्री. ನರಿ, ಕುನ್ನಿ ನರಿ.
**सिकंजवीन**, स्त्री. ಸಿಂಬೆಹಣ್ಣಿನಪಾನಕ, ಷರಬತ್ತು; ಕಬ್ಬಿನ ಹಾಲಿನ ಷರಬತ್ತು
**सिकंदरा**, पु. ರೈಲು ಮಾರ್ಗದಲ್ಲಿರುವ ಕೈಮರ.
**सिकड़ी**, **सिकरी**, स्त्री. ಸರಪಣಿ, ರುಳಿ; ಚಿಲುಕ; ಕುತ್ತಿಗೆಯ ಸರ; ಉಡುದಾರ.
**सिकता**, पु. ಮರಳು, ಹೊಯಿಗೆ; ಮರಳು ನೆಲ; ನುರುಜಗಲ್ಲು, ಜಲ್ಲಿ; ಅಶ್ಮರಿರೋಗ; ಸಕ್ಕರೆ.
**सिकत्तर**, पु. ಸೆಕ್ರೆಟರಿ, ಕಾರ್ಯದರ್ಶಿ
**सिकना**, अक्रि. ಬಿಸಿಯಾಗು; ಸೀಯು; ಸೀದುಹೋಗು; ಸುಡು.
**सिकरा**, पु. ಬೇಟೆ ಗಿಡಗ, ಸಾಳುವ.
**सिकल**, स्त्री. ಸರಪಣಿ; ಚಿಲುಕ.
**सिकली**, स्त्री. ಚಿಲುಕದ ಕೊಳಕೆ.
**सिक़ली**, स्त्री. ಸಾಣೆ ಹಿಡಿಯುವಿಕೆ, ಸಾಣೆ.
**सिक़लीगर**, पु. ಸಾಣೆ ಹಿಡಿಯುವವ, ಸಾಣೆಗಾರ.
**सिकहर**, पु. ನೆಲುವು, ಶಿಕ್ಕ, ಕಲ್ಲಿ.
**सिकुड़न**, स्त्री. ಮುದುರಿಕೊಳ್ಳುವಿಕೆ, ಉಡುಗುವಿಕೆ; ಸುಕ್ಕು, ವಲಿ; ಆಕುಂಚನ
**सिकुड़ना**, अक्रि. ಮುದುರು, ಮುರುಟು; ಸೇದಿಕೊಳ್ಳು, ಉಡುಗು; ಸುಕ್ಕುಗಟ್ಟು, ಸುಕ್ಕು.
**सिक्नत**, स्त्री. ವಾಸಸ್ಥಾನ, ಆವಾಸ; ಸಂತೃಪ್ತಿ.

**सिकोड़**, स्त्री. ಮುದುರುವಿಕೆ, ಉಡುಗುವಿಕೆ.

**सिकोड़ना**, सक्रि. ಮುದುರು, ಮುರುಟು; ಉಡುಗಿಸು; ಸುರುಟು, ಮಡಿಸು; ಉರುಗಿಸು.

**सिकोरा**, पु. = सकोरा.

**सिकोरी**, स्त्री. ಚಿಕ್ಕ ಬುಟ್ಟಿ, ತೊಟ್ಟಿ.

**सिक्कड़**, पु. ಸರಪಣಿ, ಚಿಲುಕ.

**सिक्का**, पु. ಠಸ್ಸೆ; ಮೊಹರು, ಮುದ್ರೆ; ನಾಣ್ಯದ ಮೇಲಿನ ಮುದ್ರೆ; ನಾಣ್ಯ, ಟಂಕ, ಹಣ; ಸ್ವರ್ಣಪದಕ, ಮೆಡಲು. सिक्का चलाना या बिठाना = ನಾಣ್ಯ ಹೊಡೆ; ತನ್ನ ಅಧಿಕಾರವನ್ನು ಸ್ಥಾಪಿಸು

**सिक्काज़न**, पु. ನಾಣ್ಯ ಟಂಕ ಹೊಡೆಯುವವ.

**सिख**, पु. ಶಿಷ್ಯ, ಚೇಲ; ಗುರುನಾನಕರ ಮತಸ್ಥರು, ಸಿಕ್ಖರು.

**सिखनी**, स्त्री. ಸಿಕ್ಖರ ಹೆಂಗಸು.

**सिखरन**, स्त्री. ಸಕ್ಕರೆ ಬೆರೆತ ಮೊಸರು; ಶ್ರೀಖಂಡ.

**सिखलाना**, सक्रि. ಕಲಿಸು, ಉಪದೇಶಿಸು.

**सिखवाना**, सक्रि. सीखना का प्रे. रूप.

**सिखाई**, स्त्री. ಓದಿಸುವಿಕೆ, ಕಲಿಸುವಿಕೆ; ಶಿಕ್ಷಣ, ವಿದ್ಯಾಭ್ಯಾಸ; ವಿದ್ಯಾಶುಲ್ಕ, ಶಿಕ್ಷಣದ ರುಸುಂ.

**सिखाना**, सक्रि. ಓದಿಸು; ಕಲಿಸು; ಉಪದೇಶಿಸು, ಬೋಧಿಸು; ತರಬೇತು ಮಾಡು; ದಂಡಿಸು. सिखाना पढ़ाना = ಪಾಠ ಕಲಿಸು; ದುರ್ಬೋಧನೆ ಮಾಡು

**सिखापन**, पु. ಉಪದೇಶ, ಶಿಕ್ಷಣ.

**सिखावन**, पु. ಶಿಕ್ಷೆ, ಶಿಕ್ಷಣ, ಉಪದೇಶ

**सिखावना**, सक्रि. ಕಲಿಸು, ಓದಿಸು.

**सिग़ार**, पु. ಚಿಕ್ಕತನ; ಸೂಕ್ಷ್ಮತೆ, ಅಣಿಮೆ

**सिग़ार**, वि. ಸಣ್ಣ, ಚಿಕ್ಕ. सिग़ार-ओ किबार = ದೊಡ್ಡವರು ಚಿಕ್ಕವರು; ಜನಪದ.

**सिगाल**, पु. ಸಂದೇಹ, ಸಂಶಯ; ಹಗೆತನ, ದ್ವೇಷ; ಮಾತು, ವಚನ.

**सिगरा, सिगरो**, वि. ಎಲ್ಲ, ಸಮಸ್ತ.

**सिगोशा**, वि. ತ್ರಿಕೋಣಾಕಾರದ, ಮುಮ್ಮೂಲೆಯ.

**सिजदा**, पु. ದಂಡಪ್ರಣಾಮ; ಪ್ರಾರ್ಥನೆ

**सिजदागाह**, स्त्री. ಪ್ರಾರ್ಥನೆಯ ಸ್ಥಳ; ಮಸೀದಿ; ದೇವಸ್ಥಾನ; ನಮಾಜು ಮಾಡುವಾಗ ಹಾಸುವ ಬಟ್ಟೆ.

**सिजल**, वि. ಒಳ್ಳೆಯ; ಸರಿಯಾದ; ಅಚ್ಚುಕಟ್ಟಾದ, ಸೊಗಸಾದ.

**सिझना**, अक्रि. ಬೇಯು, ಕುದಿ.

**सिझाना**, सक्रि. ಕುದಿಸು, ಕುಚ್ಚು; ಬೇಯಿಸು; ಸುಡು; ಚರ್ಮ ಹದಮಾಡು.

**सिटकिनी**, स्त्री. ಅಗುಳಿ, ಚೀಪು, ತಾಪಾಳು.

**सिटपिटाना**, अक्रि. ಗಾಬರಿಗೊಳ್ಳು; ಕಕ್ಕಾಬಿಕ್ಕಿಯಾಗು, ಬೆಪ್ಪಾಗು; ನಾಚು

**सिट्ट**, पु. ಜಂಭ, ಡೌಲು, ಬಡಿವಾರ.

**सिट्टा**, पु. ಜೋಳದ ಕಾಳು; ಜೋಳ.

**सिट्टी**, स्त्री. ಜಂಭ ಕೊಚ್ಚುವಿಕೆ, ಮಾತುಗಾರಿಕೆ; ಪ್ರಜ್ಞೆ, ಚೇತರಣೆ. सिट्टी भूलना या गुम होना = ಕಕ್ಕಾಬಿಕ್ಕಿ

ಯಾಗು, ಕಕಮಕ ಬೀಳು; ಮರುಳ ನಾಗು.

**सिठनी**, ಸ್ತ್ರೀ. ಮದುವೆಯಲ್ಲಿ ಹಾಡುವ ಅಶ್ಲೀಲ ಗೀತೆ, ಬೀಗರ ಹಾಡು.

**सिठाई**, ಸ್ತ್ರೀ. ನೀರಸತೆ, ಸಪ್ಪೆ, ಅರುಚಿ.

**सिठानी**, ಸ್ತ್ರೀ. = सेठानी.

**सिड़**, ಸ್ತ್ರೀ. ಹುಚ್ಚು, ಪೈತ್ಯ, ಮರುಳು, ಹೇಕುಳಿ.

**सिड़न**, ಸ್ತ್ರೀ. ಹುಚ್ಚಿ, ಉನ್ಮಾದಿನಿ.

**सिड़ी**, ಪು. ಹುಚ್ಚ, ಮರುಳ, ಬೆಪ್ಪ.

**सितंग**, ಪು. ಶೀತಾಂಗ, ನಡುಗು ರೋಗ, ಅದುರುವಾಯು.

**सितम**, ಪು. ಅನರ್ಥ, ಅನಾಹುತ; ಬಲಾತ್ಕಾರ, ಅತ್ಯಾಚಾರ, ದಬ್ಬಾಳಿಕೆ.

**सितमगर**, ಪು. ಅತ್ಯಾಚಾರ ಮಾಡು ವವ, ಅತ್ಯಾಚಾರಿ, ಹಿಂಸಕ.

**सितरी**, ಸ್ತ್ರೀ. ಬೆವರು, ಸ್ವೇದ.

**सिता**, ಸ್ತ್ರೀ. ಸಕ್ಕರೆ.

**सितरुती**, ಸ್ತ್ರೀ. ಕರ್ಪೂರ ಪಚ್ಚೆಗಿಡ.

**सिताइश**, ಸ್ತ್ರೀ. ಸ್ತುತಿ, ಸ್ತೋತ್ರ.

**सिताद**, ಸ್ತ್ರೀ. ತಕ್ಕೊಳ್ಳುವಿಕೆ, ಪರಿಗ್ರಹ.

**सितादा**, ವಿ. ನಿಂತಿರುವ, ಸ್ಥಿತ.

**सितार**, ಪು. ಒಂದು ಬಗೆ ವೀಣೆ, ಸಿತಾರು.

**सितारबाज़**, ಪು. ಸಿತಾರು ಬಾರಿಸುವವ.

**सितारा**, ಪು. ನಕ್ಷತ್ರ, ತಾರೆ; ಭಾಗ್ಯ, ನಸೀಬು, ಅದೃಷ್ಟ; ಚಮಕಿ, ಚಮಕಿ ಬೊಟ್ಟು; ಸಿತಾರು.

**सितारिया**, ಪು. ಸಿತಾರು ಬಾರಿಸುವವ, ವೀಣೆಗಾರ.

**सितारी**, ಸ್ತ್ರೀ. ಮೂರೆಳೆಯ ಹುರಿ; ಸಣ್ಣ ಸಿತಾರು.

**सितुही**, ಸ್ತ್ರೀ. ಮುತ್ತಿನ ಚಿಪ್ಪು.

**सितूदा**, ವಿ. ಪ್ರಶಂಸಿಸಿದ, ಹೊಗಳಿದ; ಪ್ರಶಂಸನೀಯ, ಸ್ತೋತ್ರಾರ್ಹ.

**सितून**, ಪು. ಸ್ತಂಭ, ಕಂಬ.

**सितेज़**, ಸ್ತ್ರೀ. ಜಗಳ; ಯುದ್ಧ, ಸಮರ.

**सिदरी**, ಸ್ತ್ರೀ. ಮೂರು ಬಾಗಿಲುಗಳುಳ್ಳ ಕೋಣೆ.

**सिदौस**, ಪು. ಪ್ರಾತಃಕಾಲ, ಬೆಳಗು.

**सिदौसी**, ಕ್ರಿವಿ. ಬೆಳಗ್ಗೆ, ಮುಂಜಾನೆ.

**सिद्क़**, ಪು. ಸತ್ಯ, ನಿಜ; ಯಥಾರ್ಥತೆ.

**सिद्ध**, ವಿ. ತಯಾರಾದ; ನೆರವೇರಿದ; ಪೂರೈಸಿದ; ರುಜುವಾತಾದ; ಸಿದ್ಧ.

**सिद्धि**, ಸ್ತ್ರೀ. ಪೂರ್ತಿಯಾಗುವಿಕೆ; ನೆರ ವೇರುವಿಕೆ; ಸಫಲತೆ; ಸಿದ್ಧಿ.

**सिधाई**, ಸ್ತ್ರೀ. ನೇರವಾಗುವಿಕೆ, ನೇರ್ಪು; ಆರ್ಜವ, ಸೈಪು; ಸಾಧುತನ; ಸರಳತೆ; ಸಾತ್ವಿಕತೆ.

**सिधारना**, ಅಕ್ರಿ. ಹೊರಡು, ತೆರಳು; ಬೀಳ್ಕೊಳ್ಳು; ಸಾಯು.

**सिधावट**, ಸ್ತ್ರೀ. ಸರಳತೆ, ಸೈಪು.

**सिन**, ಪು. ವಯಸ್ಸು, ಪ್ರಾಯ. कम सिन = ಚಿಕ್ಕ ವಯಸ್ಸಿನ, ಕಿರಿಯ.

**सिनक**, ಸ್ತ್ರೀ. ಸಿಂಬಳ, ಗೊಣ್ಣೆ.

**सिनकना**, ಅಕ್ರಿ. ಸಿಂಬಳ ಸೀದು.

**सिनान**, ಸ್ತ್ರೀ. ಅಂಬಿನ ತುದಿ, ಮೊನೆ.

**सिन्ना**, ಪು. ಮೀನಿನ ಕಿವುರು.

**सिन्नी**, ಸ್ತ್ರೀ. ಸಿಹಿ ಪದಾರ್ಥ, ಮಿಠಾಯಿ; ಪ್ರಸಾದ.

**सिपर**, ಸ್ತ್ರೀ. ಗುರಾಣಿ, ಡಾಲು, ಖೇಡೆ

ಯ, ಕಡಿತಲೆ, ಅಡ್ಡಣ. सिपर-अंदाज़ी = ಶರಣಾಗತಿ.

**सिपह**, स्त्री. ಸೇನೆ, ದಂಡು, ಸೈನ್ಯ.

**सिपहगरी**, स्त्री. ಸಿಪಾಯಿಯ ಕೆಲಸ, ಸಿಪಾಯಿಗಿರಿ.

**सिपहदार**, पु. ದಳಪತಿ, ಸೇನಾಪತಿ.

**सिपहर**, पु. ಅಪರಾಹ್ನ; ಆಕಾಶ, ಬಾನ್, ಗಗನ.

**सिपहसालार**, पु. ಸೇನಾಪತಿ, ದಳವಾಯಿ, ಪಡೆವಳ, ದಂಡನಾಯಕ.

**सिपहसालारी**, स्त्री. ಸೇನಾಪತಿತ್ವ, ಸೈನ್ಯಾಧಿಪತ್ಯ.

**सिपहिया**, पु. ಸಿಪಾಯಿ, ದಂಡಾಳು (ಪ್ರೀತಿಯ ಮಾತು).

**सिपाई**, स्त्री. ಮುಕ್ಕಾಲಿ ಮಣೆ.

**सिपारा**, पु. ಕುರಾನಿನ ಅಧ್ಯಾಯ; ಪುಸ್ತಕ, ಹೊತ್ತಗೆ.

**सिपास**, पु. ಧನ್ಯವಾದ, ವಂದನೆ; ಸ್ತೋತ್ರ, ಅಭಿನಂದನೆ. सिपासनामा = ಮಾನಪತ್ರ, ಬಿನ್ನವತ್ತಳೆ.

**सिपाह**, स्त्री. ದಂಡು, ಸೇನೆ, ಸೈನ್ಯ.

**सिपाहगरी**, स्त्री. ಸಿಪಾಯಿಯ ಕೆಲಸ.

**सिपाहियाना**, वि. ಸೈನಿಕರಂತಹ.

**सिपाही**, पु. ದಂಡಾಳು, ಸೈನಿಕ; ಯೋಧ, ಭಟ; ಸಿಪಾಯಿ; ತಳವಾರ, ಕೋಲುಕಾರ.

**सिपिस्तां**, पु. ಚಳ್ಳೆಹಣ್ಣು.

**सिपुर्द**, स्त्री. = सुपुर्द.

**सिप्पा**, पु. ಏಟು; ಉಪಾಯ, ಹೂಟ; ಪ್ರಭಾವ; ಅದಬ್ಬು; ಸ್ಥಳ; ಕವಡೆ.

**सिफ़त**, स्त्री. ಪ್ರಶಂಸೆ, ಗುಣ; ವೈಶಿಷ್ಟ್ಯ, ವಿಶೇಷ, ಲಕ್ಷಣ; ವಿಶೇಷಣ.

**सिफ़र**, पु. ಖಾಲಿ, ಶೂನ್ಯ; ಸೊನ್ನೆ; ಚುಕ್ಕೆ.

**सिफ़लगी**, स्त्री. ನೀಚತನ, ಹೀನಸ್ತಿಕೆ.

**सिफ़ला**, वि. ನೀಚ, ತುಚ್ಛ; ಕೃಪಣ.

**सिफ़ानत**, स्त्री. ನಾವಿಕ ಶಾಸ್ತ್ರ.

**सिफ़ारत**, स्त्री. ದೌತ್ಯ; ಮಧ್ಯಸ್ತಿಕೆ; ನಿಯೋಗ; ಪುಸ್ತಕ ಬರೆಯುವಿಕೆ, ಗ್ರಂಥರಚನೆ.

**सिफ़ारिश**, स्त्री. ಶಿಫಾರಸು, ವಾಕ್ಸಹಾಯ; ಗುಣಪ್ರಶಂಸೆ.

**सिफ़ारिशनामा**, पु. ಶಿಫಾರಸಿನ ಪತ್ರ, ಪ್ರಶಂಶಾಪತ್ರ.

**सिफ़ारिशी**, वि. ಶಿಫಾರಸು ಮಾಡಲ್ಪಟ್ಟ, ಶಿಫಾರಸಿನ. पु. ಶಿಫಾರಸು ಮಾಡುವವ.

**सिफ़ाल**, पु. ಹೆಂಚು, ಬೋಕಿ.

**सिफ़ाली**, वि. ಮಣ್ಣಿನ.

**सिफ़्त**, वि. ಗಟ್ಟಿ, ಬಿರುಸು; ಗಾಢಾ (ಬಟ್ಟೆ).

**सिबत**, पु. ಸಂತಾನ, ವಂಶ.

**सिबयां**, पु. ಹುಡುಗರು, ಹೈಕಳು.

**सिमट**, स्त्री. ಉಡುಗುವಿಕೆ, ಮುದುರುವಿಕೆ; ಸಂಕೋಚನ; ಸುಕ್ಕು.

**सिमटन**, स्त्री. ಸುಕ್ಕು, ಮಡಿಕೆ.

**सिमटना**, अक्रि. ಉಡುಗು, ಮುದುರು; ಒಂದಾಗು, ಒಟ್ಟುಗೂಡು; ಸಂಕೋಚಗೊಳ್ಳು.

**सिमटी**, स्त्री. ಚಪರಾಸಿ ನೆಯ್ಗೆಯ

ಬಟ್ಟೆ; "ಟ್ವಿಲ್ಲು" ಬಟ್ಟೆ.

**सिमाही**, वि. ಮೂರು ತಿಂಗಳ; ತ್ರೈಮಾಸಿಕ.

**सियन**, स्त्री. = सीवन.

**सियराना**, अक्रि. ತಣ್ಣಗಾಗು, ತಡೆ.

**सिया**, स्त्री. ಸೀತೆ. सियाराम = ಸೀತಾರಾಮ.

**सियाक़**, पु. ಗಣಿತ, ಲೆಕ್ಕ.

**सियापा**, पु. ಒಬ್ಬನ ಸಾವಿಗಾಗಿ ಹೆಂಗಸರು ಒಟ್ಟುಗೂಡಿ ಅಳುವಿಕೆ; ಗೋಳಾಟ, ಅಳಲು.

**सियाम**, पु. ಉಪವಾಸ.

**सियार**, पु. सियारिन, सियारी, स्त्री. ನರಿ, ಬಳ್ಳು, ಕುನ್ನಿ ನರಿ.

**सियाला**, पु. ಶೀತಕಾಲ, ಛಳಿಗಾಲ.

**सियासत**, स्त्री. ರಾಜ್ಯಭಾರ, ಶಾಸನ; ಶಾಸ್ತಿ, ಶಿಕ್ಷೆ; ಜಂಕಣೆ, ಎಚ್ಚರಿಕೆ.

**सियासी**, वि. ರಾಜಕೀಯ.

**सियाह**, स्त्री. ಕಪ್ಪಾದ, ಕರಿಯ.

**सियाहकार**, वि. ದುಷ್ಟ; ಪಟಿಂಗ.

**सियाहकारी**, स्त्री. ಪಟಿಂಗತನ.

**सियाहगोश**, पु. ಕಾಡು ಬೆಕ್ಕು.

**सियाहत**, स्त्री. ಸಮುದ್ರಯಾತ್ರೆ, ಸಮುದ್ರಯಾನ.

**सियाहपोश**, पु. ಶೋಕಸೂಚಕವಾದ ಕರಿಯ ವಸ್ತ್ರಗಳನ್ನುಟ್ಟವ, ಶೋಕಿಸುವವ.

**सियाह-बख़्त**, वि. ದುರದೃಷ್ಟ, ಅದೃಷ್ಟಹೀನ.

**सियाहा**, पु. ಜಮಾಖರ್ಚಿನ ಪುಸ್ತಕ, ಖಾತೆ ಪುಸ್ತಕ.

**सियाही**, स्त्री. ಕಪ್ಪು; ಮಸಿ, ಶಾಯಿ, ಕತ್ತಲೆ, ಕಾವಳ; ಕಳಂಕ; ಕಾಡಿಗೆ, ಅಂಜನ.

**सियाहीचट**, स्त्री. = स्याहीचट.

**सिर**, पु. ತಲೆ, ಶಿರಸ್ಸು; ತುದಿ; ಶಿಖರ; ಪ್ರಾರಂಭ; ಪ್ರಧಾನ. सिर आंखों पर = ಶಿರೋಧಾರ್ಯ. सिर आंखों पर लेना = ಶಿರಸಾವಹಿಸು.

**सिरकटा**, वि. ತಲೆ ಕತ್ತರಿಸಿದವ.

**सिरका**, पु. ಬಿಸಿಲಲ್ಲಿಟ್ಟು ಹುಳಿಯಿಸಿದ ಕಬ್ಬು ಅಥವಾ ದ್ರಾಕ್ಷಿಯ ರಸ; ಕಾಡಿ.

**सिरकी**, स्त्री. ಲಾಳದ ಕಡ್ಡಿ, ಗಲಗು, ನಾನಲ್.

**सिर-खप**, स्त्री. ತಲೆ ಚೆಚ್ಚಿಕೊಳ್ಳುವಿಕೆ.

**सिरगोटी**, स्त्री. = गिलगिलिया.

**सिरचंद**, पु. ಒಂದು ಆಭರಣ.

**सिरजनहार**, पु. ಸೃಷ್ಟಿಕರ್ತ.

**सिरजना**, सक्रि. ಸೃಷ್ಟಿಸು, ಹುಟ್ಟಿಸು.

**सिरताज**, पु. ಕಿರೀಟ; ಶಿರೋಮಣಿ; ನಾಯಕ, ಪತಿ.

**सिरनामा**, पु. = सरनामा.

**सिरनेत**, पु. ಪೇಟ, ರುಮಾಲು, ಪಾಗು.

**सिरपेच**, पु. = सरपेच.

**सिरफूल**, पु. ತಿರುಪು ಹೂ, ಜಡೆಬಿಲ್ಲೆ.

**सिरफेंटा, सिरबंद**, पु. ರುಮಾಲು, ಪೇಟ, ಪಾಗು, ಮುಂಡಾಸು.

**सिरमौर**, पु. ಕಿರೀಟ, ಶಿರೋಮಣಿ.

**सिरसींग**, वि. ದಂಗೆಖೋರ, ಬಂಡಾಯಗಾರ.

**सिरहाना**, पु. ಶಿರಸ್ಥಾನ, ತಲೆಕಡೆ; ತಲೆದಿಂಬು.

**सिरा**, पु. ತಲೆ, ತುದಿ; ಮೊದಲು, ಕೊನೆ; ಮೊನೆ; ತಲೆಕಡೆ. स्त्री. ನಾಡಿ; ನಾಳೆ.

**सिराज**, पु. ಸೂರ್ಯ; ಬೆಳಕು, ದೀಪ.

**सिराजना**, सक्रि. ಸೃಷ್ಟಿಸು.

**सिरात**, स्त्री. ಹಾದಿ, ದಾರಿ; ರಸ್ತೆ. वि. ಶೀತ, ತಣ್ಣಗಾದ.

**सिराना**, अक्रि. ತಣ್ಣಗಾಗು, ಶಾಂತವಾಗು, ತಮ್ಮಣಿಸು. सक्रि. ತಣ್ಣಗಾಗಿಸು, ಶಾಂತಪಡಿಸು; ಕಳುಹಿಸು, ರವಾನಿಸು; ತೇಲಿಸು.

**सिरायत**, स्त्री. ಒಂದು ವಸ್ತು ಮತ್ತೊಂದರಲ್ಲಿ ಹೊಗುವಿಕೆ, ಪ್ರವೇಶನ.

**सिरावन**, पु. ಹಲುಬೆ, ಕುಂಟೆ.

**सिरिश**, पु. ಮರವಜ್ರ, ಸರಿ.

**सिरिश्क**, पु. ಕಣ್ಣೀರು, ಕಂಬನಿ.

**सिरिश्ता**, पु. = सरिश्ता.

**सिरोपाव**, पु. ರಾಜನ ಕಡೆಯಿಂದ ಸನ್ಮಾನವಾಗಿ ಕೊಡುವ ಶಾಲು ಅಥವಾ ಇತರ ಉಡುಪು, ಖಿಲ್ಲತ್ತು.

**सिरोही**, स्त्री. ಒಂದು ಪಕ್ಷಿ. पु. ಖಡ್ಗ.

**सिर्फ़**, क्रिवि. ಕೇವಲ, ಮಾತ್ರ, ಮಟ್ಟಿಗೆ. वि. ಶುದ್ಧ, ಕೇವಲ.

**सिर्र**, पु. = सिड़.

**सिल**, स्त्री. ಶಿಲಾಪಟ್ಟೆ, ಅಸೆಯಕಲ್ಲು, ಅರೆಯುವ ಕಲ್ಲು; ಚಪ್ಪಡಿ ಕಲ್ಲು. पु. ಕ್ಷಯರೋಗ, ರಾಜಯಕ್ಷ್ಮ.

**सिलखी**, स्त्री. ಬಿಲ್ವಮರ.

**सिलखड़ी**, स्त्री. ಬಳಪದ ಕಲ್ಲು.

**सिलना**, अक्रि. ಹೊಲಿಯಲ್ಪಡು, ಸೆಡು

**सिलपट**, वि. ಸಮತಲ; ಚಪ್ಪಟೆ, ಸಪಾಟ, ಹಲಚಿ; ನುಣುಪಾದ.

**सिलपोहनी**, स्त्री. ಮದುವೆ ಹೆಣ್ಣು ಅಸೆಯಕಲ್ಲನ್ನು ತುಳಿಯುವ ಶಾಸ್ತ್ರ.

**सिलफ़ची**, स्त्री. ಸಣ್ಣ ಡಬರಿ, ಬೇಸಿಗ.

**सिलवट**, स्त्री. ಸುಕ್ಕು, ಮಡಿಕೆ; ವಲಿ, ತೆರೆ.

**सिलवाई**, स्त्री. ಹೊಲಿಗೆ; ಹೊಲಿಗೆಯ ಕೂಲಿ.

**सिलवाना**, सक्रि. ಹೊಲಿಸು.

**सिलसिला**, पु. ಸರಪಣಿ, ಸಂಕೋಲೆ; ಸರಣಿ; ಪೋಣಿಕೆ; ಪರಂಪರೆ; ಕ್ರಮ. वि. ನೆನೆದ, ತೋಯ್ದ; ಜಿಡ್ಡಾದ.

**सिलसिलेवार**, क्रिवि. ಶ್ರೇಣಿಯಾಗಿ, ಪೋಣಿಕೆಯಾಗಿ, ಅನುಕ್ರಮವಾಗಿ.

**सिलह**, पु. = सिलाह.

**सिलहरा**, पु. ಹಕ್ಕಲಾಯುವವ.

**सिलहसाज़**, पु. ಶಸ್ತ್ರಾಸ್ತ್ರ ತಯಾರಿಸುವವ.

**सिलहला**, वि. ಜಾರುವ, ಜಾರಿಕೆಯ.

**सिला**, स्त्री. ಶಿಲೆ, ಕಲ್ಲು. पु. ಹಕ್ಕಲಾಯುವಿಕೆ, ಹಕ್ಕಲು, ಬಾಕಲು; ಉಂಛವೃತ್ತಿ; ಸೇರಿಕೆ, ಸಂಬಂಧ; ಬದಲಿ, ಪ್ರತಿ, ಪ್ರತೀಕಾರ.

**सिलाई**, स्त्री. ಹೊಲಿಗೆ, ದಳಿಕೆ; ಹೊಲಿಗೆಯ ಕೂಲಿ.

**सिलाक**, स्त्री. ಛಳಿ, ಶೀತ; ತಂಪು.

**सिलाना**, सक्रि. ಹೊಲಿಸು.

**सिलारस**, पु. ಹಾಲುಮಡ್ಡಿ.

**सिलावट**, पु. ಕಲ್ಲುಕುಟಿಗ.

सिलाह, स्त्री. ಶಸ್ತ್ರಾಸ್ತ್ರ, ಆಯುಧ, ಮುಟ್ಟು.
सिलाहख़ाना, पु. ಆಯುಧಶಾಲೆ, ಅಸ್ತ್ರಶಾಲೆ.
सिलाहबंद, वि. ಶಸ್ತ್ರಧಾರಿ; ಆಯುಧಪಾಣಿ.
सिलाही, पु. ಅಸ್ತ್ರಧಾರಿ, ಸಿಪಾಯಿ.
सिली, स्त्री. ಸಾಣೆಕಲ್ಲು, ಮಸೆಗಲ್ಲು; ಛಟ್ಟಿ, ಅವೆ; ಮರದ ಬೊಡ್ಡಿ; ಹಲಗೆ.
सिलौट, सिलौटा, पु. सिलौटी, स्त्री. ಅಸೆಯುಕಲ್ಲು, ಅರೆಯುವ ಕಲ್ಲು.
सिुल, पु. ಕ್ಷಯರೋಗ, ರಾಜಯಕ್ಷ್ಮ.
सिल्ला, पु. ಉದುರಿದ ಕಾಳು, ಉಂಛ.
सिल्ली, स्त्री. ಸಾಣೆಕಲ್ಲು; ಅಸೆಯುಕಲ್ಲು.
सिवईं, सिवैयां, स्त्री. ಸೇವಿಗೆ, ಸಾವಿಗೆ.
सिवा, सिवाय, क्रिवि. ಆದಲ್ಲದೆ, ಹೊರತು, ವಿನಾ, ಶಿವಾಯಿ. वि. ಅಧಿಕ, ಹೊರತಾದ, ಹೆಚ್ಚಿನ.
सिवाक, पु. ಹಲ್ಲು ಉಜ್ಜುವ ಕಡ್ಡಿ.
सिवाना, पु. ಮೇರೆ, ಗಡಿ, ಎಲ್ಲೆ.
सिवानाबंदी, स्त्री. ಎಲ್ಲೆ ಕಟ್ಟುವಿಕೆ.
सिवार, स्त्री. ಹಾವಸಿಗೆ, ಶೈವಾಲ, ಪಾಚಿ.
सिवाला, पु. = शिवाला.
सिसकना, अक्रि. ಬಿಕ್ಕಿಬಿಕ್ಕಿ ಅಳು, ಬಿಕ್ಕು, ಮರುಗು; ಏದು, ತೇಕು.
सिसकारना, सक्रि. ಬುಸುಗುಟ್ಟು, ಫೂತ್ಕಾರ ಮಾಡು, ಸೀತ್ಕಾರ ಮಾಡು.
सिसकारी, स्त्री. ಅಳುವಿಕೆ; ಬುಸುಗುಟ್ಟುವಿಕೆ, ಫೂತ್ಕಾರ, ಸೀತ್ಕಾರ; ಛೂ ಬಿಡುವಿಕೆ.
सिसक, सिसकी, स्त्री. ಬಿಕ್ಕುವಿಕೆ, ಬಿಕ್ಕಳು.
सिसियाहिंद, स्त्री. ಗಬ್ಬುನಾತ, ಗವುಲು
सिसिर, पु. ಛಳಿ, ಶೀತ; ಇಬ್ಬನಿ; ಛಳಿಗಾಲ.
सिह, वि. ಮೂರು; ಮೂರರಷ್ಟು.
सिहरना, अक्रि. ನಡುಗು, ತತ್ತರಗುಟ್ಟು.
सिहरा, पु. ಹಾರ, ದಂಡೆ; ಬಾಸಿಂಗ; ಮದುವೆಯ ಹಾಡು.
सिहराऊ, वि. ಆಯಾಸಗೊಳಿಸುವ, ಆಯಾಸದ.
सिहराना, सक्रि. ನಡುಗಿಸು; ಹೆದರಿಸು.
सिहरी, स्त्री. ನಡುಕ, ತತ್ತರ.
सिहाना, अक्रि. ಅಸೂಯೆ ಪಡು; ಹಂಬಲಿಸು, ಹಾತೊರೆ.
सिहारना, सक्रि. ಹುಡುಕು; ಗಳಿಸು.
सिहिर, पु. ಮಂತ್ರ, ಮಾಟ.
सिहिरना, अक्रि. ಕರಗು, ಜಿನುಗು.
सिहिरबाज़, पु. ಮಂತ್ರವಾದಿ, ಮಾಟಗಾರ.
सिहोड़, सिहोर, पु. ಕಳ್ಳಿಗಿಡ.
सींक, स्त्री. ಹುಲ್ಲು; ಹಂಚು ಕಡ್ಡಿ; ಮೂಗುತಿ.
सींका, पु. ಸಬ್ಬಿಗೆ, ಪುಳ್ಳಿ, ಕಡ್ಡಿ.
सींकिया, पु. ಗೀರಿನ ಬಟ್ಟೆ, ಸೂಸಿ ಬಟ್ಟೆ. वि. ಕಡ್ಡಿಯಂತಹ.
सींग, पु. ಕೋಡು, ಕೊಂಬು; ಕಹಳೆ, ಶಿಂಗನಾದ. सींग निकलना = ಹುಚ್ಚು ಹಿಡಿ.
सींगरी, स्त्री. ಒಂದು ಬಗೆ ಅವರೆಕಾಯಿ

**सींगा**, पु. ಕೊಂಬು, ಕಹಳೆ.

**सींगिया**, पु. ವತ್ಸನಾಭ, ಬಚನಾಗ.

**सींगी**, स्त्री. ಕೊಂಬು, ಕಹಳೆ; ಸಿಂಗನಾದ; ರಕ್ತ ಹೀರುವ ಕೊಳವೆ, ಉಸಿರು ಬಾರುಡೆ, ರಕ್ತಚೋಷಕ; ಒಂದು ಬಗೆ ಮೀನು.

**सींच**, स्त्री. ನೀರು ಹಾಯಿಸುವಿಕೆ; ನೀರಾವರಿ.

**सींचना**, सक्रि. ನೀರು ಹಾಯಿಸು, ನೀರುಕಟ್ಟು; ಚಿಮುಕಿಸು, ಪ್ರೋಕ್ಷಿಸು, ನೀರೆರೆ.

**सींची**, स्त्री. ನೀರು ಹಾಯಿಸುವ ಕಾಲ.

**सींव़**, पु. ಹದ್ದು, ಮೇರೆ, ಗಡಿ.

**सी**, स्त्री. ಸೀತ್ಕಾರ. वि. ಮೂವತ್ತು.

**सीकड़**, स्त्री. ಸರಪಣಿ, ಸಂಕೋಲೆ.

**सीकर**, पु. ಬಿಂದು, ತಟಕು, ಹನಿ.

**सीकस**, पु. ಬರಡು ನೆಲ, ಬೆಂಗಾಡು.

**सीका**, पु. ನೆಲುವು, ಶಿಕ್ಯ, ಕಲ್ಲಿ.

**सीकुर**, पु. ಊಬು, ಶೂಕ, ಸುಂಕು.

**सीख**, स्त्री. ಶಿಕ್ಷಣ, ಬೋಧನೆ; ಪಾಠ; ಬುದ್ಧಿವಾದ, ಉಪದೇಶ.

**सीख़**, स्त्री. **सीख़चा**, पु. ಕಬ್ಬಿಣದ ಸರಳು, ಸಲಾಕಿ.

**सीखना**, सक्रि. ಕಲಿ, ಶಿಕ್ಷಣ ಪಡೆ.

**सीगवन**, पु. ಸಾಗುವಾನಿ.

**सीग़ा**, पु. ಎರಕ ಹೊಯ್ಯುವಿಕೆ, ಎರಕ; ಮಾದರಿ, ತರಹ; ಉದ್ಯೋಗ, ವೃತ್ತಿ, ಕಸಬು; ವಿಭಾಗ, ಶಾಖೆ, ಇಲಾಖೆ; ಕ್ರಿಯೆಯ ತಿಙಂತ ರೂಪ ನಡಿಸುವಿಕೆ.

**सीझ**, स्त्री. ಕರಗುವಿಕೆ, ಜಿನುಗುವಿಕೆ.

**सीझना**, अक्रि. ಬೇಯು; ತಪಿಸು, ಕರಗು, ಜಿನುಗು; ಹದಕ್ಕೆ ಬರು, ಪಕ್ವವಾಗು.

**सीटना**, सक्रि. ಜಂಭಕೊಚ್ಚು, ಹರಟು.

**सीटपटांग**, स्त्री. ಬಡಾಯಿ, ಬಡಿವಾರ, ಡೌಲು.

**सीटी**, स्त्री. ಸಿಳ್ಳು, ಸಿಳಿಪೆ, ಪೀಪಿ.

**सीठ**, **सीठन**, स्त्री. ಹಿಪ್ಪೆ, ಹೀದೆ; ಸಿಪ್ಪೆ; ಚರಟ.

**सीठना**, पु. **सीठनी**, स्त्री. ಅಶ್ಲೀಲ ಗೀತೆ, ಬೀಗರ ಹಾಡು.

**सीठा**, वि. ರಸವಿಲ್ಲದ, ಸಪ್ಪೆ.

**सीठी**, स्त्री. ಸಾರಹೀನ ವಸ್ತು; ಸಿಪ್ಪೆ; ಹಿಪ್ಪೆ, ಹೀದೆ; ಸಪ್ಪೆ ವಸ್ತು.

**सीड़**, स्त्री. ಶೀತ, ತೇವ, ಥಂಡಿ.

**सीढ़ा**, पु. ಕಾಲುವೆ, ಕಡಗು.

**सीढ़ी**, स्त्री. ಏಣಿ, ನಿಚ್ಚಣಿಕೆ; ಸೋಪಾನ, ಪಾವಟಿಗೆ; ಮೆಟ್ಟಲು, ಹಂತ.

**सीत**, पु. ಶೀತ, ಥಂಡಿ; ಮೊಸರು.

**सीतमान**, वि. ಸುಂದರವಾದ, ಚೆಲುವ

**सीतल**, वि. ಶೀತಲವಾದ; ತಣ್ಣಗಾದ.

**सीतलचीनी**, स्त्री. ಬಿಳೀ ಮೆಣಸು.

**सीतलपाटी**, स्त्री. ಮುಂದಲಿಕೆ.

**सीतला**, स्त्री. ಸಿಡುಬು, ಸೀತಾಳಮ್ಮ.

**सीतला-मुंह**, पु. ಹುಳುಕು ಮೋರೆ, ಸಿಡುಬುಮೋರೆ.

**सीताफल**, पु. ಸೀತಾಫಲ.

**सीथ**, पु. ಅನ್ನದ ಅಗುಳು.

**सीदना**, अक्रि. ಕಷ್ಟಪಡು, ದುಃಖಿಸು.

**सीध**, स्त्री. ನೆಟ್ಟಗಿರುವಿಕೆ, ನೆಟ್ಟನೆ,

ನೇರು; ಲಕ್ಷ್ಯ, ಗುರಿ.
**सीधना**, अक्रि. ನೆಟ್ಟಗಾಗು; ತರಬೇತಾಗು; ಪಳಗು.
**सीधा**, पु. ಆಹಾರಪದಾರ್ಥ, ದಿನಸಿ; ದಿನಪಡಿ. वि. ನೆಟ್ಟಗಾದ, ಋಜು; ಸರಳ, ನೇರವಾದ; ಸರಳಸ್ವಭಾವದ, ಭೋಳೆ; ಬಲಗಡೆಯ. क्रिवि. ನೇರವಾಗಿ, ನೆಟ್ಟಗೆ. सीधा सादा = ನಿಷ್ಕಪಟ, ಸಾಚಾ; ಪ್ರಾಂಜಲ.
**सीधापन**, पु. ನೇರ, ಆರ್ಜವ.
**सीधे**, क्रिवि. ಎದುರಿಗೆ; ನೇರವಾಗಿ, ನೆಟ್ಟಗೆ; ಸರಳ ರೀತಿಯಲ್ಲಿ.
**सीना**, सक्रि. ಹೊಲಿ, ದಳೆ; ಸೆದು, ಟಾಕ ಹಾಕು. पु. ವಕ್ಷಸ್ಥಲ, ಎದೆ; ದೊಮ್ಮಲು; ಸ್ತನ.
**सीनाज़ोर**, वि. ಬಲಿಷ್ಠ, ಗಟ್ಟಿಗ.
**सीनाज़ोरी**, स्त्री. ಹಟ; ಅತ್ಯಾಚಾರ, ಬಲಾತ್ಕಾರ; ದಬ್ಬಾಳಿಕೆ.
**सीनाबंद**, पु. ರವಿಕೆ, ಕುಪ್ಪಸ.
**सीनी**, स्त्री. ದೋಣಿ, ಓಡ; ತಟ್ಟೆ.
**सीप**, पु. **सीपी**, स्त्री. ಸಿಂಪು, ಕಪ್ಪೆಚಿಪ್ಪು; ಚಿಪ್ಪು, ಕರಟ.
**सीबी**, स्त्री. ಸೀತ್ಕಾರ.
**सीम**, पु. ಮೇರೆ, ಎಲ್ಲೆ; ಹದ್ದು, ಗಡಿ; ಬೆಳ್ಳಿ; ರೂಪಾಯಿ, ಹಣ.
**सीमतन**, वि. ಬೆಳ್ಳಗಿರುವ; ಸುಂದರ.
**सीमा**, पु. ಮೇರೆ, ಎಲ್ಲೆ; ಗಡಿ, ಹದ್ದು; ಮಿತಿ; ಮುಖ; ಹಣೆ; ಹೋಲಿಕೆ.
**सीमाब**, पु. ಪಾದರಸ.
**सीमुर्ग़**, पु. ಒಂದು ಕಲ್ಪಿತ ಪಕ್ಷಿ, ಹುಮ್ಮಾ ಪಕ್ಷಿ.
**सीर**, पु. ನೇಗಿಲು, ಆರು. स्त्री. ಸ್ವಂತ ಸಾಗುವಳಿಯ ಜಮೀನು.
**सीरा**, पु. ಹಲ್ವಾ. वि. ತಣ್ಣಗಾದ.
**सीरी**, पु. ಕೃಷಿಕ, ರೈತ, ಆರಂಬಗಾರ.
**सील**, स्त्री. ಒದ್ದೆ, ತೇವ, ಥಂಡಿ; ಶೀಲ.
**सीलन**, स्त्री. ಛಳಿ, ಥಂಡಿ; ತೇವ, ವಸ್ತಿ.
**सीलना**, अक्रि. ತೇವವಾಗು; ಥಂಡಿಯಾಗು; ಒದ್ದೆಯಾಗು.
**सीला**, पु. ಉದುರಿದ ಕಾಳು, ಹಕ್ಕಲು, ಉಂಛ; ಉಂಛವೃತ್ತಿ. वि. ಒದ್ದೆಯಾದ, ತೇವವಾದ.
**सीवन**, स्त्री. ಹೊಲಿಗೆ, ಸೀವನ, ದಳಿಕೆ.
**सीवना**, सक्रि. ಹೊಲಿ.
**सीस**, पु. ಶಿರಸ್ಸು, ತಲೆ.
**सीसताज**, पु. ಬೇಟೆ ನಾಯಿಗಳ ಕುಲಾವಿ, ಕಣ್ಣುಪಟ್ಟಿ.
**सीसफूल**, पु. ತಿರುಪುಹೂ, ಜಡೆಬಿಲ್ಲೆ.
**सीसा**, पु. ಸೀಸ (ಲೋಹ), ಸೀಸಕ.
**सीसी**, स्त्री. ಸೀತ್ಕಾರ.
**सीसम**, **सीसों**, पु. ಒಂದು ಬಗೆ ಮರ.
**सीह** पु. ಕಣೆಹಂದಿ, ಏದು.
**सुंघनी**, स्त्री. ನಾಸಿಕಾಚೂರ್ಣ, ನಸ್ಯ, ನಾಸಿ ಪುಡಿ.
**सुंघवाना**, **सुंघाना**, सक्रि. सूंघना का प्रे. रूप.
**सुंघावट**, स्त्री. ವಾಸನೆ, ಗಂಧ.
**सुंडा**, स्त्री. ಸೊಂಡಿಲು.
**सुंदर**, वि. ಸುಂದರ, ಚೆಲುವಿನ, ಅಂದವಾದ.

**सुंदरता, सुंदरताई,** स्त्री. **सुंदरापा,** पु. ಸುಂದರತೆ, ಸೌಂದರ್ಯ.
**सुंबल,** पु. ಜಟಾವಮಾಂಸಿ ಗಿಡ; ಪ್ರೇಮಿಕೆಯ ಅಲಕ.
**सुंबा,** पु. ಕಡಲುಪಾಚಿ, ಸ್ಪಂಜು; ಶೋಷಣೆ; ತುಪಾಕಿಯ ಕೊಳವೆಯನ್ನು ಒರೆಸಿ ತಣ್ಣಗೆ ಮಾಡುವ ಒದ್ದೆ ಬಟ್ಟೆ.
**सुंबात,** पु. ಗೊರಸು, ಕೊಳಗ, ಖುರ.
**सुअटा, सुआ,** पु. ಗಿಳಿ, ಗಿಣಿ, ಪುರುಳಿ.
**सुआर,** पु. ಬಾಣಸಿಗ, ಅಡಿಗೆಯವ.
**सुआंसा,** पु. ಚಿನ್ನ ಮತ್ತು ತಾಮ್ರದ ಬೆರಕೆ.
**सुकचाना,** अक्रि. = **सकुचाना.**
**सुकटा,** वि. ಸಣಕಲ, ಬಡಕಲ.
**सुकटी,** वि. ಒಣಗಿದ. स्त्री. ಒಣಗಿಸಿದ ಮೀನು.
**सुकड़ना,** अक्रि. = **सिकुड़ना.**
**सुकर,** वि. ಸುಸಾಧ್ಯ, ಸುಲಭ.
**सुकवाना,** अक्रि. ಬೆಚ್ಚು, ಬೆರಗಾಗು.
**सुकवार,** वि. ಮೃದುವಾದ, ಕೋಮಲ
**सुकाल,** पु. ಸುಭಿಕ್ಷ; ಸುಗ್ಗಿ.
**सुकी,** स्त्री. ಗಿಳಿ, ಪುರುಳಿ.
**सुकुल,** वि. ಒಳ್ಳೆಯ ಕುಲದ, ಸತ್ಕುಲದ. पु. ಬ್ರಾಹ್ಮಣರ ಒಂದು ಬಿರುದು, ಶುಕ್ಲ.
**सुकुलाइन,** स्त्री. **सुकुल** का स्त्री. रूप.
**सुकूत,** स्त्री. ನಿಶ್ಶಬ್ದತೆ; ಮೌನ.
**सुकून,** पु. ಶಾಂತಿ.
**सुकूनत,** स्त्री. ಶಾಂತಿ; ನೆಮ್ಮದಿ, ವಿಶ್ರಾಂತಿ; ವಾಸಸ್ಥಾನ, ಆವಾಸ, ಬೀಡು
**सुकृत,** पु. ಪುಣ್ಯ; ಒಳ್ಳೆಯ ಕರ್ಮ; ಸುಕೃತ.
**सुक्कान,** पु. ವಾಸಮಾಡುವವರು, ನಿವಾಸಿಗಳು; ಚುಕ್ಕಾಣಿ.
**सुक्कानगीर,** पु. ಚುಕ್ಕಾಣಿಗಾರ.
**सुखंडा,** वि. ಬತ್ತಿದ, ತಾರಿದ; ಬಡಕಲ.
**सुख,** पु. ಸುಖ; ಸೌಖ್ಯ; ಕ್ಷೇಮ.
**सुखतला,** पु. ಜೋಡಿನ ಒಳಗಡೆ ಅಟ್ಟೆಯ ಮೇಲೆ ಇರಿಸಿದ ಚರ್ಮದ ಚೂರು.
**सुखद, सुखदायक, सुखदाई, सुखप्रद,** वि. ಸುಖವನ್ನೀಯುವ, ಸುಖಕರ, ಸುಖಪ್ರದ.
**सुखदास,** पु. ಒಂದು ಬಗೆ ಭತ್ತ.
**सुखन,** पु. ಮಾತು, ವಚನ; ಭಾಷೆ, ನುಡಿ; ಮಾತುಕತೆ, ಸಂಭಾಷಣೆ.
**सुखना,** अक्रि. ಒಣಗು, ಬತ್ತು; ಇಮರು, ಇಂಗು.
**सुखनारा,** वि. ಚೆನ್ನಾಗಿ ಮಾತನಾಡುವ, ವಾಗ್ಮಿ.
**सुखपाल,** पु. ಪಲ್ಲಕ್ಕಿ, ಮೇನ.
**सुखभाग,** पु. ಆನಂದ; ಭಾಗ್ಯ.
**सुखवन,** पु. ಒಣಗಿಹೋದದ್ದರಿಂದ ಆಳತೆಯಲ್ಲಾದ ಕಡಮೆ, ಕಸರು; ಮಸಿಯನ್ನು ಹೀರಲು ಬರೆಹಗಾರರು ಬಳಸುವ ಮರಳು.
**सुखवाना,** सक्रि. **सूखना** का प्रे. रूप.
**सुखलाना, सुखाना,** सक्रि. ಒಣಗಿಸು, ಬತ್ತಿಸು; ಇಮರಿಸು, ಇಂಗಿಸು; ಬಡವಾಗಿಸು.
**सुखावह,** वि. ಸುಖದಾಯಕ; ಸುಖಕರ.

**सुखिया, सुखी,** वि. ಸುಖಿ, ನೆಮ್ಮದಿವಂತ.

**सुखिर,** पु. ಹಾವಿನ ಬಿಲ, ಹುತ್ತ.

**सुगंध,** वि. ಸುವಾಸನೆಯು, ಸುಗಂಧವುಳ್ಳ. पु. ಸುಗಂಧ, ಪರಿಮಳ.

**सुगंधि,** स्त्री. ಸುಗಂಧ, ಪರಿಮಳ.

**सुगंधित, सुगंधिया,** वि. ಸುವಾಸನೆಯುಳ್ಳ.

**सुगना,** पु. ಗಿಳಿ, ಗಿಣಿ.

**सुगम,** वि. ಸಲೀಸಾದ, ಸರಾಗ, ಸುಗಮ

**सुगमता,** स्त्री. ಸಲೀಸು, ಸುಗಮತೆ.

**सुगाना,** अक्रि. ಸಂದೇಹಗೊಳ್ಳು.

**सुगिया,** स्त्री. ಹೆಣ್ಣು ಗಿಳಿ.

**सुगैया,** स्त्री. ರವಿಕೆ, ಕುಪ್ಪಸ.

**सुगौना,** पु. ಕೊಸರು.

**सुग्गा,** पु. ಗಿಳಿ.

**सुग्यां,** पु. ಬುದ್ಧಿ, ವಿವೇಕ.

**सुघट, सुघटित,** वि. ಸುಂದರ, ಅಂದವಾದ; ಸೊಗಸಾದ.

**सुघड़, सुघर,** वि. ಒಳ್ಳೆಯ; ಅಂದವಾದ, ಸುಂದರ; ನಾಜೂಕಾದ; ಸೊಗಸಾದ; ಸುಗುಣ.

**सुघड़ई, सुघड़ाई, सुघराई,** स्त्री. ಅಂದ, ಸೌಂದರ್ಯ, ಚೆಲುವು, ಹಸ, ಸೊಬಗು; ಕಲಾಕೌಶಲ್ಯ.

**सुचक्क,** वि. ಜಾಗರೂಕ, ಹುಷಾರು.

**सुचकना,** अक्रि. ಬೆರಗಾಗು, ಹಿಂಜರಿ.

**सुचवाना,** सक्रि. सूचना का प्रे. रूप.

**सुचाई,** स्त्री. ಸ್ವಚ್ಛತೆ; ಸರಳತೆ.

**सुचाना,** सक्रि. ಸೂಚಿಸು; ಯೋಚಿಸುವಂತೆ ಮಾಡು.

**सुचारु,** वि. ಒಳ್ಳೆಯ, ಚಲೋವಾದ; ವಿಹಿತ; ಸುಲಲಿತ.

**सुचाल,** पु. ಒಳ್ಳೆಯ ನಡತೆ, ಸದ್ವರ್ತನೆ.

**सुचाव,** पु. ಸೂಚಿಸುವಿಕೆ, ಸೂಚನೆ.

**सुज़नी,** स्त्री. = सोज़नी.

**सुजान,** वि. ತಿಳಿವಳಿಕಸ್ಥ, ಜಾಣ; ಸಜ್ಜನ

**सुजाना,** सक्रि. ಉಬ್ಬಿಸು, ಬೀಗಿಸು.

**सुझवाना,** सक्रि. सूझना का प्रे. रूप.

**सुझाना,** सक्रि. ತಿಳಿಸು; ತೋರಿಸು.

**सुटुकना,** सक्रि. ನುಂಗು, ಗುಟುಕರಿಸು.

**सुड़क,** स्त्री. ಚೀಪುವಿಕೆ, ಸುರುಕು.

**सुड़की,** स्त्री. ಗಾಳಿಪಟದ ದಾರ ಸಡಿಲವಾಗುವಿಕೆ.

**सुड़प,** स्त्री. ಚೀಪುವಿಕೆ; ಹೀರುವಿಕೆ.

**सुड़पना,** सक्रि. ಚೀಪು; ಚಪ್ಪರಿಸು; ಹೀರು, ಸುರುಕಿಡು.

**सुड़सुड़ी,** स्त्री. ಒಂದು ಬಗೆ ಹುಕ್ಕಾ.

**सुड़कना, सुड़ुकना,** सक्रि. ನುಂಗು, ಗುಟುಕರಿಸು; ಸುರುಕಿಡು, ಹೀರು; ಚೀಪು.

**सुडौल, सुढब, सुढाल,** वि. ಸುಂದರವಾದ, ಅಂದವಾದ; ನಾಜೂಕಾದ; ಲಲಿತವಾದ, ಚಲೋವಾದ.

**सुतरी,** स्त्री. ತುತ್ತೂರಿ, ದಾರ.

**सुतला,** पु. ದಾರ; ಲಗಾಮು.

**सुतली,** स्त्री. ಹುರಿ, ದಾರ, ಸುತಲಿದಾರ, ಟ್ವೈನ್‌ದಾರ.

**सुतवाना,** सक्रि. ಗಿಡದ ಎಲೆಗಳನ್ನು ಸವರಿಸು; ನಿದ್ರೆ ಹೋಗಿಸು.

**सुतारा**, पु. ಬಡಗಿ, ಸುತಾರ; ಮೇಸ್ತ್ರಿ; ಕಾಲ, ಸಮಯ.

**सुतारी**, स्त्री. ಕಂಠಾಣಿ; ದಬ್ಬಳ; ಬಡಗಿಯ ಕೆಲಸ.

**सुतुही**, स्त्री. ಚಿಪ್ಪು; ಶಂಖ, ಒಳಲೆ; ಕರಟ

**सुतून**, पु. ಸ್ಥಾಣು, ಕಂಬ.

**सुतूर**, पु. ಗೆರೆಗಳು, ಗೀರುಗಳು; ಚತುಷ್ಪದಿ, ಜಾನುವಾರು; ಭಾರ ಹೊರುವ ಪ್ರಾಣಿ.

**सुथना**, पु. ಷರಾಯಿ, ಇಜಾರು.

**सुथनी**, स्त्री. ಹೆಂಗಸರ ಪಾಯಿಜಾಮು; ಷರಾಯಿ, ಇಜಾರು; ಒಂದು ಗೆಣಸು.

**सुथरा**, वि. ಸ್ವಚ್ಛ, ನಿರ್ಮಲ; ಚೊಕ್ಕಟವಾದ, ಅಚ್ಚುಕಟ್ಟಾದ. पु. ಒಂದು ಬಗೆ ಜೋಗಿ; ಸುಥರಾಶಾಹ್ ಎಂಬ ಸಂತನ ಅನುಯಾಯಿಗಳು.

**सुथराई**, स्त्री. ಅಂದ, ಸ್ವಚ್ಛತೆ; ಚೊಕ್ಕಟ, ಅಚ್ಚುಕಟ್ಟು.

**सुदी**, स्त्री. ಶುಕ್ಲಪಕ್ಷ, ಶುದ್ಧ.

**सुदूर**, वि. ಬಹುದೂರದ.

**सुद्दा**, पु. ಒಣಗಿದ ಮಲ, ವಿಷ್ಠೆ.

**सुध**, वि. ಶುದ್ಧವಾದ; ಸರಿ. स्त्री. ಪ್ರಜ್ಞೆ, ಜ್ಞಾನ; ಚೇತರಣೆ; ಸ್ಮರಣೆ, ಎಚ್ಚರ; ಸುದ್ದಿ. सुध बुध = ತಿಳಿವಳಿಕೆ; ವಿವೇಕ, ಅರಿವು.

**सुधना**, अक्रि. ಶುದ್ಧಿಯಾಗು.

**सुधरना**, अक्रि. ಸರಿಹೋಗು, ಗುಣವಾಗು; ಉತ್ತಮಗೊಳ್ಳು, ನೇರ್ಪಡು; ಪಳಗು; ತರಬೇತಾಗು, ತಿದ್ದು.

**सुधराई**, स्त्री. ಸರಿಪಡಿಸುವಿಕೆ, ತಿದ್ದುವಿಕೆ; ತಿದ್ದುಪಾಡು, ಸುಧಾರಣೆ; ಸರಿಪಡಿಸಲು ಕೊಡುವ ಕೂಲಿ.

**सुधवाना**, सक्रि. ಸುಧಾರಿಸು, ತಿದ್ದಿಸು; ಶುದ್ಧಿಮಾಡಿಸು.

**सुधाँ**, क्रिवि. ಸಹಿತ, ಸುದಾ, ಕೂಡ.

**सुधाई**, स्त्री. ಸರಳತೆ, ಸಾತ್ವಿಕತೆ.

**सुधाना**, सक्रि. ನೆನಪುಕೊಡು, ಜ್ಞಾಪಕ ಮಾಡಿಸು; ಸುಧಾರಣೆಮಾಡಿಸು; ತಿದ್ದಿಸು; ಒಗ್ಗಿಸು, ಪಳಗಿಸು; ತರಬಿಯತ್ತು ಮಾಡು.

**सुधार**, पु. ತಿದ್ದುಪಡಿ, ಸುಧಾರಣೆ.

**सुधारक**, वि. ಸುಧಾರಣೆ ಮಾಡುವವ.

**सुधारना**, सक्रि. ಸರಿಪಡಿಸು; ಅಣಿಮಾಡು, ಸಂವರಿಸು; ತಿದ್ದು, ಸುಧಾರಿಸು; ತರಬೇತು ಮಾಡು; ಪಳಗಿಸು; ಉತ್ತಮಗೊಳಿಸು.

**सुधि**, स्त्री. = सुध.

**सुन**, पु. ಒಂದು ಹುಳು.

**सुन-गुन**, स्त्री. ಪತ್ತೆ, ಸುಳುವು; ಪಿಸುಪಿಸು ಮಾತು.

**सुनट्टा**, पु. ಅಕ್ಕಸಾಲೆಯ ಮಗ, ಅಕ್ಕಸಾಲೆ ಹುಡುಗ.

**सुनना**, सक्रि. (ಕಿವಿಯಿಂದ) ಕೇಳು, ಆಕರ್ಣಿಸು, ಆಲಿಸು, ಲಾಲಿಸು; ಅನ್ನಿಸಿಕೊಳ್ಳು.

**सुननी**, वि. ಕೇಳತಕ್ಕ, ಲಾಲಿಸಲು ಅರ್ಹ, ಶ್ರಾವ್ಯ.

**सुनबहरी**, स्त्री. ಆನೆಗಾಲು, ಶ್ಲೀಪದ.

**सुनवाई**, स्त्री. ಕೇಳುವಿಕೆ; ವಿಚಾರಣೆ; ಸುನಾವಣೆ, "ಹೀರಿಂಗು".

**सुनवैया**, वि. ಕೇಳುವವ, ಕೇಳಿಸುವವ.

**सुनसान**, वि. ನಿರ್ಜನ, ಶೂನ್ಯವಾದ; ಹಾಳಾದ, ಪಾಳುಬಿದ್ದ. स्त्री. ನಿಶ್ಶಬ್ದತೆ.

**सुनसुनाना**, अक्रि. ಸೀಟಿ ಹಾಕು, ಸಿಳಿಪೆ ಹಾಕು.

**सुनहरा, सुनहला**, वि. ಹೊನ್ನಿನ; ಹೊಂಬಣ್ಣದ.

**सुनहली**, स्त्री. ಕಕ್ಕೆ ಗಿಡ.

**सुनाई**, स्त्री. ಕೇಳುವಿಕೆ, ವಿಚಾರಣೆ; ಸುನಾವಣೆ; ನ್ಯಾಯ. सुनाई देना = ಕೇಳಿಸು, ಶ್ರುತವಾಗು; ಕೇಳಿಬರು.

**सुनाना**, सक्रि. ಕೇಳಿಸು, ಶ್ರುತಪಡಿಸು; ಹೇಳು, ತಿಳಿಸು; ಅನ್ನು. ऐंडी बेंडी सुनाना = ಯದ್ವಾತದ್ವಾ ಅನ್ನು, ಬೈಯು.

**सुनार**, पु. ಸೊನ್ನಗಾರ, ಅಕ್ಕಸಾಲಿಗ.

**सुनारनी, सुनारिन**, स्त्री. ಅಕ್ಕಸಾಲಿತಿ.

**सुनारी**, स्त्री. ಅಕ್ಕಸಾಲಿಗಿತ್ತಿ, ಅಕ್ಕಸಾಲಿತಿ; ಅಕ್ಕಸಾಲೆಯ ಕೆಲಸ.

**सुनावट**, स्त्री. ಕೇಳುವಿಕೆ, ಶ್ರವಣ.

**सुनावनी**, स्त्री. ಸಾವಿನ ಸುದ್ದಿಯನ್ನು ಕೇಳುವಿಕೆ; ಶುಚಿ ಸ್ನಾನ.

**सुनी-सुनाई**, स्त्री. ಹೇಳಿಕೆ ಮಾತು, ಕರ್ಣಾಕರ್ಣಿ, ವದಂತಿ.

**सुन्न**, वि. ಸ್ತಬ್ಧ, ನಿಶ್ಚಲ; ಸ್ತಂಭಿತ; ಜೋಮುಹಿಡಿದ. पु. ಶೂನ್ಯ, ಸೊನ್ನೆ.

**सुन्नत**, स्त्री. ಶಿಶ್ನದ ಮುಂಭಾಗದ ಚರ್ಮವನ್ನು ಕತ್ತರಿಸುವ ಮುಸಲ್ಮಾನರ ಒಂದು ಸಂಸ್ಕಾರ, ಸುನ್ನತಿ, ಪರಿಕರ್ತನ.

**सुन्नता**, स्त्री. ಜೋಮು ಹಿಡಿಯುವಿಕೆ, ಮರಗಟ್ಟುವಿಕೆ.

**सुन्ना**, पु. ಖಾಲಿ, ಶೂನ್ಯ; ಸೊನ್ನೆ, ಬಿಂದು, ಪೂಜ್ಯ.

**सुन्नी**, पु. ಖಲೀಫಾಗಳು ನಾಲ್ವರನ್ನೂ ಮನ್ನಿಸುವ ಮುಸಲ್ಮಾನರ ಒಂದು ಭೇದ.

**सुपली**, स्त्री. ಚಿಕ್ಕಮೊರ, ಮುಚ್ಚಲು.

**सुपारी**, स्त्री. ಅಡಕೆ, ಪೂಗೀಫಲ.

**सुपास**, पु. ಭದ್ರ; ಸುಖ; ಸೌಖ್ಯ.

**सुपासी**, वि. ಸುಖಕರ; ಸೌಖ್ಯವಾದ.

**सुपुर्द**, पु. ವಶ, ಸ್ವಾಧೀನ, ಸುಪರ್ದು.

**सुपुर्दगी, सुपुर्दी**, स्त्री. ವಶಕ್ಕೆ ಒಪ್ಪಿಸುವಿಕೆ, ಸ್ವಾಧೀನಕೊಡುವಿಕೆ; ಸುಪರ್ದು ಮಾಡುವಿಕೆ.

**सुपूत**, पु. ಸತ್ಪುತ್ರ.

**सुफ़रा**, पु. ಊಟದ ಮೇಜಿನ ಮೇಲೆ ಹಾಸುವ ಬಟ್ಟೆ; ತಳಿಗೆ, ತಟ್ಟೆ.

**सुफ़ेद**, वि. = सफ़ेद.

**सुबकना**, अक्रि. ಬಿಕ್ಕಿ ಬಿಕ್ಕಿ ಅಳು.

**सुबकी**, स्त्री. ಬಿಕ್ಕುವಿಕೆ, ಬಿಕ್ಕುಳು; ಉಸಿರುಗಟ್ಟುವಿಕೆ, ಬಿಕ್ಕಳಿಕೆ; ಹಗುರತನ, ಲಾಘವ; ಕೀಳುತನ; ಹಲ್ಕಾತನ; ಅಗೌರವ, ಅವಮಾನ.

**सुबड़ा**, पु. ಬೆರಕೆ ಬೆಳ್ಳಿ.

**सुबह**, स्त्री. ಪ್ರಾತಃಕಾಲ, ಬೆಳಗು.

**सुबहगाह**, स्त्री. ಬೆಳಗಿನ ಹೊತ್ತು.

**सुबहा**, पु. ಜಪಮಾಲೆ.

**सुबास**, स्त्री. ಸುವಾಸನೆ, ಪರಿಮಳ.

**सुबासना**, स्त्री. ಸುವಾಸನೆ, ಪರಿಮಳ.

सक्रि. ಪರಿಮಳ ಕೊಡು.
**सुबिस्ता, सुबीता,** पु. = सुभीता.
**सुबुक,** वि. ಲಘು, ಹಗುರ; ಕೋಮಲ.
**सुबूत,** पु. = सबूत.
**सुभीता,** पु. ಅನುಕೂಲ್ಯ, ಸೌಕರ್ಯ, ಸವಲತ್ತು; ವಸತಿ, ಅವಕಾಶ, ಸುಸಂಧಿ.
**सुम,** पु. ಗೊರಸು, ಕೊಳಗ, ಖುರ; ವಿಷ.
**सुमदुम,** वि. ಬಹಳ ಕೊಬ್ಬಿದ.
**सुमन,** पु. ಪುಷ್ಪ, ಹೂ.
**सुमरन,** पु. ಸ್ಮರಣೆ; ಜಪ.
**सुमरना, सुमिरना,** सक्रि. ಸ್ಮರಣೆ ಮಾಡು, ಸ್ಮರಿಸು; ಜಪಮಾಡು.
**सुमरनी, सुमिरनी,** स्त्री. ಜಪಮಾಲೆ.
**सुम्म,** वि. ಕಿವುಡ, ಕೆಪ್ಪ.
**सुयोग,** पु. ಸುಸಮಯ, ಸುಸಂಧಿ.
**सुरंग,** पु. ಸುರಂಗ, ತೋಡು; ಕನ್ನ; ಕೆಂಪು ಸೀಮೆ ಸುಣ್ಣ; ಎಣ್ಣೆಗೆಂಪು ಬಣ್ಣ, ಕೆಂಚಬಣ್ಣ.
**सुरंगी,** पु. ಸುರಂಗ ತೋಡುವವ; ಕನ್ನ ಹಾಕುವವ, ಕನ್ನಗಾರ.
**सुर,** पु. ಸ್ವರ; ಧ್ವನಿ; ನಾದ; ರಾಗ.
**सुरकना,** सक्रि. ಹೀರು, ಚೀಪು, ಸುರುಕಿಡು.
**सुरख़ाब,** पु. ಚಕ್ರವಾಕ ಪಕ್ಷಿ.
**सुरत,** स्त्री. ಧ್ಯಾನ; ಪ್ರಜ್ಞೆ; ಎಚ್ಚರ. पु. ಸಂಭೋಗ, ಮೈಥುನ.
**सुरतिन,** स्त्री. ಭೋಗಿಸಿ, ಉಪಪತ್ನಿ.
**सुरती,** स्त्री. ತಾಂಬೂಲದ ಜೊತೆಗೆ ಅಗಿಯುವ ಹೊಗೆಸೊಪ್ಪಿನ ಪುಡಿ, ಸೂರತಿ.
**सुरतीला,** वि. ವಿವೇಕಿ, ಜಾಣ.
**सुरबहार,** पु. ಒಂದು ಬಗೆ ವೀಣೆ.
**सुरमई,** वि. ಸೌವೀರಾಂಜನದ ಬಣ್ಣದ, ಲಘುನೀಲ.
**सुरमचू,** पु. ಅಂಜನ ಹಚ್ಚುವ ಕಡ್ಡಿ, ಅಂಜನ ಶಲಾಕೆ.
**सुरमा,** पु. ಕಾಡಿಗೆ, ಕಾಡಿಕಪ್ಪು, ಕಜ್ಜಳ, ಅಂಜನ; ಸೌವೀರಾಂಜನ.
**सुरमादानी,** स्त्री. ಕಾಡಿಗೆಯ ಡಬ್ಬಿ.
**सुरस,** वि. ರಸಭರಿತವಾದ, ಸ್ವಾರಸ್ಯವಾದ; ಇಂಪಾದ, ಮಧುರವಾದ.
**सुरसा,** पु. ಮೊನಚಾದ ಮೊಳೆ.
**सुरसुर,** स्त्री. ಸರಸರ ಶಬ್ದ.
**सुरसुराना,** अक्रि. ಸರಸರ ಶಬ್ದ ಮಾಡು; ಹರಿದಾಡು, ಮುಲುಗುಟ್ಟು.
**सुरसुराहट,** स्त्री. ಮುಲುಗುಟ್ಟುವಿಕೆ.
**सुरसुरी,** स्त्री. ಮುಲುಗುಟ್ಟುವಿಕೆ, ದೇಕುವಿಕೆ; ನವೆ; ಧಾನ್ಯದ ಹುಳು.
**सुरही,** स्त्री. ಕವಡೆಯಾಟ, ಜೂಜಾಟ.
**सुरा,** स्त्री. ಸುರೆ, ಮದ್ಯ; ಕುಡಿಯುವ ಬಟ್ಟಲು, ಸುರಾಪಾತ್ರ.
**सुराई,** स्त्री. ಶೌರ್ಯ, ವೀರತನ.
**सुराग़,** पु. ಜಾಡು, ಪತ್ತೆ; ತುಬ್ಬು, ಸುಳುವು; ಸೋವು, ಒಳಗುಟ್ಟು.
**सुराग़ी,** पु. ಪತ್ತೆ ಹಚ್ಚುವವ, ಪತ್ತೆದಾರ, ತುಬ್ಬುಗಾರ.
**सुरात,** स्त्री. ಉದ್ದವಾದ ಕತ್ತಿ.
**सुराही,** स्त्री. ನೀರಿನ ಪಂಚಪಾತ್ರೆ; ಉದ್ದವಾದ ಕಂಠವುಳ್ಳ ತಂಬಿಗೆ.
**सुराहीदार,** वि. सुराही ಯ ಆಕಾರದ; ಉದ್ದವಾದ ಕಂಠವುಳ್ಳ.

**सुरीला,** वि. ಒಳ್ಳೆಯ ಸ್ವರ ಅಥವಾ ಕಂಠವುಳ್ಳ, ಸುಸ್ವರದ; ಇಂಪಾದ, ಮಧುರ.

**सुरूप,** वि. ಒಳ್ಳೆಯ ರೂಪದ, ಸುಂದರವಾದ, ಚೆಲುವಿನ, ಅಂದವಾದ.

**सुरूर,** पु. ಆನಂದ, ಸಂತೋಷ; ಸ್ವಲ್ಪವಾಗಿ ಮತ್ತೇರುವಿಕೆ, ತುಸ ಅಮಲು.

**सुरेतना,** सक्रि. ಹಕ್ಕಲಾಯಿಸು, ಬಾಕಲಾಯಿಸು.

**सुरेथ,** पु. ಶಿಂಶುಮಾರ, ಕಡಲುಹಂದಿ.

**सुरैत, सुरैतिन,** स्त्री. ಇಟ್ಟುಕೊಂಡವಳು, ಭೋಗಿನಿ, ಉಪಪತ್ನಿ, ಬಂಗಾರದವಳು.

**सुरैया,** पु. ಕೃತ್ತಿಕಾ ನಕ್ಷತ್ರ.

**सुर्ख़,** वि. ಕೆಂಬಣ್ಣದ, ಕೆಂಪು. पु. ಕೆಂಪು ಬಣ್ಣ, ಕೆಂಪು.

**सुर्ख़रू,** वि. ಕಾಂತಿಯುಳ್ಳ, ಕಳೆಯೇರಿದ; ಗೆಲುವಿನ; ಯಶಸ್ವಿ, ಗೌರವಸ್ಥ.

**सुर्ख़रूई,** स्त्री. ಕಾಂತಿ, ಕಳೆ, ಯಶಸ್ಸು.

**सुर्ख़ाब,** पु. ಚಕ್ರವಾಕ ಪಕ್ಷಿ. सुर्ख़ाब का पर लगना = ಗೌರವ ಹೆಚ್ಚು, ಮಾನೋನ್ನತಿಯಾಗು.

**सुर्ख़ी,** स्त्री. ಕೆಂಪು ಬಣ್ಣ, ಕೆಂಪು; ಕೆಂಪು ಶಾಯಿ; ಶಿರೋಲೇಖ, ಶೀರ್ಷಕ, ತಲೆಬರಹ; ಇಟ್ಟಿಗೆಯ ಪುಡಿ, ಸುರ್ಖಿ, ಕಂಕರೆ.

**सुर्त,** स्त्री. ವಿಚಾರ; ಜ್ಞಾಪಕ, ಸ್ಮರಣೆ.

**सुर्ता,** वि. ಬುದ್ಧಿವಂತ, ಜಾಣ.

**सुलग,** क्रिवि. ಹತ್ತಿರ, ಬಳಿ, ಸಮೀಪ.

**सुलगना,** अक्रि. ಉರಿ, ಹೊತ್ತಿಕೊಳ್ಳು; ಕತ್ತು, ಉರಿಗೊಳ್ಳು; ಹೊಗೆ ಅಥವಾ ಜ್ವಾಲೆ ಇಲ್ಲದೆ ಉರಿ.

**सुलगाना,** सक्रि. ಉರಿಸು, ಹೊತ್ತಿಸು, ಕತ್ತಿಸು; ಉದ್ದೀಪಿಸು.

**सुलच्छन,** पु. ಒಳ್ಳೆಯ ಲಕ್ಷಣ, ಸ... ಲಕ್ಷಣ, ಅಭಿವೃದ್ಧಿಗೆ ಬರತಕ್ಕ ಸೂಚನೆ.

**सुलझन,** स्त्री. ಸಮಸ್ಯೆ ಬಿಡಿಸುವಿಕೆ, ಬಗೆ ಹರಿಸುವಿಕೆ; ಪರಿಹಾರ.

**सुलझना,** अक्रि. ಬಿಡಿಸಲ್ಪಡು, ಬಿಚ್ಚು; ಬಗೆ ಹರಿ; ಕೊಸರಿಕೊಳ್ಳು.

**सुलझाना,** सक्रि. ಸಿಕ್ಕು ಬಿಡಿಸು; ಸಮಸ್ಯೆ ಬಿಡಿಸು, ಬಿಚ್ಚು; ಬಗೆ ಹರಿಸು.

**सुलझाव,** पु. = सुलझन.

**सुलटा,** वि. ನೇರವಾದ, ನೆಟ್ಟಗಾದ.

**सुलफ,** वि. ಬಾಗುವ, ಬಳುಕುವ; ಕೋಮಲವಾದ.

**सुलफ़ा,** पु. ಹುಕ್ಕಾದಲ್ಲಿಟ್ಟು ಸೇದುವ ಹೊಗೆಸೊಪ್ಪಿನ ಗುಳಿಗೆ, ಗುಡಾಕು.

**सुलवाना,** सक्रि. सुलाना का प्रे. रूप.

**सुलह,** स्त्री. ಸ್ನೇಹ, ಮೈತ್ರಿ, ಸಖ್ಯ; ರಾಜಿ; ಸಂಧಿ, ಸಮಾಧಾನ, ಕೌಲು.

**सुलहनामा,** पु. ರಾಜಿಪತ್ರ, ಸಂಧಿಪತ್ರ.

**सुलहा,** पु. ಪುಣ್ಯವಂತರು; ಜ್ಞಾನಿಗಳು.

**सुलही,** स्त्री. ಹದಿನಾರು ಕವಡೆಗಳಿಂದ ಆಡುವ ಒಂದು ಆಟ.

**सुलूक,** पु. = सलूक.

**सुलाना,** सक्रि. ಮಲಗಿಸು, ಒರಗಿಸು; ಕೊಲ್ಲು.

**सुलेमानी,** पु. ಗೋಮೇಧಿಕ.

**सुल्तान,** पु. ಚಕ್ರವರ್ತಿ; ರಾಜ, ಅರಸ.

**सुल्ताना,** स्त्री. ಚಕ್ರವರ್ತಿನಿ. सुल्ताना

चंपा = ಪುನ್ನಾಗ, ಸುರಹೊನ್ನೆ.
सुल्तानी, स्त्री. ರಾಜ್ಯ; ರಾಜ್ಯಭಾರ; ರೇಷ್ಮೆ ಬಟ್ಟೆ. वि. ರಾಜರ; ರಾಜಯೋಗ್ಯ; ಕೆಂಪು ಬಣ್ಣದ.
सुलब, पु. ಬೆನ್ನೆಲುಬು, ಬೆನ್ನುಮೂಳೆ.
सुवक्ता, पु. ಚೆನ್ನಾಗಿ ಮಾತನಾಡುವವ, ಸುಭಾಷಿ; ವಾಕ್ಪಟು, ವಾಗ್ಮಿ.
सुवम, वि. ಮೂರನೆಯ. पु. ಸತ್ತ ಮೂರನೆಯ ದಿವಸದ ಸಂಸ್ಕಾರ.
सुविधा, स्त्री. = सुभीता.
सुवाफ़, पु. ನಾಶ; ಪ್ರಾಣಾಂತಕ ವ್ಯಾಧಿ
सुवास, पु. ಸುವಾಸನೆ, ಸುಗಂಧ.
सुवैया, वि. ನಿದ್ರಿಸುವವ.
सुस, स्त्री. ಸೋದರಿ.
सुसकना, सुसकारना, सक्रि. = सिसकना.
सुसज्जित, वि. ಅಲಂಕರಿಸಲ್ಪಟ್ಟ; ಸಿದ್ಧಪಡಿಸಿದ; ಸೊಗಯಿಸುವ. सुसज्जित करना = ಅಂದವಾಗಿ ಅಲಂಕರಿಸು; ಸಿದ್ಧಪಡಿಸು.
सुसना, पु. = चौपतिया.
सुसमझ, स्त्री. ಒಳ್ಳೆಯ ತಿಳಿವಳಿಕೆ; ಬುದ್ಧಿ.
सुसर, सुसरा, पु. ಮಾವ.
सुसरी, स्त्री. ಅತ್ತೆ. ( ಒಂದು ಬಗೆ ಬಯ್ಗಾಟ.)
सुसा, स्त्री. ಸೋದರಿ. पु. ಒಂದು ಪಕ್ಷಿ.
सुसाना, अक्रि. = सिसकना.
सुस्त, वि. ಸೋಮಾರಿ, ಆಲಸ; ಮದಡ; ಮಂದ; ನಿರ್ಬಲ, ಅಶಕ್ತ; ಬಳಲಿದ, ದಣಿದ, ಸುಸ್ತಾದ.
सुस्ताना, अक्रि. ದಣಿವಾರಿಸು, ತಳಾರಿಸು, ವಿಶ್ರಮಿಸು.
सुस्ती, स्त्री. ಆಲಸ್ಯ, ಸೋಲುಮಾರಿಕೆ; ಮಂದಡು; ಸುಸ್ತಿ, ಜಾಡ್ಯ, ಧಾನಸ.
सुस्वाद, वि. ಒಳ್ಳೆಯ ರುಚಿಯ; ರುಚಿರ
सुहंगा, वि. ಅಗ್ಗವಾದ.
सुहता, वि. ಮನೋಹರ, ರಮ್ಯ.
सुहबत, स्त्री. = सोहबत.
सुहरना, सक्रि. ಎಳೆ, ಸೆಳೆ.
सुहाग, पु. ಸೌಭಾಗ್ಯ; ಮಾಂಗಲ್ಯ, ಮುತ್ತೈದೆತನ; ಶುಭ, ಮಂಗಳ; ಮಂಗಳವಸ್ತ್ರ; ಮಂಗಳಗಾನ; ಅರಿಸಿನ ಕುಂಕುಮ.
सुहागन, सुहागिन, स्त्री. ಸೌಭಾಗ್ಯವತಿ; ಸುಮಂಗಲಿ, ಮುತ್ತೈದೆ.
सुहाग-भरी, स्त्री. ಪ್ರಿಯ (ಪತ್ನಿ).
सुहागा, पु. ಬಿಳಿಗಾರ, ಬಿಳಿಗಾರ.
सुहागी, स्त्री. ಪುಣ್ಯವಂತೆ, ಪುಣ್ಯಾದ್ಗಿತ್ತಿ.
सुहाता, वि. ನೊಚ್ಚಗಿರುವ, ರಮ್ಯವಾದ, ಚೆಚ್ಚಗಿರುವ.
सुहाना, अक्रि. ಶೋಭಿಸು; ಒಪ್ಪು, ರಾರಾಜಿಸು, ಸೊಗಯಿಸು. वि. ಸೊಗಸಾದ, ಒಪ್ಪುವ.
सुहारी, स्त्री. ಸಾದಾ ಪೂರಿ.
सुहाल, पु. सुहाली, स्त्री. ಕಜ್ಜಾಯ, ಪಕ್ವಾರ.
सुहावना, वि. ಪಸಂದಾದ, ಒಪ್ಪುವ; ಸೊಬಗಿನ; ಸೊಗಸಾದ; ಸುಂದರ.
सुहावनी, स्त्री. ರಮ್ಯತೆ, ಮನೋಹ

ರತಿ; ಸೊಬಗು; ಮೋಹನಾಂಗಿ.
सुहृद्, वि. ಸ್ನೇಹಿತ, ಮಿತ್ರ.
सुहेला, वि. ಸೊಗಸಾದ, ಸುಂದರ, ಸುಖಪ್ರದ. पु. ಮಂಗಳಗೀತ, ಸ್ತುತಿ.
सूंगरा, पु. ಎಮ್ಮೆ ಕರು.
सूंगा, पु. ಭಗದ ಮಣಿ, ಭಗಾಂಕುರ.
सूंघ, स्त्री. ಮೂಸುವಿಕೆ. ಅಘ್ರಾಣ.
सूंघना, सक्रि. ಮೂಸು, ಅಘ್ರಾಣಿಸು.
सूंघन, सूंघनी, स्त्री. ನಶ್ಯ, ನಶ್ಯಪುಡಿ.
सूंघा, पु. ಮೂಸಿನೋಡುವವ; ಗೂಢ ಚಾರ; ಬೇಟೆನಾಯಿ.
सूंट, स्त्री. ನಿಶ್ಶಬ್ದತೆ, ಮೌನ.
सूंड, स्त्री. ಶುಂಡ, ಸೊಂಡಿಲು.
सूंडा, पु. ಅಂದುಹುಳು, ನುಸಿ.
सूंडी, पु. ಹೆಂಡ ಮಾರುವವ, ಶೌಂಡಿಕ. स्त्री. ಅಂದುಹುಳು, ನುಸಿ.
सूंस, सूईंस, स्त्री. ಶಿಂಶುಮಾರ, ಕಡಲು ಹಂದಿ.
सू, स्त्री. ದಿಕ್ಕು, ಪಕ್ಕ, ಕಡೆ. सू-ब-सू = ಎಲ್ಲಾ ಕಡೆಯಲ್ಲೂ.
सूअर, पु. ಹಂದಿ.
सूअरनी, सूअरी, स्त्री. ಹೆಣ್ಣುಹಂದಿ.
सूआ, पु. ಗಿಳಿ; ದಬ್ಬಣ; ಊಬು.
सूई, स्त्री. ಸೂಜಿ; ಮುಳ್ಳು; ಮೊಳಕೆ; ಹೆಣ್ಣು ಗಿಣಿ.
सूकवा, पु. ಒಂದು ಬಗೆ ಬೇಳೆ.
सूक्र, पु. ಅಂಗಡಿ, ಪೇಟೆ.
सूका, पु. सूकी, स्त्री. ನಾಲ್ಕಾಣೆಯ ನಾಣ್ಯ, ಪಾವಲಿ.
सूखना, अक्रि. ಒಣಗು, ಬತ್ತು; ಇಮರು, ಇಂಗು; ಶೋಷಿಸು; ತಾರು; ಸೊರಗು, ಬಡವಾಗು.
सूखा, वि. ಒಣಗಿದ, ಬತ್ತಿದ; ತಾರಿದ; ಸೊರಗಿದ; ಬಡವಾದ; ಖುಷ್ಕಿ (ಜಮೀನು). पु. ಅನಾವೃಷ್ಟಿ; ಬರ, ಗೊಟ್ಟು; ದೇಹ ಶೋಷಣೆ (ರೋಗ).
सूगा, पु. ಗಿಳಿ, ಗಿಣಿ, ಶುಕ.
सूचना, पु. ಸೂಚನೆ; ವಿಜ್ಞಾಪನೆ; ಪ್ರಕಟಣೆ. सक्रि. ಸೂಚಿಸು.
सूचित, वि. ಸೂಚಿಸಿದ.
सूची, स्त्री. ಸೂಚಿ, ಸೂಚಿಪತ್ರ.
सूचीपत्र, पु. ಸೂಚಿ, ಪಟ್ಟಿ.
सूज, सूजन, स्त्री. ಉಬ್ಬುವಿಕೆ, ಊದು; ಬಾವು, ಬೀಗು.
सूजना, अक्रि. ಉಬ್ಬು, ಊದಿಕೊಳ್ಳು; ಬಾಯಿಸು, ಬೀಗು.
सूजनी, स्त्री. ಹಚ್ಚಡ, ರಜಾಯಿ.
सूजा, पु. ದೊಡ್ಡಸೂಜಿ, ದಬ್ಬಳ; ಬೈರಿಗೆ.
सूज़ाक, पु. ಮೇಹರೋಗ, ಪ್ರಮೇಹ.
सूजी, स्त्री. ಗೋಧಿಯ ನುಚ್ಚು, ರವೆ, ಸಜ್ಜಿಗೆ; ಸೂಜಿ. पु. ದರ್ಜಿ, ಸಿಂಪಿಗ.
सूझ, स्त्री. ತೋರುವಿಕೆ, ಮನವರಿಕೆ; ಅರಿವು; ದೃಷ್ಟಿ; ಕಲ್ಪನೆ.
सूझना, अक्रि. ತೋರು, ತೋಚು; ಮನಸ್ಸಿಗೆ ತಟ್ಟು, ಹೊಳೆ, ಸ್ಫುರಿಸು.
सूझ-बूझ, स्त्री. ಅರಿವು, ಬುದ್ಧಿ.
सूटा, पु. ಬಂಗಿ ಅಥವಾ ಹುಕ್ಕಾವಿನ ಹೊಗೆಯನ್ನು ಜೋರಾಗಿ ಸೇದುವಿಕೆ.
सूत, पु. ನೂಲು, ದಾರ; ಎಳೆ, ಸೂತ್ರ; ಕಂಬಿ, ತಂತಿ; ಸಾಲು, ವರಸೆ, ಶ್ರೇಣಿ;

ಬಳ್ಳಿಯ ಕುಡಿ, ಹಂಬು.
सूतक, पु. ಸೂತಕ, ಪುರುಡು.
सूतना, सक्रि. ಕೊತ್ತು, ಸುಗಿ; (ಕತ್ತಿ) ಹಿರಿ; ನೀರು ಹೊರಗೆ ಚೆಲ್ಲು. अक्रि. ನಿದ್ರಿಸು; ಮಲಗು, ವಿಶ್ರಮಿಸು; ಹಳೆಯದಾಗು, ಜೀರ್ಣವಾಗು.
सूतिका, स्त्री. ಬಾಣಂತಿ.
सूतिकाघर, पु. ಹೆರಿಗೆ ಮನೆ.
सूती, वि. ಹತ್ತಿ ನೂಲಿನ, ನೂಲಿಂದಾದ; ಹತ್ತಿ (ಬಟ್ಟೆ).
सूथन, स्त्री. ಷರಾಯಿ, ಇಜಾರು.
सूथनी, स्त्री. ಸೂಳೆಯ ಪಾಯಜಾಮೆ, ಷರಾಯಿ, ಇಜಾರು; ಒಂದು ಗೆಣಸು.
सूद, पु. ಲಾಭ, ನಫೆ; ಆದಾಯ; ಬಡ್ಡಿ; ಚೊಂಗಡಿ, ಕುಸೀದ. सूद दर सूद = ಬಡ್ಡಿಗೆ ಬಡ್ಡಿ, ಚಕ್ರಬಡ್ಡಿ, ಮಾರ್ಬಡ್ಡಿ.
सूदख़ोर, पु. ಕುಸೀದಗಾರ,ಬಡ್ಡಿಕಾರ.
सूदख़ोरी, स्त्री. ಕುಸೀದವೃತ್ತಿ.
सूदना, सक्रि. ನಾಶಮಾಡು.
सूदमंद, वि. ಲಾಭಕರ,ಪ್ರಯೋಜನಕರ
सूदमंदी, स्त्री. ಲಾಭದಾಯಕತ್ವ.
सूदी, वि. ಬಡ್ಡಿಗೆ ಹಾಕಿದ (ಹಣ).
सूधना, अक्रि. ಸತ್ಯವಾಗು, ಸಿದ್ಧವಾಗು
सूधा, वि. = सीधा.
सूना, वि. ನಿರ್ಜನ; ಶೂನ್ಯ; ಖಾಲಿ.
सूनापट, स्त्री. ನಿಶ್ಶಬ್ದತೆ, ಮೌನ.
सूप, पु. ಬೇಳೆಯ ಕಟ್ಟು, ಸಾರು; ಮೊರ.
सूफ़, पु. ಉಣ್ಣೆ, ತುಪ್ಪಟ, ಬೊಚ್ಚು, ಕಂಬಳಿ, ಧಾವಳಿ; ಮಸಿ ಕುಡಿಕೆಯೊಳಗೆ ಹಾಕಿರುವ ಬಟ್ಟೆಯ ಚೂರು.
सूफ़ियाना, वि. ಸೂಫೀಯರ; ಸೂಫಿಯರಂತಹ; ಸರಳವಾದ, ಸಾದಾ.
सूफ़ी, पु. ಕಂಬಳಿ ಧರಿಸಿದವ, ಮುಸಲ್ಮಾನರ ಒಂದು ಪಂಗಡ, (ಮುಸಲ್ಮಾನರಲ್ಲಿ) ವೇದಾಂತಿ; ಮಿತಾಹಾರಿ. वि. ಉಣ್ಣೆಯ.
सूबर, वि. ಬೆರಕೆಯಾದ.
सूबरा, पु. ಬೆರಕೆ ಬಂಗಾರ.
सूबा, पु. ದೇಶದ ಒಂದು ವಿಭಾಗ, ಪ್ರಾಂತ, ಅಧಿಪತ್ಯ; ಪ್ರದೇಶ; ಪ್ರಾಂತೀಯ ಶಾಸಕ.
सूबेदार, पु. ಪ್ರಾಂತೀಯ ಶಾಸಕ; ಸೈನ್ಯದ ಒಬ್ಬ ಉದ್ಯೋಗಸ್ಥ; ಸುಬೇದಾರ.
सूबेदारी, स्त्री. ಸುಬೇದಾರನ ಕೆಲಸ.
सूम, पु. ಜಿಪುಣ, ಕೃಪಣ, ಲೋಭಿ.
सूमपना, पु. ಕಾರ್ಪಣ್ಯ, ಜಿಪುಣತನ.
सूर, पु. ಸೂರ್ಯ, ನೇಸರು; ಶೂರ, ವೀರ; ಅಂಧ, ಕುರುಡ. वि. ವಿದ್ಯಾವಂತ; ಬುದ್ಧಿವಂತ. स्त्री. ಕಹಳೆ, ಕೊಂಬು; ಪ್ರತೀಕಾರ, ಮುಯ್ಯಿ.
सूरज, पु. ಸೂರ್ಯ, ನೇಸರು.
सूरजमुखी, पु. ಸೂರ್ಯಕಾಂತಿ ಹೂ; ಒಂದು ಬಗೆ ಬಾಣ ಬಿರುಸು.
सूरत, स्त्री. ಮುಖ, ಮೋರೆ; ಮುಖಭಂಗಿ, ಚಹರೆ; ರೂಪ, ಆಕೃತಿ; ಕಳೆ; ರೀತಿ, ತರಹ.
सूरन, पु. ಸ್ವರ್ಣಗೆಡ್ಡೆ, ಸೂರಣಗೆಡ್ಡೆ.
सूरमा, वि. ಶೂರ, ವೀರ, ಕಲಿ.
सूरा, पु. ಕುರಾನಿನ ಅಧ್ಯಾಯ.
सूराख़, पु. ತೂತು; ದ್ವಾರ, ರಂಧ್ರ.

**सूर्य**, पु. ಸೂರ್ಯ.

**सूल**, पु. ಶೂಲ, ಈಟಿ; ಮುಳ್ಳು; ಚುಚ್ಚುವ ನೋವು, ಕೊಡತ, ಶೂಲೆ; ಹೊಟ್ಟೆಶೂಲೆ; ಸ್ಥಿತಿಗತಿ.

**सूलना**, सक्रि. ಶೂಲದಿಂದ ಚುಚ್ಚು, ತಿವಿ. अक्रि. ನೋವಾಗು.

**सूली**, स्त्री. ಶೂಲ, ಗಲ್ಲುಮರ. सूली देना = ಶೂಲಕ್ಕೇರಿಸು, ಗಲ್ಲಿಗೆ ಹಾಕು.

**सूसी**, स्त्री. ಗೀರುಗಳುಳ್ಳ ಬಟ್ಟೆ, ಪಟಾವಳಿ ಬಟ್ಟೆ, ಸೂಸಿ ಬಟ್ಟೆ.

**सूहा**, वि. ಕುಂಕುಮ ವರ್ಣದ, ರಕ್ತವರ್ಣದ. पु. ಕುಂಕುಮ ವರ್ಣ.

**सृजना**, सक्रि. ಸೃಷ್ಟಿಸು, ತಯಾರಿಸು.

**सृष्टि**, स्त्री. ಸೃಷ್ಟಿ; ರಚನೆ.

**सेंक**, स्त्री. ಸುಡುವಿಕೆ, ಹುರಿಯುವಿಕೆ; ಕಾವು, ಶಾಖ.

**सेंकना**, सक्रि. ಸುಡು, ಹುರಿ; ಕಾವು ಕೊಡು, ಶಾಖ ಕೊಡು. धूप सेंकना = ಬಿಸಿಲು ಕಾಯು.

**सेंगर**, पु. ಒಂದು ತರಕಾರಿ.

**सेंगरी**, स्त्री. ಬೀಜಕೋಶ, ತಳಲು.

**सेंठा**, पु. ಲಾಳದ ಕಡ್ಡಿ, ಗಲಗು.

**सेंत, सेंतमेंत**, स्त्री. ಉಚಿತ, ಪುಕ್ಕಟೆ, ಪುಗಸಟ್ಟೆ, ಬಿಟ್ಟಿ.

**सेंतना**, सक्रि. ಅಣಿಮಾಡು, ಹವಣಿಸು; ಜೊತೆಮಾಡು, ಶೇಖರಿಸು; ಗಳಿಸು.

**सेंथी**, स्त्री. ಈಟಿ, ಸಬಳ, ಭರ್ಜಿ.

**सेंदना**, सक्रि. ನೀರು ಹಾಯಿಸು; ಬಿಸಿನೀರಿನ ಒತ್ತಡ ಕೊಡು.

**सेंदुर**, पु. = सिंदूर.

**सेंध**, स्त्री. ಸುರಂಗ, ಕನ್ನ.

**सेंधना**, सक्रि. ಸುರಂಗ ಕೊರೆ, ಕನ್ನ ಹಾಕು.

**सेंधा**, पु. ಸೈಂಧವ ಲವಣ.

**सेंधिया**, पु. ಕನ್ನ ಹಾಕುವವ, ಕಳ್ಳ.

**सेंवी**, स्त्री. ಹೆಂಡ, ಕಳ್ಳು, ಸೇಂದಿ.

**सेंहुड़**, पु. ಕಳ್ಳಿಗಿಡ.

**से**, प्रत्य. ತೃತೀಯಾ ಮತ್ತು ಪಂಚಮಿ ವಿಭಕ್ತಿ ಪ್ರತ್ಯಯ; ಒಡನೆ, ಕೂಡ, ಸಂಗಡ; ಇಂದ, ದೆಸೆಯಿಂದ; ಆದಕ್ಕಿಂತ; ಮೊದಲುಗೊಂಡು. आपसे = ನಿಮ್ಮ ಸಂಗಡ. उस दिन से = ಆ ದಿವಸ ಮೊದಲುಗೊಂಡು.

**सेग़ा**, पु. = सीग़ा.

**सेज**, स्त्री. ಹಾಸಿಗೆ, ಸೆಜ್ಜೆ. पु. ಈಟಿ, ಭರ್ಜಿ.

**सेज-बंद**, पु. ಮಂಚದ ನವಾರ.

**सेझना**, अक्रि. ದೂರವಾಗು.

**सेटना**, सक्रि. ತಿಳಿ, ಮನ್ನಿಸು.

**सेठ**, पु. ದೊಡ್ಡ ವ್ಯಾಪಾರಸ್ಥ, ಶ್ರೇಷ್ಠಿ, ಸೇಠ್; ಸಾಹುಕಾರ, ಸಾವಕಾರ. सेठ साहूकार = ಶ್ರೀಮಂತ, ಸಾಹುಕಾರ, ಧನಿಕ.

**सेठन**, स्त्री. ಕುಂಚ, "ಬ್ರಷ್".

**सेठानी**, स्त्री. सेठ का स्त्री. रूप.

**सेठिया**, वि. ಸೇಠಿನ, ಸಾಹುಕಾರನ; ಸೇಠಿನಂತಹ. सेठिया लोग = ಸೇಠನವರು; ಧನಿಕರು.

**सेत**, वि. ಶ್ವೇತ, ಬಿಳಿಯ. पु. ಸೇತುವೆ.

**सेतना**, सक्रि. ಭದ್ರಪಡಿಸು; ಜೋಪಾನ

ವಾಗಿರಿಸು; ಕಾಯು.

**सेथिया**, पु. ನೇತ್ರವೈದ್ಯ.

**सेदना**, सक्रि. ಬಿಸಿಮಾಡು, ಕಾವು ಕೊಡು; ಬೆವರಿಸು.

**सेन**, पु. ಗಿಡಗ; ಹದ್ದು.

**सेना**, स्त्री. ಸೇನೆ, ಸೈನ್ಯ, ಪಡೆ, ದಳ. सक्रि. ಶುಶ್ರೂಷೆ ಮಾಡು, ಊಳಿಗ ಮಾಡು; ಆರಾಧಿಸು, ಪೂಜಿಸು; ಕೋಳಿ ಹಾಕು; ಮೊಟ್ಟೆಗೆ ಕಾವು ಕೊಡು, ಮರಿಮಾಡು, ಹೊದಗಿಸು.

**सेनिका**, स्त्री. ಗಿಡಗ, ಡೇಗೆ.

**सेनी**, स्त्री. ತಟ್ಟೆ, ತಬಕು, ತಳಿಗೆ; ಏಣಿ.

**सेब**, पु. ಸೇವುಹಣ್ಣು, ಸೇಬು; ನೀರು ಹಾಯಿಸುವಿಕೆ, ನೀರಾವರಿ; ನೀರಿನ ಬಾನಿ, ಬಕೀಟು. सेब-ए-ग़ब ग़ब = ಗಡ್ಡ, ಚಿಬುಕ.

**सेम**, पु. ಹುರುಳಿಕಾಯಿ, ಬೀನಿಸ್.

**सेमर, सेमल**, पु. ಎಲವಮರ, ಬೂರುಗ; ದೂದಿ ಹತ್ತಿ, ಬೂರಲ ಅರಳೆ.

**सेर**, वि. ತುಂಬಿದ; ತೃಪ್ತ. पु. ಒಂದು ಬಗೆ ಭತ್ತ; ೮೦ ರೂಪಾಯಿಯ ತೂಕ, ಒಂದು ಸೇರು. (ತೂಕಗಳ ಹಿಂದೀ ಹೆಸರುಗಳನ್ನು ಅನುಬಂಧದಲ್ಲಿರುವ ಕೋಷ್ಟಕದಿಂದ ತಿಳಿಯಬಹುದು.)

**सेरा**, पु. ಮಂಚದ ಪಟ್ಟಿ; ನೀರು ಹಾಯಿಸಿದ ಜಮೀನು.

**सेराना**, सक्रि. ತೇಲಾಡಿಸು, ತೇಲಿಸಿಬಿಡು; ರವಾನಿಸು; ತಣ್ಣಗಾಗಿಸು, ತಣಿಸು; ಹೆಚ್ಚಿಸು. अक्रि. ತಣ್ಣಗಾಗು, ತಣಿ; ತೃಪ್ತಿಹೊಂದು.

**सेराब**, वि. ನೀರು ತುಂಬಿದ, ನೀರು ಹಾಯಿಸಿದ; ತೃಪ್ತ; ಹೊಸ.

**सेरी**, स्त्री. ತೃಪ್ತಿ, ತಣಿವು; ನೆರತೆ.

**सेरुआ, सेरू**, पु. ಮಂಚದ ಪಟ್ಟಿ.

**सेल**, पु. ಈಟಿ, ಬರ್ಛಿ, ಭರ್ಜಿ. स्त्री. ಮಾಲೆ, ಹಾರ.

**सेलखड़ी**, स्त्री. ಸೀಮೆಸುಣ್ಣ, ಖಡಿಕೆ.

**सेलहा**, पु. ಅಂಗವಸ್ತ್ರ, ವಲ್ಲಿ.

**सेला**, पु. ಅಂಗವಸ್ತ್ರ, ಶಲ್ಯ, ಶಲ್ಲೆ, ವಲ್ಲಿ; ತಲೆಪಾಗು, ಪೇಟ; ಒಂದು ಬಗೆ ಅಕ್ಕಿ; ಸಿಂಹ.

**सेलिया**, पु. ಒಂದು ಬಗೆ ಕುದುರೆ.

**सेली**, स्त्री. ಈಟಿ, ಸಬಳ; ಜೋಮಾಲೆ; ಶಲ್ಯ, ಅಂಗವಸ್ತ್ರ; ನಡುಕಟ್ಟು; ದಾರ.

**सेवई**, स्त्री. ಸೇವಿಗೆ, ಶಾವಿಗೆ.

**सेव**, पु. ಸೇವು (ತಿನಸು); ಸೇವುಹಣ್ಣು, ಸೇಬು; ಸ್ವಲ್ಪವಾಗಿ ಉಳುವಿಕೆ.

**सेवक**, पु. ಸೇವಕ, ಆಳು, ಊಳಿಗದವ, ನೌಕರ.

**सेवकाई**, स्त्री. ಸೇವಕತನ, ಸೇವಕವೃತ್ತಿ; ಊಳಿಗ, ಸೇವೆ.

**सेवड़ा**, पु. (ಹಿಟ್ಟಿನ) ಸೇವು; ಗಾರಡಿಗಾರ.

**सेवंती**, स्त्री. ಬಿಳಿಯ ಗುಲಾಬಿ.

**सेवन**, पु. ಪರಿಚರ್ಯೆ, ಸೇವೆ; ಉಪಾಸನೆ.

**सेवना**, सक्रि. = **सेना**.

**सेवरा**, पु. ಅರ್ಧ ಸುಟ್ಟ ಮಡಕೆ.

**सेवा**, स्त्री. ಸೇವೆ, ಕೈಂಕರ್ಯ, ನೌಕರಿ, ಚಾಕರಿ; ಆರಾಧನೆ, ಪೂಜೆ. सेवा_

टहल=ಸೇವೆ, ಶುಶ್ರೂಷೆ, ಚಿಟ್ಟೋಳಿಗ.
सेवा में=ಸಾನ್ನಿಧ್ಯದಲ್ಲಿ, ಸಮ್ಮುಖ.
**सेवा-बंदगी,** स्त्री. ಆರಾಧನೆ, ಪೂಜೆ.
**सेवारी,** स्त्री. ಒಂದು ತರದ ಸಕ್ಕರೆ.
**सेविका,** स्त्री. ಸೇವಕಿ, ದಾಸಿ.
**सेवैयां,** स्त्री. ಸೇವಿಗೆ, ಶಾವಿಗೆ.
**सेसर,** पु. ಬಿಲ್ಲನ್ನು ಹಿಡಿಯುವ ಭಾಗ; ಇಸ್ಪೀಟಾಟ; ಜಾಲ, ಠಕ್ಕು.
**सेह,** वि. ಮೂರನೆಯ.
**सेहत,** स्त्री. ಆರೋಗ್ಯ; ರೋಗಮುಕ್ತಿ, ಸ್ವಸ್ಥತೆ; ಸೌಖ್ಯ; ಶುದ್ಧಿ.
**सेहतखाना,** पु. ಕಕ್ಕಸು, ಮೂತ್ರಿ.
**सेहथना,** सक्रि. ಕೊಡವು, ಝಾಡಿಸು.
**सेहर,** पु. ಜಾಲ, ಮಾಟ.
**सेहरा,** पु. ಮುತ್ತಿನ ದಂಡೆ; ಬಾಸಿಂಗ; ಮದುವೆಯ ಹಾಡು; ವಿಮಾನಿನ ಪರೆ.
**सेहरा-बंधाई,** स्त्री. ಮದವಣಿಗನ ತಲೆಗೆ ಬಾಸಿಂಗವನ್ನು ಕಟ್ಟಲು ಭಾವ ಮೈದುನನಿಗೆ ಕೊಡುವ ಸಂಭಾವನೆ.
**सेहशंबा,** पु. ಮಂಗಳವಾರ.
**सेही,** स्त्री. ಮುಳ್ಳುಹಂದಿ, ಏದು, ಕಣೆ.
**सेहुंड,** पु. ಕಳ್ಳಿಗಿಡ, ಸೀಹುಂಡ.
**सेहुआ,** पु. ಕಜ್ಜಿ, ದದ್ದು, ಹುಣಕು.
**सैंत,** वि. ಬಿಟ್ಟಿ, ಪುಕ್ಕಟೆ, ಉಚಿತ.
**सैंतना,** सक्रि. ಹವಣಿಸು, ಜೋತೆಮಾಡು; ಗೋರು; ಶೇಖರಿಸು; ಗಳಿಸು.
**सैंतालीस,** वि. ನಲವತ್ತೇಳು.
**सैंताव,** पु. ಹವಣು, ಅಣಿಮಾಡುವಿಕೆ.
**सैंती,** स्त्री. ಈಟೆ, ಬರ್ಛಿ, ಸಬಳ.
**सैंतीस,** वि. ಮೂವತ್ತೇಳು.
**सै,** वि. ನೂರು. स्त्री. ಸಫಲತೆ, ಏಳಿಗೆ.
**सैकड़ा,** पु. ನೂರು, ಶತ. क्रिवि. ನೂರಕ್ಕೆ, ಪ್ರತಿಶತ, ಶೇಕಡಾ. सैकड़ों =ನೂರಾರು.
**सैक़ल,** पु. ಸಾಣೆ ಹಿಡಿಯುವಿಕೆ; ಸಾಣೆ.
**सैक़लगर,** पु. ಸಾಣೆ ಹಿಡಿಯುವವ.
**सैक़ली,** वि ಸಾಣೆ ಹಿಡಿದ; ಬೆಳಗಿಸಿದ.
**सैद,** पु. ಬೇಟೆಯಾಡುವಿಕೆ, ಆಖೇಟ, ಶಿಕಾರಿ, ಬೇಟೆ; ಬೇಟೆಯ ಮೃಗ.
**सैदगाह,** स्त्री. ಬೇಟೆಯ ಸ್ಥಳ.
**सैदी,** वि. ಬೇಟೆಯಾಡುವವ; ಶತ್ರು.
**सैन,** स्त्री. ಸಂಕೇತ, ಇಷಾರೆ, ಇಂಗಿತ, ಸನ್ನೆ; ಚಿಹ್ನೆ, ಗುರುತು; ಶಯನ; ನಿದ್ರೆ; ಹಾಸಿಗೆ, ಶಯ್ಯೆ.
**सैनासैनी,** स्त्री. ಪರಸ್ಪರ ಸಂಕೇತ ಮಾಡಿಕೊಳ್ಳುವಿಕೆ.
**सैनिक,** पु. ದಂಡಾಳು, ಸಿಪಾಯಿ, ಯೋಧ.
**सैनी,** स्त्री. ಏಣಿ, ನಿಚ್ಚಣಿಕೆ.
**सैनू,** पु. = नैनू.
**सैन्य,** स्त्री. ಸೇನೆ, ಸೈನ್ಯ, ದಂಡು.
**सैफ़,** स्त्री. ಕತ್ತಿ, ಖಡ್ಗ.
**सैफ़ी,** वि. ವಕ್ರವಾದ, ಡೊಂಕಾದ. स्त्री. ಶಾಪ; ಮಾಟ, ಶೂನ್ಯ; ಜಪಮಾಲೆ.
**सैयद,** पु. ಯಜಮಾನ, ಒಡೆಯ; ರಾಜಕುಮಾರ; ಹುಸೇನಿನ ವಂಶಸ್ಥರು; ಮುಸಲ್ಮಾನರ ನಾಲ್ಕು ಪ್ರಭೇದಗಳಲ್ಲೊಂದು, ಸೈಯದ್.
**सैयां,** पु. ಪತಿ, ಗಂಡ; ಪ್ರಣಯಿ, ಪ್ರಿಯ; ಮಿಂಡ.

**सैयाद**, पु. ಬೇಟೆಗಾರ, ವ್ಯಾಧ.
**सैयादी**, स्त्री. ಬೇಟೆಯಾಡುವಿಕೆ, ಬೇಟೆ, ಷಿಕಾರಿ.
**सैयार**, पु. ಪ್ರಯಾಣಿಕ, ಪ್ರವಾಸಿ.
**सैयारा**, पु. ಗ್ರಹಗಳು.
**सैयाल**, वि. ವೇಗದಿಂದ ಹರಿಯುವ, ಪ್ರವಹಿಸುವ.
**सैयाह**, पु. ಭೂಪ್ರದಕ್ಷಿಣೆ ಮಾಡುವವ.
**सैयाही**, स्त्री. ಭೂಪ್ರದಕ್ಷಿಣೆ, ಸಮುದ್ರ ಯಾತ್ರೆ.
**सैर**, स्त्री. ತಿರುಗಾಟ, ಸಂಚಾರ; ಪರ್ಯ ಟನ; ವಿಹಾರ; ವಿನೋದ; ತಮಾಷೆ. सैर सपाटा = ತಿರುಗಾಟ, ಅಡ್ಡಾಟ. सैर करना = ವಿಹರಿಸು, ಅಡ್ಡಾಡು; ತಮಾಷೆನೋಡು; ಪುಸ್ತಕವನ್ನು ಪಠಿಸು
**सैराफ़, सैराफ़ी**, पु. ಚಿನಿವಾರ; ಸರಾಫ; ಮೋಸಗಾರ, ವಂಚಕ.
**सैल**, स्त्री. ಸಂಚಾರ, ವಿಹಾರ; ನೆರೆ, ಪೂರ; ಪ್ರವಾಹ, ಹೊಯಿಲು.
**सैलान**, पु. ಸಂಚಾರ; ವಿಹಾರ.
**सैलानी**, पु. ತಿರುಗಾಡುವವ, ವಿಹರಿಸುವವ; ವಿನೋದ ಸಂಚಾರಿ.
**सैलाब**, पु. ಜಲಪ್ರವಾಹ, ನೆರೆ, ಪೂರ.
**सैलाबी**, वि. ಜಲಪ್ರವಾಹದ. स्त्री. ಒದ್ದೆ, ತೇವ.
**सैसांझ**, स्त्री. ಮುಚ್ಚಂಜೆ.
**सैहरन**, स्त्री. ಸೈರಣೆ, ಸಹನೆ, ಸಹಿಷ್ಣುತೆ
**सैहरनी**, वि. ಸೈರಣೆಯುಳ್ಳವ, ಸಹಿಷ್ಣು
**सौं**, स्त्री. ಶಪಥ.
**सोंटा**, पु. ದೊಣ್ಣೆ, ಟೊಣಪೆ, ಗುದಿಗೆ, ದಡಿ, ಸೋಟಾ. सोंटा-बरदार = ದಂಡಧರ, ಕಟ್ಟಿಗೆಯವ.
**सोंटी**, स्त्री. ಚಿಕ್ಕ ದೊಣ್ಣೆ, ಕೋಲು.
**सोंठ**, स्त्री. ಶುಂಠಿ. पु. ಜಿಪುಣ.
**सोंठिया, सोंठी, सोंठू**, वि. ಕೃಪಣ, ಜಿಪುಣ.
**सोंठौरा**, पु. ಶುಂಠಿ ಲೇಹ್ಯ.
**सोंधना**, सक्रि. ಬಟ್ಟೆಗಳನ್ನು ಚವುಳು ಮಣ್ಣು ಹಾಕಿ ತೊಳೆ; ಬೆರಸು, ಕಲಸು.
**सोंधा**, वि. ಹೊಸ ಮಡಕೆಯಲ್ಲಿ ನೀರು ತುಂಬುವಾಗ ಬರುವಂತಹ ವಾಸನೆಯು; ಕರಿದ ವಡೆಯ ವಾಸನೆಯುಳ್ಳ. पु. ಸುಗಂಧ, ಪರಿಮಳ.
**सोंधाना**, सक्रि. ಪರಿಮಳ ಕೊಡು.
**सोंधाहट**, स्त्री. ಘಮಘಮಿಸುವಿಕೆ, ಪರಿಮಳ.
**सोंधी**, स्त्री. ಚವುಳು ಮಣ್ಣು.
**सोंपना**, सक्रि. = सौंपना.
**सोंह**, स्त्री. ಶಪಥ.
**सो**, सर्व. ಅವನು, ಅವಳು, ಅದು. अव्य. ಆದುದರಿಂದ, ಅತಃ.
**सोअर**, पु. = सौरी.
**सोआ**, पु. ಸದಗುಪ್ಪೆ, ಸಬ್ಬಸಿಗೆ.
**सोई**, सर्व. ಅವನೇ, ಅವಳೇ, ಅದೇ.
**सोख**, स्त्री. ಹೀರುವಿಕೆ, ಶೋಷಣ.
**सोखना**, सक्रि. ಹೀರು; ಇಂಗಿಸು, ಇಮರಿಸು; ಒಣಗಿಸು, ಶೋಷಿಸು.
**सोख़्त**, वि. ಉರಿದ, ಸುಟ್ಟುಹೋದ. स्त्री. ಉರಿ.
**सोख़्तगी**, वि. ಉರಿಸತಕ್ಕ; ಸುಡತಕ್ಕ.

**सोख़्ता**, पु. ಮಸಿ ಹೀರುವ ಕಾಗದ, ಒತ್ತುಖರಡು, "ಬ್ಲಾಟಿಂಗು". वि. ಉರಿದ, ಸುಟ್ಟ; ನೊಂದ.

**सोग**, पु. ಶೋಕ, ವ್ಯಸನ; ಅಳು.

**सोगी**, वि. ಶೋಕಿಸುವವ; ಶೋಕಾರ್ತ.

**सोच**, पु. ಯೋಚನೆ, ಚಿಂತೆ; ಎಣಿಕೆ, ವಿಚಾರ; ಪರಿಭಾವನೆ; ಪಶ್ಚಾತ್ತಾಪ. सोच विचार = ವಿವೇಚನೆ, ಪರ್ಯಾಲೋಚನೆ; ಎಚ್ಚರಿಕೆ.

**सोचना**, सक्रि. ಯೋಚಿಸು, ಎಣಿಸು; ನೆನೆ, ಬಗೆ; ಚಿಂತಿಸು, ಪಶ್ಚಾತ್ತಾಪಪಡು. सोचना साचना = ಯೋಚನೆ ಮಾಡು.

**सोचाना**, सक्रि. ಯೋಚನೆಮಾಡಿಸು.

**सोज**, वि. ಹತ್ತಿರ; ನೇರವಾದ, ಋಜು.

**सोज़**, स्त्री. ಬಾವು, ಬೀಗು; ಉರಿ, ಉರಿತ; ತಾಪ; ಕಾಟ.

**सोज़न**, पु. ಸೂಜಿ. ಮುಳ್ಳು.

**सोज़नी**, स्त्री. ಹಚ್ಚಡ, ಹೊದಿಕೆ; ಕಂಥೆ; ಅಲಂಕಾರದ ಹೊಲಿಗೆ.

**सोज़ां**, वि. ಉರಿಯುವ, ದಹಿಸುವ.

**सोज़ा**, पु. ಕುರು.

**सोज़ाक**, पु. ಮೇಹಸ್ರಾವ, ಪ್ರಮೇಹ.

**सोज़िश**, स्त्री. ಬಾವು, ಬೀಗು; ಉರಿ; ನೋವು.

**सोज़ी**, स्त्री. ದಳ್ಳುರಿ.

**सोझ, सोझा**, वि. ನೇರವಾದ, ನೆಟ್ಟಗಿರುವ, ಸರಳವಾದ.

**सोझाई**, स्त्री. ನೇರ್ಪು, ಆರ್ಜವ.

**सोढ़ना**, सक्रि. ಪುನರಾಲೋಚನೆ ಮಾಡು.

**सोढ़र**, वि. ಹೆಡ್ಡ, ಪೆದ್ದ, ಮಂಕ.

**सोत, सोता**, पु. ಸ್ರೋತ, ನೀರಿನ ಝರಿ; ಬುಗ್ಗೆ, ಊಟೆ; ಹೊನಲು, ತೊರೆ.

**सोथ**, स्त्री. ಬಾವು, ಬೀಗು.

**सोदर**, पु. ಸಹೋದರ, ಸೋದರ.

**सोदरा, सोदरी**, स्त्री. ಸೋದರಿ.

**सोध**, स्त्री. ಶುದ್ಧಿ; ತಿದ್ದುವಿಕೆ; ಪವಿತ್ರತೆ…

**सोधन**, पु. ಶೋಧನೆ, ಹುಡುಕಾಟ; ಚುಕ್ತಾಯ.

**सोधना**, सक्रि. ಶೋಧಿಸು, ಹುಡುಕು; ಶುದ್ಧಿಮಾಡು, ಶುದ್ಧೀಕರಿಸು; ಸ… ಪಡಿಸು, ತಿದ್ದು; ನಿಶ್ಚಯಿಸು; (ಸಾ… ತೀರಿಸು.

**सोधाना**, सक्रि सोधना का प्रे. रू…

**सोन**, पु. ಒಂದು ಪಕ್ಷಿ; ಒಂದು … ಒಂದು ನದಿ.

**सोनचिड़ी**, स्त्री. ಖಂಜನಪಕ್ಷಿ, ಗ… ಹಕ್ಕಿ.

**सोनजूही**, स्त्री. ಹಳದಿ ಜಾಜಿ.

**सोनहरा, सोनहला**, वि. = सुन…

**सोनहा**, पु. ಕಾಡುನಾಯಿ.

**सोनहार**, पु. ಒಂದು ಪಕ್ಷಿ.

**सोना**, अक्रि. ನಿದ್ರೆಮಾಡು, … ಜೋಮು ಹಿಡಿ, ಮರಗಟ್ಟು… ಒಂದು ಬಗೆ ಮೀನು. पु. ಸ್ವ… ಗಾರ, ಹೊನ್ನು, ಚಿನ್ನ; ಒಂ… सोना-चांदी = ಚಿನ್ನ ಬೆಳ್ಳಿ… ಕಾಸು; ಐಶ್ವರ್ಯ.

**सोनागेरू**, पु. ಬಂಗಾರದ …

ಬಳಿಯಲು ಉಪಯೋಗಿಸುವ ಒಂದು ಬಗೆ ಕಾವಿ, ಸೊನ್ನಗಾವಿ.

**सोनामक्खी, सोनामुखी,** स्त्री. ನೆಲಾವರಿಕೆ, ಸೋನಾಮುಖಿ.

**सोनार,** पु. = **सुनार.**

**सोनिया, सोनी,** पु. ಚಿನ್ನದ ಧೂಳು ಬೆರೆತ ಮಣ್ಣಿನಿಂದ ಚಿನ್ನ ತೆಗೆಯುವವ, ಜಲಗಾರ.

**सोपत,** स्त्री. ಅನುಕೂಲ್ಯ, ಸೌಕರ್ಯ.

**सोपान,** पु. ಸೋಪಾನ, ಏಣಿ; ಮೆಟ್ಟಲು.

**सोफता,** स्त्री. ಏಕಾಂತಸ್ಥಳ; ವಿರಾಮ.

**सोफ़ी,** पु. = **सूफ़ी.**

**सोभना,** अक्रि. ಶೋಭಿಸು, ಒಪ್ಪು.

**सोभा,** स्त्री. ಶೋಭಿಸುವಿಕೆ, ಪ್ರಭೆ; ಹೊಳಪು, ಕಾಂತಿ; ಆಭರಣ; ಉಡಿಗೆ.

**सोमवार,** पु. ಸೋಮವಾರ, ಇಂದುವಾರ.

**सोमवारी,** स्त्री. ಅಮಾಸೋಮವಾರ.

**सोया,** पु. ಶತಪುಷ್ಪ, ಸಬ್ಬಸಿಗೆ.

**सोरठा,** पु. ಒಂದು ಛಂದಸ್ಸು.

**सोरनी,** स्त्री. ಪರಕೆ, ಬರ್ಲು, ಹಿಡಿಲು.

**सोलह,** वि. ಷೋಡಶ, ಹದಿನಾರು.

**सोलहवां,** वि. ಹದಿನಾರನೆಯ. पु. ಜೋಡು, ಮೆಟ್ಟು, ಎಕ್ಕಡ.

**सोलही,** स्त्री. ಹದಿನಾರು ಕವಡೆಯ ಆಟ; ಜೂಜಾಟ.

**सोला,** पु. ಒಂದು ಮರ.

**सोवत,** वि. ನಿದ್ರಿಸುವ, ನಿದ್ರಿತ.

**सोवन,** पु. ನಿದ್ರಿಸುವಿಕೆ, ನಿದ್ರೆ.

**सोवाना,** सक्रि. ಮಲಗಿಸು.

**सोसन,** पु. ಕುಮುದ, ನೈದಿಲೆ.

**सोसना,** सक्रि. ಸಹಿಸು; ಅನುಭವಿಸು.

**सोसनी,** वि. ನೀಲಿಬಣ್ಣದ.

**सोह,** स्त्री. ಲಾವಣ್ಯ, ಚೆಲುವು; ಅಲಂಕಾರ, ಭೂಷಣ; ಉಡಿಗೆ.

**सोहगी,** स्त्री. ವಿವಾಹದಲ್ಲಿ ಹೆಣ್ಣಿಗೆ ವಸ್ತ್ರಾದಿಗಳನ್ನು ಒದಿಸಿ ಕೊಡುವ ಶಾಸ್ತ್ರ; ಮಂಗಳ ವಸ್ತುಗಳು.

**सोहन,** वि. ಸುಂದರವಾದ; ಶೋಭಿಸುವ; ಸೊಗಸಾದ. पु. ಸುಂದರ ಪುರುಷ, ಚೆಲುವ, ಚೆನ್ನಿಗ; ಸ್ನೇಹಿತ. स्त्री. ಒಂದು ಪಕ್ಷಿ; ಅರ; ಸಾಣೆಕಲ್ಲು; ಒಂದು ತರಹ ಹಲ್ವಾ.

**सोहनपपड़ी,** स्त्री. **सोहनहलवा,** पु. ಒಂದು ಮಿಠಾಯಿ, ಸೋಹನ್‌ಹಲ್ವಾ.

**सोहना,** अक्रि. ಶೋಭಿಸು, ಸೊಗಯಿಸು; ಚಂದಗಾಣು, ಒಪ್ಪು. सक्रि. ಕಳೆ ಕೀಳು, ಹರಗು. वि. ಸುಂದರವಾದ, ಸೊಗಸಾದ.

**सोहनी,** स्त्री. ಪೊರಕೆ, ಬರ್ಲು, ಹಿಡಿಲು; ಒಂದು ರಾಗ.

**सोहबत,** स्त्री. ಸಹವಾಸ, ಒಡನಾಟ; ಸಮಾಗಮ, ಸಂಭೋಗ.

**सोहबती,** वि. ಸಂಗಾತಿ, ಒಡನಾಡಿ.

**सोहर,** वि. ಸುಂದರ; ಮನೋಹರ; ಶುಭ; ಮಂಗಳ.

**सोहा,** वि. ಚೆಲುವಿನ, ಸೊಗಸಿನ.

**सोहला,** पु. ಜೋಗುಳ; ಮಂಗಳಗೀತೆ

**सोहाई,** स्त्री. ಕಳೆ ಕೀಳುವಿಕೆ, ಹರಗುವಿಕೆ; ಕಳೆ ಕೀಳಲು ಕೊಡುವ ಕೂಲಿ.

**सोहाग**, पु. = **सुहाग**.
**सोहागा**, पु. ಗದ್ದೆ ಹರಗುವ ಸಲಿಕೆ, ಕುಂಟೆ; ಬಿಳುಗಾರ, ಬಿಳಗಾರ.
**सोहाना**, अक्रि. ಶೋಭಿಸು, ಸೊಗಯಿಸು; ಪಸಂದಾಗು; ಒಪ್ಪು.
**सोहारी**, स्त्री. ಪೂರಿ.
**सोहावना**, वि. = **सुहावना**.
**सौं**, पु. ಒಳ್ಳೆಯ ಶಕುನ, ಶುಭ ಶಕುನ; ಶಪಥ.
**सौंधा**, वि. ಒಳ್ಳೆಯ, ಉತ್ತಮ.
**सौंचना**, सक्रि. ಶೌಚಮಾಡು.
**सौंड, सौंडा**, पु. ಹೊದಿಕೆ, ಹಚ್ಚಡ.
**सौंदन**, स्त्री. ಚವುಳು ಮಣ್ಣಿನ ನೀರಿನಲ್ಲಿ ಬಟ್ಟೆಗಳನ್ನು ತೊಳೆಯುವಿಕೆ.
**सौंदना**, सक्रि. ಕಲಸು, ಬೆರಸು, ಸೇರಿಸು.
**सौंध**, स्त्री. ಸುಗಂಧ, ಪರಿಮಳ.
**सौंधना**, सक्रि. = **सोंधना**.
**सौंधाना**, सक्रि. ಪರಿಮಳ ಕೊಡು.
**सौंप**, स्त्री. ಒಪ್ಪಿಸುವಿಕೆ, ಸುಪರ್ದು.
**सौंपना**, सक्रि. ಒಪ್ಪಿಸು, ವಹಿಸಿಕೊಡು, ಸುಪರ್ದು ಮಾಡು.
**सौंफ**, स्त्री. ಶತಪುಷ್ಪ, ಸೋಪುಗಿಡ.
**सौंरई**, स्त्री. ಕಪ್ಪು, ಶ್ಯಾಮಲವರ್ಣ.
**सौंरा**, पु. ಕರಿಯ ವಸ್ತು; ಕುಡಿಕಪ್ಪು.
**सौंही**, स्त्री. ಆಯುಧ, ಕೈದು.
**सौ**, वि. ನೂರು. **सौगुना** = ನೂರು ಪಾಲು.
**सौकन**, स्त्री. ಸವತಿ.
**सौगंद**, स्त्री. ಶಪಥ, ಆಣೆ.
**सौगंध**, पु. ಸುಗಂಧ, ಪರಿಮಳ.
**सौग़ात**, स्त्री. ಅಪರೂಪದ ವಸ್ತು, ಅಪೂರ್ವ ವಸ್ತು; ಇಷ್ಟಮಿತ್ರರಿಗೆ ಉಪಾಯನ ಕೊಡಲು ಪರದೇಶದಿಂದ ತಂದ ಅಪೂರ್ವ ವಸ್ತು; ಉಪಾಯನ, ಉಪಹಾರ, ಉಡುಗೊರೆ.
**सौग़ाती**, वि. ಉಪಾಯನ ಕೊಡತಕ್ಕ; ಅಪರೂಪದ (ವಸ್ತು).
**सौघा**, वि. ಬೆಲೆ ಇಳಿದ, ಅಗ್ಗವಾದ.
**सौच**, पु. ಶೌಚ; ಶುದ್ಧಿ; ಪವಿತ್ರತೆ.
**सौज**, स्त्री. ಉಪಕರಣ, ಸಾಮಗ್ರಿ.
**सौजा**, पु. ಬೇಟೆಯ ಮೃಗ, ಬೇಟೆ.
**सौत**, स्त्री. ಸಪತ್ನಿ, ಸವತಿ; ಅವಳ ಮಕ್ಕಳು; ಶಬ್ದ; ಕೂಗು, ಕರೆ.
**सौतन, सौतिन**, स्त्री. ಸವತಿ
**सौतापा**, पु. ಸವತಿತನ; ಸವತಿಯ ದ್ವೇಷ.
**सौतिया**, वि. ಸವತಿಯ. **सौतिया डाह** = ಸವತಿಯರ ಪರಸ್ಪರ ದ್ವೇಷ; ಅಸೂಯೆ.
**सौती**, वि. ದ್ವೇಷವುಳ್ಳ, ಅಸೂಯೆಪಡುವ.
**सौतेला**, वि. ಸವತಿಯ, ಸಪತ್ನಿಯ; ಸಪತ್ನಿಯ ಸಂಬಂಧದ. **सौतेला भाई** = ಮಲ ತಮ್ಮ. **सौतेला बाप** = "ಮಲ ತಂದೆ". **सौतेली मां** = ಮಲ ತಾಯಿ, ಬಲತಾಯಿ.
**सौदा**, पु. ಪಿತ್ತ; ಹುಚ್ಚು, ಪೈತ್ಯ; ಗೀಳು; ಪ್ರೇಮ; ವ್ಯಾಪಾರ, ಬೇರ; ವ್ಯಾಪಾರದ ಮಾಲು, ಸರಕು. **सौदा सूत** = ವ್ಯಾಪಾರ ಸಾಪಾರ. **सौदा**

